ಎಂ. ವಿ. ರಾಜಶೇಖರನ್ - 75




# ನಿಜ ಬಿಂಬ

ಅಭಿನಂದನ ಗ್ರಂಥ

# ನಿಜ ಬಿಂಬ

ಎಂ.ವಿ. ರಾಜಶೇಖರನ್-೭೫ರ ಅಭಿನಂದನ ಗ್ರಂಥ



ಪ್ರಧಾನ ಸಂಪಾದಕ

**ಡಾ. ದೇ. ಜವರೇಗೌಡ**

ಕಾರ್ಯನಿರ್ವಾಹಕ ಸಂಪಾದಕ

**ಗೊ.ರು. ಚನ್ನಬಸಪ್ಪ**

ಸಂಪಾದಕ

**ಕೆ.ಆರ್. ಕಮಲೇಶ್**



ಎಂ.ವಿ. ರಾಜಶೇಖರನ್-೭೫ ಅಭಿನಂದನ ಸಮಿತಿ

ನಂ. ೪, ೧೨ನೇ ಮುಖ್ಯರಸ್ತೆ, ವಸಂತನಗರ, ಬೆಂಗಳೂರು-೫೬೦ ೦೫೨

ದೂರವಾಣಿ : ೨೨೮೦೮೧೪

NIJA BIMBA - A collection of felicitation articles on Sri M.V. Rajashekharan Edited by K.R. Kamalesh and Published by M.V. Rajashekharan-75 Felicitation Committee, No. 4, 12th Main Road, Vasanth Nagar, Bangalore 560 052, ✆ : 2280814.



Year of Publication - December 2003



Pages : xlviii + 416 + 60 photo pages

Price : Rs. 300/-

Cover Design : Sripad

Cover Photo : Prof. Sridhar Murthy

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
#117/1, 5th Main Road
Chamarajapet, Bangalore-18
Phone : 6613123, 6618752



*"ನಮ್ಮ ದೇಶದಲ್ಲಿ ಸಮೃದ್ಧ ನೈಸರ್ಗಿಕ ಸಂಪನ್ಮೂಲಗಳಿವೆ. ಇವನ್ನು ಸಮರ್ಥವಾಗಿ ಬಳಸಿಕೊಳ್ಳುವ ದೃಢಸಂಕಲ್ಪದ ಅಗತ್ಯವಿದೆ. ನಮ್ಮ ರಾಷ್ಟ್ರದ ಜನ ಉತ್ತಮ ನಾಗರಿಕರು; ಉನ್ನತ ಸಾಂಸ್ಕೃತಿಕ ಪ್ರಜ್ಞೆಯುಳ್ಳವರು. ಆದರೆ ರಾಷ್ಟ್ರ ನಿರ್ಮಾಣಕ್ಕೆ ಬೇಕಾದ ಶಿಸ್ತು ಮತ್ತು ಅರ್ಪಣಾಭಾವದ ಅಭಾವ ಕಂಡುಬರುತ್ತಿದೆ. ವೈಯಕ್ತಿಕ ಪ್ರತಿಷ್ಠೆ, ದ್ವೇಷ ಅಥವಾ ಸ್ವಾರ್ಥದೃಷ್ಟಿಯಿದ್ದರೆ ನಾವು ಏನನ್ನೂ ಸಾಧಿಸಲು ಸಾಧ್ಯವಾಗದು. ವ್ಯಕ್ತಿಗಿಂತ ರಾಷ್ಟ್ರ ದೊಡ್ಡದು. ನಮ್ಮ ರಾಷ್ಟ್ರದ ಭವ್ಯ ಪರಂಪರೆಗೆ ಮತ್ತು ಘನತೆಗೆ ತಕ್ಕಂತೆ ನಾವು ಬಾಳಬೇಕು. ಸಮಷ್ಟಿ ಹಿತದ ಪ್ರಜ್ಞೆ ನಮಗಿರಬೇಕು. ನೀತಿ-ನಿಯಮಗಳು ನಮ್ಮ ರಾಷ್ಟ್ರಜೀವನದ ಸೂತ್ರಗಳಾಗಬೇಕು. ಅಂತಾದರೆ ನಮ್ಮ ಭಾರತ ಇಡೀ ಜಗತ್ತಿನ ಶ್ರೇಷ್ಠ ರಾಷ್ಟ್ರವಾದೀತು"*

*- ಎಂ.ವಿ. ರಾಜಶೇಖರನ್*

# ಬಿನ್ನಹ

ಇಂದಿನ ಸಾರ್ವಜನಿಕ ಜೀವನದಲ್ಲಿ ನಾವು ನೋಡುತ್ತಿರುವುದು ಘರ್ಷಣೆ, ಹೋರಾಟ, ಗಲಭೆ, ಅನೈತಿಕ ಪೈಪೋಟಿ ಇವುಗಳನ್ನೇ. ಆರ್ಷೇಯ ಮೌಲ್ಯಗಳು ಕಾಡು ಪಾಲಾಗಿವೆ. ಸಿದ್ಧಾಂತ ಮತ್ತು ತತ್ವಗಳ ಬಗ್ಗೆ ಮಾತನಾಡುವವರು ಗಣನೆಗೆ ಬರುತ್ತಿಲ್ಲ. ಸ್ವಾತಂತ್ರ್ಯ ಬಂದ ನಂತರ ಸುಮಾರು ೨೫ ವರ್ಷಗಳ ಕಾಲ ಸ್ವಾತಂತ್ರ್ಯ ಪೂರ್ವದಲ್ಲಿದ್ದ ದೇಶಪ್ರೇಮ ಸತ್ಯ, ಅಹಿಂಸೆ ಇತ್ಯಾದಿ ತತ್ವಗಳು ಕಾಣುತ್ತಿದ್ದವು. ೧೯೭೦ರಲ್ಲಿ ಕಾಂಗ್ರೆಸ್ ವಿಭಜನೆಯಾದ ನಂತರ ಮೌಲ್ಯಗಳು ಇಳಿಮುಖವಾದವು. ಈ ಕಾಲದಲ್ಲಿ ಸ್ವಾತಂತ್ರ್ಯಪೂರ್ವದ ಭಾವನೆಗಳು, ವಿಚಾರಗಳು ಮತ್ತು ಸಿದ್ಧಾಂತಗಳನ್ನು ನಂಬಿರುವ ಜನರನ್ನು ಹುಡುಕಿಕೊಂಡು ಹೋಗಬೇಕಾಗಿದೆ. ಈ ಪರಿಸ್ಥಿತಿಗೆ ಕಾರಣಗಳು ಹಲವಾರು. ಮುಖ್ಯವಾಗಿ ರಾಜಕೀಯ ಪಕ್ಷಗಳು ತತ್ವಗಳಿಗೆ ತಿಲಾಂಜಲಿಯನ್ನಿತ್ತು ಗೆಲ್ಲುವುದೊಂದೇ ಗುರಿ, ಮಾರ್ಗಶುದ್ಧಿ ಬೇಕಿಲ್ಲ ಎಂಬಂತೆ ನಡೆದುಕೊಳ್ಳುವುದೇ ಆಗಿದೆ. ಇಂತಹ ವಾತಾವರಣದಲ್ಲಿ ತತ್ವಗಳು ಮತ್ತು ಸಿದ್ಧಾಂತಗಳಲ್ಲಿ ನಂಬಿಕೆ ಇಟ್ಟು ಕಾಯಾ, ವಾಚಾ, ಮನಸಾ ಅನುಸರಿಸಿಕೊಂಡು ಬಂದಿರುವ ಕೆಲವೇ ನಾಯಕರಲ್ಲಿ ಶ್ರೀ ಎಂ.ವಿ. ರಾಜಶೇಖರನ್ ಅವರೂ ಒಬ್ಬರಾಗಿದ್ದಾರೆ. ಕಳೆದ ೫೦ ವರ್ಷಗಳಿಂದಲೂ ರಾಜಕೀಯದಲ್ಲಿದ್ದುಕೊಂಡು ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಇಡೀ ಜಗತ್ತಿಗೇ ಅನ್ವಯಿಸುವಂತಹ ಒಂದು ಏಷ್ಯನ್ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್ ಸಂಸ್ಥೆಯನ್ನು ಕಟ್ಟಿ ವ್ಯವಸಾಯ ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ೧೯೬೭ರಲ್ಲಿ ಲೋಕಸಭಾ ಸದಸ್ಯರಾಗಿ, ಅನಂತರ ವಿಧಾನಸಭಾ, ವಿಧಾನ ಪರಿಷತ್ ಸದಸ್ಯರಾಗಿ ಕೆಲಸ ಮಾಡಿರುವುದಲ್ಲದೆ ಈಗ ರಾಜ್ಯಸಭಾ ಸದಸ್ಯರಾಗಿಯೂ ಕೆಲಸ ಮಾಡುತ್ತಿದ್ದಾರೆ.

ಶ್ರೀ ಎಂ.ವಿ. ರಾಜಸೇಖರನ್ ಅವರ ಹೆಸರು ನೆನಪಿಗೆ ಬಂದ ತಕ್ಷಣ ಮನಸ್ಸಿಗೆ ಮತ್ತು ಹೃದಯಕ್ಕೆ ತಂಪಾದ ಭಾವನೆ ಉಂಟಾಗುತ್ತದೆ. ಅವರ

ನಯ, ವಿನಯ, ಸ್ನೇಹಪರ ನಡತೆ ಮನಸ್ಸಿಗೆ ಮುದವನ್ನು ಕೊಡುತ್ತದೆ. ಇವರ ವ್ಯಕ್ತಿತ್ವವನ್ನು ಹೇಳಲು ಬಸವಣ್ಣನವರ ವಚನವನ್ನು ನೆನಪಿಸಿಕೊಳ್ಳಬಹುದು:

**ಮೃದು ವಚನವೇ ಸಕಲ ತಪಂಗಳಯ್ಯ**
**ಮೃದುವಚನವೇ ಸಕಲ ಜಪಂಗಳಯ್ಯ**
**ಸದುವಿನಯವೇ ಸದಾಶಿವನ ಒಲುಮೆಯಯ್ಯಾ**
**ಕೂಡಲಸಂಗಮದೇವಾ, ಅಂತಲ್ಲದೆ ಒಲ್ಲನಯ್ಯಾ.**

ಈ ವಚನದ ಸಾಕ್ಷೀಭೂತವಾದ ವ್ಯಕ್ತಿತ್ವವನ್ನು ಶ್ರೀ ಎಂ.ವಿ.ರಾಜಶೇಖರನ್ ಅವರು ಹೊಂದಿದ್ದಾರೆ. ಎಷ್ಟು ಕೆಲಸ ಮಾಡಿದರೂ ದುಡಿದರೂ ಅದನ್ನು ಪ್ರದರ್ಶನ ಮಾಡುವುದಕ್ಕೆ ಹೋಗುವುದಿಲ್ಲ. ಇವರ ಕಾರ್ಯ ಮತ್ತು ಸಾಧನೆ ಪ್ರಚಾರವಿಲ್ಲದಿದ್ದರೂ ಸಜ್ಜನರಿಗೆ ಗೋಚರವಾಗುತ್ತದೆ. ಇವರ ಈ ಗುಣವನ್ನು ದಿವಗಂತ ಡಿ.ವಿ.ಗುಂಡಪ್ಪನವರ ಒಂದು ಕವನದಲ್ಲಿ ಕಾಣಬಹುದು :

**ವನಸುಮದೊಳೆನ್ನ ಜೀವನವು ವಿಕಸಿಸುವಂತೆ**
**ಮನವನವನುಗೊಳಿಸು ಹೇ ದೇವಾ.**

**ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು**
**ನಿಜಸೌರಭವ ಸೂಸಿ ನಲವಿಂ**
**ತಾನೆಲೆಯ ಪಿಂತಿರ್ದು ದೀನತೆಯ ತೋರಿ**
**ಅಭಿಮಾನವನು ತೊರೆದು ಕೃತಕೃತ್ಯತೆಯ**
**ಪಡೆವಂತೆ.**

ಪ್ರಜಾಪ್ರಭುತ್ವದಲ್ಲಿ ದೇಶ ಮತ್ತು ಸಮಾಜ ಮುಂದುವರಿಯಬೇಕಾದರೆ ಜನಸಮುದಾಯ ಪ್ರಜ್ಞಾವಂತರಾಗಬೇಕು. ಜನನಾಯಕರು ಆದರ್ಶ ಜೀವಿಗಳಾಗಿರಬೇಕು. ಇದಲ್ಲದೆ ಮಾರ್ಗಶುದ್ಧಿಯನ್ನು ಕೈಬಿಟ್ಟು ಕೆಲಸ ಮಾಡುವುದಾದರೆ ಯಾವ ಬಗೆಯ ರಾಷ್ಟ್ರಪದ್ಧತಿಯೂ ಜನಹಿತವಾದ ವಾತಾವರಣವನ್ನು ಸೃಷ್ಟಿಸುವುದಿಲ್ಲ. ಬ್ರಿಟನ್ ದೇಶದಲ್ಲಿ ಪ್ರಜ್ಞಾವಂತ ಜನ ಇರುವುದರಿಂದ ಪ್ರಜಾಪ್ರಭುತ್ವ ಸಫಲವಾಗಿದೆ. ನಮ್ಮ ದೇಶದಲ್ಲಿ ಇಡೀ ಸಮಾಜವೇ ಅಪರಾಧೀಕರಣವಾಗಿದೆ. Criminalisation of the society ಎಂಬ ಆಪಾದನೆ ಬರಲು ಆಡಳಿತಾಂಗ, ಶಾಸಕಾಂಗ ಮತ್ತು ನ್ಯಾಯಾಂಗದಲ್ಲಿ ಸಡಿಲವುಂಟಾಗಿರುವುದೇ ಕಾರಣವಾಗಿದೆ. ಯಾವುದೇ ರಾಜ್ಯ, ಸಮಾಜ ಸುಸ್ಥಿತಿಯಲ್ಲಿರಬೇಕಾದರೆ ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಆಗಬೇಕು. ಇಂದಿನ ನ್ಯಾಯ ನಿರ್ವಹಣ ಪದ್ಧತಿಯಲ್ಲಿ ಇದು ಸಾಧ್ಯವಾಗಿಲ್ಲ. ಈ ಕಾರಣದಿಂದಲೇ ನಾವು ಇಂದಿನ ವಾತಾವರಣವನ್ನು ಕಾಣುತ್ತಿದ್ದೇವೆ. ಬುದ್ಧಿಜೀವಿಗಳೆಂದು ತಮ್ಮನ್ನು ತಾವೇ ಕರೆದುಕೊಳ್ಳುವ ಜನರಿಂದಲೂ ಸುಧಾರಣೆ ಸಾಧ್ಯವಾಗಿಲ್ಲ. ಜನಸಾಮಾನ್ಯರಲ್ಲಿ ಇನ್ನೂ ಸಜ್ಜನಿಕೆ, ಸತ್ಯಪರಿಪಾಲನೆ ಇತ್ಯಾದಿ ಗುಣಗಳು ಇವೆ. ಜನನಾಯಕರಲ್ಲಿ ಇದು ಬರಬೇಕು. ಹೀಗಾಗಬೇಕಾದರೆ ರಾಜಶೇಖರನ್‌ರಂತಹ ಜನ ಇನ್ನೂ ಹೆಚ್ಚಾಗಬೇಕು. ಇಂತಹವರು ಆಡಳಿತ ನಡೆಸುವ ಸ್ಥಾನಗಳಲ್ಲಿ ಇರಬೇಕಾದುದು ಅಗತ್ಯ.

ಈ ಕಾರಣದಿಂದಲೇ ಅವರಿಗೆ ಸನ್ಮಾನ ಮಾಡಲು ಮತ್ತು ಅವರೇ ಬರೆದಿರುವ ಮತ್ತು ಅವರ ಬಗ್ಗೆ ಬರೆದಿರುವ ಗ್ರಂಥಗಳ ಬಿಡುಗಡೆ ಸಮಾರಂಭ ಏರ್ಪಾಡಾಗಿದೆ. ಇದಕ್ಕೆ ನಾಡಿನ ಎಲ್ಲ ಪಕ್ಷಗಳ ನಾಯಕರುಗಳು, ವಿದ್ಯಾಕ್ಷೇತ್ರ, ಸಾಹಿತ್ಯ ಕ್ಷೇತ್ರಗಳ ಪಂಡಿತರು, ಸಮಾಜದ ಓರೆಕೋರೆಗಳನ್ನು ತಿದ್ದುವ ಮಠಾಧೀಶರುಗಳಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು, ಸಿದ್ಧಗಂಗಾಮಠ ಮತ್ತು ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು, ಆದಿಚುಂಚನಗಿರಿ ಮಠ - ಇವರುಗಳು ಸೇರಿ ನಮ್ಮ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರ ಅಧ್ಯಕ್ಷತೆಯಲ್ಲಿ ಈ ಸಮಾರಂಭ ನಡೆಯುತ್ತಿದೆ.

ಸಂಭಾವನಾ ಗ್ರಂಥಗಳನ್ನು ಪರಿಶೋಧಿಸಿ ಹೊರತಂದಿರುವ ಪಂಡಿತರುಗಳಾದ ವಿಶ್ರಾಂತ ಕುಲಪತಿ ಡಾ. ದೇ.ಜವರೇಗೌಡ ಮತ್ತು ಸಾಹಿತ್ಯ ಪರಿಷತ್ತಿನ ಹಿಂದಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಅತಿ ಉಪಯುಕ್ತವಾದ ಕೆಲಸವನ್ನು ಮಾಡಿದ್ದಾರೆ. ಇವರೆಲ್ಲರಿಗೂ ಸಹಕಾರವಾಗಿ ಶ್ರೀ ಕೆ.ಆರ್. ಕಮಲೇಶ್ ಅವರ ಸೇವೆ ತುಂಬಾ ಪ್ರಶಂಸಾರ್ಹವಾದದ್ದು.

ನಮ್ಮೆಲ್ಲರ ಶುಭಾಶಯ ಶ್ರೀ ರಾಜಶೇಖರನ್ ಅವರಿಗೆ ಇದೆ. ಅವರು ಇನ್ನೂ ಇತೋಪ್ಯತಿಶಯವಾದ ಯಶಸ್ಸಿನಿಂದ ಆಯುರಾರೋಗ್ಯ ಹೊಂದಿ ವರ್ಧಿಸಲಿ ಎಂದು ಹಾರೈಸುತ್ತೇವೆ.

೧೯.೦೨.೨೦೦೩
ಬೆಂಗಳೂರು

(ಹಾರನಹಳ್ಳಿ ರಾಮಸ್ವಾಮಿ)
ಅಧ್ಯಕ್ಷರು
ಎಂ.ವಿ. ರಾಜಶೇಖರನ್-೭೫ ಅಭಿನಂದನ ಸಮಿತಿ

"ಭಾರತನ ಜೀವನಾಡಿ ನಮ್ಮ ಹಳ್ಳಿಗಳು; ಜೀವದುಸಿರು ನಮ್ಮ ರೈತರು. ಗ್ರಾಮ ಭಾರತದ ಕ್ಷೇಮವೇ ರಾಷ್ಟ್ರದ ಕ್ಷೇಮ."

- ಎಂ.ವಿ. ರಾಜಶೇಖರನ್

# ನಲ್ನುಡಿಯ ತೋರಣ

ಸಭ್ಯತೆಯ ಸಾಕಾರಮೂರ್ತಿ, ಬೌದ್ಧಿಕ ಸತ್ವಸಂಪನ್ನ, ನಿಸ್ವಾರ್ಥ, ನಿಷ್ಕಳಂಕ ರಾಜಕಾರಣಿ, ಗ್ರಾಮಜೀವನ ಸಂಜೀವಿನೀ ಮಾಂತ್ರಿಕ, ಅಪ್ಪಟ ಗಾಂಧಿವಾದಿ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ಎಪ್ಪತ್ತೈದು ವರ್ಷ ತುಂಬಿದ ಶುಭ ಸಂದರ್ಭದಲ್ಲಿ ರಾಷ್ಟ್ರದ ಕೃತಜ್ಞತೆಯ ಸಂಕೇತವಾಗಿ ಅಭಿಮಾನದಿಂದ ಅರ್ಪಿಸುತ್ತಿರುವ 'ನಿಜಬಿಂಬ' ಅಭಿನಂದನ ಗ್ರಂಥ ಕನ್ನಡ ಸಂಸ್ಕೃತಿಯ ಪ್ರತೀಕವಾಗಿದೆ. ದೇಶ-ವಿದೇಶಗಳ, ದೇಶದ ಎಲ್ಲ ಪಕ್ಷಪಂಗಡಗಳ ಗಣ್ಯರು ಈ ಗ್ರಂಥಕ್ಕೆ ಬರೆದಿರುವ ಲೇಖನಗಳನ್ನೋದಿದಾಗ, ರಾಜಶೇಖರನ್ ಅವರ ಅಪ್ರತಿಮ ಅಪೂರ್ವ ಸಜ್ಜನಿಕೆಯ, ನಿಸ್ವಾರ್ಥ ಸಮರ್ಪಣ ಮನೋಭಾವದ ದೇಶಸೇವೆಯ, ಸೇವೆಯೇ ರಾಜಕಾರಣಾದಿ ಸಕಲ ಕಾಯಕಗಳ ಪರಮಾರ್ಥವೆಂಬ ವಿಶ್ವಾಸದ, ದೀನದಲಿತರ ಸಾಮಾನ್ಯರ ರೈತರ ಹಿತವೇ ದೇಶದ ಹಿತವೆಂಬ ಮಾನವೀಯತೆಯ, ಯಾರಿಗೂ ಮುಳುವಾಗದ, ಹೊರೆಯಾಗದ, ಕಹಿಯಾಗದ ಜೀವನವನ್ನು ನಡೆಸುವ ಮೂಲಕ ಸಾಧಿಸಿದ ಅಪರಂಜಿಯಂಥ ಘನತೆಯ ವ್ಯಕ್ತಿತ್ವದ, ಬಣ್ಣಗೆ ಮಾರುಹೋಗದ ಈ ಆದರ್ಶ ವ್ಯಕ್ತಿಯ ಬಗೆಗೆ ಅಭಿಮಾನ ತಾಳದ ಕನ್ನಡಿಗನಿರಲಾರ, ಕನ್ನಡ ಹಾಗೂ ಕನ್ನಡದ ನೆಲ ಎಂಥ ಅದ್ವಿತೀಯ ಗುಣಸಂಪನ್ನನನ್ನು ಸೃಷ್ಟಿಸಿದೆ ಎಂಬುದನ್ನು ನೆನೆದು ಪುಳಕಗೊಳ್ಳದಿರಲಾರ. ತಮ್ಮ ಮಧ್ಯೆ ಇದ್ದ ಚೇತನದ ಮಹಿಮೆಯನ್ನು ಈ ತನಕ ತಿಳಿಯಲಾರದೇ ಕಾಲವನ್ನು ವ್ಯರ್ಥಗೊಳಿಸಿದೆವಲ್ಲ ಎಂಬ ಚಿಂತನೆಗೆ ಈಡಾಗದಿರಲಾರ. ಈ ದೃಷ್ಟಿಯಿಂದ ಅವಲೋಕಿಸಿದಾಗ ಈ ಅಭಿನಂದನ ಗ್ರಂಥದ ಪ್ರಯೋಜನ ಸುಸಂಸ್ಕೃತರಿಗೆ ಮನದಟ್ಟಾಗದಿರಲಾರದು.

ವಯೋವೃದ್ಧರೂ ಜ್ಞಾನವೃದ್ಧರೂ ಮಹಾತಪಸ್ವಿಗಳೂ ತ್ರಿವಿಧ ದಾಸೋಹಿಗಳೂ ಸಿದ್ಧಗಂಗಾ ಕ್ಷೇತ್ರದ ಅಧಿಪತಿಗಳೂ ಆದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಅಮೃತ ಸಂದೇಶವೊಂದೇ ಸಾಕು ರಾಜಶೇಖರನ್‌ರ ವ್ಯಕ್ತಿತ್ವ ಮಹಿಮೆಯ ಮಾಪನಕ್ಕೆ. ಗ್ರಾಮೀಣಾಭಿವೃದ್ಧಿಯ ಭಗೀರಥ, ಪರಿಶುದ್ಧ ಚರಿತ್ರೆಯುಳ್ಳ ಜನನಾಯಕ, ಕೀರ್ತಿ ವಾರ್ತೆಗಳನ್ನು

ಬಯಸದ ಸರಳ ಶ್ರೀಮಂತ, ಪ್ರಬುದ್ಧ ವಿಚಾರ ವೈನತೇಯ, ಅರಿವಿನಾಶಕ, - ರಾಜಶೇಖರ್ ಅವರ ಸಾಧನೆ ಸಿದ್ಧಿಗಳ ನಿರ್ಣಯಕ್ಕೆ ಸ್ವಾಮಿಜೀಯವರ ಈ ಪ್ರಶಸ್ತಿ ಸೂಕ್ತಿಗಳಿಗಿಂತ ಅನ್ಯ ಪ್ರಮಾಣ ಅನಗತ್ಯ. ಅಧಿಕಾರದ ಶಿಖರದಲ್ಲಿದ್ದ ಮಾನ್ಯ ಶ್ರೀ ನಿಜಲಿಂಗಪ್ಪನವರ ಪ್ರಭಾವವನ್ನು ಬಳಸಿಕೊಂಡು ಉನ್ನತಾಧಿಕಾರವನ್ನು ಗಳಿಸಬಹುದಾಗಿದ್ದ ರಾಜಶೇಖರನ್ ಮಾವನಂತೆಯೆ ಶುದ್ಧ ಚಾರಿತ್ರ್ಯದ ಸ್ವಾಭಿಮಾನಿ ಎಂಬುದು ಕೊಲೂರು ಮಲ್ಲಪ್ಪ ಮೊದಲಾದವರ ಅಭಿಪ್ರಾಯ. ಅಧಿಕಾರಕ್ಕಾಶಿಸದೆ, ಕೇವಲ ಪ್ರಬುದ್ಧ ಗುಣಸಾಂದ್ರ ವ್ಯಕ್ತಿತ್ವದಿಂದ ಜನಪ್ರಿಯರಾದ ತತ್ವಬದ್ಧ ರಾಜಕಾರಣಿಯೆಂಬುದು ಶತಾಯುಷಿ, ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರ ಅನಿಸಿಕೆ. ಅವರು ಪಕ್ಷಾತೀತ ರಾಜಕಾರಣಿ, ಅಜಾತ ಶತ್ರುವೆಂದು ರಾಮಕೃಷ್ಣ ಹೆಗ್ಡೆ ಮೊದಲಾದ ಹಿರಿಯರು ಸ್ಪಷ್ಟಪಡಿಸಿದ್ದಾರೆ. ಅವರು ವಿನಯದ ಸಾಕಾರ ಮೂರ್ತಿ, ರೈತ ಬಂಧುವೆಂಬುದು ಹಲವರ ಮತ. ಅಪ್ಪಟ ಗಾಂಧಿವಾದಿಯೆಂದು, ಸಂಘಟನಾಚತುರರೆಂದು, ಸೋತಾಗ ಕುಗ್ಗದ ಗೆದ್ದಾಗ ಹಿಗ್ಗದ, ಎಂದೂ ಸಮಚಿತ್ತತೆಯನ್ನು ಕಳೆದುಕೊಳ್ಳದ, ಪ್ರಾಮಾಣಿಕ ನಿಸ್ಪೃಹ ರಾಜಕಾರಣಿಯೆಂದು ವೈ.ರಾಮಚಂದ್ರ ಮೊದಲಾದ ಅವರ ನಿಕಟವರ್ತಿಗಳ ದೃಷ್ಟಿಯಲ್ಲಿ ರಾಜಶೇಖರನ್ ಕಂಡದ್ದು. ಅವರ ಮಾತು ಮಿತವಾದರೂ ಕಾರ್ಯಪಟು, ಅವಕಾಶ ಅರ್ಹತೆಗಳಿದ್ದರೂ ಮುನ್ನುಗ್ಗುವ ಹಠಮಾರಿತನವಿಲ್ಲದ್ದರಿಂದ ಅಧಿಕಾರ ಅವರಿಗೆ ಒಲಿಯಲಿಲ್ಲ ವೆಂದು ಕೃಷ್ಣಯ್ಯರ್ ಅವರನ್ನು ಗುರುತಿಸುತ್ತಾರೆ. ಅವರಲ್ಲಿ ಸೌಮ್ಯವ್ಯಕ್ತಿತ್ವದ ಸಭ್ಯ ರಾಜಕಾರಣಿಯನ್ನು ಮಲ್ಲಾಜಮ್ಮ ಕಂಡಿದ್ದಾರೆ.

ರಾಜಶೇಖರನ್ ಅವರ ಅಧ್ಯಯನಶೀಲವಾಗಲಿ, ಚಿಂತನ ಪ್ರವೃತ್ತಿಯಾಗಲಿ, ಪಾಂಡಿತ್ಯವಾಗಲಿ ನಾಡಿನ ಜನರಿಗೆ ಗೊತ್ತಿಲ್ಲವೆಂದು ಜಿ.ವಿ.ಕೆ. ರಾವ್ ಅವರೂ, ಇಂಥ ವಿದ್ವತ್ಸಂಪನ್ನ ರಾಜಕಾರಣಿ ಅಪೂರ್ವವೆಂದು ವೀರಪ್ಪ ಮೊಯಿಲಿಯವರೂ ಪ್ರಸ್ತಾಪಿಸಿರುವುದು ಸರಿಯೇ ಸರಿ. ಪರಿಪಕ್ವ ಚೇತನವೆಂದು ಸಭಾಪತಿ ಬಿ.ಎಲ್. ಶಂಕರ್ ಅವರೂ, ಗ್ರಾಮೀಣ ಭಾರತದ ರಾಯಭಾರಿಯೆಂದು ಎಂ.ಶ್ರೀನಿವಾಸ್ ಅವರೂ, ನೀತಿ ನಿಯಮ ಪಾಲಕರೆಂದು ಎನ್.ಎಸ್.ರಾಮಸ್ವಾಮಿಯವರೂ ಅವರನ್ನು ಶ್ಲಾಘಿಸುತ್ತಾರೆ. ಅವರು ಕನಸುಗಾರರು ಮಾತ್ರವಲ್ಲ, ವಾಸ್ತವ ಪ್ರಜ್ಞೆಯುಳ್ಳ ಆದರ್ಶ ವ್ಯಕ್ತಿಯೆಂಬುದು ಎಂ.ಕೆ.ರಾಮಚಂದ್ರ ಅವರ ಅಭಿಮತ. ಅವರಲ್ಲಿ ಕೃತ್ರಿಮತೆ ಎಳ್ಳಷ್ಟು ಇಲ್ಲ, ಸಾಮಾನ್ಯರಲ್ಲಿ ಸಾಮಾನ್ಯರು, ತಾವು ಶ್ರೀಮಂತರು, ಸಂಸದರು, ಶಾಸಕರು, ರಾಜಕೀಯ ಶಕ್ತಿಯುಳ್ಳ ಗಟ್ಟಿಗರೆಂಬ ಭ್ರಮೆಯಂತು ಇಲ್ಲವೇ ಇಲ್ಲವೆಂದು ಅವರನ್ನು ಕಂಡವರೆಲ್ಲ ಹೇಳುತ್ತಾರೆ. ಪಿ.ಜಿ.ಆರ್. ಸಿಂಧ್ಯಾ ಅವರು ತಮ್ಮನ್ನು ಸೋಲಿಸಿದಾಗ, ಅವರ ಕೊರಳಿಗೆ ಹೂಮಾಲೆ ಹಾಕಿ, ನೀವು ಕೈಗೊಳ್ಳುವ ಎಲ್ಲ ಜನಪರ ಕಾರ್ಯಕ್ರಮಗಳಲ್ಲಿ ಸಹಕಾರ ನೀಡುತ್ತೇನೆಂದು ರಾಜಶೇಖರನ್ ನುಡಿದರೆಂದು ಎಂ.ನಾಗೇಗೌಡರು ಹೇಳುವ ಮಾತನ್ನು ನೆನೆಯುವಾಗ, ಈ ದೇಶದಲ್ಲಿ ಇನ್ನೂ ಸಭ್ಯತೆ, ಸಂಸ್ಕೃತಿ ಹಾಗೂ ದೇಶಾಭಿಮಾನ ಜೀವಂತವಾಗುಳಿದಿವೆ, ಇಂಥವರಿಂದಾಗಿ ದೇಶಕ್ಷೇಮ ಸುಭದ್ರವೆಂದು ನಾಗರಿಕರು ಸಮಾಧಾನ ಹೊಂದುವಂತಾಗಿದೆ.

ರಾಜಶೇಖರನ್ ಸಂಸದರೊ, ಶಾಸಕರೊ ಆದಾಗ ಮತದಾರರೊಡನೆ, ಜನತೆಯೊಡನೆ ಹೇಗೆ ಸ್ಪಂದಿಸುತ್ತಿದ್ದರೆಂದು ರಾಮಚಂದ್ರಗೌಡರು ಪ್ರಸ್ತಾಪಿಸುತ್ತಾರೆ. ಲೋಕಸಭೆಯ ಅಧಿವೇಶನಕ್ಕೆ ಮುಂಚಿತವಾಗಿ ಜನರ ಸಮಸ್ಯೆಗಳನ್ನು, ಬೇಕು ಬೇಡಗಳನ್ನು, ಕುಂದುಕೊರತೆ ಅಗತ್ಯಗಳನ್ನು ತಿಳಿಯುವ ಸಲುವಾಗಿ ೪೦೦-೫೦೦ ಮಂದಿ ಮತದಾರರಿಗೆ ಪತ್ರಗಳನ್ನು ಬರೆಯುತ್ತಿದ್ದರಂತೆ. ಇಡೀ ದೇಶದಲ್ಲಿ ಅಂಥ ಸಂಸದರೊಬ್ಬರು ಇದ್ದಾರೆಂದರೆ ನನ್ನಂಥವನಿಗೆ ಸೋಜಿಗವಾಗುತ್ತದೆ. ಅಂಥ ಶಾಸಕರು ದೇಶದಲ್ಲಿದ್ದುದಾದರೆ, ಯಾವ ಪ್ರದೇಶವೂ ಹಿಂದುಳಿಯುವುದಿಲ್ಲ; ಸೈನಿಕರ ಬೇಜವಾಬ್ದಾರಿಯ, ಪೂರ್ವಾಗ್ರಹದ ಬೊಬ್ಬೆಗೆ ಅವಕಾಶವಿರುವುದಿಲ್ಲ.

ಇಂಥ ಉಜ್ವಲ ವ್ಯಕ್ತಿಯನ್ನು ಈ ದೇಶದ ಗಣ್ಯರು ಪಕ್ಷಭೇದವನ್ನು ತೊರೆದು, ನಿರ್ಮಾತ್ಸರ್ಯದಿಂದ ಮಾಡಿರುವ ಪ್ರಶಂಸೆ ಉನ್ನತ ಪರಂಪರೆಯ ಸಂಸ್ಕೃತಿಗೆ ದ್ಯೋತಕವಾಗಿದೆ. ದೇಶದ ಹೊರಗಿನ ಗಣ್ಯರೂ ಇವರನ್ನು ಮುಕ್ತಕಂಠದಿಂದ ಹೊಗಳುವಾಗ ಕನ್ನಡಿಗರ ಹೆಮ್ಮೆಯ ಕೋಡು ಗಗನವನ್ನು ತಿವಿಯುವಂತಾಗುತ್ತದೆ.

ಹೃದಯಶುದ್ಧಿಯ, ನಿರ್ಮಾತ್ಸರ್ಯದ, ನಿರ್ವ್ಯಾಜ ಸ್ನೇಹದ ಸಂಕೇತ ನಗು. ಅದು ಶತ್ರುಗಳನ್ನು ಮಿತ್ರರನ್ನಾಗಿ ಪರಿವರ್ತಿಸುತ್ತದೆ, ಕ್ರೂರಿಗಳ ಹೃದಯವನ್ನು ಮೃದುಗೊಳಿಸುತ್ತದೆ, ಸಮಾಜದಲ್ಲಿ ಪ್ರೇಮದ ಪರಿಸರವನ್ನು ನಿರ್ಮಿಸುತ್ತದೆ. ರಾಜಶೇಖರನ್ ಅವರ ಮುಖದಲ್ಲಿ ಅಂಥ ನಗುವನ್ನು ಕಂಡವರು, ಅದರ ಮುಗ್ಧ ಮಾಧುರ್ಯಕ್ಕೆ ಮರುಳಾದವರು ಜಪಾನಿನ ನೊಕೊ (Noko Taniyoka) ತನಿಯೋಕ ಎಂಬ ಸಜ್ಜನರು. ಆ ಬಗ್ಗೆ ಅವರು ಮಾಡಿರುವ ವರ್ಣನೆಯ ಭಾವಾನುವಾದವನ್ನಿಲ್ಲಿ ಲೇಖಿಸುತ್ತೇನೆ : 'ಮೊದಲ ನೋಟದಲ್ಲಿಯೇ ಅವರ ಮೋಹಕ ಮಂದಹಾಸಕ್ಕೆ ಮರುಳಾದೆ. ಕೂಡಲೇ ಅದರ ಸ್ವಾಗತಕ್ಕಾಗಿ ನನ್ನ ಹೃದಯವನ್ನು ತೆರೆದೆ. ಅದರ ಚುಂಬಕಶಕ್ತಿಗೆ ಅದು ಅವರ ನಿಷ್ಕಪಟ ನಿಸ್ವಾರ್ಥಕ್ಕೆ ಹೃದಯದಿಂದ ಬಂದದ್ದೇ ಕಾರಣವೆಂದು ತಿಳಿಯಲು ತುಂಬ ಹೊತ್ತು ಹಿಡಿಯಲಿಲ್ಲ. ದುಃಖ ಸಂಕಟಗಳನ್ನು ಶಮನ ಮಾಡುವ ಶಕ್ತಿ ಅದಕ್ಕಿದೆ. ಇತರರಿಗೂ ನನಗಾದನುಭವವೇ ಆಗುತ್ತದೆಂಬ ಭರವಸೆ ನನಗಿದೆ. ಈ ಜಗತ್ತಿನಲ್ಲಿ ವಾಸಿಸುವ ಜನರ ನಡುವೆ ಯಾವ ಗೋಡೆಗಳೂ ಇಲ್ಲವೆಂದು ಆ ಮಂದಹಾಸದ ಸಂದೇಶವಿದ್ದಂತಿದೆ. ಅವರು ಟೋಕಿಯೋಗೆ ಬಂದಾಗ ಪಂಚತಾರಾ ಹೋಟಲಿನಲ್ಲಿ ಅವರಿಗೆ ವಸತಿ ಸೌಲಭ್ಯವನ್ನು ಒದಗಿಸಲಾಗಿತ್ತು. ಇದಕ್ಕೆ ತೆರುವ ಹಣವನ್ನುಳಿಸಿದರೆ ಹಲವು ಬಡವರ ಹಸಿವನ್ನು ನೀಗಬಹುದು, ತಮಗೊಂದು ಅಗ್ಗದ ಹೋಟಲೇ ಸಾಕೆಂದರು. ಅವರೊಡನೆಯ ಸಂಭಾಷಣೆಯಿಂದ ನಾನು ಹೊಸ ಅನುಭವ ವಿಚಾರಗಳನ್ನು ತಿಳಿಯಲವಕಾಶವಾಯಿತು'. 'ವಿದೇಶೀಯನೊಬ್ಬನ ಗೌರವಕ್ಕೆ ಪಾತ್ರರಾದ ಮಾಂತ್ರಿಕ' ರಾಜಶೇಖರನ್ ಕನ್ನಡನಾಡಿನ ಕೀರ್ತಿಗೋಪುರವಾಗಿದ್ದಾರೆಂಬ ಹೆಮ್ಮೆ ನಮ್ಮದಾಗಬೇಕಾಗಿದೆ.

ಸ್ನೇಹಪ್ರೇಮಗಳ ಸಾಕಾರಮೂರ್ತಿಯಾಗಿರುವ ರಾಜಶೇಖರನ್ ಗ್ರಾಮಾಭಿವೃದ್ಧಿ ಯೋಜನೆಗಳ ಬಗ್ಗೆ ತಮಗಿರುವ ಅಪಾರ ಅನುಭವದಿಂದಾಗಿ ನಮಗೆ ಸ್ಫೂರ್ತಿ

ಶಕ್ತಿಯಾಗಿದ್ದಾರೆಂದು ಮತ್ತೊಬ್ಬ ವಿದೇಶೀಯ ತಜ್ಞ ನಥಾನಿಯಲ್ ಡಾನ್ ಇ.ಮಾರ್ಕ್ವಿಜ್ (Nathaniel Don E. Marquez) ಹೇಳಿರುವ ಮಾತು ರಾಜಶೇಖರನ್ ಅವರ ಘನ ವಿದ್ವತ್ತಿಗೆ, ಅವರ ವ್ಯಕ್ತಿತ್ವದ ವರ್ಚಸ್ಸಿಗೆ ಸಂದ ಗೌರವವಾಗಿದೆ. ರಾಜಶೇಖರನ್ ಅವರ ಕಾರ್ಯಪಟುತ್ವವನ್ನವರು ಮನಸಾರೆ ಹೊಗಳುತ್ತಾರೆ. ಪ್ರಕೃತಿ ಮಾತೆಯಲ್ಲಿ ತಾದಾತ್ಮ್ಯ ಹೊಂದಿರುವ ಕಾರಣದಿಂದಾಗಿ ರಾಜಶೇಖರ್ ಸದಾ ಯುವಕರಂತೆ ಕಾಣುತ್ತಾರೆಂದವರು ನುಡಿಯುತ್ತಾರೆ.

ಸಹಪಾಠಿಗಳು, ಸಹೋದ್ಯೋಗಿಗಳು, ಬಂಧು-ಮಿತ್ರರು, ಜನಸಾಮಾನ್ಯರು, ಅಂತೆಯೇ ವಿದೇಶೀಯ ಮಿತ್ರರು ಅಭಿವ್ಯಕ್ತಗೊಳಿಸಿರುವ ಭಾವನೆಗಳನ್ನು ಮೆಲುಕು ಹಾಕುವಾಗ, ರಾಜಶೇಖರನ್ ನಮ್ಮ ನಾಡಿನ ಅತ್ಯಂತ ಎತ್ತರದ ವ್ಯಕ್ತಿಯೆಂದು, ಅವರ ತ್ಯಾಗ, ದೇಶಸೇವೆ, ಪ್ರಾಮಾಣಿಕತೆ, ನಿಸ್ವಾರ್ಥತೆ, ಸ್ನೇಹೌದಾರ್ಯಗಳನ್ನು ಗಮನಿಸಿದಾಗ ಅವರಿಗೆ ಹೆಗಲೆಣೆಯಾಗಿ ನಿಲ್ಲುವ ವ್ಯಕ್ತಿ ವಿರಳರೆಂದು, ಸಾಮಾನ್ಯವಾಗಿ ಪರಸ್ಪರ ಹೊಂದಾಣಿಕೆಯಾಗದ ವಿದ್ವತ್ತು ರಾಜಕಾರಣ ನಿಷ್ಕಳಂಕ ಚಾರಿತ್ರ್ಯಗಳು ಅವರಲ್ಲಿ ಸಂಗಮಗೊಂಡಿವೆಯೆಂದು ಈ ಗ್ರಂಥದ ಲೇಖನಗಳಿಂದ ಸ್ಪಷ್ಟವಾಗುತ್ತದೆ. ಅವರ ಪಾಂಡಿತ್ಯಕ್ಕೆ ಹಾಗೂ ಲೋಕಾನುಭವಗಳಿಗೆ ಅವರ ಹಲವು ಪ್ರಬಂಧಗಳು ಹಾಗೂ ವಿಶ್ವಪರ್ಯಟನೆಗಳೇ ಸಾಕ್ಷಿ. ಅವರು ಸ್ಥಾಪಿಸಿರುವ ಏಷಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯೇ ಸಾಕ್ಷಿ. ಅವರಲ್ಲಿ ಯಾರ ಬಗ್ಗೆಯೂ ಕಹಿಭಾವನೆಯಿಲ್ಲ. ದ್ವೇಷವೆಂಬುದೇ ಅವರಿಗೆ ಗೊತ್ತಿಲ್ಲ. ಸಿಟ್ಟಂತು ಕ್ಷಣಿಕ. ಆದ್ದರಿಂದಲೇ ಅವರು ಈ ರಾಷ್ಟ್ರದ ಭಾವೈಕ್ಯದ ಸಂಕೇತವಾಗಿದ್ದಾರೆ. ಅವರ ವಿಶಿಷ್ಟ ಸಂಪದ್ಭರಿತ ಪ್ರಾಯೋಗಿಕಾನುಭವದ ವ್ಯಾಪಕತೆಯನ್ನು ಗಮನಿಸಿದಾಗ ಅವರಿಗೆ ಕೃಷಿ ಮಂತ್ರಿ ಪದವಿ ಲಭಿಸಿದ್ದರೆ ದೇಶಕ್ಕೆ ತುಂಬ ಲಾಭವಾಗುತ್ತಿತ್ತೆಂಬುದು ಹಲವರ ಪ್ರಾಮಾಣಿಕ ಅಭಿಪ್ರಾಯ. ಅವರ ಸಹಪಾಠಿ ಮಾನ್ಯ ಮುಖ್ಯಮಂತ್ರಿ ಶ್ರೀ ಎಸ್.ಎಂ.ಕೃಷ್ಣ ಅವರು ರಾಜಶೇಖರನ್ ಅವರನ್ನು ವಿಧಾನ ಪರಿಷತ್ತಿನ ಹಾಗೂ ರಾಜ್ಯಸಭೆಯ ಸದಸ್ಯತ್ವಕ್ಕೆ ಆರಿಸಿದ್ದು ಅವರ ಯೋಗ್ಯತೆಗೆ ಮಣೆ ಹಾಕಿದಂತಾಗಿದೆ.

ಕೃತಜ್ಞತೆ ಸಜ್ಜನರ ಸಲ್ಲಕ್ಷಣ. ರಾಜಶೇಖರನ್‌ರಿಗೆ ಅಭಿನಂದನೆ ಸಲ್ಲಿಸುವ ಸಲುವಾಗಿ, ಏಕೀಕರಣ ಧುರೀಣರೂ, ಸಂಭಾವಿತರೂ ಆದ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರ ಅಧ್ಯಕ್ಷತೆಯಲ್ಲಿ ಎಲ್ಲ ಪ್ರಮುಖ ಪಕ್ಷಗಳ ಸುಸಂಸ್ಕೃತ ನಾಯಕರನ್ನೊಳಗೊಂಡ ಸಮಿತಿ ರಚನೆಯಾದದ್ದು ಹೆಮ್ಮೆಯ ಸಂಗತಿ. ರಾಜಶೇಖರನ್ ಅವರಿಗೆ ಅಭಿನಂದನ ಗ್ರಂಥವನ್ನು ಸಮರ್ಪಿಸತಕ್ಕದ್ದೆಂದೂ, ಶ್ರೀ ಕೆ.ಆರ್. ಕಮಲೇಶ್, ಶ್ರೀ ಗೊ.ರು. ಚನ್ನಬಸಪ್ಪ ಮತ್ತು ನಾನು ಅದನ್ನು ಸಿದ್ಧಗೊಳಿಸತಕ್ಕದ್ದೆಂದೂ ಸಮಿತಿ ತೀರ್ಮಾನಿಸಿತು. ಕಮಲೇಶ್ ಇದ್ದಲ್ಲಿ ಯಾರೂ ಬೇಕಿಲ್ಲ. ಏಕಾಂಗಿಯಾಗಿಯೇ ಇಂಥ ಸಾಹಸಕಾರ್ಯವನ್ನು ಅತ್ಯಂತ ಸಮರ್ಪಕವಾಗಿ, ಯಶಸ್ವಿಯಾಗಿ, ಸರ್ವಾಂಗ ಸುಂದರವಾಗಿ ನೆರವೇರಿಸಬಲ್ಲರೆಂಬ ಸಂಗತಿಯನ್ನು ಎರಡು ದಶಕಗಳಿಂದಲೂ ಬಲ್ಲೆ. ಇಂಥ ಕಾರ್ಯಸಾಧನೆಗೆ ಬೇಕಾದ ವಿದ್ವತ್ತು, ಅನುಭವ, ತಂತ್ರಜ್ಞತೆ, ಕ್ರಿಯಾಶೀಲತೆ, ವ್ಯವಹಾರ ಜ್ಞಾನ, ಔಚಿತ್ಯಾನೌಚಿತ್ಯವಿವೇಕ, ಸಹನೆ, ಕಷ್ಟಸಹಿಷ್ಣುತೆ,

ವಾಕ್ಕೌಶಲ್ಯ, ಸಂಘಟನಾ ಚಾತುರ್ಯ ಎಲ್ಲವೂ ಅವರಲ್ಲಿ ಸಮಪ್ರಮಾಣದಲ್ಲಿವೆ. ನಾನಂತು ಹೆಸರಿಗೆ ಪ್ರಧಾನ ಸಂಪಾದಕ. ರಾಜಶೇಖರನ್ ಅವರಿಗೆ ನನ್ನ ಗೌರವವನ್ನು ಸಲ್ಲಿಸುವ ಅವಕಾಶ ಅನಾಯಾಸವಾಗಿ ದೊರೆತದ್ದಕ್ಕಾಗಿ ನನಗೆ ಅತೀವ ಸಂತೋಷವಾಗಿದೆ. ಏನು ಕೆಲಸ ವಹಿಸಿದರೂ ಅದನ್ನು ಸಮರ್ಥವಾಗಿ, ಸಕಾಲದಲ್ಲಿ, ಪ್ರಾಮಾಣಿಕತೆಯಿಂದ ನಿಷ್ಠೆಯಿಂದ ನೆರವೇರಿಸಬಲ್ಲ ಚಾಕಚಕ್ಯತೆ ಅವರಲ್ಲಿದೆ. ನಾನೇನು ಕೆಲಸ ಮಾಡದಿದ್ದರೂ, ಅವರ ಸಾಧನೆಯಿಂದಾಗಿ, ನನಗೂ ಒಂದಷ್ಟು ಹೆಸರು ಬರುತ್ತದಲ್ಲ, ಅದಕ್ಕಾಗಿ ನಾನವರಿಗೆ ಕೃತಜ್ಞ.

ಇಷ್ಟು ಗಾತ್ರದ ಗ್ರಂಥ ಅಲ್ಪ ಸಮಯದಲ್ಲಿ ಸಿದ್ಧವಾದದ್ದೇ ಸೋಜಿಗ. ಸಂಪಾದಕರ ಶ್ರಮದ ಜತೆಗೆ ರಾಜಶೇಖರನ್ ಹೆಸರೂ ಕೀರ್ತಿಯೂ ಕಾರಣವೆಂಬುದಂತೂ ಸತ್ಯ. ಅವರ ಮೇಲಣ ಗೌರವದಿಂದ ಲೇಖಕರು ಕನಿಷ್ಠ ವೇಳೆಯಲ್ಲಿ ಸುಂದರವಾದ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಅಭಿನಂದನ ಸಮಿತಿಯ ಅಧ್ಯಕ್ಷರ ಮತ್ತು ಸದಸ್ಯರ ಸಹಕಾರವಂತು ಇದ್ದದ್ದೇ. ಖಜಾಂಚಿ ಎ.ಎಸ್. ಜಯಸಿಂಹ, ಪ್ರಧಾನ ಕಾರ್ಯದರ್ಶಿ ಚಿತ್ರದುರ್ಗದ ಎಸ್.ಜಿ. ಮಂಜುನಾಥ್ ಹಾಗೂ ಜಯಶಂಕರ್ ಮೂರ್ತಿ ಅವರ ಸಹಕಾರದ ನೆರವಿಗೆ ಕೃತಜ್ಞತೆ. ಕರಡು ತಿದ್ದಿದ ಡಾ. ಬೈರಮಂಗಲ ರಾಮೇಗೌಡ, ಬಿ.ಎಸ್. ಸತ್ಯನಾರಾಯಣ ಹಾಗೂ ಸಲಹೆ ಸೂಚನೆ ನೀಡಿದ ಖ್ಯಾತ ಪತ್ರಕರ್ತರಾದ ವಿ.ಎನ್. ಸುಬ್ಬರಾವ್ ಅವರಿಗೆ ಧನ್ಯವಾದಗಳು. ನಾಡಿನಲ್ಲೆಲ್ಲ ಪ್ರಸಿದ್ಧವಾದ ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಅಶೋಕ್ ಕುಮಾರ್ ಅವರ ಸಹಕಾರ ಹಾಗೂ ದಕ್ಷತೆ ಮಾತಿಗೆ ಮೀರಿದ್ದು. ಇವರೆಲ್ಲರಿಗೂ ಗೌರವಪೂರ್ವಕವಾದ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಶ್ರೀ ಎಂ.ವಿ.ರಾಜಶೇಖರ್ ಅವರು ಚಿರಾಯುವಾಗಲಿ. ಅವರ ತ್ಯಾಗಮಯ ಆದರ್ಶ ಜೀವನ ಮುಂದಿನ ಪೀಳಿಗೆಗೆ ದಾರಿದೀಪವಾಗಲಿ. ಅವರ ಕೀರ್ತಿಯು ಪರಿಮಳ ದೇಶವಿದೇಶಗಳಲ್ಲಿ ಹರಡಲಿ. ಕನ್ನಡ ನಾಡು-ನುಡಿಗಳಿಗೆ ಅವರಿಂದ ಸಕಲ ಗೌರವ ಮನ್ನಣೆಗಳು ಪ್ರಾಪ್ತವಾಗಲಿ ಎಂದು ಹಾರೈಸುತ್ತೇನೆ.

ಮೈಸೂರು
೧೪.೧೨.೨೦೦೩

ದೇ. ಜವರೇಗೌಡ
ಪ್ರಧಾನ ಸಂಪಾದಕರು

"ಮಾತಿಗಿಂತ ಕೃತಿಗೆ ಮಹತ್ವ ಕೊಡದ ಹೊರತು ಮುನ್ನಡೆ ಕನಸಿನ ಮಾತು. ನಡೆ-ನುಡಿಗಳ ಸಮನ್ವಯ ಇಂದಿನ ಅವಸರದ ಅಗತ್ಯ"

– ಎಂ.ವಿ. ರಾಜಶೇಖರನ್

# ಶ್ರೀ ಎಂ.ವಿ. ರಾಜಶೇಖರನ್-೭೫ ಅಭಿನಂದನ ಸಮಿತಿ

*ಗೌರವಾಧ್ಯಕ್ಷರು*

ಹಾರನಹಳ್ಳಿ ರಾಮಸ್ವಾಮಿ, ಮಾಜಿ ಸಚಿವರು

*ಗ್ರಂಥ ಸಮಿತಿ*

ಡಾ। ದೇಜಗೌ, ಪ್ರಧಾನ ಸಂಪಾದಕರು

ಗೊ.ರು. ಚನ್ನಬಸಪ್ಪ, ಕಾರ್ಯನಿರ್ವಾಹಕ ಸಂಪಾದಕರು

ಕೆ.ಆರ್. ಕಮಲೇಶ್, ಸಂಪಾದಕರು

*ಉಪಾಧ್ಯಕ್ಷರು*

ಬಿ.ಎಲ್. ಶಂಕರ್, ಅಧ್ಯಕ್ಷರು, ಕರ್ನಾಟಕ ವಿಧಾನಪರಿಷತ್

ಎಚ್. ಹನುಮಂತಪ್ಪ, ಮಾಜಿ ರಾಜ್ಯಸಭಾ ಸದಸ್ಯರು, ಚಿತ್ರದುರ್ಗ

ಎಚ್.ಡಿ. ತುಳಸೀ ದಾಸಪ್ಪ, ಮಾಜಿ ಕೇಂದ್ರ ಸಚಿವರು, ಮೈಸೂರು

ಪಿ.ಜಿ.ಆರ್. ಸಿಂಧ್ಯಾ, ಮಾಜಿ ಸಚಿವರು ಹಾಗೂ ವಿಧಾನಸಭಾ ಸದಸ್ಯರು

ಡಿ.ಕೆ. ಶಿವಕುಮಾರ್, ನಗರಾಭಿವೃದ್ಧಿ ಸಚಿವರು, ಬೆಂಗಳೂರು

ಎ. ಕೃಷ್ಣಪ್ಪ, ಸಮಾಜ ಕಲ್ಯಾಣ ಸಚಿವರು

ವೈ. ರಾಮಚಂದ್ರ, ಮಾಜಿ ಸಚಿವರು, ಬೆಂಗಳೂರು

ಎಂ.ಪಿ. ಪ್ರಕಾಶ್, ಮಾಜಿ ಸಚಿವರು ಹಾಗೂ ವಿಧಾನಪರಿಷತ್ ಸದಸ್ಯರು

ಭೀಮಣ್ಣ ಖಂಡ್ರೆ, ಅಧ್ಯಕ್ಷರು, ವೀರಶೈವ ಮಹಾಸಭಾ

ವಿ.ಎಸ್. ಕೃಷ್ಣಯ್ಯರ್, ಮಾಜಿ ಸಚಿವರು

ವಿ. ಸೋಮಣ್ಣ, ಮಾಜಿ ಸಚಿವರು ಹಾಗೂ ವಿಧಾನಸಭಾ ಸದಸ್ಯರು

ಟಿ.ವಿ. ಮಾರುತಿ, ಶಾಂತಲಾ ಸಿಲ್ಕ್ ಸ್ಯಾರಿಸ್

ಎಂ. ಕೃಷ್ಣಪ್ಪ, ವಿಧಾನಪರಿಷತ್ ಸದಸ್ಯರು

*ಖಜಾಂಚಿ*

ಎ.ಎಸ್. ಜಯಸಿಂಹ

*ಪ್ರಧಾನ ಕಾರ್ಯದರ್ಶಿ*

ಎಸ್.ಜಿ. ಮಂಜುನಾಥ್, ಚಿತ್ರದುರ್ಗ

ಎಂ.ಕೆ. ಜಯಶಂಕರ್, ಮರಳವಾಡಿ

ಮಹದೇವ್ ಹೊರಟ್ಟಿ, ಧಾರವಾಡ

ಎಚ್.ಎನ್. ಹಿರಿಯಣ್ಣಸ್ವಾಮಿ, ಬೆಂಗಳೂರು

ಜೀರಿಗೆ ಲೋಕೇಶ್, ಬೆಂಗಳೂರು

ಷಣ್ಮುಖಪ್ಪ ಕೊಂಡಜ್ಜಿ, ಬೆಂಗಳೂರು

*ಕಾರ್ಯದರ್ಶಿ*

ಎಚ್. ಸದಾಶಿವಯ್ಯ

ಪಿ. ಪಿಳ್ಳಪ್ಪ

ಅಬ್ದುಲ್ ಅಜೀಜ್

ಟಿ. ಅಮರನಾಥ್

ಎಸ್. ಗೋಪಿನಾಥ್

ಸತೀಶ್ ಗೌಡ

*ಕಾರ್ಯಕಾರಿ ಸದಸ್ಯರು*

ಸಿ. ಸೋಮಶೇಖರ್, ಮುಖ್ಯ ಕಾರ್ಯನಿರ್ವಹಣ ಅಧಿಕಾರಿ
ಜಿಲ್ಲಾ ಪಂಚಾಯತಿ, ಬೆಂಗಳೂರು ಗ್ರಾಮಾಂತರ

ಸಿ. ನಾಗರಾಜಪ್ಪ

ಖದೀರ್

ಎಸ್.ಎನ್. ಸಾರಂಗಮಠ

ಚಿದಾನಂದ್ ಎಸ್. ಮಠ

ಎಮ್.ಎನ್. ಅರುಣಕುಮಾರ್

ಎಲ್ಲಪ್ಪ

ಎಂ.ಕೆ. ಶಿವಶಂಕರ್

ಎಚ್.ವಿ. ನಾರಾಯಣಸ್ವಾಮಿ

ರಾಮಕೃಷ್ಣ, ಓ.ಬಿ. ಚೂಡನಹಳ್ಳಿ

# ಪರಿವಿಡಿ

॥ ಕಾಯಕವೇ ಕೈಲಾಸ ॥



**ಡಾ। ಶ್ರೀ ಶ್ರೀ ಶಿವಕುಮಾರಸ್ವಾಮಿಗಳು**

ಶ್ರೀ ಸಿದ್ಧಗಂಗಾ ಮಠ,

ತುಮಕೂರು - ೫೭೨ ೧೦೪, ಕರ್ನಾಟಕ ರಾಜ್ಯ.

ದಿನಾಂಕ : ೨೧-೧೧-೨೦೦೩

ಹಿರಿಯ ಗಾಂಧಿವಾದಿ ಶ್ರೀ ಎಂ.ವಿ.ರಾಜಶೇಖರನ್ ಅವರು ಅಪರೂಪದ ರಾಜಕಾರಣಿ. ಸಂಭಾವಿತ ಸಂಪನ್ನರು. ಸುಸಂಸ್ಕೃತಿಗೆ ಮತ್ತೊಂದು ಹೆಸರು ಅವರು. ಶ್ರೀಯುತರೊಂದು ಗ್ರಾಮದೀಪ. ಗ್ರಾಮೀಣಾಭಿವೃದ್ಧಿಯ ಭಗೀರಥ. ಐವತ್ತು ವರ್ಷಗಳ ನಿಷ್ಕಾಮ ಸೇವಾ ಶ್ರೀಮಂತಿಕೆಯ ಪರಿಶುದ್ಧ ಚರಿತ್ರೆಯುಳ್ಳ ಜನನಾಯಕ. ಮರಳವಾಡಿಯ ಮಣ್ಣಿನಲ್ಲಿ ಅರಳಿದ ಮಲ್ಲಿಗೆ. ಹಂತ ಹಂತವಾಗಿ ಮೇಲೇರಿದ ದಕ್ಷ ಪ್ರಜಾನುರಾಗಿ. ಹಲವು ಹನ್ನೊಂದು ಸಂಘ ಸಂಸ್ಥೆಗಳ ಪ್ರಾಣಜೀವಾಳ. ದಾಂಪತ್ಯ ಜೀವನದಲ್ಲಿ ಸಂತೃಪ್ತಿ ಕಂಡ ಕಾಯಕ ನಿಷ್ಠ. ಕರ್ನಾಟಕದ ರೂವಾರಿ ಶ್ರೀಯುತ ನಿಜಲಿಂಗಪ್ಪನವರ ಹೆಮ್ಮೆಯ ರಕ್ತಬಂಧು. ಅಳಿಯ, ಗಿರಿಜಾಪತಿ, ಸದ್ಗೃಹಸ್ಥ, ರೈತಭಾಸ್ಕರ, ಸೋಲು - ಗೆಲುವುಗಳನ್ನು ಸಮಭಾವದಿಂದ ಸ್ವೀಕರಿಸುವ ಸ್ಥಿತ ಪ್ರಜ್ಞಶೀಲ. ರಾಜ್ಯ ಹಾಗೂ ರಾಷ್ಟ್ರ ರಾಜಕಾರಣದಲ್ಲಿ ಪ್ರಾಮಾಣಿಕ ಸೇವೆ ಸಲ್ಲಿಸಿದ ಎಲೆಮರೆಯ ಹೂವು. ಕೀರ್ತಿವಾರ್ತೆಗಳನ್ನು ಬಯಸದ ಸರಳ ಶ್ರೀಮಂತ. ಅನುಭವದ ರತ್ನಗಣಿ. ವಸ್ತು ನಿಷ್ಠತೆಯ ಶ್ರದ್ಧಾವಂತ. ಇಂದಿನ ದಿನಮಾನಗಳಲ್ಲಿ ಕಾಣಬರದ, ರಾಜಕಾರಣದಲ್ಲಿನ ವಿರಳ ವಿವೇಕಿ. ರಾಷ್ಟ್ರದ ಚಿಂತಕ ಪ್ರಮುಖ. ದೇಶ ವಿದೇಶಗಳನ್ನು ಕಂಡಿರುವ ಅರಿತಿರುವ ಅರಿವಿನಾಗರ. ಸಭೆ ಸಮ್ಮೇಳನಗಳಲ್ಲಿ ಪ್ರೌಢಪ್ರಬಂಧಗಳನ್ನು ಮಂಡಿಸಿರುವ ಪ್ರಬುದ್ಧ ವಿಚಾರ ವೈನತೇಯ. ಕರ್ನಾಟಕ ಕಂಡ ಹಿರಿಯ ಅಭಿಮಾನಿ. ಮಠಮಾನ್ಯಗಳಲ್ಲಿ ಭಕ್ತಿ ಗೌರವಗಳನ್ನುಳ್ಳ ಧರ್ಮಶೀಲ. ಗುರು ಲಿಂಗ ಜಂಗಮ ಪ್ರೇಮಿ. ಕ್ರಿಯಾಶೀಲ ಸಜ್ಜನ ಸೌಮ್ಯ ನಾಯಕ, ನಗುಮುಖದ ವಿನಯಬಂಧು ಎಂದೆಲ್ಲಾ ಜನಪ್ರಿಯರಾಗಿರುವ ಶ್ರೀ ರಾಜಶೇಖರನ್ ಅವರಿಗೆ ಅಭಿನಂದನ ಗ್ರಂಥ ಸಮರ್ಪಣೆಯ ಮೂಲಕ ಸನ್ಮಾನಿಸುತ್ತಿರುವುದು ಸರ್ವಸೂಕ್ತವಾಗಿದೆ.

ಅಭಿನಂದನ ಸಮಿತಿಯವರ ಸತ್ಪ್ರಯತ್ನ ಅಭಿನಂದನೀಯವಾದುದಾಗಿದೆ. ಸಮಾಜಕ್ಕಾಗಿ, ನಾಡಿಗಾಗಿ ದುಡಿದವರನ್ನು ಗೌರವಿಸುವುದು ಮಂಗಳಕರವಾದುದು. ಹಾರನಹಳ್ಳಿ ಶ್ರೀ ರಾಮಸ್ವಾಮಿ, ಶ್ರೀ ಗೊ.ರು. ಚನ್ನಬಸಪ್ಪ, ಡಾ। ದೇ ಜವರೇಗೌಡರ ಸಮರ್ಥ ಸಲಹೆ, ಮಾರ್ಗದರ್ಶನದಲ್ಲಿ ಹಮ್ಮಿಕೊಂಡಿರುವ ಸಮಾರಂಭ ಹಾಗೂ ಗ್ರಂಥಸಮರ್ಪಣೆ ಯಶಸ್ವಿಯಾಗಿ ನೆರವೇರಲೆಂದು ಹಾರೈಸುತ್ತೇವೆ.

ಶ್ರೀಗುರು ಬಸವಲಿಂಗಾಯ ನಮಃ
**ಶ್ರೀ ದೇಗುಲಮಠ**
ಕನಕಪುರ-೫೬೨೧೧೭, ಬೆಂಗಳೂರು ಗ್ರಾಮಾಂತರ ಜಿಲ್ಲೆ
ದೂರವಾಣಿ : ೦೮೦-೭೫೨೨೪೪೪

ದಿನಾಂಕ : ೧೧.೧೨.೨೦೦೩

ಭರತಖಂಡ ವಿಶ್ವದ ಭೂಪಟದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸಲು ದಾರ್ಶನಿಕರ, ತತ್ವಜ್ಞಾನಿಗಳ, ಪ್ರಾಮಾಣಿಕ ಸೇವಾಕಾಂಕ್ಷಿಗಳ ಕೊಡುಗೆ ಅಪಾರ. ಮನುಷ್ಯ ಇಂದು ವಿಶಾಲ ಮನೋಧರ್ಮವನ್ನು ದೂರೀಕರಿಸಿದ್ದು ಕೂಪಮಂಡೂಕ ಪ್ರಾಣಿಯಂತೆ ಬದುಕುತ್ತಿದ್ದಾನೆ. ಸ್ವಾತಂತ್ರ್ಯಾನಂತರ ರಾಮರಾಜ್ಯದ ಕನಸು ನನಸಾಗಲು ಅನೇಕ ಮಹನೀಯರ ಪರಿಶ್ರಮ ಅಗಾಧ. ಇಂಥ ಮೇಲ್ಪಂಕ್ತಿ ಮನೋಧರ್ಮದ ಕೆಲವೇ ಮೇಧಾವಿಗಳಲ್ಲಿ ಶ್ರೀ ಎಂ.ವಿ. ರಾಜಶೇಖರನ್ ಒಬ್ಬರು.

ಕರ್ನಾಟಕ ಏಕೀಕರಣದ ರೂವಾರಿ, ಅಪ್ಪಟ ಗಾಂಧಿವಾದಿ, ಮಾಜಿ ಮುಖ್ಯಮಂತ್ರಿಗಳವರಾದ ಶ್ರೀ ಎಸ್. ನಿಜಲಿಂಗಪ್ಪನವರ ಅಳಿಯಂದಿರಾಗಿದ್ದರೂ ಅಧಿಕಾರದ ಸೋಂಕಿಲ್ಲದೆ ತಮ್ಮದೇ ಆದ ವ್ಯಕ್ತಿತ್ವ ರೂಪಿಸಿಕೊಂಡಿರುವ ಇವರು ಶ್ರೀಕ್ಷೇತ್ರದ ಹಿರಿಯ ವಿದ್ಯಾರ್ಥಿಗಳಾಗಿದ್ದರು. ಸುಸಂಸ್ಕೃತ ಮನೆತನದವರಾಗಿರುವ ಇವರ ಮನೆತನಕ್ಕೂ-ಶ್ರೀ ಕ್ಷೇತ್ರಕ್ಕೂ ನಿರಂತರವಾದ ಅವಿನಾಭಾವ ಸಂಬಂಧ. ನಾಡಿನ ಶ್ರೀಸಾಮಾನ್ಯರ ದುಃಖ ದುಮ್ಮಾನವನ್ನು ಅರಿತವರಾಗಿದ್ದು, "ಹಳ್ಳಿಗಳ ಏಳಿಗೆಯೇ ರಾಷ್ಟ್ರದ ಏಳಿಗೆ" ಎಂಬುದನ್ನು ಮನಗಂಡು 'ಏಷಿಯನ್ ರೂರಲ್ ಡೆವಲಪ್‌ಮೆಂಟ್ ಸಂಸ್ಥೆ'ಯನ್ನು ಸಂಸ್ಥಾಪಿಸಿದ್ದಾರೆ.

ರಾಷ್ಟ್ರದ ನಾನಾ ಸಮಸ್ಯೆಗಳ ಪರಿಹಾರಕ್ಕೆ ಕಟಿಬದ್ಧರಾಗಿ ಸುಂದರ ಸಮಾಜದ ಕನಸು ನನಸಾಗಲು ಸಮರ್ಥ ಹೋರಾಟಗಾರರಾಗಿ, ನಿರ್ಭೀತ ಎದೆಗಾರಿಕೆಯ ಕಾರ್ಯತತ್ಪರತೆಯಿಂದ ಭವಿಷ್ಯದ ಹಿತಚಿಂತನೆಯಲ್ಲಿ ಕಾರ್ಯೋನ್ಮುಖರಾಗಿರುವುದು ಇವರ ಮೇರು ವ್ಯಕ್ತಿತ್ವದ ದ್ಯೋತಕ.

ಇವರ ಭವಿಷ್ಯದ ಸಾಧನೆಯು ಪ್ರೇರಣೆಗೋಸ್ಕರ ಮುಂದಿನ ತಲೆಮಾರಿಗೆ ಮಾರ್ಗದರ್ಶನವಾಗುವಂಥ ಬಹುಶ್ರುತ ಸೇವೆಗಾಗಿ ಸಲ್ಲಿಸುತ್ತಿರುವ ಅಭಿನಂದನ ಗ್ರಂಥ ಬಹು ಸುಂದರವಾಗಿ ಮೂಡಿಬರಲೆಂದು ಹಾಗೂ ಅದರ ಪೂರ್ಣಜವಾಬ್ದಾರಿ ಹೊತ್ತಿರುವ ಸರ್ವರಿಗೂ ಭಗವಂತ ಶುಭವನ್ನುಂಟುಮಾಡಲೆಂದು ಹಾರೈಸುತ್ತೇವೆ.

**ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು**

॥ ಶ್ರೀ ಶಿವರಾತ್ರೀಶ್ವರಾಯ ನಮಃ ॥

# ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು

ಜಗದ್ಗುರು ಶ್ರೀ ವೀರಸಿಂಹಾಸನ ಮಠ, ಸುತ್ತೂರು ಶ್ರೀಕ್ಷೇತ್ರ, ಮೈಸೂರು ಜಿಲ್ಲೆ

ದಿನಾಂಕ : ೦೫.೧೨.೦೭

ಶ್ರೀ ಎಂ.ವಿ.ರಾಜಶೇಖರನ್‌ರವರು ನಾಡಿನ ಅಪರೂಪದ ಹಿರಿಯ ರಾಜಕೀಯ ಮುತ್ಸದ್ದಿಗಳಲ್ಲಿ ಒಬ್ಬರು. ಪ್ರಜಾಪ್ರಭುತ್ವ ವ್ಯವಸ್ಥೆಯ ರಾಜಕೀಯದಲ್ಲಿ ಏಳುಬೀಳುಗಳನ್ನು ಕಂಡವರು. ಇವನ್ನೆಲ್ಲ ಸಮಚಿತ್ತದಿಂದ ಸ್ವೀಕರಿಸಿದವರು. ಸಮಾಜಮುಖಿ ಚಿಂತನಗಳನ್ನು ಮೈಗೂಡಿಸಿಕೊಂಡು ಜನಪರ ಸಂಘಟನೆಗಳಲ್ಲಿ ಬದುಕಿನುದ್ದಕ್ಕೂ ತಮ್ಮನ್ನು ತೊಡಗಿಸಿಕೊಂಡ ಸಮಾಜ ಸೇವಕರು. ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ಶ್ರೀಯುತರು ಸಲ್ಲಿಸಿರುವ ಸೇವೆ ಸ್ಮರಣೀಯ. ಉನ್ನತ ವ್ಯಾಸಂಗ, ಸಮೃದ್ಧ ಸಾರ್ವಜನಿಕ ಜೀವನಾನುಭವ ಹಾಗೂ ದೇಶವಿದೇಶಗಳ ವ್ಯಾಪಕ ಪ್ರವಾಸದಿಂದ ದೊರೆತಿರುವ ಬಹುಮುಖೀ ಬದುಕಿನ ದರ್ಶನದ ಜೊತೆಜೊತೆಗೆ, ರಾಜಶೇಖರನ್‌ರವರು ರೂಢಿಸಿಕೊಂಡ ಚಿಂತನೆಗಳು, ಕ್ರಿಯಾಯೋಜನೆಗಳು ತುಂಬ ಮೆಚ್ಚತಕ್ಕ ಅಂಶಗಳು, ಮಾದರಿಯಾಗಿರುವಂತಹವು.

ನಮ್ಮಲ್ಲಿ ಆದರ್ಶಗಳಿಗೇನೂ ಕೊರತೆಯಿಲ್ಲ. ಕೊರತೆಯಿರುವುದು ಆದರ್ಶ ವ್ಯಕ್ತಿಗಳ ಸಂಖ್ಯೆಯಲ್ಲಿ. ಅಂತಹ ಕೊರತೆಯನ್ನು ತುಂಬುವ ದಿಸೆಯಲ್ಲಿ ಎಂ.ವಿ.ರಾಜಶೇಖರನ್ ಅಂತಹವರು ಸಮಾಜದ ನಡುವೆ ನಗುನುಗುತ್ತಾ ನಿಸ್ಪೃಹತೆಯಿಂದ ದುಡಿಯುತ್ತಿರುವುದು ಹೆಮ್ಮೆ ತರುವ ಸಂಗತಿ. ಅವರಿಗೆ ೭೫ ವಸಂತಗಳು ತುಂಬಿದ ಸಂತೋಷದ ಸಂದರ್ಭದಲ್ಲಿ ಅಭಿಮಾನಿಗಳು, ಸಮಾಜ ಚಿಂತಕರು ಅವರನ್ನು ಅಭಿನಂದಿಸುವ ಸಮಾರಂಭದಲ್ಲಿ ಮೌಲಿಕ ಗ್ರಂಥವೊಂದನ್ನು ಪ್ರಕಟಿಸುತ್ತಿರುವುದು ತುಂಬ ಪ್ರಸ್ತುತ ಹಾಗೂ ಶ್ಲಾಘನೀಯ. ರಾಜಶೇಖರನ್‌ರವರ ಸೇವೆ ಸಮಾಜದ ವಿವಿಧ ಸ್ತರಗಳಲ್ಲಿ ಮುಂಬರುವ ದಿನಗಳಲ್ಲಿ ಇನ್ನೂ ಹೆಚ್ಚು ವಿಸ್ತರಿಸಲಿ, ದಯಾಮಯನು ಅವರಿಗೆ ಒಳಿತನ್ನೆಸಗಲಿ ಎಂದು ಹಾರೈಸುತ್ತೇವೆ.

ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು

ಶ್ರೀ ಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ

ಶ್ರೀ ತರಳಬಾಳು ಜಗದ್ಗುರು

**ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು**

ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ-೫೭೭ ೫೪೧, ಚಿತ್ರದುರ್ಗ ಜಿಲ್ಲೆ

ಫೋನ್ : (೦೮೧೯೪) ೫೮೮೪೫೩

ಫ್ಯಾಕ್ಸ್ : (೦೮೧೯೪) ೫೮೮೪೫೭

ದಿನಾಂಕ : ೧೬-೧೨-೦೩

ಮನುಷ್ಯನ ಜೀವನದಲ್ಲಿ ೭೫ ವಸಂತಗಳು ತುಂಬುವುದು ಒಂದು ಹರ್ಷದಾಯಕ ಸಂಗತಿ. ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸಮತೋಲನವನ್ನು ಕಾಪಾಡಿಕೊಂಡು ದೀರ್ಘಕಾಲದವರೆಗೆ ಬದುಕಿ ಜನರಿಂದ ಮೆಚ್ಚುಗೆ ಗಳಿಸುವುದು ಈಗೀಗ ಅಷ್ಟೊಂದು ಸುಲಭ ಸಾಧ್ಯವಾದ ಮಾತಲ್ಲ. ಶರಣ ಎಂ.ವಿ. ರಾಜಶೇಖರನ್ ಅವರು ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ನಿಷ್ಠೆಯಿಂದ ದುಡಿದವರು. ಅವರ ಸೇವಾ ಅವಧಿಯ ಉದ್ದಕ್ಕೂ ಜನಪರ ನಿಲುವುಗಳನ್ನು ಇಟ್ಟುಕೊಂಡು ಸಮಾಜದ ಕೆಳಸ್ತರದ ಜನರಿಗೆ ನೆರವಾಗುವಂತೆ ಕಾರ್ಯಚಟುವಟಿಕೆಗಳನ್ನು ರೂಪಿಸಿದವರು. ರಾಜ್ಯಸಭಾ ಮತ್ತು ಲೋಕಸಭಾ ಸದಸ್ಯರಾಗಿ ಅವರು ನಾಡಿಗೆ ಸಲ್ಲಿಸಿರುವ ಸೇವೆ ಪ್ರಶಂಸನೀಯವಾದುದು.

ಬಸವಾದಿ ಶಿವಶರಣರ ತತ್ತ್ವಪರಿಪಾಲನೆಯಲ್ಲಿ ಶರಣ ಎಂ.ವಿ. ರಾಜಶೇಖರನ್ ಅವರು ಸದಾ ಮುಂದಿರುತ್ತಿದ್ದರು ಎಂಬುದನ್ನು ನಾವು ಬಲ್ಲೆವು. ರಾಜಕೀಯ ಜ್ಞಾನದ ವಿಸ್ತಾರವನ್ನು ಜನಸಾಮಾನ್ಯರಿಗೆ ತಲುಪಿಸುವ ಸಂಸ್ಥೆಯ ಮುಖ್ಯಸ್ಥರಾಗಿ ಅವರು ಹಲವಾರು ವರ್ಷಗಳ ಕಾಲ ದುಡಿದಿದ್ದಾರೆ. ಮಿತಭಾಷಿ, ಶಾಂತಸ್ವಭಾವದ ವ್ಯಕ್ತಿತ್ವವನ್ನು ಹೊಂದಿರುವ ಶರಣ ರಾಜಶೇಖರನ್ ಅವರಿಗೆ ೭೫ ತುಂಬುತ್ತಿರುವ ಈ ಸಂದರ್ಭದಲ್ಲಿ 'ನಿಜಬಿಂಬ' ಎಂಬ ಅಭಿನಂದನ ಗ್ರಂಥ ಹೊರಬರುತ್ತಿರುವುದು ಹೆಮ್ಮೆಪಡುವಂತಹುದು. ಈ ಸಂದರ್ಭದಲ್ಲಿ ಹಮ್ಮಿಕೊಳ್ಳಲಾಗಿರುವ ಕಾರ್ಯಕ್ರಮಗಳು ಯಶಸ್ವಿಯಾಗಿ ನೆರವೇರಲಿ. ಶರಣ ರಾಜಶೇಖರನ್ ಅವರಿಗೆ ಭಗವಂತನು ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲೆಂದು ಹಾರೈಸುತ್ತೇವೆ.

**ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು**

ಶ್ರೀಗುರು ಬಸವಲಿಂಗಾಯ ನಮಃ

# ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು

ಶ್ರೀ ತೋಂಟದಾರ್ಯಮಠ, ಡಂಬಳ - ಗದಗ

ದೂರವಾಣಿ : (೦೮೩೭೨) ೩೮೮೨೭, ೩೫೫೯

ದಿನಾಂಕ : ೦೯.೧೨.೨೦೦೩

ಶ್ರೀ ಎಂ.ವಿ. ರಾಜಶೇಖರನ್ ನಾಡು ಕಂಡ ಶ್ರೇಷ್ಠ ಸಜ್ಜನ ರಾಜಕಾರಣಿ, ಅಪರೂಪದ ವ್ಯಕ್ತಿ. ಶ್ರೀಯುತರು ಮಹಾತ್ಮಗಾಂಧಿ ತತ್ವಾದರ್ಶದ ಬೆಳಕಿನಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡವರು. ರಾಜಕೀಯದಲ್ಲಿರಲಿ, ಇಲ್ಲದಿರಲಿ, ಅಧಿಕಾರ ಸ್ಥಾನ ದೊರೆಯಲಿ, ದೊರೆಯದಿರಲಿ ಆ ಬಗ್ಗೆ ಎಳ್ಳಷ್ಟೂ ಚಿಂತಿಸದೇ ಸದಾವಕಾಲ ಸಮಾಜಮುಖಿ ಚಿಂತನೆಗೆ ತೊಡಗಿದ ಈ ಹಿರಿಯ ಜೀವ ನಮ್ಮ ಕಣ್ಣಮುಂದಿನ ಒಂದು ದೊಡ್ಡ ಆದರ್ಶ. ಸತ್ಯಕ್ಕೆ-ನ್ಯಾಯಕ್ಕೆ, ತ್ಯಾಗಕ್ಕೆ-ಸೇವೆಗೆ, ಅಭಿಮಾನಕ್ಕೆ-ಅಂತಃಕರಣಕ್ಕೆ ಬರೆದ ಭಾಷ್ಯವಾಗಿರುವ ಇವರು ನಮಗೆಲ್ಲ ಆದರ್ಶಪ್ರಾಯರು.

ಮಹಾತ್ಮಗಾಂಧೀಜಿಯವರೇನೋ ನಮ್ಮದು 'ಗ್ರಾಮರಾಜ್ಯ' ವಾಗಬೇಕೆಂದು ಹೇಳಿದರು. ಭಾರತೀಯ ಸಂಸ್ಕೃತಿಯ ನಾಡಿಮಿಡಿತವನ್ನರಿತಿದ್ದ ಗಾಂಧೀಜಿ 'ಸ್ವ-ರಾಜ್ಯ' ಕಲ್ಪನೆ ಸಾಕಾರವಾಗಬೇಕಾದರೆ ಗ್ರಾಮಗಳು ಬಲಿಷ್ಠವಾಗಬೇಕೆಂದು ನಂಬಿದ್ದರು. ಆದರಿಂದು ಗ್ರಾಮೀಣ ಸಂಸ್ಕೃತಿ ನಿಧಾನವಾಗಿ ನಶಿಸುತ್ತಿದೆ. ಈ ಹಿಂದೆ ಬ್ರಿಟಿಷ್ ಸಾಮ್ರಾಜ್ಯ ವಸಾಹಾತುಶಾಹಿಯ ಮೂಲಕ ಈ ದೇಶವನ್ನು ತನ್ನ ಅಂಕಿತಕ್ಕೊಳಪಡಿಸಿಕೊಂಡಿತು. ಇದೀಗ ನಾಗರೀಕ ಸೌಲಭ್ಯಗಳ ಆಮಿಷಗಳನ್ನೊಡ್ಡುವ ಮೂಲಕ, ಗ್ರಾಮೀಣ ಸಂಸ್ಕೃತಿಯನ್ನು ಮೃತ್ಯುಕೂಪಕ್ಕೆ ತಳ್ಳುವ ವಾಣಿಜ್ಯ ಒಪ್ಪಂದಗಳ ಮುಖೇನ ಅಗೋಚರ ಆಕ್ರಮಣವೆಸಗಿ ದೇಶವನ್ನು ಮತ್ತೆ ಇನ್ನೊಂದು ತರದ ಗುಲಾಮಗಿರಿಗೆ ತಳ್ಳುತ್ತಿದೆ. ಇಂಥ ಸಂದರ್ಭದಲ್ಲಿ ಗ್ರಾಮೀಣ ಅಭಿವೃದ್ಧಿಗಾಗಿ ಬದುಕನ್ನು ಶ್ರೀಗಂಧದಂತೆ ತೇಯ್ದ ಶ್ರೀ ಎಂ.ವಿ. ರಾಜಶೇಖರನ್ ಅವರ ಚಿಂತನೆಗಳು ನಮಗೆ ಮುಂದಿನ ಮಾರ್ಗವನ್ನು ತೋರುವ ಕೈದೀವಿಗೆಗಳಾಗುವವು.

ಶ್ರೀಯುತರಿಗೆ ೭೫ ವರ್ಷ ತುಂಬುತ್ತಿರುವ ಈ ಸಂದರ್ಭದಲ್ಲಿ ಗ್ರಾಮೀಣ ಅಭಿವೃದ್ಧಿಗೆ ಒತ್ತುಕೊಟ್ಟು ಅಭಿನಂದನ ಗ್ರಂಥ ಹೊರತರುತ್ತಿರುವುದು ತುಂಬ ಸ್ತುತ್ಯ ಕಾರ್ಯ. ಅವರ ಮಾವನವರಾದ ಪ್ರಾತಃಸ್ಮರಣೀಯ ಶ್ರೀ ಎಸ್. ನಿಜಲಿಂಗಪ್ಪನವರಂತೆ ಸದಾಕಾಲ ಗ್ರಾಮೀಣ ಜನರ ಬದುಕಿನ ಬಗ್ಗೆ ಚಿಂತಿಸುತ್ತಿರುವ ಮತ್ತು ರಾಜಕಾರಣದಲ್ಲಿದ್ದರೂ ಅಂತರಂಗ-ಬಹಿರಂಗ ಶುದ್ಧಿಯನ್ನು ಹೊಂದಿದ ಶ್ರೀಯುತರು ನೂರ್ಕಾಲ ಬಾಳಲಿ. ಅವರ ಚಿಂತನೆಯ ಸದುಪಯೋಗ ನಾಡವರು ಪಡೆಯಲಿ ಎಂದು ಹಾರೈಸಲಾಗಿದೆ.

ಜಯಬಸವ



# ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ

ವಿಜಯನಗರ, ಬೆಂಗಳೂರು - ೫೬೦ ೦೪೦

ದಿನಾಂಕ : ೧೮.೧೨.೨೦೦೩

ಹಿರಿಯ ಗಾಂಧಿವಾದಿಗಳೂ, ರಾಜ್ಯಸಭಾ ಸದಸ್ಯರೂ ಆದ ಶ್ರೀಯುತ ಎಂ.ವಿ. ರಾಜಶೇಖರನ್ ಅವರಿಗೆ ಎಪ್ಪತ್ತೈದು ವರ್ಷಗಳು ತುಂಬಿದ ಸಂದರ್ಭದಲ್ಲಿ ಅವರನ್ನು ಅಭಿನಂದಿಸಿ ಗೌರವಿಸುತ್ತಿರುವ ವಿಷಯ ತಿಳಿದು ನಮಗೆ ಬಹಳ ಸಂತೋಷವಾಯಿತು. ಸ್ವಾತಂತ್ರ್ಯ ಹೋರಾಟಗಾರರಾಗಿ, ತತ್ತ್ವನಿಷ್ಠ ರಾಜಕಾರಣಿಯಾಗಿ ಸಾರ್ವಜನಿಕ ಸೇವೆಗೆ ತಮ್ಮನ್ನೇ ತೊಡಗಿಸಿಕೊಂಡಿರುವ ಶ್ರೀಯುತರು ಹಲವು ಸಂಘ-ಸಂಸ್ಥೆಗಳ ಸದಸ್ಯರಾಗಿ, ನಿರ್ದೇಶಕರಾಗಿ, ಕಾರ್ಯದರ್ಶಿಗಳಾಗಿ ಅವುಗಳ ಏಳಿಗೆಗಾಗಿ ಶ್ರಮಿಸಿದವರು. ಶಾಸಕರಾಗಿ, ಲೋಕಸಭಾ ಸದಸ್ಯರಾಗಿ, ಪ್ರಸ್ತುತ ರಾಜ್ಯಸಭಾ ಸದಸ್ಯರಾಗಿ ನಾಡಿಗೆ ಸಲ್ಲಿಸುತ್ತಿರುವ ಸೇವೆ ಶ್ಲಾಘನೀಯವಾದುದು. ಇಂಥವರನ್ನು ಗುರುತಿಸಿ ಅಭಿನಂದಿಸುವುದು ಜನತೆಯ ಆದ್ಯ ಕರ್ತವ್ಯ. ಆ ನಿಟ್ಟಿನಲ್ಲಿ ಅಭಿಮಾನಿ ಜನತೆ ಕೈಗೊಂಡಿರುವ ಈ ಕಾರ್ಯ ಸ್ತುತ್ಯರ್ಹವಾದುದು. ಇದೇ ಸಂದರ್ಭದಲ್ಲಿ ಹೊರತರುತ್ತಿರುವ ಅಭಿನಂದನ ಗ್ರಂಥವು ಶ್ರೀಯುತರ ಸೇವೆಯ ವಿವಿಧ ಮುಖಗಳನ್ನು ಪರಿಣಾಮಕಾರಿಯಾಗಿ ಪರಿಚಯಿಸಿ, ಅದು ಯುವಪೀಳಿಗೆಗೆ ಮಾರ್ಗದರ್ಶಕ ವಾಗಲೆಂದೂ, ಶ್ರೀಯುತರಿಗೆ ಭಗವಂತನು ಆಯುರಾರೋಗ್ಯಾದಿ ಸಕಲ ಸನ್ಮಂಗಳವನ್ನು ಕರುಣಿಸಲೆಂದೂ, ಹಮ್ಮಿಕೊಂಡಿರುವ ಸಮಾರಂಭವು ಯಶಸ್ವಿಯಾಗಿ ನೆರವೇರಲೆಂದೂ ತುಂಬು ಹೃದಯದಿಂದ ಹಾರೈಸುತ್ತೇವೆ.

ಇಂತು ಭಗವತ್ಸೇವೆಯಲ್ಲಿ
**ಶ್ರೀ ಬಾಲಗಂಗಾಧರನಾಥಸ್ವಾಮಿಗಳು**
ಪೀಠಾಧ್ಯಕ್ಷರು

## ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು

ಶ್ರೀ ಮುರುಘಾಮಠ

ಚಿತ್ರದುರ್ಗ - ೫೭೭ ೫೦೨

ದಿನಾಂಕ : ೧೫-೧೨-೨೦೦೩

ಇಂದಿನ ರಾಜಕಾರಣದಲ್ಲಿನ ವ್ಯಕ್ತಿ ಪರಿಶುದ್ಧನಾಗಿ ಉಳಿಯುವುದೆಂದರೆ ಒಂದು ಪವಾಡವೇ ಸರಿ. ಜೊತೆಗೆ, ಅಭಿನಂದನೆಯ ಗೌರವಕ್ಕೆ ಪಾತ್ರನಾಗುತ್ತಾನೆಂದರೆ ಆತ ನಿಜಕ್ಕೂ ಗಾಂಧಿ ತತ್ವಗಳಲ್ಲಿ ಆಳವಾದ ನಂಬಿಕೆಯುಳ್ಳವನಾಗಿರಲೇಬೇಕು. ಅಂಥ ಅಪರೂಪದ ವಿರಳ ವ್ಯಕ್ತಿಗಳಲ್ಲಿ ಸಜ್ಜನಿಕೆಯ ಎಂ.ವಿ. ರಾಜಶೇಖರನ್ ಒಬ್ಬರು.

ಐದು ದಶಕಗಳಿಂದ ನಿರಂತರವಾಗಿ ರಾಜಕಾರಣದಲ್ಲಿದ್ದೂ ಕರ್ನಾಟಕದ ಶಿಲ್ಪಿ ಎಸ್.ನಿಜಲಿಂಗಪ್ಪನವರ ಅಳಿಯಂದಿರು ಎಂಬ ಸದವಕಾಶವನ್ನು ದುರುಪಯೋಗಪಡಿಸಿಕೊಳ್ಳದ ಸಾತ್ವಿಕರು. ಸಾರ್ವಜನಿಕ ಜೀವನ ಎಂದರೆ ನಾಡುನುಡಿಯ ಸೇವೆಮಾಡುವುದೇ ಆಗಿದೆ ಎಂಬುದನ್ನು ಅರಿತವರು.

ಬದ್ಧತೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುವ ಹೊಸಪೀಳಿಗೆಯ ರಾಜಕಾರಣಿಗಳಿಗೆ ಎಂ.ವಿ. ರಾಜಶೇಖರನ್ ಮಾದರಿಯಾಗಿದ್ದಾರೆ. ರಾಜಕಾರಣದಲ್ಲಿ ಸ್ವಚ್ಛತೆಯನ್ನು ಬಯಸುವ ಇವರಿಗೆ ಎಪ್ಪತ್ತೈದು ತುಂಬುವ ಸಂಭ್ರಮದಲ್ಲಿ ಅಭಿನಂದಿಸುವುದು, ಅಭಿನಂದನೆಯ ಸ್ಮರಣಾರ್ಥ ಗೌರವಗ್ರಂಥವನ್ನು ಅರ್ಪಿಸುತ್ತಿರುವುದು ಅತ್ಯಂತ ಅರ್ಥಪೂರ್ಣ. ಅಭಿನಂದನ ಸಮಾರಂಭ ಯಶಸ್ವಿಯಾಗಿ ಜರುಗಲಿ ಎಂದು ಹಾರೈಸುತ್ತೇವೆ.

ಓಂ ಶ್ರೀಗುರು ಬಸವಲಿಂಗಾಯ ನಮಃ


## ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರು

## ಗುರು ಡಾ. ಚನ್ನಬಸವ ಪಟ್ಟದ್ದೇವರು

ಹಿರೇಮಠ ಸಂಸ್ಥಾನ, ಭಾಲ್ಕಿ-೫೮೫ ೩೨೮, ಜಿ. ಬೀದರ (ಕರ್ನಾಟಕ ರಾಜ್ಯ)

ದೂರವಾಣಿ : ೬೨೨೮೪, ೬೨೪೬೪


ದಿನಾಂಕ : ೧೨.೧೨.೨೦೦೩

ಶ್ರೀ ಎಂ.ವಿ. ರಾಜಶೇಖರನ್ ಅವರ ಎಪ್ಪತ್ತೈದನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ಅರ್ಥಪೂರ್ಣವಾಗಿದೆ. ನಿಜವಾಗಿಯೂ ಎಂ.ವಿ. ರಾಜಶೇಖರನ್ ಅವರು ನಮ್ಮ ದೇಶದ ಬಹು ದೊಡ್ಡ ಸಂಪತ್ತಾಗಿದ್ದಾರೆ. ಸೇವೆಯಲ್ಲಿಯೇ ಶಿವನನ್ನು ಕಂಡವರು. ಹೊಟ್ಟೆಯನ್ನು ಬೆನ್ನಿಗೆ ಅಂಟಿಸಿಕೊಂಡು ಹಗಲು-ರಾತ್ರಿ ಎನ್ನದೆ ದುಡಿದು ನಮ್ಮೆಲ್ಲರಿಗೆ ಅನ್ನ ನೀಡುವ ರೈತರನ್ನು ನಿಜವಾದ 'ಭಾರತ ರತ್ನ' ಎಂದು ತಿಳಿದವರು ಶ್ರೀಯುತ ರಾಜಶೇಖರನ್ ಮಾತ್ರ. ಆ ದಿಶೆಯಲ್ಲಿ ಅವರ ಕಾರ್ಯ ನೆನಸಿಕೊಳ್ಳುವಂಥದ್ದು.

ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ, ಯುವಜನ ಸೇವಾ ಇಲಾಖೆ ಪ್ರಾರಂಭವಾಗಲು ರಾಜಶೇಖರನ್ ಅವರೇ ಕಾರಣಕರ್ತರು. ಅಖಂಡ ಪರಿಶ್ರಮದಿಂದ, ತಮ್ಮ ಸೇವೆಯಿಂದ ಜನ ಮನದ ಹೃದಯಗಳಲ್ಲಿ ಅವರು ಶಾಶ್ವತವಾಗಿ ಇದ್ದಾರೆ, ಮುಂದೆಯೂ ಇರುತ್ತಾರೆ, ಎಂದೆಂದಿಗೂ ಇರುತ್ತಾರೆ.

ಇದೇ ಪರಿಶ್ರಮ-ಪ್ರಯತ್ನ-ಸೇವೆ ಮುಂದುವರಿಯಲಿ. ಅವರ ಶತಮಾನೋತ್ಸವ ಆಚರಿಸುವ ಯೋಗ ನಮಗೆ ಬರಲಿ ಎಂದು ವಿಶ್ವಗುರು ಬಸವಣ್ಣನವರಲ್ಲಿ ಪ್ರಾರ್ಥಿಸುತ್ತೇವೆ. ರಾಜಶೇಖರನ್ ಅವರಿಗೆ ಆಯುಷ್ಯ, ಆರೋಗ್ಯ, ಸಂಪತ್ತು ದೊರೆಯಲಿ. ಅವರಿಗೆ ವಿಶ್ವಗುರು ಬಸವ ತಂದೆಯ ಶ್ರೀ ರಕ್ಷೆ, ಪೂಜ್ಯ ಡಾ. ಚನ್ನಬಸವ ಪಟ್ಟದ್ದೇವರ ಅಖಂಡ ಆರ್ಶೀವಾದ ಸದಾ ಇರಲಿ ಎಂದು ಹಾರೈಸುತ್ತೇವೆ.

**ಶ್ರೀ ಬಸವಲಿಂಗ ಪಟ್ಟದ್ದೇವರು**




**BHAIRON SINGH SHEKHAWAT**
VICE PRESIDENT OF INDIA

11-11-2003

I am happy to know that Shri M.V. Rajasekharan, Member, Rajya Sabha and a respected public personality shall be attaining 75 years on 21st December and a felicitation volume is being brought out to commemorate this occasion.

Shri Rajasekharan in his long and distinguished career has made valuable contribution in the field of rural development. He has always espoused the cause of the poor and the disadvantaged sections of the society. As a man with conviction and innate simplicity, he has set high standards in public life. Men like him are always an asset to the society.

I send my good wishes to Shri Rajasekharan and wish him many more years of service to the people and the country.

**Bhairon Singh Shekhawat**

5, Safdarjung Road
New Delhi - 110 011

**R. VENKATARAMAN**
FORMER PRESIDENT OF INDIA

When one thinks of Shri M.V. Rajasekaran, MP (Rajya Sabha) his five decades of dedicated service to agricultural development in Karnataka and at national and international level flashes into ones mind. In public life he rose from grassroots starting from Taluk Development Board and finally reaching the Lok Sabha and Rajya Sabha Shri Rajasekaran had a mission in life. Like Gandhiji, he believed the country's growth and prosperity depended on agriculture and allied rural handicraft, industries and communications. Few politicians devote their entire life to serving the rural people. They always hunt for greener, glamorous pastures in politics. Shri Rajasekaran was indeed a rare exception.

Shri Nijalingappa achieved not only a unified Karnataka but was an architect of a United India based on rural self-government. He was a living Gandhian in his times.

Though only a son-in-law and not a son, Shri Rajasekaran inherited the noble qualities of one of the stalwarts of Indian freedom.

Shri Rajasekaran is still young compared to the politicians of our times. I wish him a long life of selfless service, best of health and all happiness.

R. Venkataraman

**(R. Venkataraman)**

**CHANDRA SHEKHAR**
Former Prime Minister




3, South Avenue Lane
New Delhi-11
Ph : 301-2587

20-11-2003

It gives me immense pleasure to note that Shri M.V. Rajshekharan is going to celebrate his 75th birthday. I have personally known Shri Rajshekharan for a longime and have been impressed by his devotion for public cause. Shri Rajshekharan was drawn towards national movement at an early age and continued his political journey with extraordinary dedication. As a champion of Hindi he distinguished himself as a crusader for National Integration. He is a real son of soil and rural development has been his forte. During ups and downs of politics he steadfastly remained with the Congress Party. But the circle of his admirers transcends political affiliations.

With his vast Legislative experience as member of karnataka Vidhan Sabha, Karnataka Legislative Council and Rajya Sabha he has been serving the people especially the kisans of karnataka with rare objectivity. Naturally he deserves to be honoured and profusely felicitated on his 75th birthday. I associate myself with the celebrations being organised on this occasion and wish Shri Rajshekharan a long, active and happy life.

**Chandra Shekar**

**H.D. DEVE GOWDA**
FORMER PRIME MINISTER




5, Safdarjung Lane,
New Delhi - 110 011

ದಿನಾಂಕ : ೧೩.೧೨.೦೩

ಶ್ರೀ ಎಂ.ವಿ. ರಾಜಶೇಖರನ್‌ರವರು ನಮ್ಮ ನಾಡಿನ ಅತ್ಯಂತ ಹಿರಿಯ ರಾಜಕಾರಣಿಗಳಲ್ಲಿ ಒಬ್ಬರು. ಸರಳತೆ, ಸಜ್ಜನಿಕೆ ಮತ್ತು ಸಭ್ಯತೆಯಿಂದಾಗಿ ಎಲ್ಲ ವರ್ಗಗಳ ಮತ್ತು ಎಲ್ಲ ರಾಜಕೀಯ ಪಕ್ಷಗಳ ನಾಯಕರುಗಳ ಗೌರವಾದರಗಳಿಗೆ ಪಾತ್ರರಾಗಿರುವವರು. ಐದು ದಶಕಗಳ ಕಾಲ ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವ ಶ್ರೀ ರಾಜಶೇಖರನ್‌ರವರು ತಮ್ಮದೇ ಆದ ತತ್ವಾದರ್ಶಗಳಿಗೆ ಬದ್ಧರಾಗಿರುವವರು. ಶಾಸಕರಾಗಿ, ಸಂಸದೀಯ ಪಟುವಾಗಿ ಅವರು ಸಾರ್ವಜನಿಕ ಬದುಕಿನಲ್ಲಿ ತಮ್ಮದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿರುವವರು.

ಶ್ರೀ ರಾಜಶೇಖರನ್‌ರವರು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ವಿಷಯದಲ್ಲಿ ಹೆಚ್ಚು ಕಾಳಜಿ ಹೊಂದಿರುವವರು. ಅದಕ್ಕಾಗಿ ಬದ್ಧರಾಗಿರುವವರು. ಈಗ್ಗೆ ಮೂರು ದಶಕಗಳ ಹಿಂದೆಯೇ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದಂತೆ ಅಧ್ಯಯನ, ಸಂಶೋಧನೆ ಮೊದಲಾದ ರಚನಾತ್ಮಕ ಕಾರ್ಯಕ್ರಮಗಳಿಗಾಗಿ ಸಂಸ್ಥೆಯೊಂದನ್ನು ಆರಂಭಿಸಿ ನಡೆಸಿಕೊಂಡು ಬಂದ ಕೀರ್ತಿ ಅವರದ್ದು. ಗ್ರಾಮೀಣಾಭಿವೃದ್ಧಿಗೆ ಸಲ್ಲಬೇಕಾದಷ್ಟು ಆದ್ಯತೆ ಸಲ್ಲದಿರುವಾಗ ಅವರ ಚಿಂತನೆ ಮತ್ತು ಕಾರ್ಯತತ್ಪರತೆ ಇಂದಿಗೂ ಪ್ರಸ್ತುತವೆನಿಸುತ್ತದೆ.

ಶ್ರೀ ರಾಜಶೇಖರನ್‌ರವರಿಗೆ ೭೫ ವರ್ಷಗಳು ತುಂಬಿದ ಶುಭ ಸಂದರ್ಭಕ್ಕಾಗಿ ಅವರ ಅಭಿಮಾನಿಗಳು ಹಮ್ಮಿಕೊಂಡಿರುವ ಕಾರ್ಯಕ್ರಮ ನಿಜಕ್ಕೂ ಔಚಿತ್ಯಪೂರ್ಣವಾಗಿದೆ. ಶ್ರೀ ರಾಜಶೇಖರನ್‌ರವರಿಗೆ ಪರಮಾತ್ಮನು ಸುದೀರ್ಘ ಆಯಸ್ಸು, ಆರೋಗ್ಯ ನೀಡಲಿ. ಅವರ ಬದುಕು ನಮ್ಮೆಲ್ಲರಿಗೂ ಮಾರ್ಗದರ್ಶಕವಾಗಿ ಮುಂದುವರೆಯಲಿ ಎಂದು ಪ್ರಾರ್ಥಿಸುತ್ತೇನೆ.

**ಹೆಚ್.ಡಿ. ದೇವೇಗೌಡ**



**I.K. Gujral**
Former Prime Minister, India

24th November, 2003

I am happy to learn that the Felicitation Committee is celebrating Shri M.V. Rajashekharan's 75th Birthday. It has been my privilege to enjoy Rajashekharan's friendship over many years and I have always admired his dedication to every humane cause of the Nation.

I wish him very long life in service of the community and the Nation.

**(I.K. Gujral)**

**T.N. Chaturvedi**
Governor of Karnataka




Raj Bhavan
Bangalore

29th November, 2003

I would like to felicitate Shri M.V. Rajashekharan on his completion of 75 years.

His selfless and dedicated service to the rural people of Karnataka as also his untiring efforts in promoting voluntary movement in respect of rural development are well known. He is associated with a number of NGOs both in India and abroad. He has been in public life for a long time and served both the Houses of Parliament as well as both the Houses of Karnataka Legislature. He has served in various postitons in Parliamentary Committees, always espousing the cause most dear to his heart. A widely travelled person that he is, Shri M.V. Rajashekharan has studied the problems being faced by rural people and toiling masses in many countries so as to safeguard the interest of farmers at home. A mild man of amiable temperament and catholicity of outlook, he is devoted many public causes.

I congratulate members of the Felictitation Committee and wish the celebrations all success. I wish Shri Rajashekharan long and healthy life in the service of the people.

**T.N. CHATURVEDI**

**S.M. Krishna**
CHIEF MINISTER




BANGALORE - 560 001

1st December, 2003

I am very happy to learn that Shri M.V. Rajashekharan, a veteran Parliamentarian and gentleman politician has completed 75 years and is being felicitated and honoured by his admirers in recognition of his selfless and dedicated service to the society at Bangalore on 21st December, 2003.

Shri Rajashekharan has worked untiringly for the upliftment of the poor especially the rural poor both as a Member of Parliament and also as a Member of Legislative Assembly and a Member of Legislative Council, in his public career spanning over four decades. He is also actively associated with many voluntary service organisations in and outside the country. His service in the field of balanced farming, agricultural extension, co-operatives, rural credit, rural development etc., is unparalleled and it is very apt that his valuable service is being recognised appropriately.

I send my greetings and best wishes on the occasion and hope that Shri Rajashekharan would continue to serve the society with the same vigour.

**(S.M. Krishna)**

**Narayan Datt Tiwari**
Chief Minister
Uttaranchal




Vidhan Bhawan
Dehra Dun

3-12-2003

It is pleasing to know that the 75th birth day of Sri Rajashekharan is being celebrated in a very befitting manner. Being a true Gandhian, for him development of the villages is the development of Bharat, Sri Rajashekharan is a living legend and the real man of the masses who always follows the dictates of his conviction in every walk of life. He is a visionary leader who has clear incite of today and tomarrow. His contribution in the field of Rural Development, Education and Agriculture is of immense value. His services are admired and acclaimed at National and International level. He is voracious reader, thinker and eminent writer and a true torch to the younger generations.

On the occasion of this memorable day, as one of his friend and well wishers, I warmly wish him all success in life with pink of health.

Narayan Datt Tiwari

ನ್ಯಾಯಮೂರ್ತಿ
**ಶಿವರಾಜ ವಿ. ಪಾಟೀಲ**
ನ್ಯಾಯಾಧೀಶರು
ಸರ್ವೋಚ್ಚ ನ್ಯಾಯಾಲಯ



ನವದೆಹಲಿ

ದಿನಾಂಕ : ೧೭.೧೨.೨೦೦೩

ಕರ್ನಾಟಕದ ಸಾಮಾಜಿಕ ಮತ್ತು ಸಾರ್ವಜನಿಕ ಬದುಕಿನಲ್ಲಿ ಬಹುದೊಡ್ಡ ಹೆಸರು ಶ್ರೀ ಎಂ.ವಿ. ರಾಜಶೇಖರನ್ ಅವರದು. ಮೂಲತಃ ಕೃಷಿಕ ಸಮುದಾಯದಿಂದ ಬಂದ ಅವರಿಗೆ ಗ್ರಾಮೀಣಾಭಿವೃದ್ಧಿ ಮತ್ತು ಕೃಷಿ ಕ್ಷೇತ್ರದಲ್ಲಿ ಅಪಾರವಾದ ಆಸಕ್ತಿ. ಏಷ್ಯನ್ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ ನೂರಾರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣ ಪ್ರಬಂಧಗಳನ್ನು ಮಂಡಿಸಿದ ಹಿರಿಮೆ ಅವರದು. ಬಡವರ ಬಗ್ಗೆ ಹಾಗೂ ನೊಂದವರ ಬಗ್ಗೆ ಸದಾಕಾಲ ಪ್ರಾಮಾಣಿಕ ಕಾಳಜಿಯಿಂದ ಸ್ಪಂದಿಸುತ್ತಾ ಬಂದಿರುವ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ರಾಜಕೀಯ ಕ್ಷೇತ್ರ ತಮ್ಮ ಸಾರ್ವಜನಿಕ ಬದುಕಿನ ನಿಷ್ಕಲ್ಮಶ ಸೇವೆಗೆ ಒಂದು ಸಾಧನವಾದದ್ದು ತುಂಬಾ ಅಭಿನಂದನಾರ್ಹ. ತಮ್ಮ ಸರಳತೆ, ಸಜ್ಜನಿಕೆ ಹಾಗೂ ಸೌಜನ್ಯತೆಯ ಮೂಲಕ ಎಲ್ಲರ ಜನಾನುರಾಗವನ್ನು ಗಳಿಸಿರುವ ಶ್ರೀ ಎಂ.ವಿ. ರಾಜಶೇಖರನ್ ಅವರು ೭೫ ವರ್ಷಗಳ ಸಾರ್ವಜನಿಕ ಕ್ಷೇತ್ರದ ಸಾರ್ಥಕ ಬದುಕನ್ನು ಪೂರ್ಣಗೊಳಿಸಿ ಇನ್ನೂ ಸಹಾ ಸಾಮಾಜಿಕ ಜೀವನದಲ್ಲಿ ಕ್ರಿಯಾಶೀಲರಾಗಿ ಯುವ ಸಮುದಾಯಕ್ಕೆ ಸ್ಫೂರ್ತಿಯ ಚಿಲುಮೆಯಾಗಿರುವುದು ತುಂಬಾ ಸಂತಸದ ವಿಷಯ. ಲೋಕಸಭಾ ಸದಸ್ಯರಾಗಿ ಕರ್ನಾಟಕ ವಿಧಾನಸಭೆ, ವಿಧಾನಪರಿಷತ್ ಸದಸ್ಯರುಗಳಾಗಿ ಹಾಗೂ ಪ್ರಸ್ತುತ ರಾಜ್ಯಸಭಾ ಸದಸ್ಯರಾಗಿ ಅವರೊಬ್ಬ ಅತ್ಯುತ್ತಮ ಸಂಸದೀಯ ಪಟು ಹಾಗೂ ಸಾಮಾಜಿಕ ಚಿಂತನಕಾರರಾಗಿ ಹೊರಹೊಮ್ಮಿದ್ದಾರೆ.

ದಿನಾಂಕ ೨೧.೧೨.೨೦೦೩ ರಂದು ನಾಡಿನ ಹಿರಿಯ ಆಧ್ಯಾತ್ಮಿಕ ಗುರುವರ್ಯರುಗಳ ಸಾನ್ನಿಧ್ಯದಲ್ಲಿ ನಡೆಯಲಿರುವ ಶ್ರೀ ಎಂ.ವಿ. ರಾಜಶೇಖರನ್ ಅವರ ಅಭಿನಂದನ ಸಮಾರಂಭ ಯಶಸ್ವಿಯಾಗಲಿ ಹಾಗೂ ಅವರಿಗೆ ದಯಾಮಯನಾದ ಭಗವಂತನು ಆಯುಷ್ಯ, ಆರೋಗ್ಯವನ್ನು ನೀಡಿ ನಾಡಿನ ಸಮುದಾಯದ ಸೇವೆಗೆ ಅವರ ಸೇವೆ ಮತ್ತಷ್ಟು ಸುದೀರ್ಘ ಕಾಲ ದೊರೆಯುವಂತೆ ಅನುಗ್ರಹಿಸಲಿ ಎಂದು ಹಾರ್ದಿಕವಾಗಿ ಹಾರೈಸುತ್ತೇನೆ.

ಶಿವರಾಜ ವಿ. ಪಾಟೀಲ್

**Dr. Karan Singh**
MEMBER OF PARLIAMENT
(RAJYA SABHA)




3, Nyaya Marg
Chanakyapuri
New Delhi - 110 021

7th November, 2003

Dear Shri Ramaswamy,

Thank you for your letter of 4th November regarding the 75h Birthday Celebrations of my good friend Shri M.V. Rajashekharan. It would have given me great pleasure to participate in that function, but it so happens that my programme for the week end 19-21 December is already booked with a visit to Jodhpur from which I cannot, at this stage, withdraw. I must therefore regretfully decline your invitation but I take this opportunity to send Shri Rajashekharan my warm greetings on his 75h Birthday and to wish him many more years to dedicated service to society.

With good wishes,

Karan Singh

Dr. Karan Singh

**SHARAD PAWAR**
M.P. Vice Chairman,
National Committee on
Disaster Management




6, Gurudwara
Rakabgang Road
New Delhi-2

10-12-2003

I am glad to know that Shri M.V. Rajashekharan 75 Felicitation Committee is bringing out a souvenir to mark the 75th Birthday of Shri M.V. Rajashekharan, at Bangalore in December, 2003. Shri Rajashekharan has not only been a effective legislator both in the State Assembly and in the Parliament, but has also championed the cause of the farmers, rural development and alleviation of poverty, hunger and malnutrition. He has very generously shared his rich experience in the field of agricultural and rural development through his writings and participation in various national and international fora. Shri Rajashekharan has worked selflessly and with great dedication for the people, specially in the State of Karnataka. I wish him good health and long life so that he may continue to serve the people and the country.

**Sharad Pawar**

**ARJUN SINGH**
MEMBER OF PARLIMENT
(RAJYA SABHA)




122, Parliament House
New Delhi

19-12-2003

It is both my pleasure and privilege to participate in the 75th birthday felicitations of Shri M.V. Rajasekharan. Shri Rajasekharan is a dear friend whom I have the honour to know since the last 35 years. He is a person of deep Indian ethos. He is a sensitive and concerned citizen of the country. He has served the cause of the country with great humility and dedication. I feel proud to have such a friend.

**Arjun Singh**

**Dr. A.R. KIDWAI**
MEMBER OF PARLIAMENT
(RAJYA SABHA)
Formerly Chairman, U.P.S.C.
Governor of Bihar and West Bengal




New Delhi

18-12-2003

I am happy to learn that a Felicitation Volume is going to be released on the occasion of the 75th birthday of Shri M.V. Rajashekharan. I cam in close contact with him during my tenure as M.P. Rajya Sabha. In the course of my conversation with him and the proceedings of Rajya Sabha and its sub-committee, I have found that he is an objective and secular approach to the problems with his deep knowledge of agriculture and social and cultural understanding. He has made valuable contribution to the deliberations of various sub-committees of Rajya Sabha. He is a man of vision and broad outlook and always puts the interest of the country above any other consideration-political or personal. He has given his heart out in serving the country in whatever position he has been whether in an exalted position of M.P. or as a social and political worker at the State level.

The State of Karnataka owes much to Shri Rajashekharan for his dynamic and pragmatic approach in handling the problems of the State in the field of rural development.

I wish Shri Rajashekharan a long, happy and active life so that he can give the State still more.

I also congratulate the Felicitation Committee on their bringing out the Felicitation Volume on an illustrious son of Karnataka and wish them all success in their endeavour.

**A.R. Kidwai**

**H.C. SRIKANTAIAH**
MINISTER FOR REVENUE
AND HASSAN DISTRICT
INCHARGE MINISTER



T : OFF: 2252536, 20992450
RES : 2203092
ROOM NO. 315, 3RD FLOOR
VIDHANA SOUDHA
BANGALORE-1

DATE : 08-12-2003

ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ೭೫ರ ಹುಟ್ಟುಹಬ್ಬದ ಸಂದರ್ಭದಲ್ಲಿ ಹೃದಯಪೂರ್ವಕವಾಗಿ ಶುಭಹಾರೈಸಿ, ಆಯುರಾರೋಗ್ಯವನ್ನು ದೇವರು ನೀಡಿ, ಇನ್ನೂ ಹೆಚ್ಚಿನ ರೀತಿಯಲ್ಲಿ ಸಾರ್ವಜನಿಕರಿಗೆ ಸೇವೆ ಅವರಿಂದ ದೊರಕಲೆಂದು ಹಾರೈಸುತ್ತೇನೆ.

ನನಗೆ ಬಹಳ ಹತ್ತಿರದ ಮಿತ್ರರಾದ ರಾಜಶೇಖರನ್‌ರವರು, ದಿಟ್ಟ ನಿಲುವಿಗೆ, ನೇರ ನುಡಿಗೆ ಹೆಸರಾದವರು. ಇವರು ಮಾಜಿ ಮುಖ್ಯಮಂತ್ರಿಯವರಾದ ನಿಜಲಿಂಗಪ್ಪನವರ ಅಳಿಯರೆಂಬುದು ಅದೆಷ್ಟೋ ಕರ್ನಾಟಕದ ಜನತೆಗೆ ತಿಳಿದಿಲ್ಲ. ನಿಜಲಿಂಗಪ್ಪನವರ ಹೆಸರನ್ನೆಂದೂ ದುರಪಯೋಗಮಾಡಿಕೊಳ್ಳದ ಪ್ರಾಮಾಣಿಕರು. ಈ ನನ್ನ ಮಿತ್ರ ಕಾಂಗ್ರೆಸ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಹಲವು ಹುದ್ದೆಗಳನ್ನು ಪಕ್ಷದಲ್ಲಿ, ಸರ್ಕಾರದಲ್ಲಿ ಹಾಗೂ ಸಂಘ-ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಪಾರದರ್ಶಕವಾಗಿ ಕಾರ್ಯನಿರ್ವಹಿಸಿರುತ್ತಾರೆ. ಸ್ವಾತಂತ್ರ್ಯ ಹೋರಾಟದಲ್ಲೂ ಸಕ್ರಿಯವಾಗಿ ಭಾಗವಹಿಸಿ ದೇಶಕ್ಕೆ ಹಾಗೂ ಕರ್ನಾಟಕಕ್ಕೆ ತಮ್ಮನ್ನು ಅರ್ಪಿಸಿಕೊಂಡಿರುತ್ತಾರೆ.

ವಿಶ್ವದ ಪ್ರಮುಖ ರಾಷ್ಟ್ರಗಳಿಗೆ ಭೇಟಿ ನೀಡಿ ಅಪಾರ ಅನುಭವವನ್ನು ಪಡೆದು ಎಲೆಮರೆ ಕಾಯಿಯಂತೆ ನಮ್ಮ ದೇಶಕ್ಕೆ ಅದರಲ್ಲೂ ಕರ್ನಾಟಕಕ್ಕೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಟ್ಟಿರುತ್ತಾರೆ. ಅನೇಕ ಇಲಾಖೆಗಳನ್ನು ಹಾಗೂ ಸಂಘ-ಸಂಸ್ಥೆಗಳನ್ನು ಪ್ರಾರಂಭಿಸಲು ಕಾರಣೀಭೂತರಾಗಿರುತ್ತಾರೆ.

ಈ ರೀತಿ ನಾನಾ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಪ್ರಸಕ್ತ ರಾಜ್ಯಸಭೆ ಸದಸ್ಯರಾಗಿರುವ ಶ್ರೀ ರಾಜಶೇಖರನ್‌ರವರು ಇನ್ನೂ ಹತ್ತು-ಹಲವು ಹುದ್ದೆಗಳನ್ನು ಅಲಂಕರಿಸಿ ಕರ್ನಾಟಕದ ಜನತೆಗೆ ಅವರಿಂದ ಇನ್ನೂ ಹೆಚ್ಚಿನ ಉಪಯೋಗವಾಗಲೆಂದು ಹಾರೈಸುತ್ತೇನೆ.

**ಹೆಚ್.ಸಿ. ಶ್ರೀಕಂಠಯ್ಯ**

**ಧರ್ಮಸಿಂಗ್**
ಲೋಕೋಪಯೋಗಿ ಸಚಿವರು

ವಿಧಾನಸೌಧ
ಬೆಂಗಳೂರು-೫೬೦ ೦೦೧

ದಿನಾಂಕ : ೧೭.೧೧.೦೩

ಶ್ರೀ ಎಂ.ವಿ. ರಾಜಶೇಖರನ್‌ರವರ ೭೫ನೆಯ ಹುಟ್ಟುಹಬ್ಬದ ಶುಭ ಸಂದರ್ಭದಲ್ಲಿ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು.

ಬೆಂಗಳೂರಿನ ಕನಕಪುರ ತಾಲ್ಲೂಕಿನ ಮರಳವಾಡಿಯಲ್ಲಿ ಜನಿಸಿದ ಶ್ರೀಯುತರು ವಿದ್ಯಾರ್ಥಿ ದೆಸೆಯಿಂದಲೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಕನಕಪುರ ತಾಲ್ಲೂಕಿನ ಕಾಂಗ್ರೆಸ್ ಕೋಶಾಧ್ಯಕ್ಷರಾಗಿ, ಮೈಸೂರು ಚಲೋ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ದೆಹಲಿಯ ಪ್ರಜಾಸತ್ತಾತ್ಮಕ ಪರಿಷತ್ತು ಹಾಗೂ ವಿನೋಬಾರವರ ಭೂದಾನ ಚಳುವಳಿಯಲ್ಲಿ ಕಾರ್ಯಕರ್ತರಾಗಿ ಭಾಗವಹಿಸಿದವರು. ಈ ಮಹನೀಯರು ತಮ್ಮ ರಾಜಕೀಯ ಜೀವನವನ್ನು ಕರ್ನಾಟಕದ ಏಕೀಕರಣ ಶಿಲ್ಪಿ ಜನಪ್ರಿಯ ದಿವಂಗತ ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರ ಮಾರ್ಗದರ್ಶನ ಹಾಗೂ ಆಶೀರ್ವಾದದೊಂದಿಗೆ ಪ್ರಾರಂಭ ಮಾಡಿದರು. ಶ್ರೀಯುತರ ಸಾಧನೆಗಳು ಅನೇಕವಾಗಿದ್ದು ಅವುಗಳಲ್ಲಿ ನಾವು ಸ್ಮರಿಸಬಹುದಾದಂತಹ ಕೆಲವು ಮುಖ್ಯ ಅಂಶಗಳು ಗ್ರಾಮೀಣಾಭಿವೃದ್ಧಿಯ ಬಗೆಗೆ ಅವರಿಗಿರುವ ಆಳವಾದ ಜ್ಞಾನ ಹಾಗೂ ಮಾನವ ಸಂಪನ್ಮೂಲ ಕ್ಷೇತ್ರದ ಪ್ರಯೋಜನ ಪ್ರಮುಖವಾದದ್ದು. ಇದಲ್ಲದೆ ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ ಮತ್ತು ಯುವಜನ ಸೇವಾ ಇಲಾಖೆ ಇವುಗಳನ್ನು ಸ್ಥಾಪಿಸಲು ಕಾರಣಕರ್ತರಾದರೆಂಬ ವಿಷಯವನ್ನು ನಾವು ಹೆಮ್ಮೆಯಿಂದ ಸ್ಮರಿಸಿಕೊಳ್ಳಬಹುದಾಗಿದೆ. ಶ್ರೀಯುತರು ದೇಶ ವಿದೇಶಗಳಲ್ಲಿ ಪ್ರವಾಸ ಮಾಡಿ ಗ್ರಾಮೀಣಾಭಿವೃದ್ಧಿ, ನೀರಾವರಿ ಹಾಗೂ ಮಾನವ ಸಂಪನ್ಮೂಲದ ಸದ್ಬಳಕೆಯ ಬಗ್ಗೆ ಅಪಾರವಾದ ಕಾಳಜಿ ವಹಿಸಿ ತಮ್ಮ ಅನುಭವಗಳನ್ನು ಹಾಗೂ ಅವುಗಳ ಪ್ರಯೋಜನವನ್ನು ಕಾರ್ಯರೂಪಕ್ಕೆ ತರುವಲ್ಲಿ ಯಶಸ್ವಿಯಾಗಿರುತ್ತಾರೆ.

ಶ್ರೀಯುತರ ಅರ್ಥಪೂರ್ಣವಾದ ಬದುಕಿನ ಬಗ್ಗೆ ನಾವೆಲ್ಲರೂ ಅತಿ ಹೆಮ್ಮೆಯಿಂದ ಹಾಗೂ ಅವರ ಮಾರ್ಗದರ್ಶನದಲ್ಲಿ ನಡೆದು ನಮ್ಮ ಭವಿಷ್ಯವನ್ನು ಉತ್ತಮಪಡಿಸಿಕೊಳ್ಳ ಬಹುದಾಗಿರುತ್ತದೆ. ವಿಶೇಷವಾಗಿ ಇಂದಿನ ಯುವಪೀಳಿಗೆಗೆ ಅವರ ಮಾರ್ಗದರ್ಶನ ಮತ್ತು ಅವಶ್ಯಕತೆಯು ಅತಿ ಹೆಚ್ಚಾಗಿ ಬೇಕಾಗಿರುತ್ತದೆ.

(ಧರ್ಮಸಿಂಗ್)

ಆರ್.ವಿ. ದೇಶಪಾಂಡೆ
ಕೈಗಾರಿಕಾ ಸಚಿವರು




ವಿಧಾನಸೌಧ
ಬೆಂಗಳೂರು

ದಿನಾಂಕ : ೧೮.೧೨.೨೦೦೩

ಹಿರಿಯರಾದ ಎಂ.ವಿ. ರಾಜಶೇಖರನ್ ಅವರಿಗೆ ೭೫ ತುಂಬುತ್ತಿರುವ ವಿಚಾರ ತಿಳಿದು ತುಂಬಾ ಸಂತೋಷವಾಯಿತು. ಶ್ರೀ ರಾಜಶೇಖರನ್ ಅವರು ಕರ್ನಾಟಕ ರಾಜ್ಯದ ಹಿರಿಯ ರಾಜಕಾರಣಿಗಳು ಹಾಗೂ ಪ್ರಗತಿಪರ ಕೆಲಸಗಳ ಬಗ್ಗೆ ಆಸಕ್ತಿಯುಳ್ಳ ಸಮಾಜ ಸೇವಕರು. ಪೂಜ್ಯ ನಿಜಲಿಂಗಪ್ಪನವರ ಅಳಿಯಂದಿರಾದ ರಾಜಶೇಖರನ್ ಅವರು ನಿಜಲಿಂಗಪ್ಪನವರಂತೆ ಪ್ರಾಮಾಣಿಕರು, ನಿಸ್ಪ್ರ ೃಹರು. ಯಾವುದೇ ಸ್ವಾರ್ಥವಿಲ್ಲದೆ ಕೆಲಸಮಾಡುವ ಸಜ್ಜನರು. ಲೋಕಸಭಾ ಸದಸ್ಯರಾಗಿ, ವಿಧಾನಸಭಾ ಸದಸ್ಯರಾಗಿ, ವಿಧಾನ ಪರಿಷತ್ತಿನ ಸದಸ್ಯರಾಗಿ ಇದೀಗ ದೇಶದ ಹಿರಿಯ ಮುತ್ಸದ್ದಿಗಳಾಗಿದ್ದಾರೆ. ಅವರ ಅನುಭವ ಭಾರತದ ಸಾರ್ವಜನಿಕ ಕ್ಷೇತ್ರಕ್ಕೆ ವಿಶಾಲ ರೀತಿಯಲ್ಲಿ ದೊರೆಯುತ್ತಿರುವುದು ಸಂತಸದ ವಿಷಯ. ೨೦೦೦ದಲ್ಲಿ ಬೆಂಗಳೂರಿನಲ್ಲಿ ಆಗನೆಯ ಅಖಿಲ ಭಾರತ ಕಾಂಗ್ರೆಸ್ ಸಮಾವೇಶವು ಪಕ್ಷದ ಅಧ್ಯಕ್ಷರಾದ ಶ್ರೀಮತಿ ಸೋನಿಯಾಗಾಂಧಿ ಅವರ ನೇತೃತ್ವದಲ್ಲಿ ಜರುಗಿತಷ್ಟೆ. ಆ ಸಂದರ್ಭದಲ್ಲಿ ಶೈಕ್ಷಣಿಕ ಮೌಲ್ಯವುಳ್ಳ ಸ್ಮರಣ ಸಂಚಿಕೆಯನ್ನು ತರುವ ಜವಾಬ್ದಾರಿಯನ್ನು ಕಾಂಗ್ರೆಸ್ ಸಮಿತಿ ನನಗೂ ಮತ್ತು ರಾಜಶೇಖರನ್ ಅವರಿಗೂ ವಹಿಸಿತ್ತು. ಯಾವುದಾದರೂ ಕೆಲಸ ವಹಿಸಿಕೊಂಡರೆ ಪ್ರಾಮಾಣಿಕವಾಗಿ ಮಾಡಬೇಕೆಂಬುದಕ್ಕೆ ರಾಜಶೇಖರನ್ ಸದಾ ಉದಾಹರಣೆ ಆಗಿರುತ್ತಾರೆ. ಯಾವುದೇ ಹಂತದಲ್ಲೂ ಅವರು ಸಂಚಿಕೆಯ ಗುಣಮಟ್ಟವನ್ನು ತಗ್ಗಿಸಲು ಒಪ್ಪಲಿಲ್ಲ. ಕ್ಲುಪ್ತ ಕಾಲಾವಧಿಯಲ್ಲಿ ತಾವು ಯೋಜಿಸಿದ್ದ ಎಲ್ಲಾ ಲೇಖಕರ ಲೇಖನಗಳನ್ನು ಪಡೆಯುವಲ್ಲಿ ರಾಜಶೇಖರನ್ ಅವರದು ಹಿರಿದಾದ ಪಾತ್ರ. ಆ ಸಂಚಿಕೆ ತರುವ ಸಂದರ್ಭದಲ್ಲಿ ಅವರು ನನ್ನೊಡನೆ ಅನೇಕ ದಿನಗಳನ್ನು ಕಳೆದಿದ್ದಾರೆ. ಆಗೆಲ್ಲಾ ಅವರು ವಹಿಸಿದ ಆಸಕ್ತಿ ಹಾಗೂ ವಹಿಸಿಕೊಂಡ ಕೆಲಸದ ಬಗ್ಗೆ ಅವರಿಗಿರುವ ಶ್ರದ್ಧೆ ನನಗೆ ಮೆಚ್ಚುಗೆಯಾಗಿದೆ. ರಾಜಶೇಖರನ್ ಅವರು ಸದಾ ಗುಣವನ್ನು ಮೆಚ್ಚುವ ಸ್ವಭಾವದವರು. ಎಲ್ಲಿಯಾದರೂ ಅಥವಾ ಯಾರಾದರೂ ಒಳ್ಳೆಯ ಕೆಲಸಗಳನ್ನು ಮಾಡಿದರೆ ಅದನ್ನು ಮೆಚ್ಚಿ ಹೊಗಳಿ ಅವರ ಬೆನ್ನು ತಟ್ಟುತ್ತಾರೆ. ಇಂತಹ ಔದಾರ್ಯವಿರುವ ಹಿರಿಯರನ್ನು ಗೌರವಿಸುವುದು ನಮ್ಮ ಕರ್ತವ್ಯ. ರಾಜಶೇಖರನ್ ಅವರ ಬದುಕು ಹಾಗೂ ಸಾಧನೆ ಎಲ್ಲರಿಗೂ ಮಾರ್ಗದರ್ಶನ ನೀಡಲೆಂದು ಆಶಿಸಿ, ಅವರು ನೂರ್ಕಾಲ ಸುಖವಾಗಿ ಬಾಳಲಿ ಎಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಆರ್.ವಿ. ದೇಶಪಾಂಡೆ

**ಹೆಚ್.ಎಂ. ರೇವಣ್ಣ**
ರೇಷ್ಮೆ ಮತ್ತು ಜವಳಿ ಸಚಿವರು




ವಿಧಾನಸೌಧ
ಬೆಂಗಳೂರು-೫೬೦ ೦೦೧

ದಿನಾಂಕ : ೦೬.೧೧.೦೩

ಹಿರಿಯ ಗಾಂಧಿವಾದಿ, ರಾಜ್ಯಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ೭೫ - ಅಭಿನಂದನ ಸಮಿತಿ, ಬೆಂಗಳೂರು, ಇವರು ರಾಜ್ಯದ ಸಾರ್ವಜನಿಕ ಕ್ಷೇತ್ರದಲ್ಲಿ ಕಳೆದ ಐದು ದಶಕಗಳಿಂದ ನಿಷ್ಕಾಮ ಸೇವೆ ಸಲ್ಲಿಸುತ್ತ ಬಂದಿರುವ ಶ್ರೀ ಎಂ.ವಿ. ರಾಜಶೇಖರನ್‌ರವರ ೭೫ನೇ ಹುಟ್ಟುಹಬ್ಬ ಆಚರಿಸುತ್ತಿರುವುದು ತುಂಬಾ ಸಂತೋಷದ ವಿಚಾರ.

ಶ್ರೀಯುತರು ವಿದ್ಯಾರ್ಥಿ ದೆಸೆಯಲ್ಲಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಕ್ರಿಯಾಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಅಪರೂಪದ ವ್ಯಕ್ತಿ. ಸದರಿಯವರು ಅನೇಕ ಸಂಘ-ಸಂಸ್ಥೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ವಿವಿಧ ಮಂಡಳಿಗಳಲ್ಲಿ ಸದಸ್ಯರಾಗಿ ಮಾಡಿರುವ ರಚನಾತ್ಮಕ ಕೆಲಸಗಳ ಕಾರ್ಯನಿರ್ವಹಣೆಗಳು ಇಂದಿಗೂ ಸಾರ್ವಜನಿಕ ಜೀವನದಲ್ಲಿ ಮತ್ತೊಬ್ಬರಿಗೆ ಮಾರ್ಗದರ್ಶಕವಾಗಿ ಹಾಗೂ ಯುವಶಕ್ತಿಗೆ ಸ್ಫೂರ್ತಿಯಾಗಿದೆ. ಅವರ ಸಾರ್ವಜನಿಕ ಸೇವೆಯು ಅವಿಸ್ಮರಣೀಯ.

ಈ ಸಂದರ್ಭದಲ್ಲಿ ಶ್ರೀಯುತರಿಗೆ ನನ್ನ ಶುಭಾಶಯಗಳು ಹಾಗೂ ಅವರ ಅಭಿನಂದನ ಕಾರ್ಯಕ್ರಮವು ಅತಿ ಯಶಸ್ಸು ಕಾಣಲೆಂದು ಹಾರೈಸುತ್ತೇನೆ.

(ಹೆಚ್.ಎಂ. ರೇವಣ್ಣ)

ಎ. ಕೃಷ್ಣಪ್ಪ
ಸಮಾಜ ಕಲ್ಯಾಣ ಸಚಿವರು




ವಿಧಾನಸೌಧ
ಬೆಂಗಳೂರು-೫೬೦ ೦೦೧

ದಿನಾಂಕ : ೦೬.೧೧.೦೩

ರಾಜ್ಯದ ಸಾರ್ವಜನಿಕ ಕ್ಷೇತ್ರದಲ್ಲಿ ಕಳೆದ ಐದು ದಶಕಗಳಿಗೂ ಮೀರಿ ನಿಷ್ಕಾಮ ಸೇವೆಯನ್ನು ಸಲ್ಲಿಸುತ್ತಾ ಎಲೆಮರೆ ಕಾಯಿಯಂತೆ ದುಡಿಯುತ್ತಿರುವ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ೭೫ ವರ್ಷಗಳು ಸಂದಿರುವುದು ನಿಜಕ್ಕೂ ಹರ್ಷದಾಯಕ ವಿಚಾರ. ಬೆಂಗಳೂರಿನ ಕನಕಪುರ ತಾಲ್ಲೂಕಿನ ಮರಳವಾಡಿಯಲ್ಲಿ ಜನಿಸಿದ ಶ್ರೀಯುತರು ಲೋಕಸಭಾ ಸದಸ್ಯರಾಗಿ, ರಾಜ್ಯಸಭಾ ಸದಸ್ಯರಾಗಿ, ವಿಧಾನಸಭಾ ಸದಸ್ಯರಾಗಿ ಮತ್ತು ವಿಧಾನ ಪರಿಷತ್ತಿನ ಸದಸ್ಯರಾಗಿ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿರುವುದು ಶ್ಲಾಘನೀಯ.

ಶ್ರೀಯುತರ ಸುದೀರ್ಘ ಅನುಭವ, ವಸ್ತುನಿಷ್ಠತೆ ಹಾಗೂ ಗ್ರಾಮೀಣ ಅಭಿವೃದ್ಧಿಯ ಬಗೆಗೆ ಅವರಿಗಿರುವ ಆಳವಾದ ಜ್ಞಾನ ಇಂದಿನ ರಾಜಕಾರಣಿಗಳಲ್ಲಿ ವಿರಳವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ದೇಶದ ಪ್ರಮುಖ ಚಿಂತಕರಲ್ಲಿ ಒಬ್ಬರಾಗಿ ವಿಶ್ವದ ನಾನಾ ಭಾಗಗಳಿಗೆ ಭೇಟಿ ಇತ್ತು, ಅಲ್ಲಿನ ಕಾರ್ಯಾಗಾರಗಳಲ್ಲಿ, ವಿಚಾರಗೋಷ್ಠಿಗಳಲ್ಲಿ, ಚರ್ಚೆಗಳಲ್ಲಿ ತಮ್ಮ ಪ್ರಬಂಧವನ್ನು ಮಂಡಿಸಿ ಖ್ಯಾತಿಯನ್ನು ಗಳಿಸಿರುವುದು ಸಂತಸದ ವಿಷಯ.

ಕೃಷಿ, ಗ್ರಾಮೀಣಾಭಿವೃದ್ಧಿ, ಯುವಶಕ್ತಿ, ಶಿಕ್ಷಣ, ನೀರಾವರಿ, ಮಾನವ ಸಂಪನ್ಮೂಲ, ಪರಿಸರ ಮೊದಲಾದ ಕ್ಷೇತ್ರಗಳಲ್ಲಿ ಅರಿತು ನುರಿತಿದ್ದಾರೆ. ನಮ್ಮ ರಾಜ್ಯದಲ್ಲಿ ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ ಮತ್ತು ಯುವ ಜನಸೇವಾ ಇಲಾಖೆ ಆರಂಭವಾಗಲು ಸಕ್ರಿಯವಾಗಿ ಶ್ರಮಿಸಿದ್ದಾರೆ. ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಶ್ರೀಯುತರ ನೇತೃತ್ವದಲ್ಲಿ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿರುವುದು ಹೆಮ್ಮೆಯ ವಿಷಯ.

ಇಂತಹ ಅಪರೂಪದ ವ್ಯಕ್ತಿಯನ್ನು ಸನ್ಮಾನಿಸಲು ಅಭಿನಂದನ ಸಮಿತಿಯು ಮುಂದೆ ಬಂದಿರುವುದು ಸ್ತುತ್ಯರ್ಹ. ಈ ಸಂದರ್ಭದಲ್ಲಿ ಅಭಿನಂದನ ಗ್ರಂಥವನ್ನು ಹೊರತರುತ್ತಿದ್ದು, ಇದು ಶ್ರೀಯುತರ ಬದುಕು ಹಾಗೂ ಸಾಧನೆ ಕುರಿತಂತೆ ಉತ್ತಮ ರೀತಿಯ ಲೇಖನಗಳಿಂದ ಹೊರಹೊಮ್ಮಲೆಂದು ಆಶಿಸುತ್ತೇನೆ. ಹಾಗೂ ಶ್ರೀಯುತರಿಗೆ ಭಗವಂತನು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ನೀಡಲೆಂದು ಪ್ರಾರ್ಥಿಸುತ್ತಾ, ಸನ್ಮಾನ ಸಮಾರಂಭವು ಅತ್ಯಂತ ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನೆ.

**DR. A.B. MAALAKA RADDY**
MINISTER FOR MEDICAL
EDUCATION

Telephone : O : 2257285
R : 2257602
VIDHANA SOUDHA,
BANGALORE - 1



DATED : 12-12-2003

ರಾಜ್ಯದ ಹಿರಿಯ ಗಾಂಧಿವಾದಿ ಹಾಗೂ ರಾಜ್ಯಸಭಾ ಸದಸ್ಯರಾದ ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ೭೫ ವಸಂತಗಳು ತುಂಬಿದ ಈ ಶುಭ ಸಂದರ್ಭದಲ್ಲಿ ಅವರ ಅಭಿಮಾನಿ ಬಳಗದವರು ಅಭಿನಂದನ ಸಮಾರಂಭವನ್ನು ಏರ್ಪಡಿಸಿರುವ ವಿಷಯ ತಿಳಿದು ಅತೀವ ಸಂತೋಷವಾಯಿತು. ಶ್ರೀಯುತರು ವಿದ್ಯಾರ್ಥಿ ದೆಸೆಯಿಂದಲೇ ಸ್ವಾತಂತ್ರ್ಯ ಹೋರಾಟದ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಹಂತ ಹಂತವಾಗಿ ಮೇಲೇರಿ ವಿವಿಧ ಸಂಘ ಸಂಸ್ಥೆಗಳ ಮೂಲಕ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಗೌರಿಶಂಕರದ ಎತ್ತರ ತಲುಪಿದ ಅಪರೂಪದ ವ್ಯಕ್ತಿತ್ವಗಳಲ್ಲಿ ಒಬ್ಬರಾಗಿದ್ದಾರೆ. ರಾಜ್ಯದ ವಿಧಾನಸಭೆ, ವಿಧಾನಪರಿಷತ್ತು, ಲೋಕಸಭೆ ಮತ್ತು ಪ್ರಸ್ತುತ ರಾಜ್ಯಸಭಾ ಸದಸ್ಯರಾಗಿ ಅವರು ಗಳಿಸಿರುವ ಅನುಭವ ಮತ್ತು ಸಲ್ಲಿಸಿದ ಸೇವೆ ಅಪಾರವಾದುದು. ಕಳೆದ ೫೦ ವರ್ಷಗಳಿಂದ ಅವರು ಪ್ರಪಂಚದ ಬಹುತೇಕ ರಾಷ್ಟ್ರಗಳಿಗೆ ಭೇಟಿ ನೀಡಿ ಅಧ್ಯಯನ ಮಾಡಿ ತನ್ಮೂಲಕ ಗಳಿಸಿದ ಅನುಭವದ ಆಧಾರದ ಮೇಲೆ ಗ್ರಾಮೀಣಾಭಿವೃದ್ಧಿ ಹಾಗೂ ಮಾನವ ಸಂಪನ್ಮೂಲದ ಸದ್ಬಳಕೆ ಮತ್ತು ಪರಿಸರ ಮೊದಲಾದ ವಿಚಾರಗಳಲ್ಲಿ ಅಪಾರ ಕೊಡುಗೆ ಸಲ್ಲಿಸಿದ್ದಾರೆ. ಇದರ ಪರಿಣಾಮವಾಗಿ ಕರ್ನಾಟಕ ರಾಜ್ಯದಲ್ಲಿ ವಿವಿಧ ಇಲಾಖೆಗಳ ಸ್ಥಾಪನೆಗೆ ಹಾಗೂ ಅಂತರರಾಷ್ಟ್ರೀಯ ಸಂಸ್ಥೆಗಳ ಉಗಮಕ್ಕೆ ಕಾರಣಕರ್ತರಾಗಿದ್ದಾರೆ. ಅವರಿಗೆ ಅತ್ಯಂತ ಪ್ರಿಯಕ್ಷೇತ್ರವಾದ ಗ್ರಾಮೀಣಾಭಿವೃದ್ಧಿ ಕುರಿತಂತೆ ಗ್ರಂಥವನ್ನು ಹೊರತರುತ್ತಿರುವುದು ಅತ್ಯಂತ ಸಮಯೋಚಿತವಾಗಿದೆ. ಈ ಶುಭ ಸಂದರ್ಭದಲ್ಲಿ ಬಿಡುಗಡೆಗೊಳ್ಳುತ್ತಿರುವ ಗ್ರಂಥವು ಉತ್ತಮವಾಗಿ ಮೂಡಿಬರಲೆಂದು, ತನ್ಮೂಲಕ ಕನ್ನಡನಾಡಿನ ಸಮಸ್ತ ಜನತೆಗೆ ಬಹು ಉಪಯೋಗಿ ಗ್ರಂಥವಾಗಲೆಂದು ಶುಭ ಹಾರೈಸುತ್ತೇನೆ.

**ಡಾ. ಎ.ಬಿ. ಮಾಲಕರೆಡ್ಡಿ**

**ಡಿ.ಹೆಚ್. ಶಂಕರಮೂರ್ತಿ**
ವಿರೋಧ ಪಕ್ಷದ ನಾಯಕ
ಕರ್ನಾಟಕ ವಿಧಾನ ಪರಿಷತ್ತು



ದೂ : ಕಛೇರಿ : ೨೨೫೫೦೨೩
ನಿವಾಸ : ೨೨೫೩೭೨೫
ಕೊಠಡಿ ಸಂಖ್ಯೆ : ೩೪೪, ವಿಧಾನಸೌಧ,
ಬೆಂಗಳೂರು-೫೬೦ ೦೦೧

ದಿನಾಂಕ : ೧೦.೧೨.೨೦೦೩

ಹಿರಿಯ ಗಾಂಧಿವಾದಿ ಮತ್ತು ರಾಜ್ಯಸಭಾ ಸದಸ್ಯರಾದ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ೭೫ ವರ್ಷಗಳು ತುಂಬಿದ ಸಂದರ್ಭದಲ್ಲಿ ಅಭಿನಂದನ ಗ್ರಂಥವನ್ನು ಹೊರತರುತ್ತಿರುವುದು ತುಂಬಾ ಸಂತೋಷದ ವಿಷಯವಾಗಿದೆ.

ಶ್ರೀ ಎಂ.ವಿ. ರಾಜಶೇಖರನ್ ಅವರು ನನ್ನ ಹಿರಿಯ ಆತ್ಮೀಯ ಸ್ನೇಹಿತರಲ್ಲಿ ಒಬ್ಬರಾಗಿದ್ದಾರೆ. ಇವರೊಂದಿಗೆ ನಾನು ವಿಧಾನ ಪರಿಷತ್‌ನ ಕಾರ್ಯಕಲಾಪಗಳಲ್ಲಿ ಹಲವಾರು ವರ್ಷ ಭಾಗವಹಿಸಿದ್ದೇನೆ. ಶ್ರೀಯುತರು ಒಬ್ಬ ಚಿಂತಕರಾಗಿ ದೇಶದ ನಾನಾ ಜ್ವಲಂತ ಸಮಸ್ಯೆಗಳ ಬಗೆಗೆ ಗಂಭೀರವಾಗಿ ವಿಚಾರಗಳನ್ನು ಮಂಡಿಸಿದ್ದಾರೆ. ರಾಜಕೀಯ ಬದ್ಧತೆ ಇರುವ ಇವರು ವಿಶೇಷವಾಗಿ ಕೃಷಿ, ಗ್ರಾಮೀಣಾಭಿವೃದ್ಧಿ, ಶಿಕ್ಷಣ, ನೀರಾವರಿ, ಪರಿಸರ ರಕ್ಷಣೆ ಮುಂತಾದ ವಿಷಯಗಳ ಬಗೆಗೆ ಹೆಚ್ಚು ಆಸಕ್ತರಾಗಿದ್ದಾರೆ ಹಾಗೂ ಅವುಗಳ ಬಗೆಗೆ ತಮ್ಮದೇ ಆದ ಖಚಿತ ಮತ್ತು ಸ್ಪಷ್ಟ ನಿಲುವಿನಿಂದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಸದಾ ಕ್ರಿಯಾಶೀಲರಾಗಿರುವ ಇವರು ತಮ್ಮ ಸರಳತೆ ಮತ್ತು ಸಜ್ಜನಿಕೆಗಳಿಂದ ಯಾರನ್ನಾದರೂ ಆಕರ್ಷಿಸುವ ಗುಣ ಪಡೆದುಕೊಂಡಿದ್ದಾರೆ.

೭೫ ವರ್ಷಗಳಲ್ಲಿ ಸುಮಾರು ೫೦ ವರ್ಷಗಳ ಸುದೀರ್ಘ ರಾಜಕೀಯ ಜೀವನವನ್ನು ಪೂರೈಸಿರುವ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ಭಗವಂತನು ಇನ್ನೂ ಹೆಚ್ಚಿನ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತಾ ಶುಭ ಕೋರುತ್ತೇನೆ.

**ಡಿ.ಹೆಚ್. ಶಂಕರಮೂರ್ತಿ**



ತಮ್ಮ ಸಹಜ ಹಸನ್ಮುಖ ನಗೆಯೊಂದಿಗೆ
ಎಂ. ವಿ. ರಾಜಶೇಖರನ್



ತಂದೆ ಲಿಂ. ಸಿ. ವೀರಶೆಟ್ಟಯ್ಯ ಮತ್ತು ತಾಯಿ ಲಿಂ. ಬಸಮ್ಮ



ಕರ್ನಾಟಕ ವಿಧಾನ ಸಭೆಯ ಮಾಜಿ ಅಧ್ಯಕ್ಷೆ ಕೆ. ಎಸ್. ನಾಗರತ್ನಮ್ಮ ಅವರ ಪತಿ ಶ್ರೀ ಸಾಹುಕಾರ್ ಸುಬ್ಬಣ್ಣ ಮತ್ತು ಮೈಸೂರು ಜಿಲ್ಲೆಯ ಮುಖ್ಯ ನಾಯಕರೊಂದಿಗೆ. ಎಡದಿಂದ ಎರಡನೆಯವರು ಲಿಂ. ಸಿ. ವೀರಶೆಟ್ಟಯ್ಯ (ರಾಜಶೇಖರನ್‌ರವರ ತಂದೆ)



ತಂದೆಯ ನಿಧನಾನಂತರ ಸಾರ್ವಜನಿಕ ಜೀವನದಲ್ಲಿ ಪ್ರೋತ್ಸಾಹಿಸಿದ ರಾಜಶೇಖರನ್ ಅವರ ಸೋದರಮಾವ ಶ್ರೀ ವೀರಭದ್ರಯ್ಯ



ಕನಕಪುರ ಶ್ರೀ ದೇಗುಲಮಠದ
ಲಿಂ. ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮೀಜಿ



ಕನಕಪುರದ ಶ್ರೀ ದೇಗುಲ ಮಠದ
ಲಿಂ. ಪೂಜ್ಯ ಶ್ರೀ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮೀಜಿ



ಕನಕಪುರದ ರೂರಲ್ ಹೈಸ್ಕೂಲಿನಿಂದ
ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ



ಕಾಲೇಜು ವಿದ್ಯಾರ್ಥಿ ಎಮ್. ವಿ. ರಾಜಶೇಖರನ್



ಯುವರಾಜಕೀಯ ನಾಯಕನಾಗಿ



ಲೋಕಸಭಾಸದಸ್ಯರಾಗಿ



ಕಲಾವಿದನ ಕಣ್ಣಿನಲ್ಲಿ



ಮೈಸೂರಿನ ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳಾಗಿದ್ದಾಗ ಆಪ್ತ ಸ್ನೇಹಿತ, ಹೆಚ್. ಸಿ. ದಾಸಪ್ಪ ಅವರ ಪುತ್ರ ತುಳಸಿ ದಾಸಪ್ಪನವರ ಜೊತೆಯಲ್ಲಿ



ಉಪರಾಷ್ಟ್ರಪತಿ ಡಾ. ಎಸ್. ರಾಧಾಕೃಷ್ಣನ್ ಮತ್ತು ದೆಹಲಿ ವಿಶ್ವವಿದ್ಯಾನಿಲಯದ ಇತರ ಸದಸ್ಯರೊಂದಿಗೆ
ಕಾನೂನು ವಿಭಾಗದ ವಿದ್ಯಾರ್ಥಿ ಕಾಂಗ್ರೆಸ್ ನಾಯಕನಾಗಿ



ವಿದ್ಯಾರ್ಥಿ ಕಾಂಗ್ರೆಸ್ ನಾಯಕರಾಗಿ ಅಬುಲ್‌ಕಲಾಂ ಆಜಾದ್ ಮತ್ತು ಇತರ ವಿದ್ಯಾರ್ಥಿ ನಾಯಕರುಗಳೊಂದಿಗೆ



ಜಪಾನಿನ ಕಾಮಾಕುರದಲ್ಲಿ ಬುದ್ಧನ ಪ್ರತಿಮೆಯ ಮುಂದೆ



ಜಪಾನಿನಲ್ಲಿ ಛಾಯಾಗ್ರಾಹಕರಾಗಿ



ಜಪಾನಿನ ಟೋಕಿಯೋದಲ್ಲಿ ಸುಭಾಷ್‌ಚಂದ್ರಭೋಸ್‌ರ ಭಾಷಾಂತರಕಾರರ ಜೊತೆಯಲ್ಲಿ



ಚೀಣಾ ಪ್ರವಾಸ ಸಂದರ್ಭದಲ್ಲಿ

*Shrimati & Shri S. Nijalingappa*
*request the pleasure of your company*
*with family and friends*
*on the occasion of the marriage of their daughter*
*Chi. Sow. Girija*
*with*
*Chi. M. V. Rajasekharan*
*( Son of the late Shri Veerasettaiah, Maralavadi, Bangalore District )*
*on Monday, the 16th March 1959*
*at their residence at Chitradurga*

MUHURTA : 2-13 to 2-33 p.m. | RECEPTION : 6-30 p.m.

ರಾಜಶೇಖರನ್ ಅವರ ವಿವಾಹ ಆಮಂತ್ರಣ ಪತ್ರಿಕೆ



ಚಿತ್ರದುರ್ಗದಲ್ಲಿ ಮಾವ ನಿಜಲಿಂಗಪ್ಪನವರೊಂದಿಗೆ ಮದುಮಗನಾಗಿ



ಎಸ್. ಎನ್. ಅವರ ಮಗಳು ಗಿರಿಜಾ ಅವರೊಂದಿಗೆ ಮದುವೆ



ಮದುವೆಯಾದ ತರುಣದಲ್ಲಿ



ಪತ್ನಿ ಗಿರಿಜಾ ಮತ್ತು ನಾದಿನಿಯ ಜೊತೆಯಲ್ಲಿ



ತಾಯಿ ಬಸಮ್ಮ ಕಂಕಳಿನಲ್ಲಿ ರವಿಶಂಕರ್



ತಾಯಿ ಶ್ರೀಮತಿ ಬಸಮ್ಮ ಮತ್ತು ತಮ್ಮ ಶ್ರೀ ಕೀರ್ತಿಹಾಸನ್‌ರೊಂದಿಗೆ
ನಿಂತಿರುವವರು ಎಡದಿಂದ ಸೋದರತ್ತೆ ಭ್ರಮರಾಂಬಿಕೆ ಮತ್ತು ನಾದಿನಿ ಸುನಂದಾದೇವಿ



ಎಸ್. ಎನ್. ಕೈಯಲ್ಲಿ ಮಗ ರವಿಶಂಕರ್



ತಾಯಿ ಶ್ರೀಮತಿ ಬಸಮ್ಮ ಮತ್ತು ಗಂಡುಮಕ್ಕಳು ರವಿಶಂಕರ್
ಮಧುಶಂಕರ್ ಮತ್ತು ಹೆಣ್ಣುಮಕ್ಕಳು ಸುಜಾತಾ
ಮತ್ತು ಸಂಧ್ಯಾರೊಂದಿಗೆ



ಹುಟ್ಟೂರಾದ ಮರಳವಾಡಿಯಲ್ಲಿ ಎಸ್. ನಿಜಲಿಂಗಪ್ಪ ಮತ್ತು ಸಿದ್ದಗಂಗಾಮಠದ
ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಮತ್ತು ಎಡಗಡೆ ಬಾಲಕ ಜೈಶಂಕರ



ನಿಜಲಿಂಗಪ್ಪನವರ ಜೇಷ್ಠ ಪುತ್ರಿ  ಶ್ರೀಮತಿ ಪಾರ್ವತಮ್ಮ ಮಹಾಲಿಂಗಶೆಟ್ಟಿಯವರೊಂದಿಗೆ



ಪತ್ನಿ ಗಿರಿಜಾ ಮತ್ತು ಕನಕಪುರ ದೇಗುಲಮಠದ ಪರಮಪೂಜ್ಯ
ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮೀಜಿಯವರೊಂದಿಗೆ



೬೦ನೇ ಜನ್ಮದಿನದಂದು ಪತ್ನಿ ಗಿರಿಜಾ ಹಾರ ಹಾಕುತ್ತಿರುವುದು



ತಮ್ಮ ಕೀರ್ತಿಹಾಸನ್ ಅವರ ಪತ್ನಿ ಶ್ರೀಮತಿ ಸುನಂದಾದೇವಿ ಅವರ ಮಗ ಜೈಶಂಕರ
ಹಾಗೂ ಶ್ರೀಮತಿ ಶೋಭಾ ಜೈಶಂಕರ್



ಪತ್ನಿ ಗಿರಿಜಾ, ಭಾವಮೈದುನ ಮತ್ತು ನಾದಿನಿಯರ ಜೊತೆಯಲ್ಲಿ



೬೦ನೇ ಜನ್ಮದಿನದ ಸಂದರ್ಭದಲ್ಲಿ ಗಿರಿಜಾ, ಮಕ್ಕಳು, ಸೊಸೆಯಂದಿರು ಮತ್ತು ಮೊಮ್ಮಕ್ಕಳೊಂದಿಗೆ



೬೦ನೇ ಜನ್ಮದಿನದ ಸಂದರ್ಭದಲ್ಲಿ ಕುಟುಂಬದೊಡನೆ



ಸಮಾರಂಭವೊಂದರಲ್ಲಿ ಪೂಜ್ಯ ನಿರ್ವಾಣ ಸ್ವಾಮಿಗಳೊಂದಿಗೆ ತಮ್ಮ ಕೀರ್ತಿಹಾಸನ್



ನಿಜಲಿಂಗಪ್ಪನವರ ಪುತ್ರ ಪ್ರೊ. ಉಮಾಕಾಂತ್‌ರೊಂದಿಗೆ



ಸೋದರ ಕೀರ್ತಿಹಾಸನ್‌ರ ಮಗಳು ಹೇಮಲತಾ ಮತ್ತು ಬಿ.ಪಿ. ಪ್ರಕಾಶ್ ಮದುವೆಯ ಸಂದರ್ಭದಲ್ಲಿ



ಬೆಂಗಳೂರಿನಲ್ಲಿ ದೇಗುಲಮಠದ ಹಳೆಯ ವಿದ್ಯಾರ್ಥಿಗಳು ವ್ಯವಸ್ಥೆಗೊಳಿಸಿದ್ದ ಸಮಾರಂಭದಲ್ಲಿ
ಡಾ. ಎಂ. ಮಾಲಕ ರೆಡ್ಡಿಯವರಿಂದ ರಾಜಶೇಖರನ್ ದಂಪತಿಗಳಿಗೆ ಅಭಿನಂದನೆ.
ಸಿ. ಸೋಮಶೇಖರ, ದೇಗುಲಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮೀಜಿ ಮತ್ತು
ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮೀಜಿ



ರಾಜಶೇಖರನ್, ಗಿರಿಜಾ ರಾಜಶೇಖರನ್, ಮಗಳು ಸಂಧ್ಯಾ ಅವರೊಂದಿಗೆ ಎಸ್. ನಿಜಲಿಂಗಪ್ಪ



೬೦ನೇ ಜನ್ಮದಿನದ ಸಂದರ್ಭದಲ್ಲಿ ಪತ್ನಿ ಗಿರಿಜಾರೊಂದಿಗೆ



ಬೆಂಗಳೂರಿನ ವಿಧಾನಸೌಧದ ಆವರಣದಲ್ಲಿರುವ
ನಿಜಲಿಂಗಪ್ಪನವರ ಪ್ರತಿಮೆ ಸ್ಥಾಪನೆಯಾದಾಗ
ಮೊಮ್ಮಗಳು ರಾಜೇಶ್ವರಿಯೊಂದಿಗೆ



ಜಪಾನಿನ ಟೋಕಿಯೋದ ಖೋಬೆ ವಿಶ್ವವಿದ್ಯಾನಿಲಯದಲ್ಲಿ ನಡೆದ
ಅಂತಾರಾಷ್ಟ್ರೀಯ ಸಮ್ಮೇಳನದ ಅಧ್ಯಕ್ಷತೆ ವಹಿಸಿರುವುದು



ಜಪಾನಿನ ಟೋಕಿಯೋದಲ್ಲಿ ನಡೆದ ಅಂತಾರಾಷ್ಟ್ರೀಯ ಯುವಸಮ್ಮೇಳನದಲ್ಲಿ
ಆಫ್ರಿಕಾದ ಯುವನಾಯಕನೊಂದಿಗೆ ಹರ್ಷಚಿತ್ತದಲ್ಲಿ



ಜಪಾನಿ ಸ್ನೇಹಿತನ ಜೊತೆಯಲ್ಲಿ ಗ್ರಾಮೀಣ ಜಪಾನಿನಲ್ಲಿ ಬೈಸಿಕಲ್ ಸವಾರಿ



ಕೊಲಂಬೋದಲ್ಲಿ ಶ್ರೀಲಂಕಾದ ಗವರ್ನರ್ ಜನರಲ್ ಮಿ. ಆಲಿವರ್ ಗುಣತಿಲಕೆಯವರೊಂದಿಗೆ



ಜಪಾನಿನಲ್ಲಿ ವಿದ್ಯಾರ್ಥಿಗಳ ಗುಂಪು ಮತ್ತು ಜಪಾನಿನ ರೈತ ಕುಟುಂಬದೊಂದಿಗೆ



ಆಫ್ರಿಕಾದ ಕ್ಯಾಮರೂನ್‌ನಲ್ಲಿ ಅಂತಾರಾಷ್ಟ್ರೀಯ
ಸಮ್ಮೇಳನದಲ್ಲಿ ಆಫ್ರಿಕಾದ ರಾಯಭಾರಿಯೊಂದಿಗೆ



ಜಪಾನಿನ ಟೋಕಿಯೋಗೆ ಭೇಟಿ



೧೯೬೪ರಲ್ಲಿ ಜಪಾನಿನ ಪ್ರಧಾನಮಂತ್ರಿಯೊಂದಿಗೆ ಟೋಕಿಯೋದಲ್ಲಿ



ನೆದರ್‌ಲ್ಯಾಂಡ್ಸ್‌ನಲ್ಲಿ ಡೈರಿ ಫಾರಂಗೆ ಭೇಟಿ



ನೆದರ್‌ಲ್ಯಾಂಡ್ಸ್‌ನ ರಾಟರ್‌ಡಾಮಿನಲ್ಲಿ ಬಂದರಿಗೆ ಭೇಟಿ



ನೇಪಾಳದ ಪ್ರಧಾನಮಂತ್ರಿ ಗಿರಿಜಾಪ್ರಸಾದ್ ಕೊಯಿರಾಲರೊಂದಿಗೆ



ವಿದ್ಯಾರ್ಥಿನಾಯಕರಾಗಿ ಶ್ರೀಲಂಕಾದಲ್ಲಿ
ತೆಂಗಿನ ತೋಟವೊಂದಕ್ಕೆ ಭೇಟಿ



ಅಮೆರಿಕಾದಲ್ಲಿ ಭಾರತದ ರಾಯಭಾರಿ ಎಮ್. ಸಿ. ಭಾಗಲಾರೊಂದಿಗೆ ಭಾರತದ ಕೃಷಿ ಅಧ್ಯಯನ ತಂಡದಲ್ಲಿ



ಅಮೆರಿಕಾ ಭೇಟಿಯ ಕಾಲದಲ್ಲಿ ಅಮೆರಿಕಾ ಕೃಷಿ ಇಲಾಖೆಯ ಮುಖ್ಯಸ್ಥರೊಂದಿಗೆ ಚರ್ಚೆ



ಬೈರೂತ್‌ನಲ್ಲಿ ಲೆಬನಾನ್ ಅಧ್ಯಕ್ಷರ ಜೊತೆ



ಇರಾಕಿಗೆ ಭಾರತದ ಪಾರ್ಲಿಮೆಂಟರಿ ನಿಯೋಗದ ಭೇಟಿ
ಬಾಗ್ದಾದಿನಲ್ಲಿ ಇರಾಕ್ ಅಧ್ಯಕ್ಷ ಅಲ್‌ಬಾಕರ್ ಅವರನ್ನು ಸ್ವಾಗತಿಸುತ್ತಿರುವುದು




ಶ್ರೀಲಂಕಾದ ಸರ್ವೋದಯ ಕೇಂದ್ರದಲ್ಲಿ ನಡೆದ ಎ.ಐ.ಆರ್.ಡಿ. ಟ್ರಸ್ಟಿಗಳ ಮಂಡಳಿ ಸಭೆ ಸೇರಿದಾಗ



ಯೂರೋಪಿಗೆ ಭೇಟಿ ನೀಡಿದ ಗ್ರಾಮೀಣ ಯುವಕರ ನಿಯೋಗದ ನಾಯಕರಾಗಿ ಜರ್ಮನಿಯ ಬರ್ಲಿನ್ ಗೇಟಿನಲ್ಲಿ



ಅಮೆರಿಕಾ ಭೇಟಿಯ ಕಾಲದಲ್ಲಿ ಶ್ರೀಮತಿ ಮತ್ತು ಶ್ರೀ ಜಾನ್ ಮಿಲ್ಲರ್ ಅವರೊಂದಿಗೆ



ಅಮೆರಿಕಾ ಭೇಟಿಯ ಕಾಲದಲ್ಲಿ
ರೆಡ್ ಇಂಡಿಯನ್ ನಾಯಕರೊಂದಿಗೆ



ಚೀನಾದ ಬೀಜಿಂಗ್‌ನಲ್ಲಿ ನಿಷೇಧಿತ ನಗರದ ಮುಂದೆ ಆಫ್ರಿಕಾ, ಶ್ರೀಲಂಕಾ ಮತ್ತು ಯೂರೋಪಿನ ಪ್ರತಿನಿಧಿಗಳೊಂದಿಗೆ



ಶ್ರೀಮತಿ ಮೋನಿಕಾ ವಿನ್ಸೆಂಟ್ ಜೊತೆಯಲ್ಲಿ ರಾಜಶೇಖರನ್



ಆಫ್ರಿಕಾ ಭೇಟಿಯ ಕಾಲದಲ್ಲಿ ಅಲ್ಲಿನ ಮಹಿಳಾ ನಾಯಕಿಯರೊಂದಿಗೆ



ಅಮೆರಿಕಾದ ನ್ಯೂಯಾರ್ಕಿನಲ್ಲಿ ಹಸಿವುಯೋಜನೆ ವಿಶ್ವಸಮ್ಮೇಳನದಲ್ಲಿ
ಬಾಂಗ್ಲಾದೇಶ ಮತ್ತು ಆಫ್ರಿಕಾ ನಿಯೋಗಿಗಳೊಂದಿಗೆ



ಥೈಲ್ಯಾಂಡಿನಲ್ಲಿ ನಡೆದ ಅಂತಾರಾಷ್ಟ್ರೀಯ ಸಮ್ಮೇಳನವೊಂದರಲ್ಲಿ
ಎಫ್.ಎ.ಓ.ನ ಎಡ್ಗಾರ್ಡೊ ಟಿ. ವ್ಯಾಲೆನ್‌ಜ್ಯೂಲಾ, ಕೆನಡಾದ ಸಿಡಾ-ಇಂಗೋ ಪ್ರತಿನಿಧಿ ಮತ್ತು
ಬಂದಕರ್‌ರಾಯ್ ಅವರೊಂದಿಗೆ



ಜಪಾನಿನ ಟೋಕಿಯೋಗೆ ಭೇಟಿ




ಟೋಕಿಯೋದಲ್ಲಿ ನಡೆದ ಕಾರ್ಯಾಗಾರದಲ್ಲಿ



ಟೋಕಿಯೋದಲ್ಲಿ ಜಪಾನಿನ ಹಸಿವು ಯೋಜನೆಯ ಅಧ್ಯಕ್ಷರೊಂದಿಗೆ



ರಾಷ್ಟ್ರಾಧ್ಯಕ್ಷ ಡಾ. ಜಾಕಿರ್ ಹುಸೇನ್‌ರವರಿಂದ ದೆಹಲಿಯ ವಿಶ್ವ ಯುವಕ ಕೇಂದ್ರ ಪ್ರಾರಂಭೋತ್ಸವ
ರಾಷ್ಟ್ರಾಧ್ಯಕ್ಷರ ಪಕ್ಕದಲ್ಲಿ ನವದೆಹಲಿ ಕೇಂದ್ರದ ನಿರ್ವಾಹಕ ಟ್ರಸ್ಟಿ ಶ್ರೀ ರಾಮಕೃಷ್ಣ ಬಜಾಜ್



ದೆಹಲಿಯ ಸಭೆಯೊಂದರಲ್ಲಿ ರಾಜಶೇಖರನ್ ಅಧ್ಯಕ್ಷತೆ . ವೇದಿಕೆಯಲ್ಲಿ - ಮಧುಲಿಮೆ, ರಾಜಶೇಖರನ್




ದೆಹಲಿಯಲ್ಲಿ ಯುವ ಸಮ್ಮೇಳನದ ವೇದಿಕೆ. ದ್ವಿವೇದಿ ಮತ್ತು ಆಚಾರ್ಯ ಕೃಪಲಾನಿ ಅವರೊಂದಿಗೆ



ಆಫ್ರಿಕಾದ ರೈತ ಮುಖಂಡ ಬರ್ನಾಡ್ ಲೀಡಿಯ ಅವರೊಂದಿಗೆ



ಕೇಂದ್ರ ಕೃಷಿಮಂತ್ರಿ ಡಾ. ಭಾನುಪ್ರಕಾಶ್‌ಸಿಂಗ್
ಕೇಂದ್ರ ಕಾರ್ಯದರ್ಶಿ ಡಾ. ಆರ್. ಎನ್. ಆಜಾದ್‌ರೊಂದಿಗೆ



ಅಂತಾರಾಷ್ಟ್ರೀಯ ಯುವ ಸಮ್ಮೇಳನದಲ್ಲಿ
ಭಾಗವಹಿಸಲು ಟೋಕಿಯೋಗೆ ಪ್ರಯಾಣದ
ಸಂದರ್ಭದಲ್ಲಿ ಎಸ್. ಎನ್. ನೊಂದಿಗೆ ವಿಚಾರವಿನಿಮಯ



ಗೃಹಮಂತ್ರಿ ರಾಮರಾವ್ ಅವರೊಂದಿಗೆ



ಡಾ. ಕರಣ್‌ಸಿಂಗ್‌ರೊಂದಿಗೆ



ದೆಹಲಿಯಲ್ಲಿ ಎಐಸಿಸಿ ಅಧಿವೇಶನದಲ್ಲಿ ಅಶೋಕ್‌ಮೆಹ್ತಾ ಮತ್ತು ವೀರೇಂದ್ರ ಪಾಟೀಲ್



ರಾಜಶೇಖರನ್ ಅವರ ೬೦ನೇ ಜನ್ಮದಿನ
ಮಾಜಿ ಕೇಂದ್ರ ಮಂತ್ರಿ ಎಂ. ಎಸ್. ಗುರುಪಾದಸ್ವಾಮಿ ಅವರಿಂದ ಅಭಿನಂದನೆ



ದಲಾಯಿಲಾಮಾ ಸಾಂಸ್ಕೃತಿಕ ಕೇಂದ್ರದ ನಿರ್ದೇಶಕ ಗೌರವಾನ್ವಿತ
ಲಾಮಾ ಡೊಜೂಮ್‌ಟುಲ್ಕು ಮತ್ತು ರಾಮಕೃಷ್ಣ ಹೆಗ್ಡೆ ಅವರೊಂದಿಗೆ



ಕೇಂದ್ರ ಮಾಜಿ ಮಂತ್ರಿ ವಿ.ಸಿ. ಶುಕ್ಲಾ ಅವರೊಂದಿಗೆ



ಕೇರಳದ ಮುಖ್ಯಮಂತ್ರಿ ಎ. ಕೆ. ಆಂಟೋನಿಯವರೊಂದಿಗೆ



ಪಿ. ಜಿ. ಆರ್. ಸಿಂಧ್ಯಾ ಅವರೊಂದಿಗೆ



ಡಾ. ದೇ. ಜವರೇಗೌಡ ಮತ್ತು ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರೊಂದಿಗೆ



ಭಾರತದ ಯುವನಾಯಕರ ನಿಯೋಗದ ನಾಯಕತ್ವ ವಹಿಸಿದ ಸಂದರ್ಭದಲ್ಲಿ ಶ್ರೀ ಎಸ್.ಎಂ. ಕೃಷ್ಣರವರು ಅಭಿನಂದಿಸುತ್ತಿರುವುದು
ವೇದಿಕೆಯಲ್ಲಿ - ರಾಮಕೃಷ್ಣ ಹೆಗಡೆ, ಡಾ. ನಾಗಪ್ಪ ಆಳ್ವ ಮತ್ತು ಮಹಮ್ಮದ್ ಆಲಿ



ಟೋಕಿಯೋದಲ್ಲಿ ಅಂತಾರಾಷ್ಟ್ರೀಯ ಯುವಸಮ್ಮೇಳನಕ್ಕೆ ಭಾರತದ ಯುವ ನಿಯೋಗದ ನಾಯಕರಾಗಿ
ಜಪಾನಿಗೆ ಹೊರಟ ಸಂದರ್ಭದಲ್ಲಿ ಅಭಿನಂದನೆ - ರಾಜಶೇಖರನ್ ಅವರ ಕೃತಜ್ಞತೆ



ಬೆಂಗಳೂರಿನಲ್ಲಿ ನಡೆದೆ ಸಮ್ಮೇಳನವೊಂದರಲ್ಲಿ ಭಾರತದ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅವರೊಂದಿಗೆ



ಬೆಂಗಳೂರಿನಲ್ಲಿ ನಡೆದ ಯುವಕಾಂಗ್ರೆಸ್‌ನ ಸಮಾವೇಶವನ್ನು ಉದ್ದೇಶಿಸಿ ಭಾಷಣ ಮಾಡುತ್ತಿದುವುದು
ವೇದಿಕೆಯಲ್ಲಿ ಭಾರತದ ಪ್ರಧಾನಿ ಇಂಧಿರಾಗಾಂಧಿ ಮತ್ತು ಕರ್ನಾಟಕದ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲ್



ಮಧ್ಯಪ್ರದೇಶದ ಮುಖ್ಯಮಂತ್ರಿ ದಿಗ್ವಿಜಯ ಸಿಂಗ್‌ರೊಂದಿಗೆ



ನಟವರ್‌ಸಿಂಗ್ ಮತ್ತು ಅಲ್ಲಂ ವೀರಭದ್ರಪ್ಪನವರೊಂದಿಗೆ



ಭಾರತದ ಮಾಜಿ ಪ್ರಧಾನಿ ಮತ್ತು ಎಐಸಿಸಿ ಅಧ್ಯಕ್ಷ ರಾಜೀವ್‌ಗಾಂಧಿ ಬೆಂಗಳೂರಿಗೆ ಭೇಟಿ ನೀಡಿದಾಗ



ಬೆಂಗಳೂರಿನಲ್ಲಿ ನಡೆದ ಎಐಸಿಸಿ ಅಧಿವೇಶನದಲ್ಲಿ ಎಐಸಿಸಿ ಅಧ್ಯಕ್ಷೆ, ಸೋನಿಯಾ ಗಾಂಧಿ ಅವರಿಗೆ ಸ್ಮರಣಸಂಚಿಕೆಯನ್ನು ಅರ್ಪಿಸುತ್ತಿರುವುದು. ವೇದಿಕೆಯಲ್ಲಿ ಶ್ರೀ ಎಸ್. ಎಂ. ಕೃಷ್ಣ ಆರ್. ವಿ. ದೇಶಪಾಂಡೆ ಮತ್ತು ಕಮಲನಾಥ್



ಆರ್. ವಿ. ದೇಶಪಾಂಡೆ ಮತ್ತು ಭಾರತದ ಮಾಜಿ ಪ್ರಧಾನಮಂತ್ರಿ ಶ್ರೀ ಪಿ.ವಿ.ನರಸಿಂಹರಾವ್‌ರೊಂದಿಗೆ



ಮುಖ್ಯಮಂತ್ರಿ ಎಸ್. ಎಂ. ಕೃಷ್ಣ, ಮುಖ್ಯಕಾರ್ಯದರ್ಶಿ ಬಿ. ಎಸ್. ಪಾಟೀಲ್ ಮತ್ತು ಸಿ. ಎಸ್. ಕೇದಾರ್



ಬೆಂಗಳೂರಿನಲ್ಲಿ ದೇಗುಲಮಠದ ಹಳೆಯ ವಿದ್ಯಾರ್ಥಿಗಳ ಸಂಘದಿಂದ ಅಭಿನಂದನೆ.
ವೇದಿಕೆಯಲ್ಲಿ - ಹೆಚ್. ಡಿ. ದೇವೇಗೌಡ, ಆದಿಚುಂಚನಗಿರಿ ಮಠದ ಪೂಜ್ಯಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿ
ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮೀಜಿ, ಗಿರಿಜಾ ರಾಜಶೇಖರನ್ ಮತ್ತು ದೇಗುಲ ಮಠದ
ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮೀಜಿ



ಪೂಜ್ಯ ಶ್ರೀ ಸಿದ್ಧಗಂಗಾ ಶ್ರೀಗಳವರಿಂದ ಆಶೀರ್ವಾದ. ಜೊತೆಯಲ್ಲಿ ಸಿ. ಸೋಮಶೇಖರ




ತುಮಕೂರಿನ ಸಿದ್ಧಗಂಗಾಮಠದಲ್ಲಿ ನಡೆದ ಗುರುವಂದನೆ ಸಮಾರಂಭದಲ್ಲಿ ಜಗದೀಶ್ ಶೆಟ್ಟರ್, ರಾಜಶೇಖರನ್
ಡಾ. ಜಿ. ಪರಮೇಶ್ವರ್, ಶ್ರೀ ಅನಂತಕುಮಾರ್, ಸಿದ್ಧಗಂಗಾಮಠದ ಪರಮ ಪೂಜ್ಯ ಶ್ರೀಗಳು
ಸುತ್ತೂರು ಜಗದ್ಗುರುಗಳು, ಶ್ರೀ ಮುಮ್ಮಡಿ ನಿರ್ವಾಣ ಸ್ವಾಮೀಜಿ ಮತ್ತು ವಿ. ಶ್ರೀನಿವಾಸ ಪ್ರಸಾದ್



ಮಂಚನಬೆಲೆ ಅಣೆಕಟ್ಟು ನಿವೇಶನ ಆಯ್ಕೆ. ಕೇಂದ್ರದ ನೀರಾವರಿ ಸಚಿವ ಡಾ. ಕೆ. ಎಲ್. ರಾವ್
ವೀರೇಂದ್ರ ಪಾಟೀಲ್, ವೆಂಕಟಪ್ಪ ಮತ್ತು ವೀರಸಂಜೀವೇಗೌಡ



ರಾಮನಗರ ತಾಲ್ಲೂಕಿನಲ್ಲಿ ಮಂಚನಬೆಲೆ ನೀರಾವರಿ ಅಣೆಕಟ್ಟು ಪ್ರದೇಶಕ್ಕೆ ಡಾ. ಕೆ. ಎಲ್. ರಾನ್ ಭೇಟಿ



ಬೆಂಗಳೂರಿನ ಕೃಷಿ ವಸ್ತು ಪ್ರದರ್ಶನ. ರಾಜ್ಯಪಾಲರಾದ ವಿ. ವಿ. ಗಿರಿ, ರಾಜಶೇಖರನ್ ಹಾಗು ಜಿ.ನಾರಾಯಣಗೌಡ



ಮೈಸೂರು ರೈತರ ಸಮ್ಮೇಳನ. ವೇದಿಕೆಯಲ್ಲಿ - ಆಲೂರು ಹನುಮಂತಪ್ಪ, ಜಿ.ಎಸ್. ಪಾಠಕ್, ಬಿ. ರಾಚಯ್ಯ ಮತ್ತು ಡಾ. ಹೆಚ್. ಆರ್. ಅರಕೇರಿ



ಭಾರತ ಸರ್ಕಾರ ಶಾಂತಿ ಪ್ರಶಸ್ತಿ ಪುರಸ್ಕೃತ ಶ್ರೀಲಂಕಾದ ಸರ್ವೋದಯದ ಅಧ್ಯಕ್ಷ
ಡಾ. ಎಂ.ಟಿ. ಅರಿಯಾರತ್ನೆ ಅವರೊಂದಿಗೆ




ಬೆಂಗಳೂರಿನಲ್ಲಿ ಎಐಆರ್‌ಡಿ ವ್ಯವಸ್ಥೆಗೊಳಿಸಿದ್ದ ರಾಷ್ಟ್ರೀಯ ಸಮ್ಮೇಳನ. ನಜೀರ್‌ಸಾಬ್ ಸಮ್ಮೇಳನದಲ್ಲಿ ಹಾಜರಿದ್ದರು




ಬೆಂಗಳೂರಿನಲ್ಲಿ ಎಐಆರ್‌ಡಿ ವ್ಯವಸ್ಥೆಗೊಳಿಸಿದ್ದ ಪ್ರಾಂತೀಯ ವಿಚಾರಗೋಷ್ಠಿಯಲ್ಲಿ
ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿ ಅವರೊಂದಿಗೆ




ಬೆಂಗಳೂರಿನಲ್ಲಿ ಎಐಆರ್‌ಡಿ ವ್ಯವಸ್ಥೆಗೊಳಿಸಿದ ರಾಷ್ಟ್ರೀಯ ವಿಚಾರ ಗೋಷ್ಠಿಯಲ್ಲಿ ಎಸ್. ಆರ್. ಬೊಮ್ಮಾಯಿ
ರಾಮಕೃಷ್ಣ ಹೆಗ್ಡೆ ಮತ್ತು ಅಮೆರಿಕಾದ ಭೂನೀತಿಯ ಲಿಂಕನ್ ಸಂಸ್ಥೆಯ ನಿರ್ದೇಶಕ ಪ್ರೊ. ಸೆಯಿನ್‌ಲಿನ್




ಬೆಂಗಳೂರಿನಲ್ಲಿ ಮಳೆನೀರು ಉಪಯೋಗದ ಮೇಲೆ ಎಐಆರ್‌ಡಿ ಸಮ್ಮೇಳನ. ಜೊತೆಯಲ್ಲಿ ತುಳಸೀ ದಾಸಪ್ಪ




ಬೆಂಗಳೂರಿನಲ್ಲಿ ಎಐಆರ್‌ಡಿ ವ್ಯವಸ್ಥೆಗೊಳಿಸಿದ ಪಂಚಾಯತಿ ರಾಜ್ಯ ಚರ್ಚಾಕೂಟ ವೇದಿಕೆಯಲ್ಲಿ – ಎಂ. ಸಿ. ನಾಣಯ್ಯ, ವೀರೇಂದ್ರ ಪಾಟೀಲ್, ಎಂ. ವೈ. ಘೋರ್ಪಡೆ ಮತ್ತು ರಾಜೀವ್‌ಗಾಂಧಿ ಫೌಂಡೇಷನ್ನಿನ ಸಲಹೆಗಾರ ಶ್ರೀಮಣಿಶಂಕರ ಐಯ್ಯರ್



ಫೆಡ್ರಿಕ್ ನೌಮನ್ ಸ್ಟೈಫ್ಲಂಗ್ (ಎಫ್ ಎನ್ ಎಸ್) ಫೌಂಡೇಷನ್ನಿನ ಪ್ರತಿನಿಧಿ ಮತ್ತು ಲಕ್ಷ್ಮೀ ಸಾಗರ್ ಅವರ ಜೊತೆಯಲ್ಲಿ



ತುಮಕೂರಿನಲ್ಲಿ ಶಿವ ಇಂಡಸ್ಟ್ರೀಸ್‌ಗೆ ಭೇಟಿ . ಮಾಲೀಕರಾದ ಸಿ. ಪಿ. ಸದಾಶಿವಯ್ಯ




ಎ.ಐ.ಆರ್.ಡಿ. ಬಡತನ ನಿರ್ಮೂಲನೆ ಕುರಿತ ವಿಚಾರ ಸಂಕಿರಣದಲ್ಲಿ ಡಾ. ಅರಿಯಾರತ್ನೆ ಶ್ರೀಲಂಕಾ ಮತ್ತು ನೇಪಾಳದ ಡಾ. ಗೋವಿಂದ ಅಗರ್‌ವಾಲ್




ಎಐಆರ್‌ಡಿ ಟ್ರಸ್ಟಿಗಳಾದ - ಡಾ. ಎ.ಟಿ. ಅರಿಯಾರತ್ನೆ, ಅಧ್ಯಕ್ಷ ಡಾ. ಅಜೀಜ್-ಉಲ್-ಹಕ್ (ಬಾಂಗ್ಲಾದೇಶ) ರಾಮೋಸ್ (ಫಿಲಿಫೈನ್ಸ್) ಡಾ. ಸಿ.ವಿ. ಎಸ್, ರತ್ನಂ (ಭಾರತ), ಶ್ರೀ ರಂಜಿತ್‌ಕುಮಾರ್ (ಕೆನಡಾ)ಅವರುಗಳೊಂದಿಗೆ



ಕರ್ನಾಟಕ ವಿಧಾನ ಪರಿಷತ್ತಿಗೆ ಚುನಾವಣೆಯಾದ ನಂತರ ಪ್ರಮಾಣ ವಚನ ಸ್ವೀಕಾರ
ವಿಧಾನಪರಿಷತ್ತಿನ ಉಪಾಧ್ಯಕ್ಷ ಶ್ರೀ ಡೇವಿಡ್ ಸೈಮನ್ ಹಾಜರಿದ್ದಾರೆ



ಕರ್ನಾಟಕ ವಿಧಾನಪರಿಷತ್ತಿಗೆ ಚುನಾವಣೆಯ ನಂತರ ಎಂ.ಎಲ್.ಸಿ. ಕೃಷ್ಣಪ್ಪ, ತಮ್ಮ ಕೀರ್ತಿಹಾಸನ್
ಮತ್ತು ಹೆಚ್. ಸದಾಶಿವಯ್ಯ ಅವರೊಂದಿಗೆ



ಕರ್ನಾಟಕದಿಂದ ರಾಜ್ಯಸಭೆಗೆ ಚುನಾಯಿತರಾದಾಗ ಪ್ರಮಾಣ ಪತ್ರವನ್ನು ಪಡೆಯುತ್ತಿರುವುದು



ಕಾಂಗ್ರೆಸ್‌ಪಕ್ಷದ ನಾಯಕರೊಂದಿಗೆ - ಜನಾರ್ಧನ ಪೂಜಾರಿ, ಎಸ್. ಎಂ. ಕೃಷ್ಣ ಮುಖ್ಯಮಂತ್ರಿ
ಮೋತಿಲಾಲ್ ವೋರಾ, ಮಲ್ಲಿಕಾರ್ಜುನ ಖರ್ಗೆ, ಮತ್ತು ಪ್ರೇಮಾ ಕಾರಿಯಪ್ಪ




ಪೂಜ್ಯ ಸುತ್ತೂರು ಜಗದ್ಗುರುಗಳು ಮತ್ತು ಮಾಜಿ ಪ್ರಧಾನಿ ಹೆಚ್. ಡಿ. ದೇವೇಗೌಡರವರೊಂದಿಗೆ




ಹೈದರಾಬಾದಿಗೆ ಪಾರ್ಲಿಮೆಂಟಿನ ಸಲಹಾ ಸಮಿತಿಯ ಭೇಟಿ. ಉದ್ಯಮಿಗಳ ಸಭೆಯಲ್ಲಿ

11670

# ಮಾನವೀಯ ಮೌಲ್ಯಗಳ ಪ್ರತಿಬಿಂಬ

ಎಸ್.ಎಂ. ಕೃಷ್ಣ

ಎಂ.ವಿ.ರಾಜಶೇಖರನ್ ಅವರನ್ನು ನೋಡಿದಾಗೆಲ್ಲಾ ನನಗೆ ನನ್ನ ವಿದ್ಯಾರ್ಥಿ ಜೀವನದ ನೆನಪಾಗುತ್ತದೆ. ೧೯೫೨-೫೩ರಲ್ಲಿ ನಾವು ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳು. ರಾಜಶೇಖರನ್‌ರವರು ಕನಕಪುರ ತಾಲ್ಲೂಕಿನ ಮರಳವಾಡಿಯಿಂದ ಬಂದಿದ್ದರೆ, ನಾನು ಮದ್ದೂರು ತಾಲ್ಲೂಕಿನ ಸೋಮನಹಳ್ಳಿಯಿಂದ ಬಂದಿದ್ದೆ. ನಾನು ಸೀನಿಯರ್ ಬಿ.ಎ. ವಿದ್ಯಾರ್ಥಿಯಾಗಿದ್ದಾಗ, ಅವರು ಜ್ಯೂನಿಯರ್ ಬಿ.ಎ. ವಿದ್ಯಾರ್ಥಿ. ಇಬ್ಬರೂ ಗ್ರಾಮೀಣ ಪ್ರದೇಶದವರು. ಮಹಾರಾಜ ಕಾಲೇಜಿನ ಹಾಸ್ಟೆಲ್‌ನಲ್ಲಿಯೇ ನಮ್ಮ ವಾಸ. ಎಚ್.ಸಿ. ದಾಸಪ್ಪನವರ ಮಗ ತುಳಸೀದಾಸಪ್ಪ ಮತ್ತು ರಾಜಶೇಖರನ್ ತುಂಬಾ ಮಿತ್ರರು. ಇವರಿಬ್ಬರು ಯಾವಾಗಲೂ ಜೊತೆಜೊತೆಯಲ್ಲೇ ಇರುತ್ತಿದ್ದರು. ರಾಜಶೇಖರನ್ ವಿದ್ಯಾರ್ಥಿ ದೆಸೆಯಲ್ಲಿ 'ಮಿತ್ರ ವೃಂದ ಸಾಂಸ್ಕೃತಿಕ ಸಂಸ್ಥೆ'ಯ ಕಾರ್ಯದರ್ಶಿ ಆಗಿದ್ದರು. ನಾನು ನನ್ನನ್ನು ಚರ್ಚಾಕೂಟ ಹಾಗೂ ಟೆನ್ನಿಸ್ ಕ್ರೀಡೆಯಲ್ಲಿ ತೊಡಗಿಸಿಕೊಂಡಿದ್ದರೆ, ಅವರು ಪತ್ರಿಕೋದ್ಯಮ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಪ್ರಾಯಶಃ ಅವರು ಬಿ.ಎ. ಪದವಿ ಪಡೆದ ನಂತರ ದೆಹಲಿಯಲ್ಲಿ ಕಾನೂನು ವ್ಯಾಸಂಗಕ್ಕಾಗಿ ಹೋಗಿದ್ದರು. ನಾನು ಬೆಂಗಳೂರಿನಲ್ಲಿ ಕಾನೂನು ವ್ಯಾಸಂಗ ಮುಗಿಸಿದೆ. ಈ ಸಂದರ್ಭದಲ್ಲಿ ಮಹಾರಾಜ ಕಾಲೇಜಿನ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದು. ಉತ್ತಮವಾದ ಕಲ್ಪವೃಕ್ಷಕ್ಕೆ ಮಣ್ಣು, ನೀರು ಹಾಗೂ ಪರಿಸರ ಹೇಗೆ ಅವಶ್ಯಕವೋ ಹಾಗೆಯೇ ವಿದ್ಯಾರ್ಥಿಯ ಸರ್ವತೋಮುಖ ಅಭಿವೃದ್ಧಿಗೆ ಶೈಕ್ಷಣಿಕ ಸಂಸ್ಥೆ ಮುಖ್ಯವಾಗುತ್ತದೆ. ಮಹಾರಾಜ ಕಾಲೇಜು ಅಂದು ಶೈಕ್ಷಣಿಕ ಕ್ಷೇತ್ರದಲ್ಲಿ ಹಿರಿದಾದ ಹೆಸರನ್ನು ಪಡೆದ ಸಂಸ್ಥೆಯಾಗಿತ್ತು. ಖ್ಯಾತ ವಿದ್ವಾಂಸರ ಹಾಗೂ ಆದರ್ಶ ಅಧ್ಯಾಪಕರುಗಳ ಸಂಗಮ ಸ್ಥಳ ಆದಾಗಿತ್ತು. ಅವರ ಆದರ್ಶ, ನಡೆ-ನುಡಿ ವಿದ್ಯಾರ್ಥಿಗಳನ್ನು ರೂಪಿಸಲು ಸಹಾಯಕವಾಗಿತ್ತು. ನಮ್ಮ ಬದುಕಿನಲ್ಲಿ ಮಹಾರಾಜ ಕಾಲೇಜಿನ ಕಾಲದ ವ್ಯಾಸಂಗದ ಅವಧಿ ಮರೆಯಲಾಗದ ದಿನಗಳೆಂದು ಹೇಳಿದರೆ ಅದು ತಪ್ಪಾಗಲಾರದು.

ರಾಜಶೇಖರನ್‌ರವರು ವಿನೋಬಾರವರ ಭೂದಾನ ಚಳುವಳಿ, ಸರ್ವೋದಯ ತತ್ವಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಯಶೋಧರಮ್ಮ ದಾಸಪ್ಪ ಅವರ ಮೂಲಕ ಅವರಿಗೆ ನಿಜಲಿಂಗಪ್ಪನವರ ಮನೆಯ ಸಂಬಂಧ ಕೂಡ ಆಯಿತು. ೧೯೬೨ರಲ್ಲಿ ನಾನು ವಿಧಾನಸಭೆ ಪ್ರವೇಶಿಸಿದ ಮೇಲೆ ರಾಜಶೇಖರನ್ ಆಗಾಗ್ಗೆ ಸಿಗುತ್ತಿದ್ದರು. ಮುಖ್ಯಮಂತ್ರಿ ನಿಜಲಿಂಗಪ್ಪನವರು ತಂದ ಅನೇಕ ಪ್ರಗತಿಪರ ಕಾರ್ಯಕ್ರಮಗಳ ಹಿಂದೆ ರಾಜಶೇಖರನ್‌ರವರ ಚಿಂತನೆ ಕೆಲಸ ಮಾಡಿತ್ತು. ಉದಾಹರಣೆಗೆ ಆಗ ಪ್ರಾರಂಭವಾದ ಯುವಜನ ಸೇವಾ ಇಲಾಖೆ. ರಾಜಶೇಖರನ್‌ರವರು ಮಿತ್ರರ ಬಗ್ಗೆ ತುಂಬಾ ಒಲವುಳ್ಳವರಾಗಿದ್ದರು. ಈ ಕಾಲದಲ್ಲಿ ಮೈಸೂರು ರಾಜ್ಯದಿಂದ ಕಾಮನ್‌ವೆಲ್ತ್ ಸಂಸ್ಥೆಯ ಒಕ್ಕೂಟಕ್ಕೆ ರಾಜ್ಯದ ಪ್ರತಿನಿಧಿ ಒಬ್ಬರನ್ನು ಆಯ್ಕೆ ಮಾಡಬೇಕಾಗಿತ್ತು. ಸಹಜವಾಗಿ ಆಗಿನ ಆಡಳಿತ ಪಕ್ಷದಿಂದ ಹಿರಿಯ ಧುರೀಣರೊಬ್ಬರನ್ನು ಆಯ್ಕೆ ಮಾಡಲಾಗಿತ್ತು. ಇಂತಹ ಸಂಸ್ಥೆಯ ಒಕ್ಕೂಟದಲ್ಲಿ ಯುವ ಶಾಸಕರು ಭಾಗವಹಿಸಿದರೆ ರಾಜ್ಯಕ್ಕೆ ಹೆಚ್ಚು ಅನುಕೂಲ ಎಂದು ಮುಖ್ಯಮಂತ್ರಿ ನಿಜಲಿಂಗಪ್ಪನವರು ಭಾವಿಸಿದರು. ಅವರು ಹೀಗೆ ಭಾವಿಸಲು ರಾಜಶೇಖರನ್ ಪ್ರೇರಣೆ ನೀಡಿದ್ದರು ಎಂದು ನನಗೆ ಆಮೇಲೆ ಗೊತ್ತಾಯಿತು. ಆ ಕಾಮನ್‌ವೆಲ್ತ್ ಒಕ್ಕೂಟಕ್ಕೆ ಮೈಸೂರು ರಾಜ್ಯದ ಪರವಾಗಿ ನಾನು ಆಸ್ಟ್ರೇಲಿಯಕ್ಕೆ ಹೋಗಿದ್ದೆ. ಗುಣವನ್ನು ಗುರುತಿಸಿ ಅದಕ್ಕೆ ಮನ್ನಣೆ ಕೊಡುವ ಅಪರೂಪದ ನಡೆ-ನುಡಿ ನಿಜಲಿಂಗಪ್ಪನವರದು. ಅಂಥದ್ದೇ ಸ್ವಭಾವ ರಾಜಶೇಖರನ್ ಅವರದು.

೧೯೬೭ರಲ್ಲಿ ರಾಜಶೇಖರನ್‌ರವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾದರು. ನಾನು ಮಂಡ್ಯದ ಉಪಚುನಾವಣೆ ಒಂದರಿಂದ ಲೋಕಸಭೆ ಪ್ರವೇಶಿಸಿದೆ. ನಾವಿಬ್ಬರೂ ಜೊತೆ ಜೊತೆಯಾಗಿ ಲೋಕಸಭೆಯಲ್ಲಿ ಕೆಲಸ ಮಾಡಿದ್ದೇವೆ. ರಾಜಶೇಖರನ್ ಅವರಿಗೆ ಗ್ರಾಮೀಣ ಭಾರತ ಚಿರಪರಿಚಿತವಾದುದು. ಕೃಷಿ, ಪಶುಸಂಗೋಪನೆ, ನೀರಾವರಿ, ಗ್ರಾಮೀಣ ಪ್ರದೇಶದ ಸಣ್ಣ ಕೈಗಾರಿಕೆ, ಆರ್ಥಿಕ ದುರ್ಬಲರ ಏಳಿಗೆ ಮೊದಲಾದ ಕ್ಷೇತ್ರಗಳಲ್ಲಿ ಅವರು ವಿದ್ಯಾರ್ಥಿ ಕಾಲದಿಂದಲೂ ಕೆಲಸ ಮಾಡಿಕೊಂಡು ಬಂದಿದ್ದಾರೆ. ಒಂದು ನಿಮಿಷವನ್ನೂ ವ್ಯರ್ಥಮಾಡದೆ ಸದಾ ತಮ್ಮನ್ನು ಕೆಲಸಕ್ಕೆ ಒಡ್ಡಿಕೊಂಡಿರುವ ವ್ಯಕ್ತಿ ಅವರು. ಅನೇಕ ರಾಜಕೀಯ ಏರುಪೇರುಗಳ ನಡುವೆ ಕೂಡ ಅವರು ತಮ್ಮ ಕ್ರಿಯಾಶೀಲತೆಯನ್ನು ಉಳಿಸಿ ಕೊಂಡಿದ್ದರು. ದೇಶ-ವಿದೇಶಗಳನ್ನು ಅನೇಕ ಸಾರಿ ಸುತ್ತಿರುವ ರಾಜಶೇಖರನ್ ಅವರಿಗೆ ಗ್ರಾಮೀಣ ಅಭಿವೃದ್ಧಿ ಅತಿ ಮುಖ್ಯವಾಗಿದೆ. ಇವುಗಳ ಜೊತೆ, ತಮ್ಮನ್ನು ಬೆಳೆಸಿದ ಪಕ್ಷ ಹಾಗೂ ಸಂಸ್ಥೆಯ ಬಗ್ಗೆ ಕೂಡ ಅವರಿಗೆ ಶ್ರದ್ಧೆ ಇದೆ. ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳನ್ನು ಬೆಳೆಸಿಕೊಂಡು ಮಾನವೀಯ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂಬುದು ಅವರ ಹಿರಿದಾದ ಆಸೆ. ಈ ಉದಾತ್ತ ಧ್ಯೇಯಗಳು ನನ್ನ ಮಿತ್ರರಲ್ಲಿ ಇರುವುದನ್ನು ಕಂಡು ನನಗೆ ತುಂಬಾ ಹೆಮ್ಮೆಯಾಗಿದೆ. ರಾಜಶೇಖರನ್‌ರವರು ನಮ್ಮ ಮುಂದಿನ ಪೀಳಿಗೆಗೆ ಸದಾ ಮಾರ್ಗದರ್ಶಕ ರಾಗಿರುತ್ತಾರೆ ಎಂಬ ಅಚಲ ವಿಶ್ವಾಸ ನನ್ನದು. ನಮ್ಮ ಜನತೆ ಅವರಿಗೆ ಮತ್ತಷ್ಟು ಚೈತನ್ಯವನ್ನು ಕೊಡಲಿ.

☼☼☼

# ತತ್ವಬದ್ಧ ರಾಜಕಾರಣಿ

ನಿಟ್ಟೂರು ಶ್ರೀನಿವಾಸರಾವ್

ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ೭೫ ವರ್ಷ ತುಂಬಿದೆ ಎಂಬುದನ್ನು ಕೇಳಿದಾಗ ನನಗೆ ತುಂಬಾ ಆಶ್ಚರ್ಯವಾಯಿತು. ಅವರು ನನ್ನ ಕಣ್ಮುಂದೆ ಬೆಳೆದ ಹುಡುಗ. ನಮ್ಮ ಅಂಕಲ್ ಎಂ.ಎನ್.ಕೃಷ್ಣರಾವ್ ಅವರ ಮನೆಯ ಮುಂದೇನೇ ರಾಜಶೇಖರನ್ ಮನೆಯಿರುವುದು. ಎಂ.ಎನ್.ಕೃಷ್ಣರಾವ್ ಮನೆಯಲ್ಲಿ ನಾನು ಬೆಳೆದು ದೊಡ್ಡವನಾದುದು. ರಾಜಶೇಖರನ್‌ರವರನ್ನು ನಾನು ಅವರ ಯೌವನದ ಕಾಲದಿಂದಲೂ ನೋಡುತ್ತಾ ಬಂದಿದ್ದೇನೆ. ಕನಕಪುರ ತಾಲ್ಲೂಕಿನ ಮರಳವಾಡಿ ಗ್ರಾಮದವರು ಅವರು. ಕಾನಕಾನಹಳ್ಳಿ ಅಂದರೆ ಇಂದಿನ ಕನಕಪುರ ನನಗೆ ಮೊದಲಿನಿಂದಲೂ ಚಿರಪರಿಚಿತವಾದ ಹೆಸರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಪೂರ್ವ ರೀತಿಯ ಹೋರಾಟ ಮಾಡಿದ ಸರ್ದಾರ್ ವೆಂಕಟರಾಮಯ್ಯ ಅವರು ಆ ಊರಿನವರು. ಇತ್ತೀಚೆಗೆ ಈ ತಾಲ್ಲೂಕಿನಿಂದ ಅನೇಕ ಪ್ರತಿಭೆಗಳು ಹೊರ ಬಂದಿವೆ. ತಾಲ್ಲೂಕಿನಲ್ಲಿ ಶಿಕ್ಷಣ ಪ್ರಸಾರಕ್ಕೆ ದುಡಿದ ಎಸ್.ಕರಿಯಪ್ಪ ಅವರೂ ಕೂಡ ಸ್ಮರಣಾರ್ಹರು. ಹೀಗೆ ತಾಲ್ಲೂಕಿನ ಘನತೆಯನ್ನು ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಎತ್ತಿ ಹಿಡಿದವರಲ್ಲಿ ಶ್ರೀ ಎಂ.ವಿ.ರಾಜಶೇಖರನ್‌ರವರ ಹೆಸರನ್ನು ಮರೆಯುವಂತಿಲ್ಲ. ವಿದ್ಯಾರ್ಥಿ ದೆಸೆಯಿಂದಲೂ ಅವರು ಸಂಘಟನೆಗೆ ತಮ್ಮನ್ನು ತೆತ್ತುಕೊಂಡಿದ್ದರು. ನೆಹರು ಯುವಕ ಕೇಂದ್ರದ ಬೆಳವಣಿಗೆಯಲ್ಲಿ ರಾಜಶೇಖರನ್ ಪಾತ್ರ ಹಿರಿದಾದದ್ದು. ಅವರು ಅಲ್ಲಿ ಕೆಲಸ ಮಾಡುತ್ತಿದ್ದುದನ್ನು ನಾನು ಅನೇಕ ಸಾರಿ ಗಮನಿಸಿದ್ದೇನೆ. ಯುವ ಜನಾಂಗಕ್ಕೆ ಆದರ್ಶ ಗುರಿಯೊಂದನ್ನು ದೊರಕಿಸಿಕೊಡಲು ರಾಜಶೇಖರನ್ ದುಡಿಯುತ್ತಿದ್ದರು.

ರಾಜಶೇಖರನ್ ಅವರ ಮಾವ ಅರ್ಥಾತ್ ನಿಜಲಿಂಗಪ್ಪ ಮತ್ತು ನಾನು ಒಂದೇ ಜೊತೆಯವರು ಹಾಗೂ ಸಹಪಾಠಿಗಳು. ಅವರು ಮುಖ್ಯ ಮಂತ್ರಿ ಆಗಿದ್ದಾಗ ನಾನು ಮೈಸೂರು ರಾಜ್ಯದ ಹಂಗಾಮಿ ರಾಜ್ಯಪಾಲ ನಾಗಿದ್ದೆ. ನಾವಿಬ್ಬರು ಜೊತೆಯಲ್ಲಿ ಚಿತ್ರದುರ್ಗ ಮತ್ತಿತರ ಕಡೆ ಪ್ರವಾಸ ಹೋಗುತ್ತಿದ್ದುದು ಉಂಟು. ಆಗೆಲ್ಲ ನಿಜಲಿಂಗಪ್ಪನವರ ಬಗೆಗಿನ

ಅಭಿಮಾನವನ್ನು ನೆನೆಸಿಕೊಳ್ಳುವುದೇ ಪ್ರಿಯವಾದ ವಿಚಾರ. ನಿಜಲಿಂಗಪ್ಪನವರ ನಾಲ್ಕನೆಯ ಮಗಳು ಗಿರಿಜಾಳನ್ನು ರಾಜಶೇಖರನ್ ವಿವಾಹವಾಗಿದ್ದಾರೆ. ಆ ವಿವಾಹ ಸಮಾರಂಭಕ್ಕೆ ನಾನು ಹೋಗಿದ್ದೆನೆಂಬುದು ನನ್ನ ನೆನಪು. ಅನಂತರ ಅನೇಕ ಸಾರಿ ನಿಜಲಿಂಗಪ್ಪನವರ ಜೊತೆ ರಾಜಶೇಖರನ್‌ರವರನ್ನು ಹಾಗೂ ಅವರ ಕುಟುಂಬವನ್ನು ಕಂಡಿದ್ದೇನೆ. ನಿಜಲಿಂಗಪ್ಪ ಹಾಗೂ ಅವರ ಪತ್ನಿ ಮುರಿಗೆಮ್ಮ ಅವರ ಎಲ್ಲಾ ಸದ್ಗುಣಗಳು ರಾಜಶೇಖರನ್‌ರವರ ಪತ್ನಿ ಗಿರಿಜಾ ಅವರಲ್ಲಿ ಸಂಗಮಿಸಿದೆ. ರಾಜಶೇಖರನ್‌ರವರು ಒಂದು ಅವಧಿಗೆ ಮಾತ್ರ ಕನಕಪುರ ಲೋಕಸಭಾ ಕ್ಷೇತ್ರವನ್ನು ಪ್ರತಿನಿಧಿಸಿದ್ದರು. ಅನಂತರ ಅವರು ಬಹುಕಾಲ ಅಧಿಕಾರ ವಲಯದಿಂದ ದೂರವೇ ಉಳಿದಿದ್ದಾರೆ. ನಿಜಲಿಂಗಪ್ಪನವರಂತೆ ರಾಜಶೇಖರನ್ ಸಹ ತಮ್ಮ ವ್ಯಕ್ತಿತ್ವದಿಂದ ಸಮಾಜದಲ್ಲಿ ಉನ್ನತ ಸ್ಥಾನ ಗಳಿಸಿದ್ದಾರೆಯೇ ಹೊರತು ಅಧಿಕಾರ ಸ್ಥಾನದಿಂದ ಅಲ್ಲ ಎಂಬುದು ಅವರನ್ನು ಹತ್ತಿರದಿಂದ ಬಲ್ಲ ಎಲ್ಲರಿಗೂ ತಿಳಿದಿರುವ ವಿಚಾರ. ನಿಜಲಿಂಗಪ್ಪನವರಂತೆ ಅವರೂ ಸಹ ತುಂಬಾ ನಿಷ್ಠಾವಂತರು, ಪ್ರಾಮಾಣಿಕರು. ಅಧಿಕಾರಕ್ಕಾಗಿ ತತ್ವಾದರ್ಶಗಳನ್ನು ತೊರೆದವರಲ್ಲ. ಇಂತಹ ಸಾತ್ವಿಕ ಶಕ್ತಿ ನಿಜಲಿಂಗಪ್ಪನವರಲ್ಲಿದ್ದ ಕಾರಣವೆ ಅವರು ಕಡೆಯ ತನಕ ಬಿಚ್ಚು ನುಡಿಗಳಿಂದ ತಮ್ಮ ಅಭಿಪ್ರಾಯಗಳನ್ನು ಹೇಳಬಲ್ಲವರಾಗಿದ್ದರು. ಅವರು ಯಾರಿಗೂ ಹೆದರುವ ಅಗತ್ಯವಿರಲಿಲ್ಲ. ರಾಜಶೇಖರನ್ ಕೂಡ ಅದೇ ಪರಂಪರೆಯಲ್ಲಿ ಬೆಳೆದವರು. ಅಧಿಕಾರದಿಂದ ದೂರವಿದ್ದಾಗ ರಚನಾತ್ಮಕ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು.

ಬೆಂಗಳೂರಿನಲ್ಲಿ ಅವರು ನಿರ್ಮಿಸಿರುವ ಏಷಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಎಐಆರ್‌ಡಿ) ಇಡೀ ರಾಷ್ಟ್ರದಲ್ಲಿ ಉತ್ತಮ ಸಂಸ್ಥೆಗಳಲ್ಲಿ ಒಂದೆನಿಸಿದೆ. ಆ ಸಂಸ್ಥೆಯಿರುವ ಜಾಗ ನನ್ನ ಸ್ನೇಹಿತರಾದ ಸಿ.ವಿ.ಎನ್.ರಾವ್ ಅವರದು. ಈ ಸಂಸ್ಥೆಯ ಅಧ್ಯಕ್ಷರಾದ ಡಾ. ಅರಿಯರತ್ನೆ ಶ್ರೀಲಂಕಾದ ಸರ್ವೋದಯ ಆಂದೋಲನದ ನಾಯಕರು, ಶ್ರೀಲಂಕಾದ ಗಾಂಧಿಯೆಂದೇ ಹೆಸರಾಗಿದ್ದಾರೆ. ಗಾಂಧಿ ಮಾರ್ಗದಲ್ಲಿ ಶ್ರೀಲಂಕಾದ ಅಭಿವೃದ್ಧಿಯನ್ನು ಸಾಧಿಸುತ್ತಾ ಗಾಂಧಿಜೀಯ ಆದರ್ಶದ ಪ್ರತಿರೂಪವಾಗಿದ್ದರು. ಇಡೀ ಸಂಸ್ಥೆಯನ್ನು ಕಟ್ಟಿ ಬೆಳೆಸಿದವರಲ್ಲಿ ರಾಜಶೇಖರನ್ ಅವರದೇ ಅಗ್ರಪಾಲು. ಗ್ರಾಮೀಣ ಅಭಿವೃದ್ಧಿ ಹಾಗು ಯುವಜನಾಂಗ ಅವರಿಗೆ ಪ್ರಿಯವಾದ ವಿಚಾರಗಳಾದ ಕಾರಣ ಇಡೀ ವಿಶ್ವದಲ್ಲಿ ರಾಜಶೇಖರನ್ ಎಲ್ಲಿ ಬೇಕಾದರೂ ಹೋಗಿ ಬರಬಲ್ಲ ತಜ್ಞರಾಯಭಾರಿಗಳಾಗಿದ್ದರು. ಇದಕ್ಕೆ ಅವರ ಅಧ್ಯಯನ ಶೀಲತೆ ಹಾಗು ಕಠಿಣ ಪರಿಶ್ರಮ ಕಾರಣವೆಂದು ಭಾವಿಸಬೇಕು.

ರಾಜಶೇಖರನ್‌ರವರು ನಿಜಲಿಂಗಪ್ಪನವರಂತೆ ತತ್ವಬದ್ಧ ರಾಜಕಾರಣವನ್ನು ಮಾಡಿದವರು. ನಿಜಲಿಂಗಪ್ಪನವರ ಹೆಸರನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವಂತೆ ಇವರು ಹೆಜ್ಜೆ ಹಾಕಿದ್ದಾರೆ. ಇದರ ಜೊತೆ ಗ್ರಾಮೀಣ ಅಭಿವೃದ್ಧಿ, ಕೃಷಿ, ಯುವಜನಾಂಗ ಮೊದಲಾದ ಕ್ಷೇತ್ರಗಳಲ್ಲಿ ಅಪಾರ ಯಶಸ್ಸು ಸಾಧಿಸಿ ಎಲ್ಲರಿಗೂ ಬೇಕಾದವರಾಗಿದ್ದಾರೆ. ಅವರು ನೂರು ವರ್ಷ ಕಾಲ ಬಾಳಲಿ, ಅವರ ಕುಟುಂಬ ವರ್ಗಕ್ಕೆ ಪರಮಾತ್ಮ ಸಕಲ ರೀತಿಯ ಸನ್ಮಂಗಳವನ್ನು ಕೊಡಲೆಂದು ಹಾರೈಸುತ್ತೇನೆ.

***

# ಹಾರೈಕೆ

● ಕೊಲೂರು ಮಲ್ಲಪ್ಪ

ನಿಜಲಿಂಗಪ್ಪನವರ ಅಳಿಯ ಎಂ.ವಿ.ರಾಜಶೇಖರನ್ ಅವರಿಗೆ ೭೫ರ ಹುಟ್ಟುಹಬ್ಬದ ಆಚರಣೆಯನ್ನು ಮಾಡುತ್ತಿರುವುದಾಗಿ ಶ್ರೀ ಹಾರನಹಳ್ಳಿ ರಾಮಸ್ವಾಮಿ ಹೇಳಿದರು. ನನಗೆ ಎಂ.ವಿ.ರಾ. ೧೯೬೦ರಿಂದಲೂ ಪರಿಚಿತರು. ಅವರ ಮಾವ ನಿಜಲಿಂಗಪ್ಪನವರ ಪರಿಚಯವಂತೂ ಐವತ್ತರ ದಶಕಕ್ಕೂ ಹಿಂದಿನದು. ನಿಜಲಿಂಗಪ್ಪ ಅವರು ಈ ನಾಡಿಗೆ ಸಲ್ಲಿಸಿದ ಸೇವೆ ಸ್ಮರಣಾರ್ಹವಾದದ್ದು. ಅವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ರಾಜಶೇಖರನ್ ಅವರೂ ಕೂಡ ಅನುಸರಿಸುತ್ತಿದ್ದಾರೆ. ನಿಜಲಿಂಗಪ್ಪ ಅವರು ಮುಖ್ಯಮಂತ್ರಿ ಆಗಿದ್ದ ಕಾಲದಲ್ಲಿ ರಾಜಶೇಖರನ್ ಅನೇಕ ಅಭಿವೃದ್ಧಿ ಕೆಲಸಗಳನ್ನು ಮಾಡಿಸಿದ್ದಾರೆ. ಇಂದು ಬೆಂಗಳೂರಿನಲ್ಲಿನ 'ಕೃಷಿಕ ಸಮಾಜ'ವನ್ನು ಕೂಡಾ ರಾಜಶೇಖರ್ ಅವರು ಸರ್ಕಾರದಿಂದ ಮಾಡಿಸಿದ್ದಾಗಿದೆ. ಅನೇಕ ದೇಶಗಳನ್ನು ಸುತ್ತಿ ಬಂದಿರುವ ರಾಜಶೇಖರನ್ ಗ್ರಾಮಾಂತರ ಪ್ರದೇಶದಲ್ಲಿ ಯಾವ ಯಾವ ಕೆಲಸಗಳನ್ನು ಮಾಡಬೇಕೆಂಬುದನ್ನು ಅಲ್ಲಿಂದಲೇ ನಿರ್ಧರಿಸಿಕೊಂಡು ಬರುತ್ತಿದ್ದರು. ಇಲ್ಲಿಗೆ ಬಂದ ನಂತರ ಬಹಳಷ್ಟು ಅಭಿವೃದ್ಧಿ ಕೆಲಸಗಳನ್ನು ಮಾಡಿಸಿದ್ದಾರೆ. ತಮ್ಮ ಮಾವನವರನ್ನು ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳದೆ ಜನಪರ ಕೆಲಸಗಳಿಗೆ ಬಳಸಿಕೊಂಡ ಶ್ರೀ ಎಂ.ವಿ. ರಾಜಶೇಖರನ್ ಅವರನ್ನು ಮರೆಯುವುದಾದರೂ ಎಂತು? ಇಂತಹ ಕೆಲಸಗಳು ಸದಾ ಅವರಿಂದ ನಡೆಯುತ್ತಿರಲಿ. ಪರಮಾತ್ಮ ಅವರಿಗೂ ಅವರ ಕುಟುಂಬಕ್ಕೂ ಸಕಲ ರೀತಿಯ ಶುಭವನ್ನು ತರಲೆಂದು ಹಾರೈಸುತ್ತೇನೆ.

❋❋❋

# ಶಿವಚೈತನ್ಯಕ್ಕೆ ಜಯವಾಗಲಿ

ಡಾ. ದೇಜಗೌ

ನನ್ನ ಮತ್ತು ಶ್ರೀ ಎಂ.ವಿ.ರಾಜಶೇಖರನ್ ಅವರ ಸ್ನೇಹ ಸಂಬಂಧ ಮೂರು ದಶಕಗಳಿಗೂ ಹಿಂದಿನದು. ಅವರ ಆ ಯೌವನದ ಮಂದಸ್ಮಿತ ಅಷ್ಟೇ ಶುಭ್ರ ಸುಂದರ ಆಕರ್ಷಕವಾಗಿ ಅವರ ಕೆಂದಾವರೆ ಮೊಗದ ಮೇಲೆ ನವಾರುಣ ಕಾಂತಿಯಂತೆ ಇಂದಿಗೂ ಮಿಂಚುತ್ತಿದೆ, ಸರಸವಾಡುತ್ತಿದೆ. ಸ್ನೇಹ, ಪ್ರೇಮ, ಶಾಂತಿ, ವಿನಯ, ನಿರ್ಮಾತ್ಸರ್ಯ, ನಿಷ್ಕಪಟ ಮುಗ್ಧತೆಗಳೇ ಸಾಕಾರಗೊಂಡಂತಿರುವ ಅವರ ವ್ಯಕ್ತಿತ್ವ ಸಂಸ್ಕೃತಿಯೇ ಹೆಪ್ಪುಗೊಂಡು ನಿರ್ಮಾಣವಾದಂತಿದೆ. ಅಧಿಕಾರ ವ್ಯಾಮೋಹ ವರ್ಜನೆ, ಪ್ರಾಮಾಣಿಕತೆ, ಶೈಕ್ಷಣಿಕ ಶಿಸ್ತುಗಳೊಡನೆ ರಾಜಕಾರಣ ಹೊಂದಾಣಿಕೆಯಾಗದು. ಇಂಥ ಅಸಾಧ್ಯವನ್ನು ಸಾಧ್ಯವಾಗಿಸಿಕೊಳ್ಳಬಲ್ಲ ಜಾಯಮಾನ ರಾಜಶೇಖರನ್ ಅವರದು, ಇದು ಅವರ ನಿಜಬಿಂಬ.

ಹಿಂದಿನ ಕಾಲದಲ್ಲಿ ಹಳ್ಳಿಯ ಶ್ರೀಮಂತ ಮನೆತನದ ಮಕ್ಕಳ ಗಮನ ಸಾಮಾನ್ಯವಾಗಿ ವಿದ್ಯಾಭ್ಯಾಸದ ಕಡೆಗೆ ಹರಿಯುತ್ತಿರಲಿಲ್ಲ. ಸುದೈವದಿಂದ ರಾಜಶೇಖರನ್ ಪ್ರೌಢ ವಿದ್ಯಾಭ್ಯಾಸದ ನಂತರ ಮಹಾರಾಜ ಕಾಲೇಜಿನಲ್ಲಿ ಪದವಿಯನ್ನು ಪಡೆಯುತ್ತಾರೆ. ಅವರ ಜ್ಞಾನದಾಹ ಅವರನ್ನು ದೆಹಲಿ, ಅಮೆರಿಕೆಯ ಮಿಸ್ಸೌರಿ, ಕನ್ಸಾಸ್‌ವರೆಗೂ ಸೆಳೆದೊಯ್ಯುತ್ತದೆ. ಅಮೆರಿಕೆಯಲ್ಲವರು ಕೃಷಿ ಮಾರುಕಟ್ಟೆ, ಸಹಕಾರ, ಪ್ರಾಯೋಗಿಕ ಕೃಷಿ ವಿಜ್ಞಾನ, ಆರೋಗ್ಯ ವಿಸ್ತರಣ ಸೇವೆಯಲ್ಲಿ ಶಿಕ್ಷಣ, ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ವಿಶೇಷ ತರಬೇತಿಯ ಮೂಲಕ ಪರಿಣತಿ ಪಡೆಯುತ್ತಾರೆ. ಅವರು ಪಡೆದ ಶಿಕ್ಷಣದ ಚರ್ಯೆ ಪ್ರಕಾರ, ಹರಹು ವಿಸ್ತಾರಗಳನ್ನು ಗಮನಿಸಿದಾಗ, ಅವರ ಹೃದಯ ವೈಶಾಲ್ಯ ಹಾಗೂ ಮಾನವೀಯ ಮೌಲ್ಯಗಳ ಪರಿಚಯವಾಗುತ್ತದೆ. ಅವರು ಹುಟ್ಟಿದ್ದು, ಬೆಳೆದದ್ದು ಗ್ರಾಮೀಣ ಪರಿಸರದಲ್ಲಿ. ಆದ್ದರಿಂದ ಜನಸೇವೆ, ಸಮಾಜಸೇವೆ, ಮುಖ್ಯವಾಗಿ ಗ್ರಾಮಾಭಿವೃದ್ಧಿ ಅವರ ಜೀವನೋದ್ದೇಶವಾಗಿತ್ತೆಂಬುದು ಅವರು ಸಂಪಾದಿಸಿದ ಶೈಕ್ಷಣಿಕ ಶಿಸ್ತಿನಿಂದ ವೇದ್ಯವಾಗುತ್ತದೆ. ಜ್ಞಾನಾರ್ಜನೆಯಲ್ಲಿ, ವ್ಯಾಸಂಗದಲ್ಲಿ ವಿಶೇಷಾಸಕ್ತಿಯಿದ್ದ

ಅವರು ಮನಸ್ಸು ಮಾಡಿದ್ದರೆ, ಯಾವುದಾದರೂ ವಿಶ್ವವಿದ್ಯಾನಿಲಯದ ಉನ್ನತ ಶ್ರೇಣಿಯ ಪ್ರಾಧ್ಯಾಪಕರಾಗಬಹುದಿತ್ತು. ಅವರ ಸಮಕಾಲೀನರೂ, ಆತ್ಮೀಯರೂ ಆದ ಶ್ರೀ ಎಸ್.ಎಂ. ಕೃಷ್ಣ ಮತ್ತು ಶ್ರೀ ತುಳಸೀ ದಾಸಪ್ಪನವರಿಗೂ ಈ ಮಾತು ಅನ್ವಯವಾಗುತ್ತದೆ.

ರಾಜಶೇಖರನ್‌ರ ಬಂಧು-ಮಿತ್ರ ಪರಿವಾರದ ಸ್ಥಾನಮಾನ ಸಂಪರ್ಕ ಸಾಧನಗಳನ್ನು ನೋಡಿದಾಗ ಅವರು ಇಚ್ಛಿಸಿದ್ದರೆ ಸರ್ಕಾರದಲ್ಲಿ ದೊಡ್ಡ ಅಧಿಕಾರಿಯಾಗಿ ವಿರಾಜಿಸಬಹುದಿತ್ತು. ಅದೂ ಬೇಡ, ಷಡ್ಯಂತ್ರವನ್ನೋ ಚತುರೋಪಾಯಗಳನ್ನೋ ಬಳಸಿ ಮಂತ್ರಿ ಪದವಿಯನ್ನು ಗಿಟ್ಟಿಸಿಕೊಳ್ಳಬಹುದಿತ್ತು. ಸಿಗ್ಗಿಗ್ಗಗಳನ್ನು ಮರೆತು ಮುನ್ನುಗ್ಗುವ, ಮೇಲೆ ಬೀಳುವ ಅಥವಾ ಅಂಗಲಾಚುವ, ಲಾಬಿ ಮಾಡುವ ಚಾಳಿ ಅವರ ಸ್ವಭಾವಕ್ಕೆ ಹೊರಗು. ಈ ಎಲ್ಲ ಆಮಿಷಗಳಿಂದ ಅವರು ದೂರವಿರುವಂತೆ ಕಾಣುತ್ತದೆ.

ಸ್ನೇಹಶೀಲ ರಾಜಶೇಖರನ್‌ರ ಬಂಡವಾಳವೂ ಅಹುದು. ಅವರ ಮಿತ್ರಸಮೂಹ ದೊಡ್ಡದು. ಅವರು ಕಾಂಗ್ರೆಸ್ ಪಕ್ಷದ ನಿಷ್ಠಾನುಯಾಯಿಯಾದರೂ ಎಲ್ಲ ಪಕ್ಷಗಳಲ್ಲಿಯೂ ಅವರಿಗೆ ವಿಶ್ವಾಸಪಾತ್ರರಾದ ಮಿತ್ರರಿದ್ದಾರೆ. ಅವರ ಮಂದಹಾಸ, ಮೃದು ವಚನ, ನೇರ ಸರಳ ನಡೆ ಅಪಾರ ಮಿತ್ರವೃಂದದ ಆಕರ್ಷಣೆಗೆ ಕಾರಣವಾಗಿವೆ. 'ಮೃದು ವಚನವೆ ಸಕಲ ಜಪಂಗಳಯ್ಯ, ಮೃದು ವಚನವೆ ಸಕಲ ತಪಂಗಳಯ್ಯ, ಸದುವಿನಯವೆ ಸದಾಶಿವನ ಒಲುಮೆಯಯ್ಯಾ' ಎಂಬ ಬಸವೇಶ್ವರರ ನಲ್ನುಡಿಯನ್ನವರು ಬದುಕಿನಲ್ಲಿ ಮಾಡಿ ತೋರಿಸುವ ಸದಾಚಾರ ಸಂಪನ್ನರು.

ಅವರ ಈ ಸದಾಚಾರ ಸಂಪನ್ನತೆಯೇ ಅವರ ಜನಪ್ರಿಯತೆಗೆ ಹಾಗೂ ರಾಜಕೀಯ ಕ್ಷೇತ್ರದ ಅವರ ಉನ್ನತಿಗೆ ಕಾರಣವಾಗಿದೆ. ಆ ಉನ್ನತಿಯಾದರೂ ಅವರಿಗೆ ಪುಕ್ಕಟೆಯಾಗಿ ಅಥವಾ ಸಂಬಂಧದ ಮೆಹನತ್ತಿನಿಂದ ದೊರೆತದ್ದಲ್ಲ. ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿಯೇ, ಅಂದರೆ ೧೯೪೨ರಿಂದ ಅವರು ಯುವ ಕಾಂಗ್ರೆಸ್ಸಿನ ಸಕ್ರಿಯ ಸದಸ್ಯರಾಗಿ, ಸ್ವಾತಂತ್ರ್ಯಾಂದೋಲನದಲ್ಲಿ ಭಾಗವಹಿಸುತ್ತಾರೆ. ಮೈಸೂರು ಪ್ರಾಂತ್ಯ ಸ್ವತಂತ್ರ ಇಂಡಿಯಾದಲ್ಲಿ ವಿಲಯನಗೊಳ್ಳಬೇಕೆಂಬ 'ಮೈಸೂರು ಚಲೋ' ಚಳುವಳಿಯಲ್ಲಿ ಭಾಗವಹಿಸಿದ್ದುಂಟು. ದೆಹಲಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ, ಅಲ್ಲಿಯ ಯುವ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು (೧೯೫೫-೫೬). ತಾಲ್ಲೂಕು, ಜಿಲ್ಲಾ ಹಾಗೂ ರಾಜ್ಯಮಟ್ಟದ ಯುವ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಕಾಂಗ್ರೆಸ್ ಪ್ರಣಾಳಿಕೆಯನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿಯಾದರು. ೧೯೬೭ರಲ್ಲಿ ಕನಕಪುರ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಲೋಕಸಭೆಗೆ ಸ್ಪರ್ಧಿಸಿ, ವಿಜಯಶ್ರೀಯನ್ನು ಧರಿಸುತ್ತಾರೆ. ಯುವಜನ ಇಲಾಖೆಯ ಅಗತ್ಯವನ್ನು ಮನಗಂಡು, ಕರ್ನಾಟಕ ಸರ್ಕಾರದಲ್ಲಿ ಅದು ಸ್ಥಾಪನೆಗೊಳ್ಳುವಂತೆ ಪ್ರೇರಿಸಿದವರು ಇವರು. ಕಾಂಗ್ರೆಸ್ ಇಬ್ಭಾಗವಾದಾಗ, ಮೂಲ ಕಾಂಗ್ರೆಸ್‌ನಲ್ಲುಳಿದು, ಅದರ ಅಖಿಲ ಭಾರತ ಮಟ್ಟದ ಸಮಿತಿಯ ಸದಸ್ಯರಾಗಿ, ಅದರ ಸಂಘಟನೆಗೆ ಶಕ್ತಿಮೀರಿ ದುಡಿಯುತ್ತಾರೆ. ಅದು ಜನತಾಪಕ್ಷದಲ್ಲಿ ವಿಲೀನಗೊಂಡ ನಂತರ ಅದರ ರಾಷ್ಟ್ರೀಯ ಸಮಿತಿಯ ಸದಸ್ಯರಾಗುತ್ತಾರೆ.

ಜನತಾಪಕ್ಷದ ಪರವಾಗಿ ೧೯೭೮ರಲ್ಲಿ ಉತ್ತರಹಳ್ಳಿ ಕ್ಷೇತ್ರದಿಂದ ಕರ್ನಾಟಕದ ಶಾಸನಸಭೆಗೆ ಸ್ಪರ್ಧಿಸಿ ವಿಜಯ ಗಳಿಸುತ್ತಾರೆ. ಜನತಾಪಕ್ಷದ ನೀತಿ ಹಾಗೂ ಕಾರ್ಯಕ್ರಮಗಳು ತಮಗೆ ಹಿಡಿಸಲಿಲ್ಲವಾಗಿ, ೧೯೮೨ರಲ್ಲಿ ಆ ಪಕ್ಷಕ್ಕೆ ರಾಜೀನಾಮೆ ನೀಡಿ, ಕಾಂಗ್ರೆಸ್ (ಐ) ಪಕ್ಷಕ್ಕೆ ಸೇರುತ್ತಾರೆ. ಜನತಾಪಕ್ಷದ ಟಿಕೆಟ್ಟಿನಿಂದ ಶಾಸನಸಭೆಗೆ ಗೆದ್ದಿರಲಾಗಿ, ಅದಕ್ಕೂ ರಾಜೀನಾಮೆ ನೀಡಿದ ತತ್ತ್ವನಿಷ್ಠರವರು. ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ, ಅನಂತರ ಉಪಾಧ್ಯಕ್ಷರಾಗಿ, ಪಕ್ಷ ಸಂಘಟನೆಗಾಗಿ ನಾಡಿನಲ್ಲೆಲ್ಲ ಸುತ್ತಿ, ಜನರ ಮೆಚ್ಚುಗೆಯನ್ನು ಸಂಪಾದಿಸುತ್ತಾರೆ. ೧೯೯೯ರಲ್ಲಿ ಕರ್ನಾಟಕ ಶಾಸನಸಭೆಯ ಮೇಲ್ಮನೆಗೆ ಕೆಳಮನೆಯ ಕ್ಷೇತ್ರದಿಂದ ಆಯ್ಕೆಯಾಗುತ್ತಾರೆ. ೨೦೦೨ರಲ್ಲಿ ಕರ್ನಾಟಕ ಶಾಸನಸಭೆಯ ಕ್ಷೇತ್ರದಿಂದ ರಾಜ್ಯಸಭೆಯ ಸದಸ್ಯರಾಗಿ ಚುನಾವಣೆಗೊಳ್ಳುತ್ತಾರೆ. ಹೀಗೆ ರಾಜ್ಯ-ರಾಷ್ಟ್ರದ ಎರಡೂ ಶಾಸನ ಮತ್ತು ಸಂಸದ್ ಸಭೆಗಳ ಸದಸ್ಯರಾಗುವ ಅಪೂರ್ವ ಭಾಗ್ಯಕ್ಕೆ ಪಾತ್ರರಾದ ವಿರಳ ಭಾರತೀಯರಲ್ಲಿ ರಾಜಶೇಖರನ್ ಒಬ್ಬರು. ಶಾಸಕರಾಗಿ, ಸಂಸದರಾಗಿ, ಕೇಂದ್ರ ರೇಷ್ಮೆ ಮಂಡಳಿ, ಹಕ್ಕುಬಾಧ್ಯತಾ ಸಮಿತಿ, ಸಾರ್ವಜನಿಕ ಲೆಕ್ಕಪತ್ರ ಸಮಿತಿ, ಇವೇ ಮೊದಲಾದ ಹಲವು ಸಮಿತಿಗಳಲ್ಲಿ ಕೆಲಸ ಮಾಡಿದ ಅಪಾರ ಅನುಭವ ಅವರಿಗಿದೆ.

ಶಾಸಕರಾಗಿ, ಸಂಸದರಾಗಿ, ರಾಜಕಾರಣಿಯಾಗಿ ರಾಜಶೇಖರ್ ಸಾಧಿಸಿದ ಸಿದ್ಧಿಗಿಂತ, ರಾಜಕೀಯೇತರ ಸಮಾಜ ಸೇವೆಯಲ್ಲಿ, ಕೃಷಿ ಕ್ಷೇತ್ರದಲ್ಲಿ ಸಾಧಿಸಿದ ಸಿದ್ಧಿ ಮಿಗಿಲಾದದ್ದು. ಮೌಲಿಕವಾದದ್ದು. ಆ ಕ್ಷೇತ್ರದಲ್ಲವರು ತೋರಿಸಿದ ಪಾದ್ರಿಯ ಶ್ರದ್ಧೆ, ಆ ಕ್ಷೇತ್ರದ ವಿವಿಧ ಸ್ತರಗಳಲ್ಲಿ ಅವರು ವಿದ್ಯಾರ್ಥಿಯಂತೆ ಮಾಡಿದ ಅಧ್ಯಯನ ಪ್ರಯೋಗಗಳು, ದೀರ್ಘಕಾಲೀನ ಅಧ್ಯಯನದಿಂದ ಅವರು ಗಳಿಸಿದ ಅನುಭವ ಪಕ್ವತೆ ಅಸಾಧಾರಣವಾದುವು. ಅವರ ಈ ಎಲ್ಲ ಸಾಧನೆ ಸಿದ್ಧಿಗಳನ್ನು ನೋಡಿದಾಗ, ಅವರು ಯಾವುದಾದರೂ ಕೃಷಿ ವಿಶ್ವವಿದ್ಯಾನಿಲಯದ ತಜ್ಞಮಂಡಲಿಯಲ್ಲಿ ಖಾಯಮ್ಮಾಗಿ ಇರಬೇಕೆನಿಸುತ್ತದೆ. ಭಾರತೀಯ ಯುವ ಕೃಷಿಕ ಮಂಡಲಿಯ ರಾಷ್ಟ್ರೀಯ ಕಾರ್ಯಸಮಿತಿಯ ಸದಸ್ಯ, ಮೈಸೂರು ರಾಜ್ಯದ ಯುವ ಕೃಷಿಕ ಸಂಘದ ಉಪಾಧ್ಯಕ್ಷ, ಮೈಸೂರು ಪ್ರದೇಶದ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿ, ಮೈಸೂರು ರಾಜ್ಯದ ಯುವ ಕೃಷಿಕ ತರಬೇತಿ ಕೇಂದ್ರದ ನಿರ್ದೇಶಕ, ಭಾರತ ಕೃಷಿಕ ಸಮಾಜದ ಸ್ಥಾಯಿ ಸಮಿತಿಯ ಸದಸ್ಯ, ಭಾರತೀಯ ವ್ಯವಸಾಯ ಸಂಶೋಧನಾ ಮಂಡಲಿಯ ಸದಸ್ಯ, ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಆಡಳಿತ ಮಂಡಳಿಯ ಸದಸ್ಯ - ಹೀಗೆ ಹತ್ತೆಂಟು ಜ್ಞಾನ ವಿಜ್ಞಾನ ವಿಕಾಸ ಸಂಸ್ಥೆಗಳ ನಿರಂತರ ಸಂಪರ್ಕದಿಂದಾಗಿ ಅವರು ಅನುಭವ ಶ್ರೀಮಂತರಾಗಿದ್ದಾರೆ, ಸದಾ ಕ್ರಿಯಾಶೀಲರಾಗಿದ್ದಾರೆ. ಅಂತರರಾಷ್ಟ್ರೀಯ ಯುವ ಮಂಡಳಿಗಳ ಕಾರ್ಯಕ್ರಮಗಳಲ್ಲಿಯೂ ಅವರು ಭಾಗವಹಿಸಿದ್ದಾರೆ.

ಈ ಎಲ್ಲ ವಿಶಿಷ್ಟಾನುಭವಗಳ ಪರಿಣಾಮವೆನ್ನುವಂತೆ, ಸೃಜನಶೀಲತೆಗೆ ಸಾಕ್ಷಿಯೆನ್ನುವಂತೆ ಅವರ ದೂರದೃಷ್ಟಿಯ ಸಂಕೇತವೆನ್ನುವಂತೆ ರಾಜಶೇಖರನ್ ಏಷಿಯಾ ಗ್ರಾಮೀಣಾಭಿವೃದ್ಧಿ

ಸಂಸ್ಥೆಯ ಸಂಸ್ಥಾಪಕರಾಗಿ, ೧೯೭೬ನೆಯ ಇಸವಿಯಿಂದ ಅದನ್ನು ನಡೆಸಿಕೊಂಡು ಬಂದಿದ್ದಾರೆ. ದೀನದಲಿತ ಸ್ತ್ರೀಯರನ್ನು, ಯುವಕರನ್ನು, ಪರಿಸರವನ್ನು ಒಳಗೊಂಡಂತೆ ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಸಂಶೋಧನೆ, ತರಬೇತಿ ಮತ್ತು ವಿಕಾಸ ಯೋಜನೆಗಳನ್ನು ರೂಪಿಸುವುದೇ ಆ ಸಂಸ್ಥೆಯ ಧ್ಯೇಯೋದ್ದೇಶ. ತಾವೇ ಆ ಸಂಸ್ಥೆಯ ನಿರ್ದೇಶಕರೂ ಆಗಿ, ತತ್ಸದೃಶದ ವಿದೇಶೀಯ ಸಂಸ್ಥೆಗಳೊಡನೆ ಪರಿಣಾಮಕಾರೀ ಸಂಬಂಧವನ್ನಿಟ್ಟುಕೊಂಡು, ಅನೇಕ ಕಾರ್ಯಕ್ರಮಗಳನ್ನು ರೂಪಿಸಿದ್ದು, ಯೋಜನೆಗಳನ್ನು ತಯಾರಿಸಿದ್ದು ಅವರ ಸೃಜನಶೀಲ ಸಾಮರ್ಥ್ಯಕ್ಕೂ ಕ್ರಿಯಾಶಕ್ತಿಗೂ, ಜೀವಂತ ನಿದರ್ಶನಗಳಾಗಿವೆ. ಕೇವಲ ಬೆರಳೆಣಿಕೆಯ ನಾಯಕರನ್ನು ಹೊರತುಪಡಿಸಿದರೆ, ರಾಜಕಾರಣಿಯಾಗಿಯೂ ಅಧಿಕಾರ ಮೋಹಿಯಾಗದೆ, ರಾಷ್ಟ್ರಕ್ಷೇಮ ಕಾತರತೆಯನ್ನು ತಲೆಗಂಟಿಸಿಕೊಂಡು ದುಡಿಯುವ ದೇಶಾಭಿಮಾನಿಗಳನ್ನು ನಾನು ಕಂಡಿಲ್ಲ. ರಾಜಕಾರಣಿಗಳೆಲ್ಲರು ರಾಜಶೇಖರನ್‌ರಂಥ ಸೇವಾಧುರೀಣರಾಗಿದ್ದರೆ, ದೇಶದ ಯಾವ ಭಾಗವೂ ಹಿಂದುಳಿದಿರುತ್ತಿರಲಿಲ್ಲವೆಂದು ಸ್ಪಷ್ಟಪಡಿಸಬೇಕಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ತ್ಯಾಗಶೀಲರೂ ಸೇವಾನಿಷ್ಠರೂ ಆದ ಯುವಕರು ಮಾತ್ರವೇ ರಾಜಕೀಯ ಕ್ಷೇತ್ರಕ್ಕೆ ಕಾಲಿಡುತ್ತಿದ್ದರೆ, ಸ್ವಾತಂತ್ರ್ಯಾನಂತರ ಸ್ವಾರ್ಥಸಾಧನೆಗಾಗಿ, ಅಧಿಕಾರಕ್ಕಾಗಿ, ಹಲವು ಆಮಿಷಗಳಿಗಾಗಿ, ನಿರುದ್ಯೋಗ ನಿವಾರಣೆಗಾಗಿ ಆ ಕ್ಷೇತ್ರವನ್ನು ಪ್ರವೇಶಿಸುವ ಯುವಕರೇ ಹಲವರು. ಈ ಹಿನ್ನೆಲೆಯಲ್ಲಿ ರಾಜಶೇಖರನ್‌ರ ಜೀವನಯಾತ್ರೆಯ ಕಡೆಗೆ ಕಣ್ಣು ಹರಿಸಿದಾಗ, ಅವರು ವಿಶಿಷ್ಟ ಆದರಣೀಯ ವ್ಯಕ್ತಿಯೆಂದು ಧಾರಾಳವಾಗಿ ಶ್ಲಾಘಿಸಬಹುದು.

ಮತ್ತೊಂದು ಆಶ್ಚರ್ಯದ ಸಂಗತಿಯೆಂದರೆ, ಅವರು ಭಾಗವಹಿಸಿದ ಅಂತರರಾಷ್ಟ್ರೀಯ ಸಮ್ಮೇಳನ, ವಿದ್ವತ್ಸಭೆ, ಗೋಷ್ಠಿ, ಉಪನ್ಯಾಸಮಾಲೆ ಮತ್ತು ಕಮ್ಮಟಗಳಿಗೆ ಲೆಕ್ಕವಿಲ್ಲ. ರಾಷ್ಟ್ರದ ಯಾವ ಮಂತ್ರಿಗಾಗಲಿ, ಪ್ರಾಧ್ಯಾಪಕನಿಗಾಗಲಿ ಇಂಥ ಅವಕಾಶಗಳು ಲಭಿಸಿಲ್ಲವೆಂದೇ ತೋರುತ್ತದೆ; ಲಭಿಸಿದ್ದರೆ ವಿರಳಾತಿವಿರಳ ಪುಣ್ಯವಂತರಲ್ಲೊಬ್ಬರೆಂದೇ ಹೇಳಬೇಕಾಗುತ್ತದೆ. ಸಾಮಾನ್ಯವಾಗಿ ರಾಜಶೇಖರನ್ ಭಾಗವಹಿಸಿದ ಸಭೆ ಸಮ್ಮೇಳನ ಕಮ್ಮಟಗಳಲ್ಲಿ ಗ್ರಾಮಾಭಿವೃದ್ಧಿ ಯೋಜನೆಗಳು, ಕೃಷಿ ಸಮಸ್ಯೆ ಪ್ರಯೋಗ ಯೋಜನೆಗಳು, ದೀನದಲಿತ ಸ್ತ್ರೀ ಕಲ್ಯಾಣ ಯೋಜನೆಗಳು ಚರ್ಚೆಗೊಳಪಡುತ್ತಿದ್ದುವೆಂಬುದನ್ನು ಸ್ಮರಿಸಿಕೊಳ್ಳಬಹುದಾಗಿದೆ. ಇಂಥ ಸಮ್ಮೇಳನಗಳ ಮೂಲಕ ಅವರು ಆಸ್ಟ್ರೇಲಿಯಾ ಹೊರತಾಗಿ ಜಗತ್ತಿನ ಎಲ್ಲ ಖಂಡಗಳ ಹಲವು ರಾಷ್ಟ್ರಗಳ (ಕೆನ್ಯ, ಸೆನಿಗಾಲ್, ಜಿಂಬಾಬ್ವೆ, ಇರಾಖ್, ಚೀನಾ, ಜಪಾನ್, ಮಲೇಷಿಯಾ, ಥೈಲ್ಯಾಂಡ್, ಇಂಡೋನೇಷಿಯಾ, ಇಟಲಿ, ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್, ಅಮೆರಿಕೆಯ ಸಂಯುಕ್ತ ಸಂಸ್ಥಾನಗಳು, ಕೆನಡ, ಬ್ರೆಜಿಲ್- ಪಟ್ಟಿ ಇನ್ನೂ ದೊಡ್ಡದಾಗಿದೆ) ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ವಿದ್ಯಮಾನಗಳನ್ನು ಆಧುನಿಕ ವೈಜ್ಞಾನಿಕ ತಾಂತ್ರಿಕ ಆವಿಷ್ಕಾರಗಳನ್ನು ನೋಡುವ, ಅನುಭವ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುವ ಅಪೂರ್ವ ಅವಕಾಶ ಅವರಿಗೆ ದೊರಕಿದೆ. ಇವೆಲ್ಲವೂ ಅವರ ಸಾಧನೆಯ ಫಲಗಳೆಂದೇ ತಿಳಿಯಬಹುದು.

ರಾಜಶೇಖರನ್ ವಿದೇಶಯಾತ್ರೆ ಕೇವಲ ಮನರಂಜನೆಯ ವಿಹಾರಯಾತ್ರೆಯಾಗಿಲ್ಲ. ಅವರು ಸಭೆ ಸಮ್ಮೇಳನಗಳಿಗೆ ಕೈ ಬೀಸಿಕೊಂಡು, ಖಾಲಿ ಮಸ್ತಕದಿಂದ ಹೋದವರಲ್ಲ, ನುರಿತ ಪ್ರಾಧ್ಯಾಪಕರಂತೆ ಅಲ್ಲಿ ಚರ್ಚಿತವಾಗುವ ವಿಷಯಗಳ ಬಗ್ಗೆ ಅಧ್ಯಯನ ಚಿಂತನ ಮಂಥನಗಳನ್ನು ನಡೆಸಿ, ಟಿಪ್ಪಣಿಗಳನ್ನು ಭಾಷಣಗಳನ್ನು ಸಿದ್ಧಪಡಿಸಿಕೊಂಡು ಹೋಗುವುದೇ ಅವರ ಪರಿಪಾಠ. ಸುಮಾರು ಇಪ್ಪತ್ತೈದು ಮೌಲಿಕ ಲೇಖನ ಭಾಷಣಗಳು ಮತ್ತು ಗ್ರಂಥಗಳು ವಿಚಾರ ಪರಿಪ್ಲುತವಾಗಿ, ಆಯಾಯು ಕ್ಷೇತ್ರಗಳಲ್ಲಿ ಕೆಲಸ ಮಾಡುವವರಿಗೆ ಮಾರ್ಗದರ್ಶಿಗಳಾಗಿವೆ. 'ಚೀನಾ ಪ್ರವಾಸದ ಅನುಭವಗಳು' ಎಂಬ ಅವರ ಗ್ರಂಥ ಅಚ್ಚಿನಲ್ಲಿದೆ. ಪ್ರವಾಸ ಸಾಹಿತ್ಯಕ್ಕೆ ಅದೊಂದು ಅಪೂರ್ವ ಕೊಡುಗೆಯಾಗುತ್ತದೆಂದು ಭಾವಿಸಬಹುದಾಗಿದೆ.

ರಾಜಶೇಖರನ್ ಸ್ಥಾಪಿಸಿದ ಮತ್ತೊಂದು ಸಂಸ್ಥೆಯೆಂದರೆ ಮೈಸೂರು ಪುನರ್ವಸತಿ ಮತ್ತು ಅಭಿವೃದ್ಧಿ ನಿಗಮ (ಮೈರಾಡ : Mysore Resettlement and Development Agency). ಅವರು ಅದರ ಅಧ್ಯಕ್ಷರೂ ಹೌದು. ಸ್ಥಳೀಯರ ಪಾಲುದಾರಿಕೆಯೊಂದಿಗೆ ಹಣ ವ್ಯವಹಾರ, ಮಾನವಶಕ್ತಿ ಮತ್ತು ಜಲಾನಯನ ಭೂಮಿ ಇವುಗಳ ಅಭಿವೃದ್ಧಿಯೊಡನೆ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುವುದೇ ಅವರ ಉದ್ದೇಶ.

ಇಷ್ಟೇ ಅಲ್ಲ, ಇನ್ನೂ ಹಲವು ಸಂಸ್ಥೆಗಳು ರಾಜಶೇಖರರ ನಿಸ್ವಾರ್ಥ ಸೇವೆಯ ಸಾಧನ ಕೇಂದ್ರಗಳಾಗಿವೆ. ಸದ್ದುಗದ್ದಲವಿಲ್ಲದೆ, ಪ್ರದರ್ಶನ ಪ್ರಚಾರಗಳ ಆಮಿಷಕ್ಕೊಳಗಾಗದೆ, ಕೀರ್ತಿಶನಿಯ ಬೆನ್ನು ಹತ್ತದೆ, ಆತ್ಮಗೌರವವನ್ನುಳಿಸಿಕೊಂಡು, ತಮ್ಮ ಪಾಲಿಗೆ ಬಂದದ್ದನ್ನು ಪ್ರಸಾದವೆಂದು ಸ್ವೀಕರಿಸುತ್ತ, ಕಾಯಕ ಮತ್ತು ಜನಸೇವೆಯೇ ಲಿಂಗಾಂಗ ಸಾಮರಸ್ಯಕ್ಕೆ ಸೇತುವೆಯೆಂದು ಬಗೆಯುತ್ತ, ರಾಜಶೇಖರನ್ ತಮ್ಮ ಆಯುಷ್ಯದ ೭೫ (ಜನನ, ೧೯೨೮) ವಸಂತಗಳನ್ನು ಸಾರ್ಥಕವಾಗಿ, ಶಿವ ಮೆಚ್ಚುವಂತೆ, ದಾಟಿದ್ದಾರೆ. ಪರೋಪಕಾರ ಬುದ್ಧಿ, ಸಮಾಜಸೇವೆ, ಗ್ರಾಮೋದ್ಧಾರ ಕಾತರತೆ, ವಿನಯ, ನಿಷ್ಕಪಟ, ನಿರ್ಮಾತ್ಸರ್ಯಗಳ ಕೂಡಲಸಂಗಮ ಅವರ ಹೃದಯ ಚಿತ್ತಗಳು. ಸ್ನೇಹಪ್ರೇಮಗಳೇ ಅವರ ಜೀವಧಾತು. ಅವರು ಅನುಗಾಲ ಇದೇ ರೀತಿ, ಇನ್ನೂ ಅತಿಶಯವಾಗಿ ದೇಶಕ್ಕೆ ಸೇವೆ ಸಲ್ಲಿಸುತ್ತ, ಇನ್ನೂ ಮಿಗಿಲಾದ ಸ್ಥಾನಮಾನಗಳನ್ನು ಯಶಸ್ಸನ್ನು ಪದವಿ ಪ್ರಶಸ್ತಿಗಳನ್ನು ಪಡೆಯುತ್ತ, ಅವರ ದೇಹಾತ್ಮಗಳು ಲೋಕ ಕಲ್ಯಾಣಕ್ಕಾಗಿ ಮುಡಿಪಾಗಿರಲಾಗಿ, ದೀರ್ಘಾಯುಷಿಯಾಗಿ ಆರೋಗ್ಯದೃಢಕಾಯರಾಗಿ, ಸದಾ ವಿಕಾರೋನ್ಮುಖರಾಗಿ, ಶಿವನೊಪ್ಪುವ ಸುಂದರ ಜೀವನವನ್ನು ನಡೆಸಲೆಂದು ನಾಡಿನ ಇತರ ಸಜ್ಜನರೊಡನೆ ನಾನೂ ಹಾರೈಸುತ್ತೇನೆ.

***

# ಸೌಮ್ಯ ವ್ಯಕ್ತಿತ್ವ

**ರಾಮಕೃಷ್ಣ ಹೆಗಡೆ**

ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ಎಪ್ಪತ್ತೈದು ವರ್ಷ ಎಂದು ತಿಳಿದು ತುಂಬಾ ಹರ್ಷಿತನಾಗಿದ್ದೇನೆ. ಸುಮಾರು ೪೫ ವರ್ಷಗಳಿಂದ ರಾಜಶೇಖರನ್‌ರವರನ್ನು ನೋಡುತ್ತಾ ಬಂದಿದ್ದೇನೆ. ಹೆಚ್ಚು ಕಡಿಮೆ ನಾವೆಲ್ಲಾ ಸಮಕಾಲೀನರು. ಮಹಾತ್ಮಗಾಂಧಿ, ಆಚಾರ್ಯ ವಿನೋಬಾ, ಜಯಪ್ರಕಾಶ್ ನಾರಾಯಣ್, ನಿಜಲಿಂಗಪ್ಪ ಮುಂತಾದವರ ನೆರಳಿನಲ್ಲಿ ಬೆಳೆದು ಅವರ ಆದರ್ಶಗಳನ್ನು ಪಾಲಿಸಿದವರು. ನನ್ನಂತೆ ರಾಜಶೇಖರನ್ ಸಹ ಉತ್ತರ ಭಾರತದಲ್ಲಿ ಕಾನೂನು ವ್ಯಾಸಂಗ ಮಾಡಿದರು. ನಾನು ವಾರ್ಧಾ ಆಶ್ರಮದಲ್ಲಿ ಬಾಲ್ಯ ಕಳೆದಿದ್ದರೆ, ರಾಜಶೇಖರನ್‌ರವರು ಯೌವನದಲ್ಲಿ ಭೂದಾನ ಚಳುವಳಿಗೆ ತಮ್ಮನ್ನು ತೆತ್ತುಕೊಂಡಿದ್ದರು. ನಿಜಲಿಂಗಪ್ಪನವರ ಅಳಿಯಂದಿರಾದ ಮೇಲೆ ಅವರ ಮತ್ತು ನನ್ನ ಸಂಪರ್ಕ ಮತ್ತಷ್ಟು ಹೆಚ್ಚಾಯಿತು. ೧೯೬೨ ರಿಂದ ೭೦ ರ ಅವಧಿಯಲ್ಲಿ ಆಗಿನ ಸರ್ಕಾರ ಸಾಧಿಸಿದ ಅನೇಕ ಸಾಧನೆಗಳಲ್ಲಿ ರಾಜಶೇಖರನ್‌ರವರ ಚಿಂತನೆಯೂ ಕಾರ್ಯಾನುಷ್ಠಾನ ಆಗಿದೆ. ಉದಾಹರಣೆಗೆ ಹೇಳುವುದಾದರೆ, ಯುವಜನ ಸೇವಾ ಇಲಾಖೆ ಇಡೀ ರಾಷ್ಟ್ರದಲ್ಲಿ ಮೊಟ್ಟಮೊದಲು ಮೈಸೂರು ರಾಜ್ಯದಲ್ಲಿ ಪ್ರಾರಂಭವಾಯಿತು. ನಾನೇ ಮೊದಲ ಯುವಜನ ಸೇವೆಯ ಮಂತ್ರಿ. ಯುವಜನ ಸೇವಾ ಇಲಾಖೆ ಪ್ರಾರಂಭವಾಗಲು ರಾಜಶೇಖರನ್‌ರವರ ಒತ್ತಾಯ ಸಹಾಯಕವಾಗಿತ್ತು. ಕರ್ನಾಟಕ ಕೃಷಿಕ ಸಮಾಜದ ಬೆಳವಣಿಗೆಯಲ್ಲಿ ಅವರದು ಹಿರಿದಾದ ಪಾತ್ರ. ಮಂಚನಬೆಲೆ ನೀರಾವರಿ ಯೋಜನೆ ಆಗಬಹುದು, ಇಗ್ಗಲೂರು ಏತ ನೀರಾವರಿ ಯೋಜನೆ ಆಗಿರಬಹುದು, ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಆಗಿರಬಹುದು, ಇಲ್ಲೆಲ್ಲಾ ರಾಜಶೇಖರನ್‌ರವರ ಸೌಮ್ಯ ವ್ಯಕ್ತಿತ್ವ ಗೋಚರವಾಗುತ್ತದೆ. ೧೯೮೮ರಲ್ಲಿ ಅವರು ನಾವು ನಂಬಿದ್ದ ರಾಜಕೀಯ ಪಕ್ಷವನ್ನು ತೊರೆದು ಕಾಂಗ್ರೆಸ್‌ಗೆ ಹೋದರು. ಆದರೂ ನಮ್ಮ ಸ್ನೇಹ-ಸಂಬಂಧದಲ್ಲಿ ಯಾವುದೇ ಕುಂದು ಬರಲಿಲ್ಲ. ಜನರ ಅಭಿವೃದ್ಧಿ ಕೆಲಸಗಳನ್ನು ಅವರು ಸದಾ ನನ್ನೊಡನೆ ಹಂಚಿಕೊಳ್ಳುತ್ತಿದ್ದರು. ನಮ್ಮ ಜನತಾ ಪಕ್ಷ ಸರ್ಕಾರ ಜನಾಂದೋಲನವಾಗಿ, ಕುಡಿಯುವ ನೀರಿನ ಯೋಜನೆಯನ್ನು ಕೈಗೆತ್ತಿಕೊಳ್ಳುವ ದಿಸೆಯಲ್ಲಿ ರಾಜಶೇಖರನ್‌ರವರು ಪ್ರೇರಕರಾಗಿದ್ದರು. ಅವರು

ಈ ಹಿಂದೆ ಕಾಂಗ್ರೆ ಸರ್ಕಾರಕ್ಕೆ ಈ ಬಗ್ಗೆ ಕೊಟ್ಟ ವರದಿಯನ್ನು ನಮ್ಮ ಸರ್ಕಾರಕ್ಕೂ ಕೊಟ್ಟು ಅದರ ಮಹತ್ವವನ್ನು ನನಗೆ ಮತ್ತು ನಜೀರ್‌ಸಾಬ್‌ರಿಗೆ ಒತ್ತಿ ಹೇಳಿದ್ದರು.

ಎಂ.ವಿ. ರಾಜಶೇಖರನ್‌ರವರು ನಿಜಲಿಂಗಪ್ಪನವರಂತೆ ಕರ್ನಾಟಕದ ಪಕ್ಷಾತೀತ ರಾಜಕಾರಣಿ. ಅವರಿಗೆ ಎಲ್ಲಾ ಪಕ್ಷಗಳಲ್ಲೂ ಮಿತ್ರರಿದ್ದಾರೆ. ಅವರನ್ನು ಅಜಾತಶತ್ರು ಎಂದರೆ ತಪ್ಪಿಲ್ಲ. ತೀರ ಸಂಕೋಚ ಸ್ವಭಾವದ ರಾಜಶೇಖರನ್ ಅಧಿಕಾರಕ್ಕಾಗಿ ಬಾಯಿ ಬಿಡುತ್ತಾ, ಅವರಿವರ ಕಾಲನ್ನು ಹಿಡಿದವರಲ್ಲ. ಅದಕ್ಕಾಗಿ ಆಕಾಶ-ಭೂಮಿಯನ್ನು ಒಂದು ಮಾಡಿದವರಲ್ಲ. ಸ್ವಾಭಿಮಾನದ ರಾಜಶೇಖರನ್ ನಮ್ಮ ಸಾರ್ವಜನಿಕ ಜೀವನದಲ್ಲಿ ಸದಾ ಎತ್ತರದ ಸ್ಥಾನದಲ್ಲಿ ಇರುತ್ತಾರೆ. ಜನತೆ ಅವರ ವಿದ್ವತ್ತು, ಅನುಭವ ಹಾಗೂ ನಿಸ್ವಾರ್ಥ ದುಡಿಮೆಯನ್ನು ಸದಾ ಬಳಸಿಕೊಳ್ಳಲೆಂದು ಆಶಿಸುತ್ತೇನೆ.

***

# ವಿರೋಧಿಗಳೂ ಮೆಚ್ಚುವ ಸಜ್ಜನರು

**ಡಾ. ಯು.ಆರ್. ಅನಂತಮೂರ್ತಿ**

ಶ್ರೀ ತುಳಸಿದಾಸಪ್ಪ ಮತ್ತು ಶ್ರೀ ರಾಜಶೇಖರನ್ ಇಬ್ಬರೂ ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗ ನನ್ನ ಸಮಕಾಲೀನರು. ಶುಭ್ರವಾದ ಬಿಳಿ ಖಾದಿ ಬಟ್ಟೆಯಲ್ಲಿ ಅಶ್ವಿನಿಕುಮಾರರಂತೆ ಕಾಣುತ್ತಿದ್ದ ಇವರು ನಮ್ಮ ಕಾಲದ ಮಹತ್ವದ ರಾಜಕೀಯ ನಾಯಕರಾಗುತ್ತಾರೆಂದು ನಾವೆಲ್ಲ ಗುರುತಿಸಿ ತುಂಬ ಅಭಿಮಾನದಿಂದ ಅವರನ್ನು ದೂರದಿಂದಲೇ ಮೆಚ್ಚಿಕೊಂಡಿದ್ದೆವು. ಇಬ್ಬರೂ ಅವರ ರಾಜಕೀಯ ವಿರೋಧಿಗಳೂ ಮೆಚ್ಚುವ ಸಜ್ಜನರಾಗಿ ಬೆಳೆದರು. ಆದರೆ ಅಧಿಕಾರದ ತುದಿಗೇರಿ ಮೆರೆಯಲಿಲ್ಲ - ಜೊತೆಗೆ ಭ್ರಷ್ಟರೂ ಆಗಲಿಲ್ಲ. ಶ್ರೀ ರಾಜಶೇಖರನ್ ಏನಾದರೂ ಆಗಬಹುದಿತ್ತು. ಆದರೆ ಅವರ ಸಂಕೋಚ ಸ್ವಭಾವ, ದಾಕ್ಷಿಣ್ಯ, ನಾಚುವ ಗುಣ ಅವರನ್ನು ಹಿಂದಕ್ಕೆಳೆದಿರಬೇಕು. ನಾವೇನೂ ಹೀಗಾಯಿತೆಂದು ಬೇಸರಪಡಬೇಕಿಲ್ಲ. ನಮ್ಮ ದೇಶ ಈಗಿರುವ ದುಸ್ಥಿತಿಯಲ್ಲೇ ಮುಂದುವರಿದದ್ದಾದರೆ ದೊಡ್ಡದೊಂದು ಆಪತ್ತು ಎದುರಾಗಬಹುದು. ಆಗ ಜನಸಮುದಾಯ ಸಾರ್ವಜನಿಕ ಕ್ಷೇತ್ರದಲ್ಲಿ ತಮ್ಮ ಒಳಗಿನ ದೀಪವನ್ನು ಸಣ್ಣದಾಗಿ ಉರಿಸಿಕೊಂಡು ಉಳಿಸಿಕೊಂಡಿರುವ ಧೀರರನ್ನು ಧೀಮಂತರನ್ನು ಹುಡುಕಿ ಗುರುತಿಸುತ್ತಾರೆ. ಇದೊಂದು ಭರವಸೆ. ಈ ಭರವಸೆಯೂ ಇಲ್ಲದೆ ನಾವು ಬದುಕಿ ಉಳಿಯುವುದು ಹೇಗೆ?

ಶ್ರೀ ರಾಜಶೇಖರನ್ ನಮ್ಮೆಲ್ಲರ ಆಸೆಗಳನ್ನು ಪೂರೈಸುವಂತೆ ಆರೋಗ್ಯವಾಗಿ, ಚೈತನ್ಯಶೀಲರಾಗಿ ಕಾದಿರಬೇಕೆಂಬುದು ನನ್ನ ಆಸೆ.

☼☼☼

# ಉನ್ನತ ಹುದ್ದೆಗಳು ದೊರೆಯಲಿ

ಎಸ್.ಆರ್. ಬೊಮ್ಮಾಯಿ

ಸಂಸ್ಥಾ ಕಾಂಗ್ರೆಸ್ ಜನತಾಪಕ್ಷದಲ್ಲಿ ಅಧಿಕೃತವಾಗಿ ವಿಲೀನವಾದಾಗ ಶ್ರೀ ಎಂ.ವಿ.ರಾಜಶೇಖರನ್ ಜನತಾಪಕ್ಷವನ್ನು ಸೇರಿಕೊಂಡರಾದರೂ ಅವರು ಬಹುದಿನಗಳವರೆಗೆ ಆ ಪಕ್ಷದಲ್ಲಿ ಉಳಿಯಲಿಲ್ಲ. ಒಂದು ವೇಳೆ ಅವರು ಜನತಾಪಕ್ಷದಲ್ಲಿ ಉಳಿದದ್ದೇ ಆಗಿದ್ದರೆ ಅವರು ಮುಖ್ಯಮಂತ್ರಿಯಾಗಿ ಯಾದರೂ, ಕೊನೆಯ ಪಕ್ಷ ಸಚಿವ ಸಂಪುಟದ ಮಹತ್ವದ ಖಾತೆಯ ಸಚಿವರಾದರೂ ಆಗಿರುತ್ತಿದ್ದರು. ಒಬ್ಬ ಜನಪರ, ಸಜ್ಜನ, ಸ್ವಾಭಿಮಾನಿ ಸಾರ್ವಜನಿಕ ನಾಯಕರಾದ ಅವರನ್ನು ಅವರಿರುವ ಪಕ್ಷವಾಗಲೀ ಅಥವಾ ಅವರಿದ್ದ ಪಕ್ಷವಾಗಲೀ ಸಮರ್ಥವಾಗಿ ಗುರುತಿಸಲಿಲ್ಲ. ಕರ್ನಾಟಕದ ಮುತ್ಸದ್ಧಿ ಹಿರಿಯ ಅನುಭವಿ ರಾಜಕಾರಣಿಗಳಲ್ಲಿ ಅವರೊಬ್ಬರಾಗಿದ್ದಾರೆ. ತತ್ವಬದ್ಧತೆ ಯಿಂದ, ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ನಿಸ್ವಾರ್ಥ ಮನಸ್ಸಿನಿಂದ ಜನಸೇವೆ ಮಾಡುತ್ತಿರುವ ಅವರದ್ದು ಶ್ಲಾಘನೀಯ ವ್ಯಕ್ತಿತ್ವವೆಂಬುದು ನನ್ನ ಮೊದಲ ಸ್ತರದ ಅನಿಸಿಕೆ.

ಎಂ.ವಿ.ರಾಜಶೇಖರನ್ ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದ ರಾಜಕಾರಣದಲ್ಲಿ ಪ್ರಭಾವೀ ರಾಜಕಾರಣಿಗಳಾಗಿದ್ದ ದಿ.ಎಸ್. ನಿಜಲಿಂಗಪ್ಪ ನವರ ಅಳಿಯಂದಿರಾಗಿದ್ದರೂ ಅದರ ಉಪಯೋಗ ಪಡೆದುಕೊಳ್ಳದೆ ಅತ್ಯಂತ ಸ್ವಾಭಿಮಾನದಿಂದ ತಮ್ಮ ವ್ಯಕ್ತಿತ್ವವನ್ನು ವಿಸ್ತಾರ ಮಾಡಿಕೊಂಡವರು. ಅವರದ್ದು ನಿರಂತರ ಪರಿಶ್ರಮದ ಬದುಕು. ಬದುಕಿನುದ್ದಕ್ಕೂ ಪ್ರಯತ್ನಗಳು - ಪ್ರಯೋಗಗಳು ಅವರಿಂದ ನಡೆಯಲ್ಪಟ್ಟಿವೆ. ಪ್ರಗತಿಪರ ರೈತರಿಗಾಗಿ ಅವರ ನಿರಂತರ ಹೋರಾಟ ಸ್ಮರಣೀಯವಾದದ್ದು. ಮೂರನೆಯ ಜಾಗತಿಕ ರಾಷ್ಟ್ರಗಳಲ್ಲಿನ ಕೃಷಿಕನ ಸ್ಥಿತಿಗತಿಗಳನ್ನು ಆಳವಾಗಿ ಅಧ್ಯಯನ ಗೈದವರು. ಜಾಗತಿಕ ಪ್ರಥಮ ರಾಷ್ಟ್ರಗಳ ರೈತರಿಗೆ ಭಾರತದ ರೈತರನ್ನು ತುಲನೆ ಮಾಡಿ ಅಧ್ಯಯನ ಮಾಡಿಕೊಂಡು ಬಂದಿದ್ದಾರೆ. ದೇಶವಿದೇಶಗಳನ್ನು ತಿರುಗಿ ಪರಿಶ್ರಮಪಟ್ಟಿದ್ದಾರೆ. ಕೃಷಿ, ಗ್ರಾಮೀಣಾಭಿವೃದ್ಧಿಯಲ್ಲಿ ದೇಶದಲ್ಲೇ ಒಬ್ಬ ನುರಿತ ತಜ್ಞರಾಗಿದ್ದಾರೆ. ಇವರ ಉಪಯೋಗವನ್ನು ಭಾರತ ಪಡೆದು

ಕೊಳ್ಳುತ್ತಿಲ್ಲ. ಆದರೆ ಪ್ರಪಂಚದ ವಿವಿಧ ದೇಶಗಳಲ್ಲಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಯ ಬಗೆಗೆ ನೀತಿಗಳನ್ನು - ಯೋಜನೆಗಳನ್ನು ರೂಪಿಸುವಲ್ಲಿ ಎಂ.ವಿ.ರಾಜಶೇಖರನ್ ಅವರ ಸಲಹೆಯನ್ನು ಪಡೆದುಕೊಳ್ಳುತ್ತಿದ್ದಾರೆ. ಇಂತಹ ಒಬ್ಬ ಅಧ್ಯಯನಶೀಲ ಅಪರೂಪದ ರಾಜಕಾರಣಿಯಾಗಿ ನಮ್ಮ ನಡುವೆ ಸಕ್ರಿಯರಾಗಿರುವುದು ಅತ್ಯಂತ ಸಂತೋಷದ ಸಂಗತಿ.

ರಾಜಶೇಖರನ್ ಅವರು ಅಧಿಕಾರದ ಬೆನ್ನತ್ತಿ ಹೋಗುವ ಅವಕಾಶವಾದಿಗಳಲ್ಲ. ಆ ಕಾರಣದಿಂದಲೇ ಕರ್ನಾಟಕದಲ್ಲಿ ಅವರು ಎರಡನೆಯ ಪಂಕ್ತಿಯ ನಾಯಕರಾಗಿದ್ದಾರೆ. ಅವರಿಗೆ ಸಹಜ ರಾಜಕಾರಣಕ್ಕೆ ಬೇಕಾಗುವ ಕನಿಷ್ಠತಮವಾದ ತಂತ್ರಗಳೂ ತಿಳಿದಿಲ್ಲ. ಹಾಗೆಂದು ನೇರವಾಗಿ ಹೇಳಲಾರೆ. ಆದರೆ ತಿಳಿದಿದ್ದರೂ ಅದನ್ನೂ ಅವರು ಚಲಾವಣೆಗೆ ತರಲಾರರು ಎಂದು ಭರವಸೆಯಿಂದ ಹೇಳಬಯಸುವೆ. ಈ ಎಲ್ಲ ಕಾರಣಗಳಿಂದಾಗಿ ಅವರ ಅನುಭವ ಹಲವಾರು ಅವಕಾಶಗಳಿಂದ ವಂಚಿತವಾಗಿದೆ. ಸಾರ್ವಜನಿಕವಾಗಿ ಬಹಳ ಎತ್ತರ ಬೆಳೆದ ವ್ಯಕ್ತಿ ಅವರಾಗಿದ್ದರೂ ನಮ್ಮ ಸಂದರ್ಭದ ಸಕ್ರಿಯ ರಾಜಕಾರಣ ಅವರ ಸಾಮರ್ಥ್ಯವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಿಲ್ಲ. ಅವರ ಮೆದುಮಾತು ಸೌಜನ್ಯಯುತವಾದ ನಡವಳಿಕೆ, ವಿದ್ಯೆಗೆ ವಿನಯವೇ ಭೂಷಣವೆಂಬ ವ್ಯಕ್ತಿತ್ವಗಳು ಜನರ ಪ್ರೀತಿಗೆ ಪಾತ್ರವಾಗಿವೆಯಾದರೂ ಉಚ್ಛ ನಾಯಕರ ಗಮನ ಸೆಳೆಯುವಲ್ಲಿ ವಿಫಲವಾಗಿರಬಹುದೇನೋ ಎನ್ನಿಸುತ್ತದೆ.

ಅವರಿಗೆ ಈಗ ಎಪ್ಪತ್ತೈದು ವರ್ಷಗಳು. ಜೀವಮಾನದ ಮುಕ್ಕಾಲು ಪಾಲು ಆಯುಸ್ಸನ್ನು ಅತ್ಯಂತ ಅರ್ಥಪೂರ್ಣವಾಗಿ ಕಳೆದಿರುವರು. ದೇಶದ, ಸಮಾಜದ, ಕೃಷಿಕರ ಏಳ್ಗೆಗಾಗಿ ನಿರಂತರ ಅಧ್ಯಯನದ ಮೂಲಕ ದುಡಿದಿದ್ದಾರೆ. ಕೃಷಿಕರಿಗೆ ಹತ್ತು ಹಲವು ಪ್ರಯೋಜನವಾಗುವಂತಹ ಯೋಜನೆ ರೂಪಿಸಿ ಅನುಷ್ಠಾನಕ್ಕೆ ತರುವಲ್ಲಿ ನಿರಂತರ ಪ್ರಯತ್ನಿಸಿದ್ದಾರೆ. ಗ್ರಾಮ ಭಾರತದ ಜೀವನ ಮಟ್ಟವನ್ನು ಸುಧಾರಿಸುವ ನಿಟ್ಟಿನಲ್ಲಿ ಅವರದ್ದು ಮಹತ್ವದ ಸಾಧನೆ. ನೀರ್‌ಸಾಬ್ ಎಂದು ಖ್ಯಾತರಾಗಿರುವ ದಿವಂಗತ ನಜೀರ್ ಸಾಬ್ ಅವರ ಒಡನಾಡಿಗಳಾಗಿದ್ದು ಇಬ್ಬರ ಪ್ರಯತ್ನದಂತೆ ಯೋಜನೆ ರೂಪಿತವಾಗಿ ಯಶಸ್ಸು ಸಾಧಿಸಿದ್ದು ಈಗ ಇತಿಹಾಸ. ಪ್ರಕೃತ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅವರ ಎಐಆರ್‌ಡಿ ಅಧ್ಯಯನದ ವರದಿಗಳನ್ನು ತರಿಸಿಕೊಂಡು ಅನುಷ್ಠಾನಗೊಳಿಸಲು ಪ್ರಯತ್ನಿಸಬೇಕು. ಇಂತಹ ಬೌದ್ಧಿಕ ಮತ್ತು ಸಾಮರಸ್ಯದ ವ್ಯಕ್ತಿತ್ವಗಳನ್ನು ಗುರುತಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಉನ್ನತ ಖಾತೆಗಳನ್ನು ನೀಡಿ ಅವರಿಂದ ಸೇವೆಯನ್ನು ಪಡೆಯಬೇಕೆಂಬುದು ನನ್ನ ಈ ಹೊತ್ತಿನ ಸಂದೇಶವಾಗಿದೆ.

ಅವರ ಶಿಸ್ತಿನ ಬದುಕು ಬರುವ ಪೀಳಿಗೆಗೆ ಆದರ್ಶಪ್ರಾಯವಾದದ್ದು. ತನಗಾಗಿ ಏನೊಂದನ್ನೂ ಗಳಿಸಿಕೊಳ್ಳದ, ಆಸೆ-ಆಮಿಷಗಳಿಗೆ ಬಲಿಯಾಗದ ನಮ್ಮ ನಡುವಿನ ವಿರಳ ರಾಜಕಾರಣಿಗಳ ಸಾಲಿಗೆ ಎಂ.ವಿ.ರಾಜಶೇಖರನ್ ಸೇರುತ್ತಾರೆ. ವಿದ್ಯಾರ್ಥಿ ದೆಸೆಯಿಂದಲೇ

ಅವರಿಗೆ ಹೋರಾಟದ ಮನೋಭಾವ ಬೆಳೆದಿದೆ. ಜನಸೇವೆಯ ಗೀಳು ಹಚ್ಚಿಕೊಂಡು ರಾಜಕೀಯದ ಏಳು-ಬೀಳುಗಳನ್ನು ಅನುಭವಿಸಿದ್ದಾರೆ. ಇಂತಹವರು ನಮ್ಮ ರಾಜ್ಯದ ಹೆಮ್ಮೆಯ ಪುತ್ರರೆಂದೇ ಹೇಳಬಹುದು. ಉತ್ತರೋತ್ತರ ಅವರಿಗೆ ಇನ್ನೂ ಹೆಚ್ಚಿನ ಜವಾಬ್ದಾರಿಯುತ ಸ್ಥಾನಮಾನಗಳು ದೊರೆಯಲಿ. ಸದಾಕಾಲವೂ ಜನಪ್ರೀತಿಗೆ ಪಾತ್ರರಾಗಿ ರಾಷ್ಟ್ರದ ಉನ್ನತ ಹುದ್ದೆಗಳನ್ನು ಅಲಂಕರಿಸಲಿ ಎಂದು ಈ ಸಂದರ್ಭದಲ್ಲಿ ಹಾರೈಸುವೆ.

***

# ತೆರೆದ ಮನದವರು

ಡಾ। ಎಚ್. ನರಸಿಂಹಯ್ಯ

ಎಂ.ವಿ. ರಾಜಶೇಖರನ್‌ರವರು ನನಗೆ ಪ್ರತಿನಿತ್ಯ ಲಾಲ್‌ಬಾಗ್‌ನಲ್ಲಿ ವಾಕಿಂಗ್‌ನ ಜೊತೆಗಾರರು. ಅವರು ವಿದೇಶಕ್ಕೆ ಅಥವಾ ಬೇರೆ ಊರಿಗೆ ಹೋಗದಿದ್ದರೆ ಖಂಡಿತ ವಾಕಿಂಗ್ ತಪ್ಪಿಸಿಕೊಳ್ಳುವುದಿಲ್ಲ. ಒಂದೇ ಲಹರಿಯಲ್ಲಿ ವಾಕಿಂಗ್ ಮಾಡುವ ಅವರನ್ನು ನೋಡುವುದೇ ಸೊಗಸು. ನಮ್ಮಂತಹ ಹಳೆಯ ಮಂದಿ ಕಾಣಿಸಿಕೊಂಡಾಗ ಬೆಳಗಿನ ವಂದನೆ ಹೇಳಿ ನಮ್ಮ ಜೊತೆ ಒಂದಿಷ್ಟು ಮಾತನಾಡುತ್ತಾರೆ. ರಾಜಶೇಖರನ್‌ರವರು ರಾಜಕಾರಣದಲ್ಲಿದ್ದರೂ ಆಳವಾದ ಜ್ಞಾನ ಪಡೆದ ವ್ಯಕ್ತಿ ಎಂದು ಅವರ ಬಯೋಡೇಟ ನೋಡಿದರೆ ಗೊತ್ತಾಗುತ್ತದೆ. ೧೯೫೭ರಿಂದ ೨೦೦೩ರ ತನಕ ಅವರು ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ೧೨೮ ಪ್ರಬಂಧಗಳನ್ನು ಮಂಡಿಸಿದ್ದಾರೆ. ಆ ಪ್ರಬಂಧಗಳು ಸುಮಾರು ೨೩ಕ್ಕೂ ಹೆಚ್ಚಿನ ವಿಷಯ ವೈವಿಧ್ಯತೆಯನ್ನು ಪಡೆದುಕೊಂಡಿವೆ. ಯಾವುದೇ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಿಗಿಂತ ಮಿಗಿಲಾಗಿ ರಾಜಶೇಖರನ್‌ರವರು ಶೈಕ್ಷಣಿಕ ಕ್ಷೇತ್ರದಲ್ಲಿ ಅಪಾರವಾದ ವಿದ್ವತ್ ಪಡೆದಿದ್ದಾರೆ. ಕೃಷಿಯಲ್ಲಿ ತಾಂತ್ರಿಕತೆ, ಬೆಳೆ, ಗೊಬ್ಬರ, ರೈತರ ಕಷ್ಟ-ಸುಖ, ಅವರ ಮಾರುಕಟ್ಟೆ, ಭೂಸುಧಾರಣೆ, ಜಲ ಸಂವರ್ಧನೆ, ಗ್ರಾಮೀಣ ಯುವಕ-ಯುವತಿಯರು, ವ್ಯವಸಾಯಕ್ಕೆ ಪೂರಕವಾದ ವೃತ್ತಿಗಳು, ಕುಡಿಯುವ ನೀರು, ಪೌಷ್ಟಿಕ ಆಹಾರ, ಕುಟುಂಬ ಯೋಜನೆ, ಸಾರ್ವಜನಿಕ ಆರೋಗ್ಯ, ಗ್ರಾಮೀಣ ಆರ್ಥಿಕಸ್ಥಿತಿ, ಪರಿಸರ, ಪಶು ಸಂಗೋಪನೆ, ಯುವ ಜನಾಂಗ ಮೊದಲಾದ ವೈವಿಧ್ಯಮಯ ವಿಚಾರಗಳನ್ನು ಕುರಿತಂತೆ ಅವರು ವಿವಿಧ ದೇಶಗಳಲ್ಲಿನ ವೇದಿಕೆಗಳಲ್ಲಿ ಅನೇಕ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅವರ ಈ ವಿದ್ವತ್ತು ಕರ್ನಾಟಕದ ಜನತೆಗೆ ಇನ್ನೂ ಅಪರಿಚಿತವಾಗಿರುವುದು ದುರ್ದೈವದ ವಿಚಾರ. ಸ್ವಂತ ಕೃಷಿಕರಾದ ರಾಜಶೇಖರನ್ ಅವರಿಗೆ ಗ್ರಾಮೀಣ ಪ್ರದೇಶದ ಜನತೆಯ ಬದುಕು ತುಂಬಾ ಚೆನ್ನಾಗಿ ಮನವರಿಕೆಯಾಗಿದೆ. ಅವರ ಬದುಕು ಮತ್ತಷ್ಟು ಸಮೃದ್ಧವಾಗಬೇಕೆಂದು ರಾಜಶೇಖರನ್ ಪ್ರಯತ್ನಿಸುತ್ತಿರುವುದು ತುಂಬಾ ಸಂತಸದ ವಿಚಾರ.

## ನಿಜಬಿಂಬ

ರಾಜಶೇಖರನ್ ಅವರ ಜೊತೆ ಸಂಭಾಷಣೆ ಮಾಡಿದಾಗೆಲ್ಲಾ ಅವರ ಮೌಲ್ಯಾಧಾರಿತ ರಾಜಕಾರಣವನ್ನು ಗುರುತಿಸದಿರುವುದು ಸಾಧ್ಯವೇ ಇಲ್ಲ. ನನಗೆ ತಿಳಿದಂತೆ ಅವರು ಮೇಲ್ನೋಟಕ್ಕೆ ಯಾವುದಾದರೂ ಒಂದು ರಾಜಕೀಯ ಪಕ್ಷವನ್ನು ಗುರುತಿಸಿಕೊಂಡಿರಬಹುದು. ಆದರೆ ಮೂಲತಃ ಅವರು ಕರ್ನಾಟಕದ ಜನಜೀವನ ಸಮೃದ್ಧವಾಗಬೇಕೆಂದು ಅಪೇಕ್ಷಿಸಿದವರು. ಸಾರ್ವಜನಿಕರ ಅನಿಸಿಕೆಗಳಿಗೆ ಅವರು ಮಾತಿನ ರೂಪವನ್ನು ಕೊಟ್ಟಿದ್ದಾರೆ. ನಿರ್ಭಯವಾಗಿ ತಮ್ಮ ವಿಚಾರಗಳನ್ನು ಪಕ್ಷ ವೇದಿಕೆಯಲ್ಲಿ ಹಾಗೂ ಇತರೆಡೆ ಪ್ರಸ್ತಾಪಿಸಿದ್ದಾರೆ. ಅದು 'ಆನ್‌ಲೈನ್ ಲಾಟರಿ' ಆಗಿರಬಹುದು, ಸ್ವಜನ ಪಕ್ಷಪಾತವಾಗಿರಬಹುದು, ಇಲ್ಲವೇ ಭ್ರಷ್ಟಾಚಾರ ಆಗಿರಬಹುದು. ರಾಜಶೇಖರನ್ ಯಾವುದನ್ನೂ ಮುಚ್ಚಿಟ್ಟುಕೊಳ್ಳದೆ ನನ್ನೊಡನೆ ಚರ್ಚಿಸಿದ್ದಾರೆ. ಇಂತಹ ತೆರೆದ ಮನಸ್ಸಿನವರಾದ ಕಾರಣ ನನಗೆ ಅವರು ತುಂಬಾ ಪ್ರಿಯವಾದವರು. ನಿರ್ಭಯರಾಗಿ ವಿಚಾರಗಳನ್ನು ಹೇಳುವ ವ್ಯಕ್ತಿಗಳೇ ಅಪರೂಪವಾಗಿರುವ ಈ ಕಾಲದಲ್ಲಿ ವೃತ್ತಿ ರಾಜಕಾರಣಿಯೊಬ್ಬರು ಇಷ್ಟೊಂದು ನಿರ್ಭಯರಾಗಿ ಸತ್ಯ ಹೇಳುವುದು ಆಶ್ಚರ್ಯದ ವಿಚಾರವಲ್ಲವೆ?

ನಿಜಲಿಂಗಪ್ಪನವರ ಅಳಿಯಂದಿರೆಂದು ರಾಜಶೇಖರನ್ ಅವರನ್ನು ಗುರುತಿಸಲಾಗಿದೆ. ಆದರೆ, ರಾಜಶೇಖರನ್ ಇಂತಹ ಯಾವ ವಿಶಿಷ್ಟತೆಯೂ ಇಲ್ಲದೇ ಗುರುತಿಸಬಹುದಾದ ವ್ಯಕ್ತಿ ಆಗಿದ್ದಾರೆ. ನಿಜಲಿಂಗಪ್ಪನವರಲ್ಲಿರುವ ಶಿಸ್ತು, ವಿಚಾರಶೀಲತೆ ಹಾಗೂ ತಾತ್ವಿಕ ಬದ್ಧತೆ ರಾಜಶೇಖರನ್ ಅವರಲ್ಲೂ ಇರಬಹುದು. ಆದರೆ ನಿಜಲಿಂಗಪ್ಪನವರ ಅಳಿಯ ಎಂದು ಅವರು ಯಾವ ಹೆಚ್ಚಿನ ಪ್ರಯೋಜನವನ್ನೂ ಪಡೆದುಕೊಂಡಿಲ್ಲ. ಸಂಕೋಚ ಪ್ರವೃತ್ತಿಯ ರಾಜಶೇಖರನ್ ತಮಗೆ ಎಲ್ಲಾ ಸ್ಥಾನಗಳು ತಾವಾಗಿಯೇ ಬರಬೇಕೆಂದು ಭಾವಿಸಿದರು. ಅದರಂತೆ ಅವರಿಗೆ ಎಲ್ಲಾ ಸ್ಥಾನಗಳು ಬಂದಿವೆ. ಲೋಕಸಭೆ, ವಿಧಾನಸಭೆ, ವಿಧಾನ ಪರಿಷತ್ತು ಹಾಗೂ ಇದೀಗ ರಾಜ್ಯಸಭಾ ಸದಸ್ಯತ್ವ ಸ್ಥಾನ ಕೂಡ ಅವರಿಗೆ ದೊರಕಿದೆ. ರಾಜಶೇಖರನ್‌ರವರ ಶಕ್ತಿ ಸಾಮರ್ಥ್ಯಗಳು ಇನ್ನೂ ಅಗಾಧವಾಗಿವೆ. ಎಪ್ಪತ್ತೈದರ ಹರೆಯದಲ್ಲಿ ಅವರ ದೇಹ ಹಾಗೂ ಮನಸ್ಸು ಕ್ರಿಯಾಶೀಲವಾಗಿರುವುದು ಸಂತಸದ ವಿಚಾರ. ಕೆಲಸ ಮಾಡಬೇಕು ಎಂಬ ಅವರ ಉತ್ಸಾಹಕ್ಕೆ ಇತಿಮಿತಿ ಇಲ್ಲ. ಇಂತಹ ಉತ್ಸಾಹಶೀಲರಿಗೆ ವಯಸ್ಸಾಗುವುದಾದರೂ ಹೇಗೆ? ನಿರಂತರವಾಗಿ ಕೆಲಸ ಮಾಡುತ್ತಿರಬೇಕು ಎಂಬ ಅವರ ಆಸೆಗೆ ಕರ್ನಾಟಕದ ಜನತೆ ಬೆಂಬಲ ಕೊಡಲಿ ಎಂದು ಆಶಿಸುತ್ತೇನೆ.

***

# ನಾಯಕತ್ವದ ಗುಣ

ಎಂ.ವಿ. ವೆಂಕಟಪ್ಪ

ಶ್ರೀ ಎಂ.ವಿ. ರಾಜಶೇಖರನ್ ನನಗಿಂತ ಮೂರು ವರ್ಷ ಹಿರಿಯರು. ೧೯೫೨ ರಿಂದ ನಮ್ಮಣ್ಣ ಪೂಜ್ಯ ಎಂ.ವಿ. ಕೃಷ್ಣಪ್ಪ ಅವರು ನೆಹರು ಅವರ ಸಚಿವ ಸಂಪುಟದಲ್ಲಿ ಸಹಾಯಕ ಕೃಷಿ ಸಚಿವರಾಗಿದ್ದರು. ತುಳಸಿದಾಸಪ್ಪ ಹಾಗೂ ರಾಜಶೇಖರನ್‌ರವರು ಲಾ ಓದಲು ದೆಹಲಿಯ ನಮ್ಮ ಮನೆಗೆ ಬಂದರು. ಆಗ ನಾನು ಅಲ್ಲೇ ಪದವಿ ತರಗತಿ ಓದುತ್ತಿದ್ದೆ. ವಿಶಾಲವಾದ ಕೊಠಡಿಯಲ್ಲಿ ಮೂರು ದೊಡ್ಡ ದೊಡ್ಡ ಮಂಚಗಳನ್ನು ಹಾಕಿ ನಮಗೆ ವ್ಯವಸ್ಥೆ ಮಾಡಿದ್ದರು. ದಾಸಪ್ಪ ಹಾಗೂ ಯಶೋಧರಮ್ಮ ದಾಸಪ್ಪ ಅವರು ನಮ್ಮಣ್ಣನವರಿಗೆ ಮೊದಲಿನಿಂದಲೂ ಆಪ್ತರು. ತುಳಸಿದಾಸಪ್ಪ ಅವರನ್ನು ನಮ್ಮ ಮನೆಯಲ್ಲಿ ಬೇರೆ ಎಂದು ಯಾರೂ ನೋಡುತ್ತಿರಲಿಲ್ಲ. ಅವರು ನಮ್ಮ ಮನೆಯವರೇ ಆಗಿಬಿಟ್ಟಿದ್ದರು. ಅವರ ಜೊತೆ ಬಂದ ಎಂ.ವಿ.ರಾಜಶೇಖರನ್ ಸಹ ನಮ್ಮ ಮನೆಯಲ್ಲೇ ಇದ್ದುಕೊಂಡು ಲಾ ಓದಿದರು. ವಿದ್ಯಾರ್ಥಿ ದೆಸೆಯಲ್ಲೇ ಅವರು ನಾಯಕತ್ವದ ಗುಣ ಬೆಳೆಸಿಕೊಂಡಿದ್ದರು. ೧೯೫೪-೫೫ರಲ್ಲಿ ದೆಹಲಿಯ ಪ್ರಜಾಸತ್ತಾತ್ಮಕ ಪರಿಷತ್ತಿನ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅಂದು ವಿದ್ಯಾರ್ಥಿಗಳಿಗೆ ಸಮಾಜವಾದ ತುಂಬಾ ಪ್ರಿಯವಾದ ವಿಚಾರವಾಗಿತ್ತು. ದೆಹಲಿಯಲ್ಲಂತೂ ವಿದ್ಯಾರ್ಥಿಗಳ ದೊಡ್ಡ ಸಮೂಹವೇ ಸಮಾಜವಾದದ ಕಡೆ ಮುಖ ಮಾಡಿತ್ತು. ಆದರೆ, ರಾಜಶೇಖರನ್ ಕನಕಪುರದ ಕರಿಯಪ್ಪನವರ ಗರಡಿಯಲ್ಲಿ ಬೆಳೆದವರು. ಗಾಂಧೀ ಸಿದ್ಧಾಂತ ಹಾಗೂ ಸರ್ವೋದಯ ತತ್ವಗಳು ಅವರಿಗೆ ಪ್ರಿಯವಾಗಿದ್ದವು. ಭೂದಾನ ಚಳುವಳಿಯಲ್ಲಿ ಅವರಿಗೆ ಆ ಕಾಲದಲ್ಲೇ ಆಸಕ್ತಿ ಇತ್ತು. ಭಾರತೀಯ ವಿದ್ಯಾರ್ಥಿ ಪರಿಷತ್ತಿನ ಪ್ರಾದೇಶಿಕ ಕಾರ್ಯದರ್ಶಿಯಾಗಿ ಅವರು ದೆಹಲಿಯ ವಿದ್ಯಾರ್ಥಿಗಳನ್ನು ಜಾಗ್ರತಗೊಳಿಸುವ ಪ್ರಯತ್ನಕ್ಕೆ ಪ್ರಾಮಾಣಿಕವಾಗಿ ದುಡಿಯುತ್ತಿದ್ದರು. ಹಿರಿಯ ನಾಯಕರಾದ ಮೌಲಾನ ಅಬುಲ್ ಕಲಂ ಆಜಾದ್ ಅವರನ್ನು ವಿದ್ಯಾರ್ಥಿಗಳ ಜೊತೆ ಭೇಟಿಯಾಗಿದ್ದರು. ಇಂತಹ ಅನೇಕ ಕ್ರಿಯಾಶೀಲ ಚಟುವಟಿಕೆಗಳನ್ನು ಅವರು ದೆಹಲಿಯಲ್ಲಿ

ಮಾಡುತ್ತಿದ್ದುದನ್ನು ನಾನು ನೋಡುತ್ತಿದ್ದೆ. ಅನಿರೀಕ್ಷಿತವಾಗಿ ಅವರ ತಂದೆ ನಿಧನರಾದ ಕಾರಣ ಅವರು ವ್ಯಾಸಂಗವನ್ನು ನಿಲ್ಲಿಸಿ ತಮ್ಮೂರು ಮರಳವಾಡಿಗೆ ಬಂದುಬಿಟ್ಟರು.

ಅನಂತರ ಅವರು ನಿಜಲಿಂಗಪ್ಪನವರ ಮಗಳನ್ನು ಮದುವೆಯಾದರು. ೧೯೬೦ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನದಲ್ಲಿ ನಾನು ಸಾರಿಗೆ ವ್ಯವಸ್ಥೆಯ ಕಾರ್ಯದರ್ಶಿಯಾಗಿದ್ದೆ. ರಾಜಶೇಖರನ್ ಕೂಡ ಈ ಸಮ್ಮೇಳನದ ಯಾವುದೋ ಸಮಿತಿಯಲ್ಲಿ ಕೆಲಸ ಮಾಡುತ್ತಿದ್ದರೆಂಬುದು ನನಗೆ ನೆನಪು. ಅಷ್ಟು ಹೊತ್ತಿಗಾಗಲೇ ಅವರಿಗೆ ತಮ್ಮ ಗುರಿ ನಿಚ್ಚಳವಾಗಿತ್ತೆಂದು ತೋರುತ್ತದೆ. ಗ್ರಾಮೀಣಾಭಿವೃದ್ಧಿ ಹಾಗೂ ಕೃಷಿ ಅವರಿಗೆ ತುಂಬಾ ಆಸಕ್ತಿಯ ವಿಚಾರವಾಗಿತ್ತು. ಒಮ್ಮೆ ಅವರು ಜಪಾನ್‌ಗೆ ಹೋದಾಗ ರೇಷ್ಮೆ ಆಧುನಿಕ ತಳಿಗಳ ಬಗ್ಗೆ ಮಾಹಿತಿಯನ್ನು ತಂದರು. ಅದನ್ನು ಸರ್ಕಾರಕ್ಕೆ ಮುಟ್ಟಿಸಿ ಅದು ಕೃಷಿ ವಿಶ್ವವಿದ್ಯಾನಿಲಯಗಳ ಮೂಲಕ ರೈತರ ಕೈ ಸೇರುವಂತೆ ನೋಡಿಕೊಂಡರು.

ಕೇಂದ್ರ ಸಚಿವರಾಗಿದ್ದಾಗ ನಮ್ಮಣ್ಣನನ್ನು ನಿಜಲಿಂಗಪ್ಪನವರು ರಾಜ್ಯ ರಾಜಕಾರಣಕ್ಕೆ ಬಲವಂತವಾಗಿ ಎಳೆದು ತಂದರು. ತಮ್ಮ ಸಚಿವ ಸಂಪುಟದಲ್ಲಿ ಅವರನ್ನು ಕೃಷಿ ಸಚಿವರನ್ನಾಗಿಸಿದ್ದರು. ಕೇಂದ್ರದಲ್ಲಿ ಅವರು ಸಹಾಯಕ ಕೃಷಿ ಸಚಿವರಾಗಿದ್ದಾಗ ಪಶುಸಂಗೋಪನೆ ಅವರ ಖಾತೆಯ ವಿಷಯವಾಗಿತ್ತು. ಈ ಅನುಭವದ ಹಿನ್ನೆಲೆಯಲ್ಲಿ ನಮ್ಮಣ್ಣನವರು ಬೆಂಗಳೂರಿನಲ್ಲಿ ೧೯೬೨ರಲ್ಲಿ ಹಾಲಿನ ಡೈರಿಯನ್ನು ಪ್ರಾರಂಭಿಸಿದರು. ಇಂದು ೪೦೦ ಕೋಟಿ ರೂಪಾಯಿಗಳ ವ್ಯವಹಾರವುಳ್ಳ ಈ ಸಂಸ್ಥೆ ಹಳ್ಳಿಗಾಡಿನ ಜನರ ಕಾಮಧೇನುವಾಗಿದೆ. ಬಡ ಹಾಗೂ ಮಧ್ಯಮ ವರ್ಗದ ರೈತರಿಗೆ ಹಣ ಸಿಗುವುದೇ ಹಾಲಿನ ಡೈರಿಯಿಂದ ಎನ್ನಬಹುದು. ಈ ಯೋಜನೆಯ ಅನುಷ್ಠಾನದ ಸಂದರ್ಭದಲ್ಲಿ ರಾಜಶೇಖರನ್ ನಮ್ಮಣ್ಣನವರ ಜೊತೆ ತುಂಬಾ ಆಸಕ್ತಿಯಿಂದ ಚರ್ಚಿಸುತ್ತಿದ್ದರು. ತಾವು ನೆದರ್‌ಲ್ಯಾಂಡ್‌ಗೆ ಹೋಗಿ ಅಲ್ಲಿನ ಡೈರಿ ಫಾರಂಗಳಲ್ಲಿ ನೋಡಿ ಬಂದ ವಿಚಾರಗಳನ್ನು ಅವರಿಗೆ ತಿಳಿಸುತ್ತಿದ್ದರು. ಅನೇಕ ಸಾರಿ ಮುಖ್ಯಮಂತ್ರಿ ಹಾಗೂ ಹಣಕಾಸು ಸಚಿವರಿಗೆ ಡೈರಿಯ ಅನುಷ್ಠಾನದ ಬಗ್ಗೆ ರಾಜಶೇಖರನ್ ಒತ್ತಿ ಹೇಳುತ್ತಿದ್ದರು. ಯಾವುದೇ ಜನಪರ ಕೆಲಸವಾಗಲಿ ಅದನ್ನು ಸಂಬಂಧಪಟ್ಟವರಿಗೆ ತಿಳಿಸಲು ರಾಜಶೇಖರನ್ ಎಂದೂ ಹಿಂಜರಿದವರಲ್ಲ. ಈ ಸ್ವಭಾವದಿಂದಾಗಿಯೇ ಅವರು ಗ್ರಾಮೀಣ ಜನತೆಯ ಆರಾಧ್ಯವ್ಯಕ್ತಿಯಾಗಿದ್ದಾರೆ. ಇಂದಿಗೂ ಅವರು ಗ್ರಾಮೀಣ ಬದುಕಿನ ಜನರಿಗೆ ಬೇಕಾದ ವಿಚಾರಗಳನ್ನು ಆಳುವವರಿಗೆ ಹೇಳುತ್ತಲೇ ಇರುತ್ತಾರೆ.

ರಾಜಶೇಖರನ್, ತುಳಸಿದಾಸಪ್ಪ ಹಾಗೂ ನಾನೂ ಒಂದೇ ಸ್ವಭಾವದವರು. ರಾಜಕೀಯ ಅಂದಾಕ್ಷಣಕ್ಕೆ ಆರ್ಭಟ ಮಾಡಿ ಎದುರಾಳಿಯನ್ನು ಕೆರಳಿಸಿ ತೊಡೆ ತಟ್ಟುವ ಸ್ವಭಾವ ನಮ್ಮದಲ್ಲ. ಸೌಮ್ಯವಾಗಿ ಆದರೆ ದೃಢವಾಗಿ ವಿಚಾರಗಳನ್ನು ಪ್ರತಿಪಾದಿಸುತ್ತಾ ಸಮೂಹದ ಹಿತವನ್ನು ಸಾಧಿಸುವುದು ನಮ್ಮ ಗುರಿ. ಇದಕ್ಕೆ ನಾವು ಬೆಳೆದು ಬಂದ ಪರಿಸರ ಕಾರಣವಾಗಿರಬಹುದು ಅಥವಾ ನಮ್ಮಲ್ಲಿ ಆದರ್ಶಗಳನ್ನು ರೂಪಿಸಿದ ಆ ಕಾಲದ ಹಿರಿಯ ನಾಯಕರಾಗಿರಬಹುದು. ಈ ಕಾಲಕ್ಕೆ ಅದು ಸಪ್ಪೆ ಎನಿಸಿದರೂ ದೀರ್ಘ ಕಾಲ ಜನ ನೆನಸಿಕೊಳ್ಳುತ್ತಾರೆಂಬುದು ನನ್ನ ನಂಬಿಕೆ. ರಾಜಶೇಖರನ್ ಅವರದೂ ಇದೇ ಅಭಿಪ್ರಾಯವೆಂಬುದು ನನ್ನ ನಂಬಿಕೆ.

✳✳✳

# ಪರಿಪಕ್ವ ಚೇತನ

◆ ಬಿ.ಎಲ್.ಶಂಕರ್

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿದ್ದ ಶ್ರೀ ಎಂ.ವಿ. ರಾಜಶೇಖರನ್‌ರವರು ರಾಜ್ಯಸಭಾ ಸದಸ್ಯರಾದ ಸಂದರ್ಭದಲ್ಲಿ ಅವರನ್ನು ಸದನ ತುಂಬು ಹೃದಯದಿಂದ ಅಭಿನಂದಿಸಿತು. ೩.೪.೨೦೦೨ರಂದು ಕರ್ನಾಟಕ ವಿಧಾನ ಪರಿಷತ್ತು ರಾಜಶೇಖರನ್‌ರವರ ವ್ಯಕ್ತಿತ್ವವನ್ನು ತುಂಬಾ ಚೆನ್ನಾಗಿ ಕಂಡರಿಸಿದೆ ಎನ್ನುವುದು ನನ್ನ ಭಾವನೆ. ಆ ಸಂದರ್ಭದಲ್ಲಿ ನಾನು ರಾಜಶೇಖರನ್ ಅವರ ಬಗ್ಗೆ ಅಭಿನಂದನಾ ನಿರ್ಣಯವನ್ನು ಮಂಡಿಸಿ ಈ ರೀತಿ ಹೇಳಿದ್ದೆ. "ಶ್ರೀ ರಾಜಶೇಖರನ್ ಕರ್ನಾಟಕದ ಸಾರ್ವಜನಿಕ ಬದುಕಿಗೆ ಅತ್ಯಂತ ಚಿರಪರಿಚಿತರಾದಂತಹ, ಪ್ರಾಮಾಣಿಕ ನಿಷ್ಠಾವಂತ ವ್ಯಕ್ತಿತ್ವವುಳ್ಳ ಸಾರ್ವಜನಿಕ ಸೇವಕ. ಕರ್ನಾಟಕದಿಂದ ಅತ್ಯಂತ ಪ್ರತಿಷ್ಠಿತವಾದ ಗುಂಪಿಗೆ ಅವರು ಸೇರುತ್ತಿದ್ದಾರೆ. ರಾಷ್ಟ್ರದ ನಾಲ್ಕು ಸದನಗಳಲ್ಲಿ (ಲೋಕಸಭೆ, ರಾಜ್ಯಸಭೆ, ವಿಧಾನಸಭೆ, ವಿಧಾನ ಪರಿಷತ್ತು) ಸದಸ್ಯರಾದಂಥವರಲ್ಲಿ ಈ ತನಕ ಇಬ್ಬರು ವ್ಯಕ್ತಿಗಳಿದ್ದರು. ಒಬ್ಬರು ನಮ್ಮ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ.ಕೃಷ್ಣ, ಇನ್ನೊಬ್ಬರು ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಡಿ.ಬಿ.ಚಂದ್ರೇಗೌಡ. ಇವರುಗಳು ರಾಷ್ಟ್ರದ ನಾಲ್ಕು ಮನೆಗಳ ಸದಸ್ಯರು ಎನ್ನುವ ಗೌರವಕ್ಕೆ ಪಾತ್ರರಾಗಿದ್ದರು. ಈಗ ಮೂರನೇ ಹೆಸರು ಅದರಲ್ಲಿ ಸೇರ್ಪಡೆ ಆಗುತ್ತಿದೆ. ಅದು ರಾಜಶೇಖರನ್ ಅವರದು. ಇವರು ಲೋಕಸಭೆ, ವಿಧಾನಸಭೆ, ವಿಧಾನ ಪರಿಷತ್ತು ಹಾಗೂ ಇದೀಗ ರಾಜ್ಯಸಭೆಯ ಸದಸ್ಯರಾಗಿದ್ದಾರೆ. ಹೀಗಾಗಿ ಅವರು ಪ್ರತಿಷ್ಠಿತವಾದ ಗುಂಪಿಗೆ ಕರ್ನಾಟಕದಿಂದ ಸೇರುವಂತಹ ಮೂರನೆಯ ಸದಸ್ಯರು. ಇವರನ್ನು ಇಡೀ ಪ್ರಪಂಚ ನೋಡುವಂತಹುದಿದೆ. ಏಷ್ಯನ್ ಇನ್‌ಸ್ಟಿಟ್ಯೂಟ್ ಫಾರ್ ರೂರಲ್ ಡೆವಲಪ್‌ಮೆಂಟ್ ಸಂಘಟನೆ ಮುಖಾಂತರ ಅವರು ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಗೆ ಸಾಕಷ್ಟು ಕೆಲಸಗಳನ್ನು ಮಾಡಿದ್ದಾರೆ. WHO'S WHO ಪುಸ್ತಕವನ್ನು ತರಿಸಿಕೊಂಡು ಅವರ ಬಗ್ಗೆ ಕೆಲವು ಪಾಯಿಂಟ್‌ಗಳನ್ನು ಆರಿಸಿಕೊಳ್ಳೋಣ ಎಂದುಕೊಂಡೆ. ಆದರೆ, ಅದರಲ್ಲಿ ೨೨ ಪುಟಗಳ ಸುದೀರ್ಘ ಪರಿಚಯವಿದೆ. ಹೀಗಾಗಿ ಯಾವುದನ್ನು

ಅರಿಸುವುದು ಎನ್ನುವುದು ತಿಳಿಯಲಿಲ್ಲ. ಆದರೆ, ಇಲ್ಲಿರುವ ಪುಟಗಳಿಗಿಂತ ನೂರು ಪಟ್ಟು ಹೆಚ್ಚಿನ ಕೆಲಸ ಅವರು ಮಾಡಿದ್ದಾರೆ. ಎಲ್ಲವನ್ನೂ ಪರಿಚಯಾತ್ಮಕವಾದ ಆ ಪುಸ್ತಕಗಳಲ್ಲಿ ಬರೆಯಲು ಸಾಧ್ಯವಾಗಿಲ್ಲ. ರಾಜ್ಯಸಭಾ ಸದಸ್ಯರಾಗಿ ಈ ರಾಷ್ಟ್ರದ ಪ್ರತಿಷ್ಠಿತವಾದ ಸ್ಥಾನದಲ್ಲಿ ಎಲ್ಲಾ ರೀತಿಯ ಕೆಲಸ ಮಾಡುವ ಅವಕಾಶ ದೊರೆತಿದ್ದು ಅವರು ಯಶಸ್ವಿಯಾಗಲಿ".

ಎರಡು ವರ್ಷಗಳ ಹಿಂದೆ ನಾನು ರಾಜಶೇಖರನ್ ಅವರ ಬಗ್ಗೆ ಪಟ್ಟ ಅಭಿಪ್ರಾಯಕ್ಕಿಂತ ಹೆಚ್ಚಿನದ್ದನ್ನು ನನಗೆ ಸೇರಿಸುವ ಅಗತ್ಯ ಇಲ್ಲ ಎಂದು ನನ್ನ ಭಾವನೆ. ರಾಜಶೇಖರನ್‌ರವರು ಹಳೆಯ ಕಾಂಗ್ರೆಸ್‌ನಿಂದ ಬಂದ ನಿಷ್ಠಾವಂತ ಕಾರ್ಯಕರ್ತರು. ವಿದ್ಯಾರ್ಥಿ ದೆಸೆಯಲ್ಲೇ ಅವರು ಸೇವಾ ಕಾರ್ಯಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದರು ಎಂಬುದು ಮಹತ್ವದ ವಿಚಾರ. ವಿನೋಬಾ ಅವರ ಭೂದಾನ ಚಳುವಳಿಯಲ್ಲಿ ಅವರಿಗೆ ಆಸಕ್ತಿ ಇತ್ತು. ೧೯೫೬ರಿಂದಲೂ ನಿರಂತರವಾಗಿ ವಿದೇಶಗಳಿಗೆ ಹೋಗಿ ಬರುತ್ತಿದ್ದಾರೆ. ಇಂತಹ ಭೇಟಿ ಕೂಡ ಭಾರತದ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಕೆಲಸದ ಬಗ್ಗೆ ಆ ದೇಶದವರಿಗೆ ಮಾಹಿತಿ ಕೊಡುವುದೇ ಆಗಿರುತ್ತದೆ. ಅವರ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಅಭಿವೃದ್ಧಿ ಪಥದಲ್ಲಿ ಮಾಡಿರುವ ಸಾಧನೆ ಶ್ಲಾಘನೀಯವಾದುದು. ಸಕ್ರಿಯ ರಾಜಕಾರಣಿ ಒಬ್ಬ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಂತೆ ಅಥವಾ ನಿಷ್ಠಾವಂತ ಅಧಿಕಾರಿಯಂತೆ ಅಭಿವೃದ್ಧಿ ಕೆಲಸಗಳ ಬಗ್ಗೆ ಚಿಂತನೆ ಮಾಡುವುದು ಸಮಕಾಲೀನ ರಾಜಕೀಯದಲ್ಲಿ ಅಚ್ಚರಿಯ ಸಂಗತಿ. ಅಧಿಕಾರಕ್ಕೂ ಹಾಗೂ ಅಭಿವೃದ್ಧಿಗೂ ಯಾವುದೇ ಸಂಬಂಧ ಇಲ್ಲದಷ್ಟು ಅವು ವಿಭಿನ್ನ ಕ್ಷೇತ್ರಗಳಾಗಿವೆ. ಅಧಿಕಾರವನ್ನು ಉಳಿಸಿಕೊಳ್ಳಲು ಮತ್ತಷ್ಟು ಅಧಿಕಾರ ಪಡೆಯಲು ಅಭಿವೃದ್ಧಿ ಕ್ಷೇತ್ರವನ್ನು ಅಪ್ಪಿಕೊಳ್ಳುವ ಸ್ವಭಾವ ಕೂಡ ಕೆಲವರಲ್ಲಿ ಇದೆ. ಈ ಅಭಿವೃದ್ಧಿ ಕೆಲಸಗಳೂ ಕೂಡ ಮುಂದಿನ ಚುನಾವಣೆಗೆ ಸಹಾಯಕವಾಗಲೆಂಬ ದೂರಾಲೋಚನೆ ಇರುತ್ತದೆಯೇ ಹೊರತು ಜನ ಸಮೂಹದ ಹಿತ ಅಲ್ಲಿ ಅತ್ಯಲ್ಪವಾದ ಅಂಶವಾಗಿರುತ್ತದೆ. ಆದರೆ, ರಾಜಶೇಖರನ್‌ರವರು ಅಭಿವೃದ್ಧಿಯನ್ನು ತಮ್ಮ ಧ್ಯೇಯವನ್ನಾಗಿ ಇರಿಸಿಕೊಂಡಿದ್ದಾರೆ. ಅಭಿವೃದ್ಧಿ ಎಂದು ಕೇವಲ ಅಧಿಕಾರ ಬಲದಿಂದ ಕೆಲವು ಕೆಲಸಗಳನ್ನು ಮಾಡುವುದಷ್ಟೇ ಅಲ್ಲ. ಎಸ್.ಕೆ. ಡೇ, ಅಶೋಕ್ ಮೆಹತಾ, ಜಯಪ್ರಕಾಶ್ ನಾರಾಯಣ್, ಸಿ. ಸುಬ್ರಹ್ಮಣ್ಯಂ ಮೊದಲಾದ ಮಹಾನ್ ಚಿಂತಕರಂತೆ ದೇಶದ ಅಭಿವೃದ್ಧಿ ಕ್ಷೇತ್ರಕ್ಕೆ ಹೊಸ ದಿಕ್ಸೂಚಿಯನ್ನು ತೋರಿಸುವ ಚಿಂತನ ಕಾರ್ಯದಲ್ಲಿ ಎಂ.ವಿ. ರಾಜಶೇಖರನ್‌ರವರು ನಿರತರಾಗಿದ್ದಾರೆ. ಜನತಾ ಪಕ್ಷದ ಸರ್ಕಾರ ೧೯೮೫ರಲ್ಲಿ ಕುಡಿಯುವ ನೀರಿನ ಯೋಜನೆಯನ್ನು ವ್ಯಾಪಕ ಪ್ರಮಾಣದಲ್ಲಿ ಹಮ್ಮಿಕೊಂಡಿತ್ತಷ್ಟೆ. ಇಂತಹ ಕಾರ್ಯಕ್ರಮದ ಹಿಂದೆ ರಾಜಶೇಖರನ್‌ರವರ ಮನಸ್ಸು ಕೆಲಸ ಮಾಡಿರುವುದು ಉಲ್ಲೇಖಿಸಬೇಕಾದ ಅಂಶ. ಇದೇ ರೀತಿ ರೇಷ್ಮೆ, ತೋಟಗಾರಿಕೆ, ಯುವಜನ ಸೇವೆ, ಪಶುಸಂಗೋಪನೆ, ರೈತರ ಉತ್ಪನ್ನಗಳಿಗೆ ಸಮರ್ಪಕ ಬೆಲೆ ನಿಗದಿ ಮೊದಲಾದ ಕ್ಷೇತ್ರಗಳಲ್ಲೂ ಸಹ ರಾಜಶೇಖರನ್ ಗಣನೀಯವಾದ ಕಾಣಿಕೆ ಕೊಟ್ಟಿದ್ದಾರೆ. ಮೂಲತಃ ಚಿಂತಕರಾದ ರಾಜಶೇಖರನ್‌ರವರಿಗೆ ಕರ್ನಾಟಕದ ಗ್ರಾಮೀಣ ಬದುಕು ಚಿರಪರಿಚಿತವಾದುದು. ಜೊತೆಗೆ

ವಿದೇಶಗಳನ್ನು ಚೆನ್ನಾಗಿ ಅರಿತಿರುವ ಅವರಿಗೆ ತೌಲನಿಕವಾಗಿ ವಿಚಾರಗಳನ್ನು ಚಿಂತಿಸುವ ವಿಶಿಷ್ಟ ಗುಣ ಬೆಳೆದಿದೆ. ಇವುಗಳಿಂದಾಗಿ ರಾಜಶೇಖರನ್ ಹೊಸ ಹೊಸ ಯೋಜನೆಗಳನ್ನು ನಮ್ಮ ಸರ್ಕಾರಗಳಿಗೆ ಕೊಡಲು ಸಮರ್ಥರಾಗಿದ್ದಾರೆ. ಇದನ್ನು ಸರ್ಕಾರಗಳು ಗಂಭೀರವಾಗಿ ಪರಿಗಣಿಸಿ ಅನುಷ್ಠಾನ ಮಾಡಿದರೆ ಅದರಿಂದ ಜನ ಸಮೂಹಕ್ಕೆ ಅಪರಿಮಿತವಾದ ಪ್ರಯೋಜನ ಆಗುತ್ತದೆ. ೧೯೭೭ರಿಂದಲೂ ನಾನು ರಾಜಶೇಖರನ್ ಅವರನ್ನು ನೋಡುತ್ತಾ ಬಂದಿದ್ದೇನೆ. ಅವರು ೧೯೭೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಲ್ಲಿ ಜನತಾಪಕ್ಷದಿಂದ ಸ್ಪರ್ಧಿಸಿದ್ದರು. ಆಗ ನಾನು ಯುವ ಜನತಾದ ಅಧ್ಯಕ್ಷ. ಈ ಹಿನ್ನೆಲೆಯಲ್ಲಿ ಕನಕಪುರದ ಚುನಾವಣಾ ಜವಾಬ್ದಾರಿಯನ್ನು ವಹಿಸಿಕೊಂಡಿದ್ದೆ. ರಾಜಶೇಖರನ್‌ರವರು ತುಂಬಾ ಸಂಯಮದಿಂದ ಈ ಚುನಾವಣೆಯನ್ನು ಎದುರಿಸಿದರು. ವೈಯಕ್ತಿಕವಾಗಿ ಎಲ್ಲೂ ಪ್ರಧಾನಿಯನ್ನೋ ಅಥವಾ ಮತ್ತೊಬ್ಬ ನಾಯಕನನ್ನೋ ಟೀಕಿಸಲಿಲ್ಲ. ಜಾತಿ ಮುಂತಾದವುಗಳನ್ನು ಬಳಸಿಕೊಂಡು ಅಕ್ರಮ ಮಾರ್ಗದಿಂದ ಚುನಾವಣೆಯನ್ನು ಗೆಲ್ಲಲಿಲ್ಲ. ಅನೇಕ ಕಾರಣಗಳಿಂದ ಅವರು ಚುನಾವಣೆಯಲ್ಲಿ ಸೋತಿದ್ದರೂ, ಇಡೀ ಕನಕಪುರ ಲೋಕಸಭಾ ಕ್ಷೇತ್ರದ ಮತದಾರರ ವಿಶ್ವಾಸಕ್ಕೆ ಪಾತ್ರರಾಗಿದ್ದರು.

೧೯೭೮ರಲ್ಲಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಆಯ್ಕೆ ಆದ ರಾಜಶೇಖರನ್‌ರವರು ಜನತಾ ಪಕ್ಷದ ಹಿರಿಯ ನಾಯಕರಾಗಿದ್ದರು. ಅವರ ಜೊತೆ ನಾನು ಅನೇಕ ಸಾರಿ ಮಾತನಾಡಿ ವಿಚಾರ ವಿನಿಮಯ ಮಾಡಿಕೊಂಡಿದ್ದೇನೆ. ೧೯೭೮ರ ಚುನಾವಣೆ ಕರ್ನಾಟಕ ರಾಜಕೀಯ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದುದು. ಚುನಾವಣೆಗೆ ಒಂದು ತಿಂಗಳ ಹಿಂದೆ ಜನಿಸಿದ ಅರಸು-ಇಂದಿರಾಗಾಂಧಿ ನೇತೃತ್ವದ ಕಾಂಗ್ರೆ ಪಕ್ಷ ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಧೂಳೀಪಟ ಆಗುತ್ತದೆ ಎಂದು ಜನತಾ ಪಕ್ಷದ ನಾಯಕರು ಭಾವಿಸಿದ್ದರು. ಇದಕ್ಕೆ ವಿರುದ್ಧವಾಗಿ ಜನತೆ ಮತ್ತೆ ಅರಸು ಮತ್ತು ಇಂದಿರಾ ಗಾಂಧಿಯವರನ್ನು ಬೆಂಬಲಿಸಿತು. ಅನಂತರ ಜನತಾ ಪಕ್ಷ ನಿಧಾನವಾಗಿ ವಿಚ್ಛಿದ್ರವಾಗುತ್ತಾ ಹೋಯಿತು. ೧೯೮೦ರಲ್ಲಿ ವೀರೇಂದ್ರ ಪಾಟೀಲ್ ಬಹು ದೊಡ್ಡ ಗುಂಪನ್ನು ಕಾಂಗ್ರೆ ಪಕ್ಷಕ್ಕೆ ಕರೆದುಕೊಂಡು ಹೋದರು. ಕಾಂಗ್ರೆ ಪಕ್ಷದತ್ತ ಅನೇಕ ಜನ ಕಣ್ಣೋಟ ಹರಿಸಿದ್ದರು. ಜೊತೆಗೆ ಜನತಾ ಪಕ್ಷದಲ್ಲಿ ವ್ಯಕ್ತಿ ಪ್ರತಿಷ್ಠೆ ಗರಿಷ್ಠ ಪ್ರಮಾಣ ಮುಟ್ಟಿ ಸಂಘಟನೆ ದುರ್ಬಲವಾಗಿತ್ತು. ಈ ಸಂದರ್ಭದಲ್ಲಿ ರಾಜಶೇಖರನ್ ಹೊಂದಾಣಿಕೆ ರಾಜಕೀಯ ಮಾಡಿಕೊಳ್ಳದೆ ವಿಧಾನಸಭಾ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟು ವಿದೇಶಕ್ಕೆ ಹೋದರು.

ಯುವ ಪ್ರಧಾನಿ ರಾಜೀವ್‌ಗಾಂಧಿಯವರ ಆದರ್ಶಗಳಿಗೆ ಮನಸೋತ ರಾಜಶೇಖರನ್ ೧೯೮೮ರಲ್ಲಿ ಕಾಂಗ್ರೆಸ್-ಐ ಗೆ ಬಂದರು. ಸುಮಾರು ೧೬ ವರ್ಷಗಳಿಗೂ ಹೆಚ್ಚು ಕಾಲ ಅವರು ಕಾಂಗ್ರೆಸ್ ಪಕ್ಷದಲ್ಲಿ ಯಾವುದೇ ಸ್ಥಾನವನ್ನು ಪಡೆಯದೆ ನಿಷ್ಠಾವಂತರಾಗಿ ಸೇವೆ ಸಲ್ಲಿಸಿದರು. ಇಂತಹ ತಾಳ್ಮೆಯಿಂದಾಗಿ ರಾಜಶೇಖರನ್ ನಮ್ಮ ಯುವ ರಾಜಕಾರಣಿಗಳಿಗೆ ಮಾರ್ಗದರ್ಶಕರಾಗಬಲ್ಲರು. ಯಾವುದೇ ರಾಜಕೀಯ ಪಕ್ಷದಿಂದ ತಕ್ಷಣ ಸ್ಥಾನ ದೊರೆಯಲಿಲ್ಲ

ಎಂದು ಅನೇಕ ನಾಯಕರು ಅವುಗಳನ್ನು ತೊರೆದು ಹೋಗುತ್ತಾರೆ. ಆದರೆ ಸಮಾಜ ಸೇವಕರ ಗುಂಪಿಗೆ ಸೇರಿದ ರಾಜಕಾರಣಿಗಳು ರಾಜಕೀಯವನ್ನು ಹವ್ಯಾಸವೆಂದು ಭಾವಿಸಿ ತಾವು ಸೇರಿದ್ದ ಪಾರ್ಟಿಯಲ್ಲಿ ಕೊನೆಯ ತನಕ ಉಳಿಯುತ್ತಾರೆ. ಇಂತಹ ಅಪರೂಪದ ವ್ಯಕ್ತಿಗಳನ್ನು ಗುರುತಿಸುವುದು ಎಲ್ಲರ ಕರ್ತವ್ಯ. ರಾಜಶೇಖರನ್‌ರವರ ಸುದೀರ್ಘ ಕಾಲದ ನಿಷ್ಠೆಯನ್ನು ಕೊನೆಗೂ ಸಮರ್ಥ ರೀತಿಯಲ್ಲಿ ಗುರುತಿಸಲಾಗಿದೆ. ಅವರು ಗಳಿಸಿರುವ ಜೀವನಾನುಭವ ಬಹಳ ದೊಡ್ಡದು. ಭಾರತದ ರಾಜಕಾರಣದ ಎಲ್ಲಾ ಏಳು-ಬೀಳುಗಳು ಅವರಿಗೆ ಚಿರಪರಿಚಿತ. ಪ್ರಧಾನಿ ಜವಾಹರ್‌ಲಾಲ್ ನೆಹರು ಅವರಿಂದ ಹಿಡಿದು ಅಟಲ್ ಬಿಹಾರಿ ವಾಜಪೇಯಿಯವರಿಗೆ ಅವರು ಕೇಂದ್ರ ಸರ್ಕಾರದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ. ಅದೇ ರೀತಿ ಮೈಸೂರು ಸಂಸ್ಥಾನದ ಪ್ರಪ್ರಥಮ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯಿಂದ ಹಿಡಿದು ಪ್ರಸ್ತುತ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರ ತನಕ ಅವರಿಗೆ ಎಲ್ಲರೂ ವೈಯಕ್ತಿಕವಾಗಿ ಪರಿಚಿತರು. ಕೃಷಿ, ಗ್ರಾಮೀಣ ಅಭಿವೃದ್ಧಿ, ಯುವಜನ ಸೇವೆ ಹಾಗೂ ಆರೋಗ್ಯ ಮೊದಲಾದ ಅವಶ್ಯಕ ಕ್ಷೇತ್ರಗಳಲ್ಲಿ ಅಪಾರವಾದ ಆಸಕ್ತಿ ಹಾಗೂ ವಿದ್ವತ್ತು ಪಡೆದಿರುವ ರಾಜಶೇಖರನ್ ಅವರನ್ನು ನಮ್ಮ ಸಮಾಜ ಸಮರ್ಪಕವಾಗಿ ಬಳಸಿಕೊಳ್ಳಬೇಕು. ಅವರ ರಾಜಕೀಯ ಅನುಭವ ಕೂಡ ಸಾಮಾನ್ಯವಾದುದಲ್ಲ. ಅವರ ಅನುಭವದಿಂದ ಅನೇಕ ಉತ್ತಮ ಅಂಶಗಳನ್ನು ನಮ್ಮ ಯುವ ರಾಜಕಾರಣಿಗಳು ಕಲಿಯಬೇಕಾಗಿದೆ. ಎಪ್ಪತ್ತೈದರ ಹರೆಯದರಲ್ಲೂ ಉತ್ಸಾಹಿಗಳೂ ಹಾಗೂ ಕಾರ್ಯಶೀಲರೂ ಆಗಿರುವ ರಾಜಶೇಖರನ್ ಅವರನ್ನು ನಮ್ಮ ಸಮಾಜ ಸಮರ್ಪಕವಾಗಿ ಬಳಸಿಕೊಳ್ಳಲಿ ಎಂದು ಆಶಿಸುತ್ತೇನೆ.

***

# ಯುವ ಪೀಳಿಗೆಯ ಆದರ್ಶ

ವಿ.ಎಸ್. ಕೃಷ್ಣಯ್ಯರ್

ಎಂ.ವಿ. ರಾಜಶೇಖರನ್ ನನಗೆ ತುಂಬಾ ಹಳೆಯ ಪರಿಚಯ. ಅವರು ಶ್ರೀ ಎಸ್.ನಿಜಲಿಂಗಪ್ಪ ಅವರ ಅಳಿಯನೆಂಬ ಕಾರಣಕ್ಕಾಗಿ ಪರಿಚಿತರಲ್ಲ. ಅವರೊಬ್ಬ ರೈತ ಅಂತಾನೇ ನನಗೆ ಪರಿಚಿತರು. ಅಷ್ಟು ಮಾತ್ರ ಅಲ್ಲ, ಅವರೊಬ್ಬ ಶ್ರೀಮಂತ ರೈತ, ಪ್ರಗತಿಶೀಲ ರೈತ. ಕೃಷಿಯಲ್ಲಿ ಹಲವು ಪ್ರಯೋಗ ಮಾಡಿ ಸಫಲರಾಗಿದ್ದಾರೆ ಮಾತ್ರವಲ್ಲ, ವಿಫಲರೂ ಆಗಿದ್ದಾರೆ. ಅವರ ಕೃಷಿ ಜಮೀನು ಅವರ ಪ್ರಯೋಗಶಾಲೆ ಎಂದೂ ನಾನು ಕೇಳಿರುವೆ. ಐವತ್ತು - ಅರವತ್ತು ವಿದೇಶಗಳಲ್ಲಿ ತಿರುಗಿ ಕೃಷಿ ಬಗೆಗೆ ಸಾಕಷ್ಟು ಅಧ್ಯಯನ ಮಾಡಿದವರು. ಹಾಗೆಯೇ ಮೂರನೆಯ ಜಗತ್ತಿನ ರಾಷ್ಟ್ರಗಳ ರೈತರಂತೆ ಎಲ್ಲ ಅನಿಶ್ಚಿತತೆಗಳನ್ನು ಅನುಭವಿಸಿದವರು ಅವರಾಗಿದ್ದಾರೆ. ನನಗೆ ತಿಳಿದಂತೆ ಅವರ ಎರಡನೆಯ ಆಸಕ್ತಿಯ ಕ್ಷೇತ್ರ ಗ್ರಾಮೀಣಾಭಿವೃದ್ಧಿ. ಇದರ ಬಗೆಗೆ ಅವರು ಸಾಕಷ್ಟು ಅಧ್ಯಯನ ನಡೆಸಿದ್ದಾರೆ. ಪ್ರಪಂಚದ ಪ್ರಮುಖ ಮತ್ತು ಹಿಂದುಳಿದ ದೇಶಗಳಲ್ಲಿಯ ಗ್ರಾಮೀಣಾಭಿವೃದ್ಧಿಯ ಬಗೆಗಿನ ಯೋಜನೆಗಳನ್ನು ಅಧ್ಯಯನ ಮಾಡಿ ಬಂದವರಾಗಿದ್ದಾರೆ. ಅವರ ಈ ಅಧ್ಯಯನಪ್ರವೃತ್ತಿ ಅವರು ವಿದ್ಯಾರ್ಥಿಯಾಗಿದ್ದಾಗಿನಿಂದಲೇ ರೂಢಿಗತವಾಗಿದೆ. ಆದುದರಿಂದ ಸ್ವತಃ ಅವರು ಸರ್ಕಾರೇತರ ಗ್ರಾಮೀಣಾಭಿವೃದ್ಧಿ ಸಂಸ್ಥೆ (Asian Institute for Rural Development (AIRD) ಯನ್ನು ತೆರೆದರು. ಅದರ ಮುಖೇನ ಅವರು ಗ್ರಾಮೀಣಾಭಿವೃದ್ಧಿಯ ಬಗೆಗೆ ನಿರಂತರ ಚಿಂತನೆ, ಅಧ್ಯಯನ ನಡೆಸಿರುವರು. ಇದೊಂದು ಶ್ಲಾಘನೀಯವಾದ ಕೆಲಸವೇ ಆಗಿದೆ.

ಎಂ.ವಿ. ರಾಜಶೇಖರನ್ ಅವರು ತಮ್ಮ ಮಾವ ನಿಜಲಿಂಗಪ್ಪನವರು ಕಾಂಗ್ರೆಸ್ ಪಕ್ಷಕ್ಕೆ ಸೇರಿದವರು ಅನ್ನುವ ಕಾರಣಕ್ಕಾಗಿ ಕಾಂಗ್ರೆಸ್ ಸೇರಿದವರಲ್ಲ. ನಾನು ಯುವಕನಾಗಿದ್ದಾಗಲೇ ಅವರು ವಿದ್ಯಾರ್ಥಿ ಕಾಂಗ್ರೆಸ್‌ನಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಕಾಂಗ್ರೆಸ್‌ನ ಎಲ್ಲ ಚಳವಳಿಗಳಲ್ಲಿ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ೧೯೪೨ ರಿಂದ ೧೯೪೭ರ ವರೆಗೂ ತುಂಬಾ ಚಟುವಟಿಕೆಯಿಂದ ಭಾಗವಹಿಸಿದವರಾಗಿದ್ದಾರೆ. ಮೈಸೂರು ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ಸೇರಿಸುವಂತೆ ಮಾಡಿದ ಕಾಂಗ್ರೆಸ್ ಚಳುವಳಿಯಲ್ಲಿ ಕನಕಪುರದ ವಿದ್ಯಾರ್ಥಿ ಕಾಂಗ್ರೆಸ್‌ನ ಅಧ್ಯಕ್ಷರಾಗಿ 'ಮೈಸೂರು ಚಲೋ'

ಜಾಥಾವನ್ನು ಸಂಘಟಿಸಿದ್ದಾರೆ. ಈ ಸಂದರ್ಭದಲ್ಲಿ ನನಗೂ ರಾಜಶೇಖರನ್ ಅವರಿಗೂ ಪರಿಚಯವಾಗಿದ್ದು. ಆ ಸಂದರ್ಭದಿಂದ ಮುಂದೆ ಅವರು ಕಾಂಗ್ರೆಸ್ ಕಚೇರಿಗೆ ಬರುತ್ತಿದ್ದರು. ಸ್ವಂತ ಕಾರನ್ನು ಹೊಂದಿದ್ದ ರಾಜಶೇಖರನ್ ನೀಟಾಗಿ ಇಸ್ತ್ರಿ ಮಾಡಿದ ಸಿಲ್ಕ್ ಸೂಟನ್ನು ಹಾಕಿಕೊಂಡು ಪಕ್ಷದ ಕಚೇರಿಗೆ ಬರುತ್ತಿದ್ದರು. ಶ್ರೀಮಂತಿಕೆಯ ಕಳೆಯಿದ್ದರೂ ಸ್ವಲ್ಪವೂ ಗರ್ವ, ಧಾರ್ಷ್ಟ್ಯತನವಿಲ್ಲದ ಅವರ ನಡವಳಿಕೆ ನಮಗೆ ಆಶ್ಚರ್ಯ ತಂದಿತ್ತು. ಇಂದೂ ಕೂಡಾ ಅವರು ಹಾಗೆಯೇ ಇದ್ದಾರೆ. ಆಗ ಅವರೆಷ್ಟು ಶ್ರೀಮಂತರಾಗಿದ್ದಾರೋ ಈಗಲೂ ಅಷ್ಟೇ ಶ್ರೀಮಂತರು ಅಥವಾ ಅದಕ್ಕೂ ಕಡಿಮೆಯಾದರೆ ಹೊರತು ಅವರು ಹೆಚ್ಚು ಶ್ರೀಮಂತರಾಗುತ್ತಾ ಹೋಗಲಿಲ್ಲ. ರಾಜಕೀಯವನ್ನು ಒಂದು ಬಿಜಿನೆಸ್ಸು ಮಾಡಿಕೊಂಡು ಧಿಡೀರ್ ಕೋಟ್ಯಾಧಿಪತಿಗಳಾದ ದೃಷ್ಟಾಂತಗಳಿಗೇನು ಕೊರತೆಯಿಲ್ಲದ ಸಂದರ್ಭದಲ್ಲಿ ಇವರು ಅದಕ್ಕೊಂದು ಅಪವಾದವಾಗಿದ್ದಾರೆ. ರಾಜಕೀಯವನ್ನು ಜನಸೇವೆಗಾಗಿಟ್ಟ ಮಹಾನ್ ಮಾನವತಾವಾದಿಯಾಗಿ ನಮ್ಮ ನಡುವೆ ರಾಜಕಾರಣ ನಡೆಸುತ್ತಿದ್ದಾರೆ. ಪಕ್ಷದಲ್ಲಿ ಶಿಸ್ತು, ಬದ್ಧತೆ ಮತ್ತು ತಾತ್ವಿಕ ರಾಜಕಾರಣಿಯಾಗಿದ್ದಾರೆ. ಇದು ಅವರ ಸದ್ಗುಣವೆಂದು ಹೇಳಬೇಕು.

೧೯೫೯ರಲ್ಲಿ ಎಂ.ವಿ.ರಾಜಶೇಖರನ್ ಅವರು ಅಂದಿನ ಭಾರತದ ಪ್ರಭಾವಿ ರಾಜಕಾರಣಿಯಾಗಿದ್ದ ಎಸ್.ನಿಜಲಿಂಗಪ್ಪನವರ ಮಗಳನ್ನು ಮದುವೆಯಾದರು. ಈ ಸಂದರ್ಭದಲ್ಲಿ ಎಸ್.ನಿಜಲಿಂಗಪ್ಪನವರು ರಾಜಕೀಯ ಅಧ್ವರ್ಯುಗಳು. ರಾಷ್ಟ್ರಮಟ್ಟದಲ್ಲಿ ಅವರು ರಾಜಕೀಯ ಹಿಡಿತವನ್ನು ಸ್ಥಾಪಿಸಿದ್ದರು. ಶ್ರೀಮತಿ ಇಂದಿರಾ ಗಾಂಧಿವಯವರಿಗೆ ರಾಜಕೀಯ ದೀಕ್ಷೆಯನ್ನು ನೀಡಿದವರಲ್ಲಿ ಎಸ್.ನಿಜಲಿಂಗಪ್ಪನವರೂ ಒಬ್ಬರು. ಲಾಲ್‌ಬಹುದ್ದೂರ್ ಶಾಸ್ತ್ರಿಯವರ ತರುವಾಯ ಒಂದು ವೇಳೆ ಎಸ್.ನಿಜಲಿಂಗಪ್ಪನವರು ಶ್ರೀ ಮುರಾರ್ಜಿ ದೇಸಾಯಿಯವರನ್ನು ದೇಶದ ಪ್ರಧಾನಿಯನ್ನಾಗಿ ಮಾಡಿದ್ದರೆ ದೇಶದ ಚರಿತ್ರೆಯೇ ಬದಲಾಗುತ್ತಿತ್ತು ಎಂಬ ಮಾತು ಕೇಳಿಬರುತ್ತಿದೆ. ಹಾಗೆಯೇ ಆ ಸಂದರ್ಭದಲ್ಲಿ ಇಂದಿರಾ ಗಾಂಧಿ ಅವರನ್ನೇ ಪ್ರಧಾನ ಮಂತ್ರಿ ಗಾದಿಗೆ ಕುಳ್ಳಿರಿಸಿದವರು ಶ್ರೀ ಎಸ್.ನಿಜಲಿಂಗಪ್ಪನವರು ಎಂದು ಬೇರೆ ಹೇಳಬೇಕಾಗಿಲ್ಲ. ಶ್ರೀ ಎಂ.ವಿ.ರಾಜಶೇಖರನ್ ಎಂದೂ ತನ್ನ ಸಂಬಂಧದ ದುರ್ಲಾಭ ಪಡೆದವರಲ್ಲ. ನಿಜಲಿಂಗಪ್ಪ ಮತ್ತು ಎಂ.ವಿ.ರಾಜಶೇಖರನ್ ಅವರಿಬ್ಬರ ಸಂಬಂಧವೇ ಹಾಗಿತ್ತು. ಇಬ್ಬರೂ ಸ್ವಾಭಿಮಾನಿಗಳು ಅಷ್ಟೇ ಅಲ್ಲ, ನಿಸ್ವಾರ್ಥ ರಾಜಕಾರಣಿಗಳು. ಪರಸ್ಪರರಲ್ಲಿ ಒಬ್ಬರನ್ನೊಬ್ಬರು ನೋಡಿ ವ್ಯಕ್ತಿಗತ ಸಂಸ್ಕಾರಗಳಲ್ಲಿ ಬದಲಾವಣೆಗಳನ್ನು ತಂದುಕೊಂಡರೇ ಹೊರತು ರಾಜಕಾರಣದಲ್ಲಿ ಒಬ್ಬರನ್ನೊಬ್ಬರು ಕೈ ಜೋಡಿಸಿಕೊಂಡು ರಾಜಕೀಯ ಸಂದರ್ಭಗಳ ಲಾಭ ಪಡೆದು ಅನುಭವಿಸಿದವರಲ್ಲ ಎಂಬ ಮಾತನ್ನು ಅವರ ಬಗೆಗೆ ಧೈರ್ಯವಾಗಿ ಹೇಳುತ್ತೇನೆ.

ಎಂ.ವಿ. ರಾಜಶೇಖರನ್ ಅವರು ದೆಹಲಿಯಲ್ಲಿ ಕಾನೂನು ವ್ಯಾಸಂಗ ಮಾಡುತ್ತಿರುವಾಗ ವ್ಯಕ್ತಿಗತವಾಗಿ ಆ ಸಂದರ್ಭದ ಹತ್ತು ಹಲವು ವಿದ್ಯಾರ್ಥಿ ಮುಖಂಡರಲ್ಲಿ ತಮ್ಮ ಸ್ನೇಹವನ್ನು ವೃದ್ಧಿಸಿಕೊಂಡರು. ಮಾಜಿ ಪ್ರಧಾನಮಂತ್ರಿಗಳಾಗಿದ್ದ ಚಂದ್ರಶೇಖರ್, ಐ.ಕೆ.ಗುಜ್ರಾಲ್, ಉಪರಾಷ್ಟ್ರಪತಿಗಳಾಗಿದ್ದ ಕೃಷ್ಣಕಾಂತ, ಡಾ. ಕರಣಸಿಂಗ್, ಮೋಹನ್ ಧಾರಿಯಾ, ದಿನೇಶ್

ಸಿಂಗ್ ಇವರೆಲ್ಲಾ ಶ್ರೀ ರಾಜಶೇಖರನ್ ಅವರ ಒಡನಾಡಿಗಳು. ಇಂದಿರಾ ಗಾಂಧಿಯವರ 'ಯಂಗ್ ಟರ್ಕ್'ನಲ್ಲಿ ಗುರುತಿಸಿಕೊಂಡವರಾಗಿದ್ದರು. ೧೯೬೭ರ ಲೋಕಸಭಾ ಚುನಾವಣೆಯಲ್ಲಿ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ಶ್ರೀಮತಿ ಇಂದಿರಾ ಗಾಂಧಿಯವರು 'ಯಂಗ್ ಟರ್ಕ್' ಕೋಟಾದಡಿಯಲ್ಲೇ ಟಿಕೆಟ್ ನೀಡಿದರು. ಒಂದು ಹಂತದವರೆಗೆ 'ಯಂಗ್ ಟರ್ಕ್‌ನಲ್ಲಿ' ಗುರುತಿಸಿಕೊಂಡ ಇವರು ಅದರ ಚಟುವಟಿಕೆಗಳಿಗೆ ಬೇಸತ್ತು ಅದರಿಂದಲೂ ದೂರವನ್ನು ಸಾಧಿಸಿಕೊಂಡು ಬಂದವರು. ವೈಯಕ್ತಿಕವಾಗಿ ಇವರೊಡನೆ ಆತ್ಮೀಯವಾಗಿದ್ದರಾದರೂ ಮೌಲ್ಯದಲ್ಲಿ ಅವರೊಡನೆ ರಾಜಿಮಾಡಿಕೊಳ್ಳದಿದ್ದುದು ಇವರ ವ್ಯಕ್ತಿತ್ವದ ಮತ್ತೊಂದು ವಿಶೇಷ. ಇವರ ಆತ್ಮಿಯ ಗೆಳೆಯರೆಂದರೆ ಅಶೋಕ ಮೆಹ್ತಾ, ಅರ್ಜುನ್ ಸಿಂಗ್, ಎನ್.ಡಿ.ತಿವಾರಿ, ಸಿ.ಬಿ.ಗುಪ್ತಾ, ಕಾಮರಾಜ್, ಎಸ್.ಕೆ.ಪಾಟೀಲ, ನೀಲಂ ಸಂಜೀವರೆಡ್ಡಿ ಮುಂತಾದವರು.

ನನಗೆ ತಿಳಿದ ಮಟ್ಟಿಗೆ ಎಂ.ವಿ.ರಾಜಶೇಖರನ್ ರಾಜ್ಯದ ಪರವಾಗಿ ಪ್ರಬಲ 'ಲಾಬಿ' ಮಾಡುತ್ತಿದ್ದರು. ತಮ್ಮ ವೈಯಕ್ತಿಕ ಪರಿಚಯಗಳನ್ನು ಬಳಸಿಕೊಂಡು ರಾಜ್ಯದ ಪರ ಪರಿಣಾಮಕಾರಿಯಾಗಿ ಲಾಬಿ ಮಾಡುವವರು. ಹೆಚ್ಚು ಮಾತನಾಡದೇ ಎಲ್ಲ ಯೋಜನೆಗಳನ್ನು ರಾಜಕ್ಕೆ ತರಬೇಕೆಂಬುದೇ ಅವರ ಇದರ ಹಿಂದಿನ ಉದ್ದೇಶವಾಗಿತ್ತು. ತಮ್ಮ ಗೆಳೆಯರು ಮತ್ತು ಸಂಸತ್ತಿನ ಹಾಗೂ ಸಚಿವಾಲಯದ ಅಧಿಕಾರಿಗಳ ಜೊತೆಗೆ ನೇರವಾದ ಮತ್ತು ನಿಕಟವಾದ ಸಂಪರ್ಕದಿಂದ ರಾಜ್ಯಕ್ಕೆ ತರಬಹುದಾದ ಎಲ್ಲಾ ಯೋಜನೆಗಳನ್ನು ಇವರು ತಂದುಕೊಟ್ಟವರಾಗಿದ್ದಾರೆ. ಅಂತಹ ಎರಡು ನಾಯಕತ್ವಗಳನ್ನು ನಾನು ಈವರೆಗೂ ಕಂಡಿದ್ದೇನೆ. ಅವುಗಳೆಂದರೆ ಶ್ರೀನಿವಾಸ ಮಲ್ಯ ಹಾಗೂ ಎಂ.ವಿ.ರಾಜಶೇಖರನ್. ಇವರು ಸಂಸತ್ತಿನಲ್ಲಿ, ವೇದಿಕೆಗಳಲ್ಲಿ ಅಥವಾ ಮತ್ತೆಲ್ಲೋ ಹೆಚ್ಚಾಗಿ ಮಾತನಾಡಿದವರಲ್ಲ, ಬದಲಾಗಿ ಶಿಸ್ತುಬದ್ಧವಾಗಿ ಕೆಲಸ ಮಾಡಿದವರು.

ಎಂ.ವಿ. ರಾಜಶೇಖರನ್ ಅವರಲ್ಲಿ ಒಂದು ಆರ್ಥಿಕ ಶಿಸ್ತು ಬೆಳೆದಿದೆ. ಅವರನ್ನು ನಾನು ವಿದ್ಯಾರ್ಥಿ ದೆಸೆಯಿಂದಲೇ ನೋಡುತ್ತಿರುವುದರಿಂದ ಈ ಮಾತನ್ನು ಹೇಳುತ್ತಿದ್ದೇನೆ. ಆ ಶಿಸ್ತು ವೈಯಕ್ತಿಕವಾಗಿ ಮತ್ತು ಸಾರ್ವಜನಿಕವಾಗಿ ಪ್ರಕಟಗೊಳ್ಳುತ್ತಿರುತ್ತದೆ. ವೈಯಕ್ತಿಕ ಸಂದರ್ಭದಲ್ಲಿ ತನ್ನ ಆದಾಯದ ಇತಿಮಿತಿಗಳನ್ನು ಅರಿತು ಕೆಲಸಮಾಡುವುದು. ನಿಜವಾಗಿ ಸಂಪಾದನೆ ಮಾಡಿ ಖರ್ಚುಮಾಡುವುದಾದರೆ, ಸಾರ್ವಜನಿಕವಾಗಿಯೂ ಹಣವನ್ನು ನಿರರ್ಥಕವಾಗಿ ವೆಚ್ಚ ಮಾಡುವ ಮನೋಭಾವ ಅವರದ್ದಲ್ಲ. ಯಾರದೋ ಹಣದಿಂದ ರಾಜಕೀಯ ಬೇಳೆ ಬೇಯಿಸಿಕೊಳ್ಳುವುದು, ಕಾರ್ಯಕ್ರಮ ಸಂಘಟಿಸುವುದು ಅಥವಾ ಸಾರ್ವಜನಿಕ ಹಣವನ್ನು ಸ್ವಾರ್ಥ ಸಾಧನೆಗೆ ಬಳಸಿಕೊಳ್ಳುವುದನ್ನು ಎಂದೂ ಮಾಡಿದವರಲ್ಲ. ಅಗತ್ಯಕ್ಕಿಂತ ಹೆಚ್ಚಾಗಿ ಒಂದು ಗುಂಡುಸೂಜಿಯನ್ನೂ ಅವರು ಉಪಯೋಗಿಸಿದವರಲ್ಲ.

ಅಧಿಕಾರವಿರಲಿ, ಇರದಿರಲಿ ಅವರದ್ದು ಒಂದೇ ಬಗೆಯ ಜೀವನ ಪದ್ಧತಿ. ಅಧಿಕಾರದಲ್ಲಿದ್ದಾಗ ಅಥವಾ ಇರದಿದ್ದಾಗ ತಮ್ಮ ಅಧ್ಯಯನವನ್ನು ನಿಲ್ಲಿಸಿದವರಲ್ಲ. ಹತ್ತು ಹಲವು ವಿದೇಶಿ ಸರ್ಕಾರಗಳ ಕರೆಯ ಮೇರೆಗೆ ಅವರು ವಿದೇಶಗಳಿಗೆ ಹೋಗಿ ಬರುತ್ತಿದ್ದರು.

ಅಂತಹ ಸಂದರ್ಭದಲ್ಲಿ ಹಣ ಉಳಿಸಿಕೊಂಡು ತಮ್ಮ ಕೃಷಿ ಚಟುವಟಿಕೆಗಳ ಪ್ರಯೋಗಕ್ಕೆ ಬಳಸಿಕೊಳ್ಳುತ್ತಿದ್ದರು. ಸರ್ಕಾರದ ಅಥವಾ ಸಾರ್ವಜನಿಕರ ಒಂದು ನಯಾಪೈಸೆ ಹಣವನ್ನು ತಮ್ಮ ಸ್ವಂತ ಕೆಲಸ ಕಾರ್ಯಗಳಿಗೆ ಉಪಯೋಗಿಸಿಕೊಂಡವರಲ್ಲ.

'ಎಂ.ವಿ.ರಾಜಶೇಖರನ್ ಅವರು ರಿಸ್ಕ್ ತೆಗೆದುಕೊಳ್ಳುವುದಿಲ್ಲ. ಅವರಲ್ಲಿ ಆ ಉಮೇದಿಲ್ಲ. ಅವರು ಸಾರ್ವಜನಿಕ ಸಂಘಟನೆಯಲ್ಲಿ ಮುನ್ನುಗ್ಗುವುದಿಲ್ಲ' ಎಂಬ ಮಾತುಗಳನ್ನು ಅನೇಕ ಕಾರ್ಯಕರ್ತರಿಂದ, ಜನಸಾಮಾನ್ಯರಿಂದ ಕೇಳಿದ್ದೇನೆ. ಅದನ್ನು ನಾನೂ ಒಪ್ಪುತ್ತೇನೆ. ಎಂ.ವಿ.ರಾಜಶೇಖರನ್ ಎಂದೂ ಅಕ್ರಮವಾಗಿ ಹಣ ಸಂಪಾದನೆ ಮಾಡಿದವರಲ್ಲ. ಅದು ಅವರ ಜಾಯಮಾನಕ್ಕೆ ಒಗ್ಗದು. ಸಾರ್ವಜನಿಕರ ಇಂತಹ ಅಹವಾಲುಗಳಿಗೆ ಅಪಾರ ಹಣ ವೆಚ್ಚವಾಗುತ್ತದೆ. ಅದಕ್ಕೆ ಬಂಡವಾಳ ಎಲ್ಲಿಂದ ತರಬೇಕು? ಒಂದು ವೇಳೆ ಅದನ್ನು ತರಬೇಕೆಂದರೆ ಅಕ್ರಮ ಮಾರ್ಗವನ್ನು ಅನುಸರಿಸಬೇಕು. ಸಾರ್ವಜನಿಕರನ್ನು ಬಡವರನ್ನು ಶೋಷಿಸಬೇಕು. ಇಂತಹ ಮನೋಧರ್ಮ ರಾಜಶೇಖರನ್‌ರವರಂತಹ ನಿಷ್ಠಾವಂತರಿಗೆ ಸಾಧ್ಯವೇ? ಅಂತರಂಗದಲ್ಲಿ ಗಾಂಧಿಯನ್ನೇ ಪ್ರತಿಷ್ಠಾಪಿಸಿಕೊಂಡ ಅವರಿಗೆ ಇದು ಕನಸು ಮನಸ್ಸಿನಲ್ಲೂ ಸಾಧ್ಯವಾಗದು. ಹೀಗಿರುವುದರಿಂದಲೇ ಅವರು ಸಂಸತ್ತಿನ ಅಥವಾ ರಾಜ್ಯದ ಯಾವುದೇ ಉನ್ನತ ಹುದ್ದೆಗೇರಿದವರೇ ಅಲ್ಲ. ಇಂತಹ ಮನೋಧರ್ಮದವರಿಗೆ ಇಂದು ಅಂತಹ ಸ್ಥಳಗಳು ಅಸಾಧ್ಯವೆಂದೇ ಹೇಳಬೇಕು.

'ಮೌಲ್ಯಾಧಾರಿತ ರಾಜಕಾರಣ' ಎನ್ನುವ ಮಾತೊಂದಿದೆ. ಶ್ರೀ ರಾಮಕೃಷ್ಣ ಹೆಗಡೆಯವರು ಈ ಪದವನ್ನು ಪದೇ ಪದೇ ಬಳಸುತ್ತಿರುತ್ತಾರೆ. ಅಂತಹ ರಾಜಕಾರಣಕ್ಕೆ ಆಪ್ಯಾಯಮಾನವಾಗುವಂತೆ ತಮ್ಮನ್ನು ರಾಜಕೀಯದಲ್ಲಿ ತೊಡಗಿಸಿಕೊಂಡಿರುವ ವ್ಯಕ್ತಿ ಎಂದರೆ ನಮ್ಮ ಸಂದರ್ಭದಲ್ಲಿ ಶ್ರೀ ಎಂ.ವಿ.ರಾಜಶೇಖರನ್ ಒಬ್ಬರೇ. ಎಲ್ಲೆಲ್ಲಿ ತತ್ವವಿರುತ್ತದೋ ಅಲ್ಲಲ್ಲಿ ರಾಜಶೇಖರನ್ ಇರುತ್ತಾರೆ. ಅವರೆಂದೂ ತತ್ವರಹಿತ ರಾಜಕಾರಣ ಮಾಡಿದವರಲ್ಲ. ಅಸಂಖ್ಯ ಗೆಳೆಯರು, ನಿಕಟ ಬಂಧುಗಳು ಅತ್ಯಂತ ಎತ್ತರದ ಹುದ್ದೆಗಳಿದ್ದರೂ ಅವರ ಆತ್ಮೀಯತೆಯ ಅಥವಾ ನಿಕಟತೆಯ ದುರ್ಲಾಭವನ್ನು ಪಡೆಯದೆ ಸ್ವಯಂ ಪ್ರತಿಭೆಯಿಂದ ಮೇಲೆ ಬಂದ ರಾಜಕೀಯ ವಿಚಾರವಾದಿಗಳಾಗಿ ಎಂ.ವಿ.ರಾಜಶೇಖರನ್ ನಮಗೆ ಕಾಣಿಸಿದ್ದಾರೆ.

ಪ್ರಕೃತ ಅವರಿಗೆ ಎಪ್ಪತ್ತೈದು ವಸಂತಗಳೆಂದು ತಿಳಿದು ಆಶ್ಚರ್ಯಪಟ್ಟೆ. ಅದೇ ಮೌಲ್ಯ, ಅದೇ ಶಿಸ್ತು, ಶಿಥಿಲಗೊಳ್ಳದ ಸಿದ್ಧಾಂತದ ಚೌಕಟ್ಟು, ನಿಷ್ಕಲ್ಮಶ ಮನಸ್ಸು, ನಿಷ್ಕಳಂಕ ರಾಜಕಾರಣ, ನಿಸ್ವಾರ್ಥ ಜನಸೇವೆಯ ಘನೀಕೃತ ರೂಪವಾಗಿ ಸಾರ್ಥಕ ಎಪ್ಪತ್ತೈದು ವರ್ಷಗಳನ್ನು ಅವರು ಪೂರೈಸಿದ್ದಾರೆ. ಉತ್ತರೋತ್ತರ ಅವರ ಆದರ್ಶಗಳು ಯುವ ಪೀಳಿಗೆಗೆ ಮಾದರಿಯಾಗಿ ನಿಲ್ಲಲಿ; ಹಾಗೆಯೇ ರಾಜಕೀಯದಲ್ಲಿ ಜನಸೇವೆ ಮಾಡುವ ಸದವಕಾಶ ದೊರೆಯಲಿ ಎಂದು ದೇವರಲ್ಲಿ ಪ್ರಾರ್ಥಿಸಿಕೊಳ್ಳುವೆ.

❊❊❊

# ಸ್ನೇಹಶೀಲ

◆ ಸಿ. ಕೆ. ಜಾಫರ್ ಷರೀಫ್

ಎಂ.ವಿ.ರಾಜಶೇಖರನ್‌ರವರು ನನಗೆ ಬಹಳ ದಿನಗಳಿಂದ ಪರಿಚಿತರು. ನಾನು ನಿಜಲಿಂಗಪ್ಪನವರ ಮನೆಯಲ್ಲಿ ಬೆಳೆದವ. ಅವರು ನಿಜಲಿಂಗಪ್ಪನವರ ಅಳಿಯ. ಆನಂತರ ಅವರು ಪ್ರತಿನಿಧಿಸಿದ ಕನಕಪುರ ಲೋಕಸಭಾ ಕ್ಷೇತ್ರವನ್ನು ೧೯೭೨ರಲ್ಲಿ ನಾನು ಪ್ರತಿನಿಧಿಸಿದ್ದೆ. ನಾವು ಜೊತೆ ಜೊತೆಯಾಗಿ ಬೆಳೆದವರು ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಕೆಲಸ ಮಾಡಿದವರು.

೧೯೫೭ರ ಉಪಚುನಾವಣೆಯಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ಎಚ್.ಸಿ.ದಾಸಪ್ಪನವರು ಆಯ್ಕೆಯಾಗಿದ್ದರು. ರಾಜಶೇಖರನ್ ಹಾಗೂ ದಾಸಪ್ಪನವರ ಮಗ ತುಳಸಿ ಒಂದೇ ಜೊತೆಯವರು. ಇಬ್ಬರೂ ಕಾಲೇಜಿನ ಸಹಪಾಠಿಗಳು. ದೆಹಲಿಯಲ್ಲಿ ಕೂಡ ಜೊತೆ ಜೊತೆಯಲ್ಲಿ ಲಾ ಓದಿದವರು. ೧೯೫೭ರ ಲೋಕಸಭಾ ಉಪಚುನಾವಣೆಯ ಸಂದರ್ಭದಲ್ಲಿ ಎಚ್.ಸಿ. ದಾಸಪ್ಪರವರ ಪರವಾಗಿ ರಾಜಶೇಖರನ್‌ರವರು ತುಂಬಾ ಓಡಾಡಿದ್ದರು. ರಾಜಶೇಖರನ್‌ರವರ ಊರಾದ ಮರಳವಾಡಿಯಲ್ಲಿ ದಾಸಪ್ಪನವರು ತಂಗಿದ್ದರು. ಆ ಸಂದರ್ಭದಲ್ಲಿ ನನಗೆ ರಾಜಶೇಖರನ್‌ರವರ ಪರಿಚಯ ವಾಯಿತು. ಯಶೋಧರಮ್ಮ ದಾಸಪ್ಪನವರು ರಾಜಶೇಖರನ್‌ರವರನ್ನು ಈತ ನನ್ನ ಮಗ ಎಂದು ಪರಿಚಯ ಮಾಡಿಕೊಟ್ಟ ನೆನಪು. ಯಶೋಧರಮ್ಮ ದಾಸಪ್ಪನವರು ಮುಂದೆ ನಿಂತು ನಿಜಲಿಂಗಪ್ಪನವರ ನಾಲ್ಕನೇ ಮಗಳು ಗಿರಿಜಾಳ ಜೊತೆ ರಾಜಶೇಖರನ್ ಅವರ ವಿವಾಹವನ್ನು ಮಾಡಿಸಿದರು. ಮರಳವಾಡಿಯಿಂದ ರಾಜಶೇಖರನ್‌ರವರ ತಾಯಿ ಮತ್ತು ಇತರರು ಹೆಣ್ಣು ನೋಡಲು ಚಿತ್ರದುರ್ಗಕ್ಕೆ ಬಂದಿದ್ದರು. ಆಗ ರಾಜಶೇಖರನ್‌ರಿಗೆ ಚೆನ್ನಾಗಿ ಪರಿಚಯವಿದ್ದವನು ನಾನೊಬ್ಬನೆ. ವಿವಾಹದ ಸಂದರ್ಭದಲ್ಲಿ ನಮ್ಮದೇ ಓಡಾಟ. ವಿವಾಹದ ನಂತರ ಕೂಡ ನಿಜಲಿಂಗಪ್ಪನವರ ಜೊತೆ ರಾಜಶೇಖರನ್ ಒಂದೇ ತರಹದ ಸುಮಧುರ ಸಂಬಂಧವನ್ನು ಇಟ್ಟು ಕೊಂಡಿದ್ದರು. ಇಲ್ಲಿ ಹೇಳಬೇಕಾದ ಮಾತೆಂದರೆ, ನಿಜಲಿಂಗಪ್ಪನವರ ಮಕ್ಕಳ ಬಗ್ಗೆ. ಅವರ ಎಲ್ಲಾ ಒಂಬತ್ತು ಮಕ್ಕಳು ತಂದೆಯ ಆದರ್ಶಗಳಿಗೆ ಅನುಗುಣವಾಗಿ ನಡೆದಿದ್ದಾರೆ. ಬಾಲಕಿಯರ ಪ್ರೌಢಶಾಲೆಯಲ್ಲಿ ನಾನು

ತೆರೆದಿದ್ದ ಸೇವಾದಳದ ಘಟಕದಲ್ಲಿ ರಾಜಶೇಖರನ್ ಮದುವೆಯಾದ ಹೆಣ್ಣು ಮಗಳು ಗಿರಿಜಾ, ಕಾರ್ಯಕರ್ತೆಯಾಗಿ ಕೂಡ ಕೆಲಸ ಮಾಡಿದ್ದಾಳೆ. ಆಕೆ ಸೌಮ್ಯ ಸ್ವಭಾವದ ಹುಡುಗಿ. ತಂದೆ ತಾಯಿ ಹೇಳಿದರೆ ಮುಗಿದುಹೋಯಿತು. ಬೇರೆ ಯೋಚನೆಯೇ ಇಲ್ಲ. ಎಲ್ಲಾ ಮಕ್ಕಳೂ ಹಾಗೆಯೇ. ವಿಶೇಷವಾಗಿ ನಿಜಲಿಂಗಪ್ಪನವರ ಮೂರನೇ ಮಗಳು ಗೌರಕ್ಕನನ್ನು ನೆನೆಯಬೇಕು. ತಂದೆಯ ಮಾತಿಗಾಗಿ ತಮ್ಮ ಇಡೀ ಬದುಕನ್ನು ಅರ್ಪಿಸಿದ ದೊಡ್ಡ ತ್ಯಾಗಿ ಆಕೆ. ಇಂತಹ ಗುಣ ಅವರ ಎಲ್ಲಾ ಮಕ್ಕಳಲ್ಲಿ ಇದೆ. ರಾಜಶೇಖರನ್ ಈ ಎತ್ತರಕ್ಕೆ ಬೆಳೆಯಲು ನಿಜಲಿಂಗಪ್ಪನವರು ಕಾರಣರಾಗಿದ್ದರೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ, ರಾಜಶೇಖರನ್ ಅವರ ಬೆಳವಣಿಗೆಯಲ್ಲಿ ಅವರ ಧರ್ಮಪತ್ನಿ ನಿಜಲಿಂಗಪ್ಪನವರ ಮಗಳು ಗಿರಿಜಕ್ಕಳ ಪಾತ್ರವಂತೂ ಖಂಡಿತ ಇದೆ. ಆಕೆಯ ತ್ಯಾಗ, ಕಷ್ಟ ಸಹಿಷ್ಣುತೆ, ತಾಳ್ಮೆ ಹಾಗೂ ಹೊಂದಿಕೊಂಡು ಹೋಗುವ ಸ್ವಭಾವದಿಂದ ರಾಜಶೇಖರನ್ ಅವರಿಗೆ ಸಾಂಸಾರಿಕ ಸುಖ ಸಂಪೂರ್ಣವಾಗಿ ದೊರಕಿದೆ. ಈ ಸುಖದ ಆಧಾರದ ಮೇಲೆ ಅವರು ಹೊರಗಿನ ಸಾರ್ವಜನಿಕ ಬದುಕಿನಲ್ಲಿ ಬರುವ ಕಷ್ಟ-ಕಾರ್ಪಣ್ಯಗಳನ್ನು ಸಮರ್ಥವಾಗಿ ಎದುರಿಸಿದ್ದಾರೆ.

ನಿಜಲಿಂಗಪ್ಪನವರು ೧೯೬೨ರಿಂದ ೧೯೬೮ರವರೆಗೆ ಎರಡನೇ ಅವಧಿಯಲ್ಲಿ ಮುಖ್ಯಮಂತ್ರಿ ಆಗಿದ್ದರು. ಆ ಸಂದರ್ಭದಲ್ಲಿ ರಾಜಶೇಖರನ್ ಎಂದೂ ತಮ್ಮ ಮಾವನವರ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ಇದಕ್ಕೆ ಮುಖ್ಯ ಕಾರಣ ಅವರ ಸಂಕೋಚ ಪ್ರವೃತ್ತಿ. ಇಂತಹ ಸಂಕೋಚ ಪ್ರವೃತ್ತಿ ನಿಜಲಿಂಗಪ್ಪನವರಲ್ಲೂ ಇತ್ತು. ನಿರ್ಲಜ್ಜತನ ಇದ್ದ ವ್ಯಕ್ತಿ ಎಂದೂ ಶ್ರೇಷ್ಠ ನಾಯಕನಾಗಲು ಸಾಧ್ಯವಿಲ್ಲ. ಭಂಡತನ ಕ್ಷಣಕ್ಕೆ ಮಾತ್ರ ಜನರನ್ನು ಉಪಶಮನಗೊಳಿಸಬಹುದು. ಈ ಭಂಡತನದಿಂದ ಜನ ರೋಸಿಹೋದರೆ ಅವನು ಎಂದೂ ಜನಾದರಣೀಯತೆಯನ್ನು ಗಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸಂಕೋಚ ಪ್ರವೃತ್ತಿ ನಿರಂತರವಾಗಿ ನಮ್ಮನ್ನು ಆತ್ಮಶೋಧನೆಗೆ ಪ್ರಚೋದಿಸುತ್ತದೆ. ನಿಜಲಿಂಗಪ್ಪನವರಲ್ಲಿ ಮತ್ತು ರಾಜಶೇಖರನ್‌ರವರಲ್ಲಿ ಇಂತಹ ವಿಶಿಷ್ಟವಾದ ಪ್ರಜ್ಞೆ ಇದ್ದ ಕಾರಣದಿಂದಾಗಿ ಅವರೆಂದೂ ಸಾರ್ವಜನಿಕ ಟೀಕೆ-ಟಿಪ್ಪಣಿಗಳಿಗೆ ಒಳಗಾಗಲಿಲ್ಲ ಅಥವಾ ಜನರಿಗೆ ಅವರ ಹೆಸರನ್ನು ನೆನೆಸಿಕೊಂಡಾಗ ವಾಕರಿಕೆ ಬಂದಂತಾಗಲಿಲ್ಲ. ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ್, ಶಂಕರಗೌಡ, ಎಸ್.ಆರ್. ಕಂಠಿ, ಮಹಮದ್ ಆಲಿ ಮೊದಲಾದವರಿಗೆ ದೊರೆತ ಮನ್ನಣೆ ಸಹ ನಿಜಲಿಂಗಪ್ಪನವರ ಕಾಲದಲ್ಲಿ ರಾಜಶೇಖರನ್ ಅವರಿಗೆ ದೊರಕಲಿಲ್ಲ. ೧೯೬೭ರಲ್ಲಿ ರಾಜಶೇಖರನ್ ಕನಕಪುರ ಲೋಕಸಭಾ ಕ್ಷೇತ್ರದಿಂದ ಚುನಾಯಿತರಾಗಿ ಲೋಕಸಭೆಯನ್ನು ಪ್ರವೇಶಿಸಿದರು. ಈ ಚುನಾವಣೆಯಲ್ಲಿ ರಾಜಶೇಖರನ್‌ರವರಿಗೆ ಎಂ.ವಿ.ಕೃಷ್ಣಪ್ಪನವರು ಸಹಾಯ ಮಾಡಿದ್ದರು. ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಮಹಮದ್ ಆಲಿ ಕೂಡ ರಾಜಶೇಖರನ್ ಅವರ ಬಗ್ಗೆ ಅಪಾರ ಪ್ರೀತಿ ಹೊಂದಿದ್ದರು. ಇವರೆಲ್ಲರ ಆಶೀರ್ವಾದದಿಂದ ರಾಜಶೇಖರನ್ ಕನಕಪುರ ಲೋಕಸಭಾ ಕ್ಷೇತ್ರದಲ್ಲಿ ಸ್ಪರ್ಧಿಸಿ ಜಯಶೀಲರಾದರು. ೧೯೭೧ರಲ್ಲಿ ಲೋಕಸಭೆಗೆ ಮಧ್ಯಂತರ ಚುನಾವಣೆ ನಡೆದು ಅದೇ ಕನಕಪುರ ಲೋಕಸಭಾ ಕ್ಷೇತ್ರದಿಂದ ನಾನು ಮತ್ತು

ರಾಜಶೇಖರನ್ ಪರಸ್ಪರ ವಿರುದ್ಧವಾದ ರಾಜಕೀಯ ಪಕ್ಷಗಳಿಂದ ಸ್ಪರ್ಧಿಸಿದ್ದೆವು. ಈ ಸಂದರ್ಭದಲ್ಲಿ ರಾಜಶೇಖರನ್ ನಡೆದುಕೊಂಡ ರೀತಿ ಇಂದಿಗೂ ನನ್ನ ಮನಸ್ಸಿಗೆ ತುಂಬಾ ಹರ್ಷ ನೀಡುತ್ತದೆ. ಆ ಚುನಾವಣೆಯಲ್ಲಿ ನಾವಿಬ್ಬರೂ ವೈಯಕ್ತಿಕವಾಗಿ ಒಬ್ಬರನ್ನೊಬ್ಬರು ದೂಷಿಸಲು ಹೋಗಲೇ ಇಲ್ಲ. ಕೇವಲ ನಮ್ಮ ರಾಜಕೀಯ ಪಕ್ಷದ ಸಿದ್ಧಾಂತಗಳನ್ನು ಜನರ ಮುಂದೆ ಮಂಡಿಸಿದೆವು. ನಿಜಲಿಂಗಪ್ಪನವರ ಮನೆಯಲ್ಲಿ ಬೆಳೆದ ನನಗೆ ಅವರ ಅಳಿಯನ ವಿರುದ್ಧ ಸ್ಪರ್ಧಿಸುವುದು ನೋವಿನ ಸಂಗತಿ ಆಗಿದ್ದರೂ, ಸಮಕಾಲೀನ ರಾಜಕೀಯ ಪರಿಸ್ಥಿತಿಗೆ ಅದು ಅನಿವಾರ್ಯವಾಗಿದ್ದ ಕಾರಣ ನಾನು ಸ್ಪರ್ಧಿಸಲೇಬೇಕಾಯಿತು. ನನ್ನ ಅಸಹಾಯಕತೆಯನ್ನು ಗಮನಿಸಿ ನಿಜಲಿಂಗಪ್ಪನವರ ಧರ್ಮಪತ್ನಿ ಮರಿಗೆಮ್ಮ ಕೂಡ ನನ್ನನ್ನು ಆಶೀರ್ವದಿಸಿದ್ದರು. ೧೯೭೭ರ ಚುನಾವಣೆಯ ಹೊತ್ತಿಗೆ ನಾನು ಬೆಂಗಳೂರು ಉತ್ತರ ಲೋಕಸಭಾ ಕ್ಷೇತ್ರಕ್ಕೆ ಹೊರಟುಬಂದೆ.

ರಾಜಶೇಖರನ್‌ರವರ ಸ್ನೇಹಶೀಲತೆ ಹಾಗೂ ಔದಾರ್ಯಗಳು ನನಗೆ ಮೆಚ್ಚುಗೆ ಆದ ವಿಚಾರ. ಸಿಡಿಮದ್ದಿನಂತಹ ಒತ್ತಡದ ಸಂದರ್ಭದಲ್ಲೂ ಅವರು ನಗುನಗುತ್ತಾ ಸತ್ಯ ನುಡಿಯುತ್ತಾರೆ. ಮರೆಯಲಾಗದ ದ್ರೋಹವಾದಾಗಲೂ ಮಂದಸ್ಮಿತರಾಗಿ ಸ್ನೇಹಹಸ್ತ ಚಾಚುತ್ತಾರೆ. ಮಾನವೀಯ ಗುಣಗಳ ಗಣಿ ಅವರು. ಎಂ.ವಿ. ರಾಜಶೇಖರನ್ ಅವರನ್ನು ನಮ್ಮ ಕಾಂಗ್ರೆಸ್ ಪಕ್ಷ ಸಮರ್ಥವಾಗಿ ಬಳಸಿಕೊಂಡಿಲ್ಲ ಎಂಬುದು ನನಗೆ ನೋವು ತಂದಿರುವ ವಿಚಾರ. ಯಶೋಧರಮ್ಮ ದಾಸಪ್ಪ, ಎಂ.ವಿ.ಕೃಷ್ಣಪ್ಪನವರ ಮನೆಯಲ್ಲಿ ಬೆಳೆದವರು ರಾಜಶೇಖರನ್. ಮೇಲಾಗಿ ನಿಜಲಿಂಗಪ್ಪನವರ ಅಳಿಯಂದಿರು. ಕೃಷಿ, ಗ್ರಾಮೀಣ ಅಭಿವೃದ್ಧಿ ಮತ್ತು ಯುವ ಜನಾಂಗ ಕ್ಷೇತ್ರಗಳಲ್ಲಿ ಅಪಾರವಾದ ಆಸಕ್ತಿ ಹಾಗೂ ಜ್ಞಾನವುಳ್ಳವರು. ಅವರ ಮಾತನ್ನು ಜನ ತುಂಬಾ ಆಸಕ್ತಿಯಿಂದ ಕೇಳುತ್ತಾರೆ. ರಾಜಶೇಖರನ್ ಅವರಿಗೆ ಕರ್ನಾಟಕ ರಾಜ್ಯದಲ್ಲಿ ಅವರದೇ ಆದ 'ಕ್ರೆಡಿಬಿಲಿಟಿ' ಇದೆ. ಇಂತಹ ವ್ಯಕ್ತಿಯ ಪ್ರಭಾವವನ್ನು ಉಪಯೋಗಿಸಿಕೊಂಡು ಕಾಂಗ್ರೆಸ್ ಪಕ್ಷವನ್ನು ಬ್ಲಾಕ್ ಮಟ್ಟದಿಂದಲೂ ಕೂಡ ಸಂಘಟಿಸುವ ಅವಕಾಶ ಇದೆ. ಆದರೆ ಆ ದಿಸೆಯಲ್ಲಿ ನಾವು ಯೋಚಿಸದೇ ಇರುವುದು ದುರ್ದೈವದ ವಿಚಾರ. ಇನ್ನು ಮುಂದಾದರೂ ರಾಜಶೇಖರನ್‌ರವರನ್ನು ಸಮರ್ಥವಾಗಿ ಬಳಸಿಕೊಳ್ಳಲು ನಮ್ಮ ಹಿರಿಯರು ಪ್ರಯತ್ನಪಡಲೆಂದು ಆಶಿಸುತ್ತೇನೆ.

***

# ಗ್ರಾಮೀಣ ಬದುಕಿನ ಚಿಂತಕರು

ಎಂ. ವೀರಪ್ಪ ಮೊಯ್ಲಿ

ಹಿರಿಯರಾದ ರಾಜಶೇಖರನ್‌ರವರ ಪರಿಚಯ ನನಗೆ ೨೫ ವರ್ಷಗಳಿಂದ ಇದೆ. ಕರ್ನಾಟಕದ ಸಾರ್ವಜನಿಕ ಕ್ಷೇತ್ರದಲ್ಲಿ ರಾಜಶೇಖರನ್ ಅವರನ್ನು ಗ್ರಾಮೀಣ ಬದುಕಿನ ಬಗ್ಗೆ ಆಸಕ್ತಿ ಇರುವ ಚಿಂತಕರೆಂದು ವರ್ಣಿಸಲಾಗಿದೆ. ಅವರ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗೆ ನಾನು ಅನೇಕ ಸಾರಿ ಭೇಟಿ ನೀಡಿದ್ದೇನೆ. ಅಲ್ಲಿನ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡಿದ್ದೇನೆ. ಅಲ್ಲಿನ 'ಅಕ್ಯಾಡೆಮಿಕ್' ವಾತಾವರಣವನ್ನು ಕಂಡಾಗ ನನಗೆ ತುಂಬಾ ಸಂತಸವಾಗಿದೆ. 'ಸಕ್ರಿಯ ರಾಜಕಾರಣದಲ್ಲಿದ್ದವರು ಅಕ್ಯಾಡೆಮಿಕ್ ಕ್ಷೇತ್ರಕ್ಕೆ ಸಲ್ಲುವವರಲ್ಲ, ಎಂಬ ಕೊಂಕುನುಡಿ ಅನೇಕರಲ್ಲಿ ಇರಬಹುದು. ಆದರೆ, ರಾಜಕಾರಣದಲ್ಲಿದ್ದ ಜನ ಕೂಡ ವಿಶ್ವವಿದ್ಯಾನಿಲಯ ಪ್ರಾಧ್ಯಾಪಕರುಗಳಂತೆ ಅಧ್ಯಯನ, ಚಿಂತನೆ ಹಾಗೂ ಕ್ಷೇತ್ರಾನುಭವವನ್ನು ಪಡೆದುಕೊಳ್ಳುವುದರ ಸಾಧ್ಯತೆ ಇದೆ. ವಿಶ್ವವಿದ್ಯಾನಿಲಯಗಳಲ್ಲಿರುವ ಪ್ರಾಧ್ಯಾಪಕರಿಗಿಂತಲೂ ಸಾರ್ವಜನಿಕ ಕ್ಷೇತ್ರದಲ್ಲಿ ಅಂದರೆ, ಶಾಸಕರು, ಮಂತ್ರಿಗಳು ಹಾಗೂ ರಾಯಭಾರಿಗಳಾಗಿದ್ದವರಿಗೆ ವಿಷಯ ಸಂಗ್ರಹಿಸಲು ಯಥೇಚ್ಛವಾದ ಅವಕಾಶ ಇರುತ್ತದೆ. "ಕೂಪಮಂಡೂಕ"ರಾಗದೆ ಯೋಚಿಸಲು ಮಾರ್ಗದರ್ಶನ ದೊರೆಯುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಅನೇಕ ಸಾರ್ವಜನಿಕ ನಾಯಕರು ಶೈಕ್ಷಣಿಕ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ಕೊಟ್ಟಿದ್ದಾರೆ. ಅದರಲ್ಲಿ ರಾಜಶೇಖರನ್‌ರವರು ಅತ್ಯಂತ ಪ್ರಮುಖರು. ಗ್ರಾಮೀಣ ಅಭಿವೃದ್ಧಿ, ಕೃಷಿ, ಸಾರ್ವಜನಿಕ ಆರೋಗ್ಯ ಹಾಗೂ ಯುವಜನ ಸೇವೆ ಅವರ ಅಧ್ಯಯನ ಕ್ಷೇತ್ರಗಳಾಗಿವೆ. ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಅವರು ೧೨೦ಕ್ಕೂ ಹೆಚ್ಚು ಪ್ರಬಂಧಗಳನ್ನು ಮಂಡಿಸಿದ್ದಾರೆ. ಭಾರತದ ಗ್ರಾಮೀಣ ಅಭಿವೃದ್ಧಿಯನ್ನು ವಿಶ್ವದ ಪ್ರಜ್ಞಾವಂತ ಜನರಿಗೆ ತೋರಿಸಿದ್ದಾರೆ. ಗ್ರಾಮೀಣ ಆರ್ಥಿಕ ಕ್ಷೇತ್ರದ ಹಾಸು-ಬೀಸುಗಳನ್ನು ಕುರಿತಂತೆ ಅವರದು ಗಮನಾರ್ಹವಾದ ಚಿಂತನೆ ನಡೆದಿದೆ. ಅರವತ್ತರ ದಶಕದಲ್ಲಿ ಮೈಸೂರು ರಾಜ್ಯದಲ್ಲಿ ಕೃಷಿಕ ಸಮಾಜ ಉತ್ತಮ ಕೆಲಸ ಮಾಡಲು ರಾಜಶೇಖರನ್ ಕಾರಣಕರ್ತರಾಗಿದ್ದರು. ಯುವಜನ ಸೇವಾ ಇಲಾಖೆ ರಾಷ್ಟ್ರದಲ್ಲಿ ಮೊಟ್ಟ

ಮೊದಲು ಪ್ರಾರಂಭವಾಗಲೂ ರಾಜಶೇಖರನ್‌ರವರೇ ಪ್ರೇರಕರು. ಈ ಎಲ್ಲಾ ವಿಚಾರಗಳನ್ನು ಗಮನಿಸಿದಾಗ ರಾಜಶೇಖರನ್ ಅವರಿಗೆ ಅಭಿವೃದ್ಧಿ ವಿಚಾರದಲ್ಲಿರುವ ಬದ್ಧತೆ ತಿಳಿಯುತ್ತದೆ. ನಮ್ಮ ಗ್ರಾಮೀಣ ಜನರ ಬದುಕು ಸಮೃದ್ಧವಾಗಬೇಕು ಎಂಬ ಅವರ ಕಾಳಜಿ ತುಂಬಾ ಮುಖ್ಯವಾದುದು. ಮಹಾತ್ಮ ಗಾಂಧೀಜಿಯವರ ಆಶಯವನ್ನು ಅನುಷ್ಠಾನಗೊಳಿಸಲು ದುಡಿಯುತ್ತಿರುವ ರಾಜಶೇಖರನ್‌ರವರು ನಿಜಕ್ಕೂ ಅಭಿನಂದನಾರ್ಹರು. ರಾಜ್ಯದ ಜನತೆ ಅವರನ್ನು ಈ ಕಾರಣಕ್ಕಾಗಿ ಸದಾ ಸ್ಮರಿಸಿಕೊಳ್ಳುತ್ತಾರೆ.

೧೯೮೪ರಲ್ಲಿ ರಾಜಶೇಖರನ್‌ರವರು ಕಾಂಗ್ರೆಗೆ ಬಂದರು. ನನ್ನ ಒತ್ತಾಯದ ಮೇರೆಗೆ ಅವರು ೧೯೮೫ರಲ್ಲಿ ಕನಕಪುರ ವಿಧಾನಸಭೆಯಿಂದ ಸ್ಪರ್ಧಿಸಿದರು. ರಾಜಶೇಖರನ್‌ರಂತಹ ದುಡಿಮೆಗಾರರನ್ನು ಜನ ನೇರ ಚುನಾವಣೆಯಲ್ಲಿ ಗೆಲ್ಲಿಸಬೇಕು. ಇಡೀ ರಾಷ್ಟ್ರದ ಸಮಗ್ರ ಕಲ್ಪನೆ ಇರುವ ರಾಜಶೇಖರನ್‌ರವರಿಗೆ ಉನ್ನತ ಅಧಿಕಾರಗಳು ದೊರೆತರೆ ಅದರ ಪ್ರಯೋಜನ ಗ್ರಾಮೀಣ ಪ್ರದೇಶದ ಜನತೆಗೆ ದೊರೆಯುವುದರಲ್ಲಿ ಸಂಶಯವಿಲ್ಲ. ರಾಜಶೇಖರನ್‌ರವರ ವಿದ್ವತ್ತು ಹಾಗೂ ಜೀವನಾನುಭವವನ್ನು ಗುರುತಿಸಿರುವ ಕಾಂಗ್ರೆಸ್ ಪಕ್ಷ ಅವರನ್ನು ರಾಜ್ಯಸಭಾ ಸದಸ್ಯರನ್ನಾಗಿ ಮಾಡಿದೆ. ಕಳೆದ ೫೦ ವರ್ಷಗಳಿಂದ ಭಾರತದ ಗ್ರಾಮೀಣ ಬದುಕಿನ ಬಗ್ಗೆ ಸಂಪರ್ಕ ಇಟ್ಟುಕೊಂಡಿರುವ ರಾಜಶೇಖರನ್, ರಾಷ್ಟ್ರಮಟ್ಟದಲ್ಲಿ ತಮ್ಮ ವಿಚಾರಧಾರೆಯನ್ನು ಬೆಳಗಲಿ. ಅದರ ಪ್ರಯೋಜನ ಕರ್ನಾಟಕ ಸೇರಿದಂತೆ ಎಲ್ಲಾ ಜನರಿಗೆ ದೊರೆಯಲೆಂದು ಆಶಿಸುತ್ತೇನೆ.

***

# ಸಂಘಟನಾ ಚತುರ

◆ ಜಗದೀಶ ಶೆಟ್ಟರ್

ರಾಜಕೀಯದಲ್ಲಿ ಗಾಡ್‌ಫಾದರ್‌ಗಳ ನೆರವಿಲ್ಲದೆ, ರಾಜಕೀಯವಾಗಿ ಯಶಸ್ಸು ಗಳಿಸುವುದು ತೀರಾ ವಿರಳ. "ಕರ್ನಾಟಕದ ಏಕೀಕರಣದ ಶಿಲ್ಪಿ" ಎಸ್. ನಿಜಲಿಂಗಪ್ಪನವರ ಅಳಿಯಂದಿರಾಗಿಯೂ ಅವರ ಯಾವುದೇ ನೆರವನ್ನು ಪಡೆಯದೆ ರಾಜಕೀಯದಲ್ಲಿ ಬೆಳೆದುಬಂದದ್ದು ನಿಜಕ್ಕೂ ವಿಶೇಷ.

ವಿದ್ಯಾರ್ಥಿದೆಸೆಯಿಂದಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ, ರಾಷ್ಟ್ರ ಹೋರಾಟಕ್ಕೆ ತಮ್ಮನ್ನು ತಾವೇ ತೊಡಗಿಸಿಕೊಂಡ ಧೀಮಂತರು ಎಂ.ವಿ. ರಾಜಶೇಖರನ್.

ಕನಕಪುರ ಲೋಕಸಭಾ ಕ್ಷೇತ್ರದಿಂದ ರಾಜಶೇಖರನ್ ಸೋತಾಗಲೂ ದೃತಿಗೆಡದೆ, ತಮ್ಮ ನೆಚ್ಚಿನ ಗ್ರಾಮೀಣ ಅಭಿವೃದ್ಧಿಯ ಕಡೆಗೆ ಹೆಚ್ಚು ಆಸಕ್ತಿಯನ್ನು ತೋರಿ, ರಾಜಕೀಯ ಸೋಲನ್ನು ನಿರ್ಲಿಪ್ತ ಮನೋಭಾವದಿಂದ ಸ್ವೀಕರಿಸಿದವರು ಎಂ.ವಿ. ರಾಜಶೇಖರನ್.

ವಿಶ್ವದಾದ್ಯಂತ ಸಂಚರಿಸಿ, ಅನೇಕ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಹಲವಾರು ಕ್ಷೇತ್ರಗಳಲ್ಲಿನ ತಮ್ಮ ಪರಿಪಕ್ವ ಅನುಭವವನ್ನು, ಪ್ರಮುಖ ಚಿಂತಕರಾಗಿ ಪ್ರಬಂಧಗಳನ್ನು ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಮಂಡಿಸಿ, ಖ್ಯಾತಿ ಪಡೆದ ಶ್ರೀಯುತರು ರಾಜ್ಯದಲ್ಲಿ ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ ಇವುಗಳಲ್ಲಿ ಬಹುಮುಖ್ಯ ಪಾತ್ರವಹಿಸಿದವರು.

ಶ್ರೀಯುತರ ಸಂಘಟನಾ ಚಾತುರ್ಯ ನಿಜಕ್ಕೂ ಮೆಚ್ಚುವಂತಹದ್ದು. ಅವರ ಅರ್ಧ ಶತಕಕ್ಕೂ ಹೆಚ್ಚಿನ ರಾಜಕೀಯ ಬದುಕು ಅತಿ ಉತ್ಕೃಷ್ಟ ವಾದದ್ದು ಎಂದರೆ ಅತಿಶಯೋಕ್ತಿಯಲ್ಲ.

ಇಂತಹ ಮಹಾಚೇತನವನ್ನು ಸನ್ಮಾನಿಸಲು ಹಾಗೂ ಅವರಿಗೆ ಅಭಿನಂದನಾ ಗ್ರಂಥವನ್ನು ಅರ್ಪಿಸುತ್ತಿರುವುದು ಹೆಮ್ಮೆತರುವ ವಿಚಾರ.

ಶ್ರೀಯುತರು ಇನ್ನೂ ನೂರ್ಕಾಲ ಬಾಳಲಿ. ಅವರ ಪರಿಪಕ್ವ ಅನುಭವ ರಾಜ್ಯ ಹಾಗೂ ರಾಷ್ಟ್ರ ರಾಜಕಾರಣಕ್ಕೆ ಉಪಯುಕ್ತ ಕೊಡುಗೆಯಾಗಲಿ. ಈಗ ಹಮ್ಮಿಕೊಂಡಿರುವ ಈ ಕಾರ್ಯಕ್ರಮವು ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

❊❊❊

# ರಾಷ್ಟ್ರ ನೇತಾರರು

● ಸಿ.ಎಸ್. ನಾಡಗೌಡ (ಅಪ್ಪಾಜಿ)

ಕರ್ನಾಟಕ ಸರ್ವಜನಿಕ ಕ್ಷೇತ್ರದಲ್ಲಿ ಕಳೆದ ಐದು ದಶಕಗಳಿಗೂ ಹೆಚ್ಚಿನ ಕಾಲದಿಂದ ಕ್ರೀಯಶೀಲ ಹಾಗೂ ಸಮರ್ಥ ನಾಯಕರಾಗಿ ಜನಾನು ರಾಗಿಗಳಾಗಿ ಅತ್ಯಂತ ವರ್ಣರಂಜಿತ ವ್ಯಕ್ತಿತ್ವವುಳ್ಳ ಸರ್ವಶ್ರೀ ಎಂ. ವಿ. ರಾಜಶೇಖರನ್‌ರವರು ಇದೀಗ ೭೫ರ ಹುಟ್ಟು ಹಬ್ಬಕ್ಕೆ ಕಾಲಿಡುತ್ತಿರುವ ಶುಭ ಸಂದರ್ಭದಲ್ಲಿ ಅವರಿಗೆ ನನ್ನ ಹಾಗೂ ನಾಡಿನ ಪರವಾಗಿ ಶುಭಾಶಯ ಕೋರಲು ನನಗೆ ಅತ್ಯಂತ ಹರ್ಷವೆನಿಸುತ್ತದೆ.

ಇದೇ ಸಂದರ್ಭದಲ್ಲಿ ಶ್ರೀಯುತರು ೭೫ನೇ ಹುಟ್ಟು ಹಬ್ಬದ ಅಂಗವಾಗಿ ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ಸಮಯೋಜಿತ. ವಿದ್ಯಾರ್ಥಿದೆಸೆಯಿಂದಲೇ ತಮ್ಮನ್ನು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡು ನಾಡು ನುಡಿಯ ಅಭ್ಯುದಯಕ್ಕಾಗಿ ಗಣನೀಯ ಸೇವೆ ಸಲ್ಲಿಸಿ, ತಾವಿರುವ ಪಕ್ಷದ ಸರ್ವತೋಮುಖ ಅಭಿವೃದ್ಧಿಗೆ ಕಾರಣೀ ಭೂತರಾಗಿದ್ದಾರೆ. ರೈತರ ಹಾಗೂ ರಾಜ್ಯದ ಅಭಿವೃದ್ಧಿಯ ಹಿತಾಸಕ್ತಿ ಕಾಪಾಡುತ್ತಾ ಗ್ರಾಮೀಣಾಭಿವೃದ್ಧಿ ಬಗೆಗಿನ ಜ್ಞಾನವನ್ನು ಬೆಳೆಸುತ್ತ ದೇಶಕ್ಕೆ ತಮ್ಮ ಪರಿಶ್ರಮದ ಫಲವನ್ನು ಉಣಬಡಿಸಿದವರಾಗಿರುತ್ತಾರೆ. ಭಾರತದ ಪ್ರಮುಖ ಚಿಂತಕರಾಗಿ ವಿಶ್ವದ ನಾನಾ ಭಾಗಗಳಲ್ಲಿ ಸಂಚರಿಸಿರುವರಲ್ಲದೆ ತಮ್ಮ ವೈಯಕ್ತಿಕ ಪರಿಶ್ರಮದಿಂದಲೇ ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಯನ್ನು ಹುಟ್ಟು ಹಾಕಿದ ಕೀರ್ತಿ ಇವರದಾಗಿರುತ್ತದೆ.

ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಪ್ರಭಾವಿ ನಾಯಕರಾಗಿ ಹೊರ ಹೊಮ್ಮಿ ರಾಷ್ಟ್ರನೇತಾರರಾದ ಶ್ರೀಯುತರಿಗೆ ಕರ್ನಾಟಕದ ಜನತೆಯ ಸೇವೆಯನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಮಾಡಲು ಭಗವಂತನು ಆಯುರಾರೋಗ್ಯ ಮತ್ತು ಐಶ್ವರ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

***

# ಕ್ರಿಯಾಶೀಲ ವ್ಯಕ್ತಿತ್ವ

ಮಲ್ಲಿಕಾರ್ಜುನ ಖರ್ಗೆ

ಹಿರಿಯ ಗಾಂಧಿವಾದಿ ಹಾಗೂ ರಾಜ್ಯಸಭೆಯಲ್ಲಿ ಕರ್ನಾಟಕವನ್ನು ಪ್ರತಿನಿಧಿಸುತ್ತಿರುವ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ೭೫ ವರ್ಷಗಳಾಗಿವೆ ಎಂಬುದನ್ನು ನಂಬುವುದೇ ಕಷ್ಟ. ಅಷ್ಟೊಂದು ಕ್ರಿಯಾಶೀಲ ವ್ಯಕ್ತಿತ್ವ; ಚೈತನ್ಯಶೀಲ ನಡವಳಿಕೆ. ಕರ್ನಾಟಕದ ಸಾರ್ವಜನಿಕ ಕ್ಷೇತ್ರದಲ್ಲಿ ಕಳೆದ ೫೦ ವರ್ಷಗಳಿಂದಲೂ ಶ್ರೀ ರಾಜಶೇಖರನ್ ಅವರು ತಮ್ಮ ಸ್ವಾರ್ಥರಹಿತ ಪ್ರಾಮಾಣಿಕತೆ ಮತ್ತು ಕಾಳಜಿಯುಕ್ತ ಸೇವೆಯಿಂದಾಗಿ ಮನೆಮಾತಾಗಿದ್ದಾರೆ. ಕರ್ನಾಟಕದ ಅಭಿವೃದ್ಧಿಗೆ ನಾಂದಿಹಾಡಿದ ದಿ. ಎಸ್. ನಿಜಲಿಂಗಪ್ಪ ಅವರ ಅಳಿಯಂದಿರಲ್ಲಿ ಒಬ್ಬರಾದ ಶ್ರೀ ರಾಜಶೇಖರನ್ ವಿದ್ಯಾರ್ಥಿ ದೆಸೆಯಿಂದಲೂ ಕ್ರಿಯಾಶೀಲರು. ಮೊದಲು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ನಂತರ ಕಾಂಗ್ರೆಸ್ ಪಕ್ಷದ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿ, ೧೯೪೭-೪೮ರ ಅವಧಿಯಲ್ಲಿ ಅಂದಿನ ಮೈಸೂರು ಅರಸೊತ್ತಿಗೆ ವಿರುದ್ಧ ನಡೆದ 'ಮೈಸೂರು ಚಲೋ' ಸತ್ಯಾಗ್ರಹವನ್ನು ಸಂಘಟಿಸುವಲ್ಲಿ ಮುಂಚೂಣಿಯ ಪಾತ್ರ ನಿರ್ವಹಿಸಿದರು. ವಿದ್ಯಾರ್ಥಿ ಸಂಘದ ಚಟುವಟಿಕೆಗಳಲ್ಲೂ ಸಕ್ರಿಯವಾಗಿ ದುಡಿದ ಶ್ರೀ ರಾಜಶೇಖರನ್ ಆಚಾರ್ಯ ವಿನೋಬಾ ಭಾವೆ ಅವರ ಭೂದಾನ ಚಳುವಳಿಯನ್ನು ರಾಜ್ಯದಲ್ಲಿ ಯಶಸ್ವಿಗೊಳಿಸುವಲ್ಲಿ ಶ್ರಮಿಸಿದರು. ದೆಹಲಿಯಲ್ಲಿ ಕಾನೂನು ವ್ಯಾಸಂಗ ಮಾಡಿದ ಶ್ರೀಯುತರು ಪ್ರಜಾಸತ್ತಾತ್ಮಕ ಪರಿಷತ್ತು ಹಾಗೂ ಭಾರತೀಯ ವಿದ್ಯಾರ್ಥಿ ಪರಿಷತ್ತಿನ ಪ್ರಾದೇಶಿಕ ಕಾರ್ಯದರ್ಶಿಯಾಗಿ ದುಡಿದರು. ಗ್ರಾಮೀಣಾಭಿವೃದ್ಧಿಗೆ ತಮ್ಮ ಚಿಂತನೆಯ ಬಹುಪಾಲನ್ನು ಮೀಸಲಿಟ್ಟ ರಾಜಶೇಖರನ್, ಏಷಿಯನ್ ಗ್ರಾಮೀಣಾಭಿವೃದ್ದಿ ಸಂಸ್ಥೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿ, ಕಳೆದ ೨೫ ವರ್ಷಗಳಿಂದ ಕೃಷಿ, ಗ್ರಾಮೀಣಾಭಿವೃದ್ದಿ ಮಾನವ ಸಂಪನ್ಮೂಲಗಳ ಸದ್ಬಳಕೆ, ನೀರಾವರಿ, ಪರಿಸರ ರಕ್ಷಣೆಯಲ್ಲಿ ಸಾಕಷ್ಟು ಕ್ರಿಯಾಶೀಲವಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇದರೊಂದಿಗೆ ಹಲವಾರು ಹೊರದೇಶಗಳನ್ನು ಸಂದರ್ಶಿಸಿ ಅಲ್ಲಿನ ಕೃಷಿ ಹಾಗೂ ಜನಜೀವನದ ಬಗ್ಗೆ ಆಳವಾದ ಅಧ್ಯಯನ ನಡೆಸಿ, ಅನೇಕ

ಪ್ರಬಂಧಗಳನ್ನು ಮಂಡಿಸಿ ಖ್ಯಾತಿಯನ್ನು ಪಡೆದಿದ್ದಾರೆ. ೧೯೬೭ ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ರಾಜಕೀಯ ಪ್ರವೇಶಮಾಡಿದ ಶ್ರೀ ರಾಜಶೇಖರನ್ ಲೋಕಸಭೆಯಲ್ಲಿ ಅತ್ಯುತ್ತಮ ಸಂಸದೀಯ ಪಟುವಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ರಾಜ್ಯದ ರೈತರ ಹಿತಾಸಕ್ತಿಗಾಗಿ ತಮ್ಮ ಸಂಸದೀಯ ಅವಧಿಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡ ಶ್ರೀ ರಾಜಶೇಖರನ್ ೧೯೭೮ರಲ್ಲಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾದರು. ೧೯೯೯ ರಲ್ಲಿ ವಿಧಾನ ಪರಿಷತ್ತಿಗೆ ಆಯ್ಕೆಯಾದರು. ಅಲ್ಲಿ ಅವರು ತೋರಿದ ವಾಕ್ಪಟುತ್ವ ಹಾಗೂ ಸೃಜನಶೀಲ ನಡವಳಿಕೆಯಿಂದಾಗಿ ಇವರನ್ನು ಕಾಂಗ್ರೆಸ್ ಪಕ್ಷ ಗುರುತಿಸಿ ೨೦೦೨ರಲ್ಲಿ ರಾಜ್ಯಸಭೆಗೆ ಆಯ್ಕೆಮಾಡಿತು.

ಹೀಗೆ ತಮ್ಮ ಜೀವನದ ಪ್ರತಿ ಗಳಿಗೆಯನ್ನೂ ಸಾರ್ವಜನಿಕರ ಸೇವೆಗೆ ಮುಡಿಪಾಗಿಟ್ಟ ಶ್ರೀ ರಾಜಶೇಖರನ್ ಅವರಿಗೆ ಜನ್ಮದಿನದ ಶುಭಾಶಯಗಳನ್ನು ಸಲ್ಲಿಸುತ್ತಾ, ಮುಂಬರುವ ದಿನಗಳು ಅವರಿಗೆ ಸುಖ, ಸಮೃದ್ಧಿ ಹಾಗೂ ನೆಮ್ಮದಿಯನ್ನು ತರಲಿ ಎಂದು ಹಾರೈಸುತ್ತೇನೆ.

☼☼☼

# ಸಂಸ್ಕೃತಿ ಪ್ರೇಮಿ

**ರಾಣಿ ಸತೀಶ್**

ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ಎಪ್ಪತ್ತೈದು ವರ್ಷಗಳೆಂದರೆ ನನ್ನಿಂದ ನಂಬಲಾಗುತ್ತಿಲ್ಲ. ಈ ಸಂದರ್ಭದಲ್ಲೂ ಅವರು ಎಷ್ಟೊಂದು ಕ್ರಿಯಾಶೀಲರಾಗಿರುವರೆಂದರೆ ದೇಶ-ವಿದೇಶಗಳಲ್ಲಿ ಹೋಗಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಂಬಂಧವಾಗಿ ಅಧ್ಯಯನ ಮಾಡಿಕೊಂಡು ಬರುತ್ತಿದ್ದಾರೆ. ಕಾಂಗ್ರೆಸ್ ಸಂಸದೀಯ ಪಕ್ಷದಲ್ಲಿ ಮತ್ತು ವಿಧಾನ ಮಂಡಲದಲ್ಲಿ ಅವರೂ ನಾವೂ ಒಟ್ಟಿಗೆ ಕೆಲಸಮಾಡಿರುವ ಹಿನ್ನೆಲೆಯಲ್ಲಿ ಅವರ ವ್ಯಕ್ತಿತ್ವವನ್ನು ಕುರಿತು ಎರಡು ಮಾತುಗಳಲ್ಲಿ ಪ್ರಕೃತ ಪ್ರಸ್ತುತಪಡಿಸುವೆ.

ಎಂ.ವಿ. ರಾಜಶೇಖರನ್ ಅವರು ತುಂಬಾ ಸಂಯಮಶೀಲರು. ಸರಳ ಸಜ್ಜನಿಕೆಯ ವ್ಯಕ್ತಿಗಳು. ಉತ್ತಮ ಮನೆತನದಲ್ಲಿ ಹುಟ್ಟಿ, ಪ್ರಭಾವಿ ರಾಜಕೀಯ ಕುಟುಂಬದೊಂದಿಗೆ ಸಂಬಂಧ ಬೆಳೆಸಿಕೊಂಡು ನಿಸ್ವಾರ್ಥದಿಂದ, ಸ್ವಾವಲಂಬನೆಯಿಂದ ಜನಸೇವೆ ಮಾಡಿಕೊಂಡು ಬಂದಿದ್ದಾರೆ. ರಾಜಕೀಯ ಕುಟುಂಬದ ಹಿನ್ನೆಲೆಯಿಂದ ಬಂದವರಾಗಿದ್ದರೂ ರಾಜಕಾರಣಕ್ಕಾಗಿ ಆ ಕುಟುಂಬವನ್ನೇ ಅವಲಂಬಿಸಿದವರಲ್ಲ. ಸ್ವಯಂ ಪ್ರತಿಭೆ ಮತ್ತು ನಿಸ್ವಾರ್ಥವಾದ ಮನಸ್ಸು ಕೂಡಾ ಅದಕ್ಕೆ ಬೇಕಾಗುತ್ತದೆ. ಇಂತಹ ಸಂಗತಿಗಳಿಗೆ ಶ್ರೀ ಎಂ.ವಿ. ರಾಜಶೇಖರನ್ ಅವರು ನಿದರ್ಶನರಾಗಿದ್ದಾರೆ. ಕೇವಲ ರಾಜಕೀಯ ಹಿನ್ನೆಲೆಯಿರುವ ಕುಟುಂಬದಿಂದ ಬಂದ ಮಾತ್ರಕ್ಕೆ ಈ ಸಮಾಜ ಆ ವ್ಯಕ್ತಿಯನ್ನು ತನ್ನಿಂದ ತಾನೇ ಸ್ವಾಗತಿಸುವುದಿಲ್ಲ. ಜನಪರ ಹೋರಾಟಗಳ ಮೂಲಕ, ಸಾಮಾಜಿಕ ನ್ಯಾಯ ಒದಗಿಸಿಕೊಡಲು ಹೋರಾಡುವ ಮೂಲಕ ಮೇಲೆದ್ದು ಬರಬೇಕು. ಹಾಗಿದ್ದಲ್ಲಿ ಮಾತ್ರ ರಾಜಕಾರಣದಲ್ಲಿ ಯಶಸ್ಸು ಕಾಣಲು ಸಾಧ್ಯ. ಶ್ರೀ ಎಂ.ವಿ. ರಾಜಶೇಖರನ್ ಇಂತಹ ವಿಚಾರಧಾರೆ ಗಳಿಂದ ಮೇಲೆದ್ದು ಬಂದವರು ಎಂಬುದು ನನ್ನ ಸ್ಪಷ್ಟ ಅಭಿಪ್ರಾಯ.

ಅನಂತ ಜೀವನಾನುಭವಗಳನ್ನು ಹೊಂದಿದ ಎಂ.ವಿ. ರಾಜಶೇಖರನ್ ಅವರು ತರುಣ ವಯಸ್ಸಿನಲ್ಲಿಯೇ ದೇಶದ ರಾಜಕೀಯದ ಅತಿರಥ ಮಹಾರಥರ ಗಮನವನ್ನು ಸೆಳೆದಿದ್ದರು. ಮಂಚನಬೆಲೆ ಜಲಾಶಯಕ್ಕಾಗಿ

ಹೋರಾಟ ಮಾಡುವ ಸಂದರ್ಭದಲ್ಲಂತೂ ಅವರು ಚಟುವಟಿಕೆಯಿಂದ ಪಾದರಸವೇ ಆಗಿದ್ದರು. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗಳು ಅವರು ಇಷ್ಟಪಡುವ ಮತ್ತು ಆ ನಿಟ್ಟಿನಲ್ಲಿ ಅಧ್ಯಯನಮಾಡುತ್ತಿರುವ ಕ್ಷೇತ್ರಗಳಾಗಿವೆ. ಕರ್ನಾಟಕ ರೈತನ ಬಗೆಗೆ, ಹಳ್ಳಿಗಳ ಬಗೆಗೆ ಸಂಸತ್ತಿನಲ್ಲಿ ನಿರ್ಭಿಡೆಯಿಂದ ಸೊಲ್ಲೆತ್ತಿ ಕೆಲಸಮಾಡಿಸಿಕೊಂಡು ಬರುವ ಛಾತಿ ಅವರಿಗೆ ಸಿದ್ಧಿಸಿದೆ. ಎಷ್ಟೇ ಆದರೂ ಅವರು ಶ್ರೀಮತಿ ಇಂದಿರಾಗಾಂಧಿ ಮತ್ತು ಶ್ರೀ ಎಸ್. ನಿಜಲಿಂಗಪ್ಪನವರಂತಹವರ ಗರಡಿಯಲ್ಲಿ ಪಳಗಿದವರಲ್ಲವೆ ? ರಾಜ್ಯಕ್ಕೆ ಬೇಕಾಗಿರುವ ಸಕಲ ಯೋಜನೆಗಳನ್ನು ಕೇಂದ್ರ ಸರ್ಕಾರದಿಂದ ಅವರು ಅಧಿಕಾರಯುತವಾಗಿ ತರುತ್ತಿದ್ದಾರೆ. ಕರ್ನಾಟಕದ ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ಆಗುಹೋಗುಗಳ ಕುರಿತು ಸಂಸತ್ತಿನ ಗಮನವನ್ನು ಸೆಳೆಯುತ್ತಿದ್ದಾರೆ. ಅವರಿಗೆ ನಮಗೆಲ್ಲರಿಗಿಂತಲೂ ಉತ್ತಮ ಅನುಭವಗಳಿವೆ. ನಮ್ಮ ಪಕ್ಷದ ಹಿರಿಯ ಮತ್ತು ಅನುಭವಿ ರಾಜಕಾರಣಿ ಎನ್ನುವುದರಲ್ಲಿ ಎರಡು ಮಾತಿಲ್ಲ. ರಾಜ್ಯ ವಿಧಾನ ಮಂಡಳದ ಎರಡೂ ಸದನಗಳನ್ನು ಮತ್ತು ಸಂಸತ್ತಿನ ಎರಡೂ ಸದನಗಳನ್ನು ಪ್ರತಿನಿಧಿಸಿ ಅನನ್ಯ ರಾಜಕೀಯ ಅನುಭವವನ್ನು ಸಾಧಿಸಿದ್ದಾರೆ. ಅವರನ್ನು ಇಂದು ಸನ್ಮಾನಿಸುತ್ತಿರುವುದು ಅತ್ಯಂತ ಸಂತೋಷದ ಸಂಗತಿ.

ಶ್ರೀ ಎಂ.ವಿ. ರಾಜಶೇಖರನ್ ಅವರು ಸ್ವದೇಶದಲ್ಲಿ ಗಳಿಸಿದ ಅನುಭವಗಳಿಗಿಂತ ವಿದೇಶಗಳಲ್ಲಿ ಗಳಿಸಿದ ಅನುಭವವೇ ಹೆಚ್ಚು ದಟ್ಟವಾಗಿದೆ. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಕ್ಷೇತ್ರಗಳನ್ನೂ ಕರಾರುವಾಕ್ಕಾಗಿ ಮತ್ತು ಖಚಿತವಾಗಿ ಅಧ್ಯಯನಮಾಡಿದ ಅವರು ನಮ್ಮ ಮುಂದೆ ಸವಾಲಾಗಿರುವ ಜಾಗತೀಕರಣ ಮತ್ತು ದೇಶೀಯ ಸಂಸ್ಕೃತಿಗಳ ಸಂಘರ್ಷಗಳ ಪರಿಣಾಮಗಳನ್ನು ಅರಿಯಬಲ್ಲ ಪ್ರಾಜ್ಞರಾಗಿದ್ದಾರೆ. ಮೂರನೇ ಜಗತ್ತಿನ ಆರ್ಥಿಕ ಚಟುವಟಿಕೆಗಳನ್ನು ಮತ್ತು ಪ್ರಥಮ ಜಗತ್ತಿನ ಆರ್ಥಿಕ ಚಟುವಟಿಕೆಗಳನ್ನು ತುಲನೆಮಾಡಿ ಈ ರಾಷ್ಟ್ರಕ್ಕೆ ಬೇಕಾಗುವ ಆರ್ಥಿಕ ಯೋಜನೆಗಳನ್ನು ರೂಪಿಸುವತ್ತ ಅವರು ಮನಸ್ಸು ಮಾಡಬೇಕು. ಇದಕ್ಕಾಗಿ ಜನತೆ ಅವರನ್ನು ರಾಜಕೀಯದ ಪ್ರಧಾನಧಾರೆಗೆ ಕರೆತಂದು ಇಂತಹ ಸೂಕ್ಷ್ಮ ಜವಾಬ್ದಾರಿಗಳನ್ನು ಹೊರಿಸಿದರೆ ಈ ರಾಷ್ಟ್ರಕ್ಕೆ ಒಳಿತಾಗುತ್ತದೆ ಮತ್ತು ಎಂ.ವಿ. ರಾಜಶೇಖರನ್ ಅವರ ಸಾಮರ್ಥ್ಯವನ್ನು ಹೆಚ್ಚು ಸಮರ್ಥವಾಗಿ ಬೆಳೆಸಿಕೊಳ್ಳಲೂ ಅನುಕೂಲವಾಗುತ್ತದೆ. ಅಧಿಕಾರದಲ್ಲಿರಲಿ, ಬಿಡಲಿ ಅವರು ಈ ತೆರನಾದ ಚಿಂತನೆ ನಡೆಸುತ್ತಲೇ ಬಂದಿದ್ದಾರೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಅವರಿಗೆ ಇಂತಹ ಜವಾಬ್ದಾರಿಗಳನ್ನು ನೀಡಬೇಕೆಂದು ಈ ಸಂದರ್ಭದಲ್ಲಿ ನಾನು ಆಗ್ರಹಪಡಿಸುತ್ತೇನೆ.

ಅವರ ಎಪ್ಪತ್ತೈದನೇ ವರ್ಷದ ಅಭಿನಂದನೆಯ ಸಂದರ್ಭದಲ್ಲಿ ಸಂಘಟಕರು ಹೆಚ್ಚು ಪರಿಶ್ರಮಪಡುತ್ತಿದ್ದಾರೆ. ಅಂತಹ ಒಬ್ಬ ಅನುಭವಿಯನ್ನು ಸತ್ಕರಿಸುವುದು ನನಗನಿಸಿದಂತೆ ಅದೊಂದು ಪುಣ್ಯದ ಕೆಲಸವೇ ಸರಿ. ಆ ನಿಟ್ಟಿನಲ್ಲಿ 'ಗ್ರಾಮೀಣ ಅಭಿವೃದ್ಧಿ' ವಿಷಯ ಕುರಿತು ಗ್ರಾಮಭಾರತದ ವಿಶ್ವಕೋಶಕ್ಕೆ ಸಮಾನವಾದಂತಹ ಹೆಬ್ಬೊತ್ತಿಗೆಯನ್ನು ತರುತ್ತಿದ್ದಾರೆಂದು

ತಿಳಿದಿರುವೆ. ಇಂತಹ ಅರ್ಥಪೂರ್ಣ ಕಾರ್ಯಕ್ರಮಕ್ಕೆ ನನ್ನ ಪರಿಪೂರ್ಣ ಬೆಂಬಲವಿದೆ. ಹಾಗೆಯೇ ಅವರ ಹೆಸರಿನಿಂದ ಒಂದು ಗ್ರಾಮವನ್ನು ದತ್ತು ಗ್ರಾಮವೆಂದು ಸ್ವೀಕರಿಸಿಕೊಂಡು ಅದನ್ನು ಮಾದರಿ ಗ್ರಾಮವಾಗಿ ಅಭಿವೃದ್ಧಿಪಡಿಸಲು ಈ ಸಂದರ್ಭದಲ್ಲಿ ನಾನು ಸನ್ಮಾನ ಸಮಿತಿಯವರಲ್ಲಿ ವಿನಂತಿಸಿಕೊಳ್ಳುವೆ. ಇಂತಹ ವಿದಾಯಕ ಕಾರ್ಯಕ್ರಮಗಳಿಂದಾಗಿ ಅವರ ಈ ಅಭಿನಂದನ ಕಾರ್ಯಕ್ರಮಕ್ಕೆ ಮತ್ತಷ್ಟು ಮೆರಗು ಬರುತ್ತದೆಂಬುದು ನನ್ನ ಅನಿಸಿಕೆ.

ಸಂಸ್ಕೃತಿ ಪ್ರೇಮಿ ಎಂ.ವಿ. ರಾಜಶೇಖರನ್ ಅವರು ಎಪ್ಪತ್ತೈದು ವಸಂತಗಳನ್ನು ಪೂರೈಸುತ್ತಿರುವುದು ನಮಗೆ ಅತೀವ ಸಂತೋಷವನ್ನು ತಂದಿದೆ. ಅವರು ಗಳಿಸಿಕೊಂಡಿರುವ ಜೀವನಾನುಭವ ಅರ್ಥಪೂರ್ಣವಾಗಿ ಜನಸೇವೆಗೆ ಮುಡಿಪಾಗಲಿ. ನೂರಾರು ವರ್ಷ ಬಾಳಿ ಈ ದೇಶದ ಉನ್ನತ ಹುದ್ದೆಗಳನ್ನು ಹೊಂದಿ, ಕರ್ನಾಟಕದ ಚರಿತ್ರೆಯಲ್ಲಿ ಅವರು ಚಿರಾಯುವಾಗಿ ಉಳಿಯಲಿ ಎಂದು ನಾನು ಹಾರೈಸುವೆ.

***

# ಅಪರೂಪದ ವ್ಯಕ್ತಿ

**ವೈ.ರಾಮಚಂದ್ರ**

ಸನ್ಮಾನ್ಯ ಶ್ರೀ ಎಂ.ವಿ.ರಾಜಶೇಖರನ್ ಅವರ ಬಗ್ಗೆ ನಾಲ್ಕು ಮಾತುಗಳನ್ನು ಹೇಳುವುದು ನನಗೆ ಸಂತೋಷದ ಮತ್ತು ಹೆಮ್ಮೆಯ ವಿಷಯ. ಶ್ರೀ ರಾಜಶೇಖರನ್‌ರವರು ಅಪರೂಪದ ವ್ಯಕ್ತಿತ್ವವುಳ್ಳವರು. ಶ್ರೀಯುತರು ಕರ್ನಾಟಕದ ಒಂದು ಹೆಸರಾಂತ ರೈತ ಕುಟುಂಬದಿಂದ ಬಂದಿದ್ದಾರೆ. ಆದುದರಿಂದಲೇ ಇವರಿಗೆ ರೈತರ ಹಾಗೂ ಗ್ರಾಮೀಣ ಜನರ ಅಭ್ಯುದಯದಲ್ಲಿ ಅತೀವ ಆಸಕ್ತಿ. ರೈತರ ಸಮಸ್ಯೆಗಳನ್ನು ಆಮೂಲಾಗ್ರವಾಗಿ ತಿಳಿದುಕೊಂಡಿರುವವರಲ್ಲಿ ರಾಜಶೇಖರನ್‌ರವರೂ ಒಬ್ಬರು. ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿನ ರೈತರಿಗೆ ಸಂಬಂಧಿಸಿದ ಅನೇಕ ಸಂಘ-ಸಂಸ್ಥೆಗಳ ಸದಸ್ಯರಾಗಿದ್ದು, ರೈತರ ಸಮಸ್ಯೆಗಳ ಅರಿವು ಇವರಿಗಿದೆ.

ಶ್ರೀ ರಾಜಶೇಖರನ್‌ರವರು ಅಪ್ಪಟ ಗಾಂಧಿವಾದಿಗಳೂ, ಸರಳರೂ ಹಾಗೂ ಸಂಪನ್ನರು. ರಾಜಶೇಖರನ್‌ರವರಂತಹ ವ್ಯಕ್ತಿಗಳು ರಾಜಕೀಯದಲ್ಲಿ ಬಹಳ ವಿರಳ. ಇವರು ಪ್ರಾಮಾಣಿಕತೆಯ ಹಾಗೂ ಶ್ರದ್ಧೆಯ ಪ್ರತಿರೂಪ. ರಾಜಕೀಯ ಕ್ಷೇತ್ರದಲ್ಲಿ ಅನೇಕ ಸ್ಥಾನಗಳಲ್ಲಿದ್ದು ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಕಾಂಗ್ರೆಸ್ ಪಕ್ಷದ ತತ್ತ್ವಗಳಿಗೆ ಕಟಿಬದ್ಧರು. ಶ್ರೀಯುತರು ಮಾನ್ಯ ದಿವಂಗತ ಶ್ರೀ ಎಸ್.ನಿಜಲಿಂಗಪ್ಪನವರ ಅಳಿಯಂದಿರು. ಎಲ್ಲ ದೃಷ್ಟಿಯಿಂದಲೂ ಮಾವಂದಿರಿಗೆ ತಕ್ಕನಾದ ಅಳಿಯಂದಿರು. ರಾಜಕೀಯ ಕ್ಷೇತ್ರದಲ್ಲಿ ಪ್ರಮುಖರಾಗಿರುವ ಮಾವಂದಿರನ್ನು ಅಳಿಯಂದಿರು ದುರುಪಯೋಗಪಡಿಸಿಕೊಳ್ಳುತ್ತಿರುವ ಈ ದಿನಗಳಲ್ಲಿ ಶ್ರೀ ರಾಜಶೇಖರನ್‌ರವರು ಇದಕ್ಕೊಂದು ಅಪವಾದವಾಗಿದ್ದಾರೆ. ಇದು ಅವರ ಎಲ್ಲ ಸ್ನೇಹಿತರಿಗೆ ಮತ್ತು ಅಭಿಮಾನಗಳಿಗೆ ಬಹಳ ಸಂತೋಷದ ಮತ್ತು ಹೆಮ್ಮೆಯ ವಿಷಯ.

ಶ್ರೀ ರಾಜಶೇಖರನ್‌ರವರು ವಿಶಾಲ ಮನಸ್ಸಿನವರು ಹಾಗೂ ಉದಾರಿಗಳು. ವೈಯಕ್ತಿಕವಾಗಿ ನಾನು ೧೯೬೮ರಲ್ಲಿ ಕರ್ನಾಟಕದಲ್ಲಿ ಯುನೈಟೆಡ್ ಕಾಂಗ್ರೆಸ್ (ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ) ಉಪಾಧ್ಯಕ್ಷನಾಗಿದ್ದ ಕಾಲ. ಮೊದಲನೇ ಬಾರಿಗೆ ಯುನೈಟೆಡ್ ಕಾಂಗ್ರೆಸ್‌ನ

ವೈಸ್ ಪ್ರೆಸಿಡೆಂಟ್ ಆಗಿದ್ದ ನನ್ನನ್ನು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನನ್ನಾಗಿ ನೇಮಿಸಿದ ಸಂದರ್ಭದಲ್ಲಿ ಶ್ರೀ ರಾಜಶೇಖರನ್‌ರವರು ಮಾಡಿದ ಸಹಾಯ ನಾನು ಎಂದಿಗೂ ಮರೆಯಲಾರೆ. ತಮ್ಮ ಮಾವನವರಾದ ಹಾಗೂ ಆಗ ಎ.ಐ.ಸಿ.ಸಿ. (ಅಖಿಲ ಭಾರತ ಕಾಂಗ್ರೆಸ್ ಕಮಿಟಿ) ಅಧ್ಯಕ್ಷರಾಗಿದ್ದ ಶ್ರೀ ಎಸ್.ನಿಜಲಿಂಗಪ್ಪನವರಿಗೆ ಹೇಳಿ ನನ್ನನ್ನು ಆ ಹುದ್ದೆಗಳಿಗೆ ನೇಮಿಸಲು ಶ್ರೀ ರಾಜಶೇಖರನ್‌ರವರು ಕಾರಣರಾದರು. ಅಲ್ಲದೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆ ಆಹ್ವಾನಿತ ಸದಸ್ಯನಾಗಿರಲೂ ಸಹ ಶ್ರೀ ಎಸ್.ನಿಜಲಿಂಗಪ್ಪನವರಿಗೆ ನನ್ನ ಬಗ್ಗೆ ಒಳ್ಳೆಯ ಮಾತನಾಡಿ ಸಹಾಯಮಾಡಿದುದನ್ನು ನಾನು ಎಂದಿಗೂ ಮರೆಯಲಾರೆ.

ಶ್ರೀ ರಾಜಶೇಖರನ್‌ರವರು ಸಂಘಟನಾ ಚತುರರು. ಯಾವುದೇ ಜವಾಬ್ದಾರಿಯನ್ನು ತೆಗೆದುಕೊಂಡರೂ ಅದನ್ನು ಆಸಕ್ತಿಯಿಂದ, ಶ್ರದ್ಧೆಯಿಂದ, ನಿಷ್ಠೆಯಿಂದ ಮತ್ತು ಶಿಸ್ತಿನಿಂದ ನಿರ್ವಹಿಸಬಲ್ಲರು. ಹಾಗೂ ಜಯಾಪಜಯಗಳನ್ನು ಸಮಚಿತ್ತದಿಂದ ಸ್ಥಿತಪ್ರಜ್ಞರಂತೆ ಸ್ವೀಕರಿಸುವ ಮನೋಭಾವ ಇವರದ್ದು. ತಮ್ಮ ರಾಜಕೀಯ ಜೀವನದಲ್ಲಿ ಅನೇಕ ಏರುಪೇರುಗಳನ್ನು ಕಂಡಿದ್ದರೂ ಎದೆಗುಂದದೆ ಸಮಚಿತ್ತಭಾವದಿಂದ ರಾಜಕೀಯ ಒಡ್ಡಿದ ಸವಾಲುಗಳನ್ನು ಸ್ವೀಕರಿಸುತ್ತಾ ಬಂದಿದ್ದಾರೆ. ಎಂಥಹ ಕಠಿಣ ಸಮಯದಲ್ಲೂ ತಮ್ಮ ಸಾಚಾತನವನ್ನು, ನಂಬಿದ ಆದರ್ಶಗಳು ಹಾಗೂ ತತ್ವಗಳನ್ನು ಬಿಟ್ಟುಕೊಟ್ಟಿಲ್ಲ. ಕೆಲವು ವರ್ಷಗಳ ರಾಜಕೀಯ ಅಜ್ಞಾತ ವಾಸದಿಂದ ಹೊರಬಂದು ಈಗ ರಾಜ್ಯಸಭಾ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಒಟ್ಟಾರೆ ಹೇಳುವುದಾದರೆ ಮಿತ್ರ ಶ್ರೀ ರಾಜಶೇಖರನ್‌ರವರು ಸದ್ಗುಣಗಳಿಂದ, ಆದರ್ಶಗಳಿಂದ ತಮ್ಮ ಮಿತ್ರರ, ಸಹೋದ್ಯೋಗಿಗಳ, ಸಾಮಾನ್ಯ ಜನರ, ಅದರಲ್ಲೂ ರೈತಾಪಿ ಜನರ, ಕಡುಬಡವರ ಮನ್ನಣೆ ಹಾಗೂ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ಶ್ರೀಯುತರು ರಾಜಕೀಯ ಕ್ಷೇತ್ರದಲ್ಲಿ ಇನ್ನೂ ಉನ್ನತ ಸ್ಥಾನಗಳನ್ನು ಪಡೆದು ದೇಶಸೇವೆಯನ್ನು ಮಾಡಬೇಕೆಂಬುದು ನಮ್ಮೆಲ್ಲರ ಆಶಯ. ೭೫ನೇ ವರ್ಷ ಪೂರೈಸುವ ಈ ಸಂದರ್ಭದಲ್ಲಿ ಪರಮಾತ್ಮನು ಶ್ರೀ ರಾಜಶೇಖರನ್‌ರವರಿಗೆ ಆಯುರಾರೋಗ್ಯವನ್ನು ಕೊಟ್ಟು ದೇಶಕ್ಕೆ ಹೆಚ್ಚಿನ ಸೇವೆ ಸಲ್ಲಿಸಲು ಶಕ್ತಿ ಕೊಡಲಿ ಎಂದು ಹಾರೈಸುತ್ತೇನೆ.

***

# ಸಾಮಾನ್ಯರಲ್ಲಿ ಸಾಮಾನ್ಯರು




ಪಾಟೀಲ್

ಶ್ರೀ ಎಂ.ವಿ. ರಾಜಶೇಖರನ್‌ರವರು ಒಬ್ಬ ಅಪರೂಪದ ರಾಜಕಾರಣಿ. ದಿನೇ ದಿನೇ ಕಲುಷಿತಗೊಳ್ಳುತ್ತಿರುವ ಇಂದಿನ ರಾಜಕೀಯದಲ್ಲಿ ಮೌಲ್ಯಗಳನ್ನು ಉಳಿಸಿ ಅವುಗಳನ್ನು ಪ್ರತಿಪಾದಿಸಿಕೊಂಡು ಬರುತ್ತಿರುವ ಅತಿ ವಿರಳ ರಾಜಕಾರಣಿಗಳಲ್ಲಿ ಶ್ರೀಯುತರು ಒಬ್ಬರು ಎನ್ನುವುದರಲ್ಲಿ ಅತಿಶಯೋಕ್ತಿಯಿಲ್ಲ. ಅರವತ್ತರ ದಶಕದಲ್ಲಿ ಕಾಲೇಜು ದಿನಗಳನ್ನು ಮುಗಿಸಿದ ತರುವಾಯ ಕಾಂಗ್ರೆಸ್ ಪಕ್ಷದ ಸಿದ್ಧಾಂತ ಮತ್ತು ತತ್ತ್ವಗಳಿಗೆ ಮನಸೋತು ಆ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿ ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿಟ್ಟಾಗ ಶ್ರೀ ರಾಜಶೇಖರನ್‌ರವರ ಸಂಪರ್ಕ ನಮಗುಂಟಾಯಿತು. ಆ ವೇಳೆಗಾಗಲೇ ಶ್ರೀಯುತರು ಒಬ್ಬ ಯುವ ನಾಯಕರಾಗಿದ್ದರು. ಅವರು ಕಾಂಗ್ರೆಸ್ ಚಳವಳಿಯಲ್ಲಿ ಮತ್ತು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಮೈಸೂರು ರಾಜ್ಯವನ್ನು ಭಾರತದ ಒಕ್ಕೂಟದಲ್ಲಿ ಸೇರಿಸುವಂತೆ ಒತ್ತಾಯಿಸಿ ವಿದ್ಯಾರ್ಥಿಗಳನ್ನು ಮತ್ತು ಇತರ ನಾಯಕರುಗಳನ್ನು ಸಂಘಟಿಸಿ 'ಮೈಸೂರು ಚಲೋ' ಆಂದೋಲನ ನಡೆಸಿದ ಮುಖ್ಯ ನೇತಾರರಲ್ಲಿ ಶ್ರೀ ರಾಜಶೇಖರನ್ ಒಬ್ಬರಾಗಿದ್ದರು. ಯುವಕರ ಪ್ರೇರಕ ಶಕ್ತಿಯಾಗಿ ಕೆಲಸ ಮಾಡುತ್ತಿದ್ದ ಇವರಲ್ಲಿ ಯುವಪ್ರತಿಭೆಯನ್ನು ಸಮರ್ಪಕ ರೀತಿಯಲ್ಲಿ ಬಳಸಿಕೊಳ್ಳಬೇಕೆಂಬ ತುಡಿತವಿತ್ತು. ಸರ್ಕಾರ ಯುವಕರಿಗಾಗಿಯೇ ಒಂದು ಪ್ರತ್ಯೇಕ ಸಚಿವಾಲಯವನ್ನು ಹೊಂದಬೇಕೆಂಬ ಇವರ ಇಚ್ಛೆ ಮತ್ತು ಹೋರಾಟದ ಪ್ರತಿಫಲವೇ ಇಂದಿನ ಕರ್ನಾಟಕ ಸರ್ಕಾರದ ಯುವಜನ ಸೇವಾ ಇಲಾಖೆಯ ಪ್ರಾರಂಭಕ್ಕೆ ನಾಂದಿಯಾಯಿತು.

ಅವಿಭಾಜ್ಯ ಕಾಂಗ್ರೆಸ್ ಪಕ್ಷದಲ್ಲಿ ವಿವಿಧ ಹುದ್ದೆಗಳನ್ನು ಹೊಂದಿ ಇವರು ಪಕ್ಷಕ್ಕೆ ಸಲ್ಲಿಸಿದ ಸೇವೆ ಅನುಪಮವಾದುದು. ಈ ಹಿನ್ನೆಲೆಯಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ಒತ್ತಾಸೆಯ ಮೇರೆಗೆ ಶ್ರೀಯುತರು ೧೯೬೭ರಲ್ಲಿ ಕನಕಪುರದಿಂದ ಲೋಕಸಭೆಗೆ ಸ್ಪರ್ಧಿಸಿ ಪ್ರಚಂಡ ಬಹುಮತದಿಂದ ಆಯ್ಕೆಯಾದರು. ತದನಂತರದ ರಾಜಕೀಯ ಸ್ಥಿತ್ಯಂತರಗಳಿಂದಾಗಿ

೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಇವರು ಅಂದಿನ ಸಂಸ್ಥಾ ಕಾಂಗ್ರೆಸ್‌ನಲ್ಲಿಯೇ ಮುಂದುವರೆದರು. ಮುಂದೆ ಜನತಾ ಪಕ್ಷ ಉದಯವಾದಾಗ, ಇವರಂತೆ ವಿಜಾಪೂರದ ಹೆಚ್ಚಿನ ನಾಯಕರು ಸಹ ಜನತಾ ಪಕ್ಷದಲ್ಲಿ ಉಳಿದ ಪರಿಣಾಮವಾಗಿ ಶ್ರೀಯುತರ ಸಂಪರ್ಕ ಇನ್ನೂ ನಿಕಟವಾಯಿತು. ೧೯೭೮ರಲ್ಲಿ ಜನತಾ ಪಕ್ಷದ ವತಿಯಿಂದ ವಿಧಾನಸಭೆ ಸದಸ್ಯರಾಗಿ ಚುನಾಯಿತರಾದುದು ಇವರ ಜನಪ್ರಿಯತೆಗೆ ಸಾಕ್ಷಿಯಾಗಿತ್ತು ಎಂದರೆ ತಪ್ಪಾಗಲಾರದು. ಆದರೂ ಕಾಂಗ್ರೆಸ್ ಪಕ್ಷದ ತತ್ವ ಮತ್ತು ಸಿದ್ಧಾಂತಗಳನ್ನು ಮೈಗೂಡಿಸಿಕೊಂಡಿದ್ದ ಶ್ರೀಯುತರು ಪುನಃ ತಮ್ಮ ಮಾತೃಸಂಸ್ಥೆಯಾದ ಅಖಿಲ ಭಾರತ ಕಾಂಗ್ರೆಸ್ ಪಕ್ಷಕ್ಕೆ ವಾಪಸ್ಸಾದರು. ಶ್ರೀಯುತರನ್ನು ಒಬ್ಬ ರಾಜಕಾರಣಿಯಾಗಿ ಗುರುತಿಸುವುದಕ್ಕಿಂತ ಒಬ್ಬ ವಿದ್ವಾಂಸರಾಗಿ ಗುರುತಿಸುವುದೇ ಹೆಚ್ಚು ಪ್ರಸ್ತುತ ಎಂಬುದು ನನ್ನ ಅನಿಸಿಕೆ. ಗ್ರಾಮೀಣ ಪ್ರದೇಶದಿಂದ ಬಂದ ಶ್ರೀಯುತರು, ಗ್ರಾಮೀಣ ಜನತೆಯ ಅದರಲ್ಲಿಯೂ ವಿಶೇಷವಾಗಿ ಕೃಷಿಕರ ಸಮಸ್ಯೆಗಳನ್ನು ಆಳವಾಗಿ ತಿಳಿದಂಥವರು. ಗ್ರಾಮೀಣಾಭಿವೃದ್ಧಿ ಬಗ್ಗೆ ಒಬ್ಬ ಚಿಂತಕರಾಗಿ ಹಾಗೆಯೇ ಒಬ್ಬ ವಿಜ್ಞಾನಿಯಾಗಿ ಇವರು ಅಧ್ಯಯನ ನಡೆಸಿದ್ದಾರೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಗ್ರಾಮೀಣಾಭಿವೃದ್ಧಿ, ಯುವಶಕ್ತಿ, ನೀರಾವರಿ, ಕೃಷಿ, ಮಾನವ ಸಂಪನ್ಮೂಲದ ಬಳಕೆ - ಹೀಗೆ ಹತ್ತು ಹಲವಾರು ಕ್ಷೇತ್ರಗಳಲ್ಲಿನ ಇವರ ಸಾಧನೆ ನಿಜವಾಗಲೂ ಆಶ್ಚರ್ಯವನ್ನುಂಟು ಮಾಡುತ್ತದೆ. ರಾಜ್ಯ ಕೃಷಿಕ ಸಮಾಜ ಇವರ ಕನಸಿನ ಕೂಸು. ಇವರು ಭಾಗವಹಿಸಿದ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕಮ್ಮಟಗಳ ಬಗ್ಗೆ ಹೇಳುತ್ತಾ ಹೋದರೆ ಪ್ರಾಯಶಃ ಒಂದು ದೊಡ್ಡ ಪಟ್ಟಿಯೇ ಆಗುತ್ತದೆ. ಈ ಕಮ್ಮಟಗಳಲ್ಲಿ ಇವರು ಮಂಡಿಸಿರುವ ವಿಚಾರ ಪ್ರಚೋದಕ ಲೇಖನಗಳೆಲ್ಲವೂ ದಾಖಲಿಸಬಹುದಾದಂತ ಲೇಖನಗಳೆಂದರೆ ಅದು ಉತ್ಪ್ರೇಕ್ಷೆಯಾಗುವುದಿಲ್ಲ. ತಮ್ಮ ರಾಜಕೀಯ ಒಡನಾಟದ ಜೀವನದ ಜೊತೆಗೆ ಅನೇಕ ಸರ್ಕಾರೇತರ ಸಂಘ-ಸಂಸ್ಥೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಕಾರ್ಯನಿರ್ವಹಿಸುತ್ತಿರುವುದು ಇವರ ಕ್ರಿಯಾಶೀಲ ಚಟುವಟಿಕೆಗಳಿಗೆ ಹಿಡಿದ ಕನ್ನಡಿಯಾಗಿದೆ. ಮೇಲಿನ ಕ್ಷೇತ್ರಗಳಲ್ಲಿ ತಾವು ಪಡೆದಿರುವ ಅಪಾರ ಜ್ಞಾನವನ್ನು ಪರ ರಾಷ್ಟ್ರಗಳಲ್ಲಿ ಹಂಚಿಕೊಂಡಿರುವ ಕೀರ್ತಿ ಶ್ರೀಯುತರದ್ದು. ಅದಕ್ಕಾಗಿ ಆಫ್ರಿಕಾ, ಏಷಿಯಾ ಹಾಗೂ ಯೂರೋಪಿಯನ್ ಖಂಡಗಳ ಅನೇಕ ರಾಷ್ಟ್ರಗಳಿಗೆ ಭೇಟಿ ನೀಡಿದ್ದಾರೆ. ಈ ಕೀರ್ತಿಗೆ ಭಾಜನರಾದ ಕೆಲವೇ ಕೆಲವು ರಾಜಕೀಯ ನಾಯಕರಲ್ಲಿ ಶ್ರೀಯುತರು ಪ್ರಥಮ ಶ್ರೇಣಿಯಲ್ಲಿ ನಿಲ್ಲುವರು. ಶ್ರೀ ರಾಜಶೇಖರನ್‌ರವರು ಬೆಂಗಳೂರಿನಲ್ಲಿ ಸ್ಥಾಪಿಸಿದ ಏಷಿಯನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದ ಒಂದು ಪ್ರತಿಷ್ಠಿತ ಸಂಸ್ಥೆಯಾಗಿದೆ. ಈ ಸಂಸ್ಥೆಯಿಂದ ಅನೇಕ ಹೊರರಾಷ್ಟ್ರದ ವಿದ್ವಾಂಸರು ತರಬೇತಿಯನ್ನು ಪಡೆದಿದ್ದಾರೆ. ಈ ಸಂಸ್ಥೆಯು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗಾಗಿ ತನ್ನದೇ ಆದ ಛಾಪನ್ನು ಮೂಡಿಸಿದೆ.

## ನಿಜಬಿಂಬ

ಶ್ರೀಮಂತ ಕುಟುಂಬದ ಹಿನ್ನೆಲೆಯಿಂದ ಬಂದ ಶ್ರೀಯುತರು ಸಾಮಾನ್ಯರಲ್ಲಿ ಸಾಮಾನ್ಯರು. ಮಿತಭಾಷಿಗಳು, ನಿಗರ್ವಿಗಳು, ಹಾಗೂ ಅಷ್ಟೇ ಸರಳ ಸಜ್ಜನಿಕೆಯ ವ್ಯಕ್ತಿಗಳು. ಸದನಗಳ ಕಾರ್ಯಕಲಾಪಗಳಲ್ಲಿ ಅನವಶ್ಯಕವಾಗಿ ಮೂಗುತೂರಿಸದೆ ತಾವು ಪ್ರತಿಪಾದಿಸಬೇಕಾದ ವಿಷಯದ ಬಗ್ಗೆ ಮೊದಲೇ ಆಳವಾಗಿ ಅಭ್ಯಸಿಸಿ ವಿಷಯಗಳನ್ನು ಮಂಡಿಸುತ್ತಿದ್ದ ಇವರ ಕ್ರಮ ಸದನದ ಇತರ ಸದಸ್ಯರುಗಳಿಗೆ ಮಾದರಿಯಾಗಿದೆ. ಶ್ರೀಯುತರದು ಕಂಚಿನ ಕಂಠ. ವಿಷಯವನ್ನು ನಿರರ್ಗಳವಾಗಿ ಅಂಕಿ-ಅಂಶಗಳ ಆಧಾರ ಸಹಿತ ಮಂಡಿಸುವ ರೀತಿ ನಿಜವಾಗಿಯೂ ಅನುಕರಣೀಯವಾದುದು. ಒಂದು ರೀತಿಯಲ್ಲಿ ಅಂಕಿ-ಅಂಶಗಳ ಮೋಡಿಗಾರರೆಂದರೆ ಉತ್ಪ್ರೇಕ್ಷೆಯೇನಲ್ಲ. ಅಂತರ್ಜಲ ಮಟ್ಟದ ಇಳಿಕೆ, ಗ್ರಾಮೀಣ ಬಡತನದ ಬಗ್ಗೆ ಇವರು ಬಹಳ ಹಿಂದೆಯೇ ಎಚ್ಚರಿಸಿರುವುದು ಇವರ ಜೊತೆ ಸದನದಲ್ಲಿ ಕಾರ್ಯನಿರ್ವಹಿಸಿದ ಎಲ್ಲ ಸದಸ್ಯರುಗಳಿಗೆ ಗೊತ್ತಿರುವ ವಿಚಾರ. ವಸ್ತುನಿಷ್ಠತೆಯನ್ನು ಪ್ರತಿಬಿಂಬಿಸುವಲ್ಲಿ ಯಾವುದೇ ಕಾರಣಕ್ಕೂ ಹಿಂಜರಿಯದ ವ್ಯಕ್ತಿತ್ವ ಇವರದು.

ಮಾಜಿ ಮುಖ್ಯಮಂತ್ರಿಗಳಾದ ದಿ. ಎಸ್.ನಿಜಲಿಂಗಪ್ಪನವರ ಅಳಿಯರೆಂಬ ವಿಶೇಷಣಕ್ಕೆ ಎಂದೂ ಅಂಟಿಕೊಳ್ಳದೆ ತಮ್ಮ ಸಿದ್ಧಿ ಸಾಧನೆಗಳ ಮೂಲಕ ಒಬ್ಬ ಪ್ರಬುದ್ಧ ನಾಯಕರಾಗಿ ಮೆರೆದಿದ್ದಾರೆ. ಇವರ ಸಾಧನೆ, ವ್ಯಕ್ತಿತ್ವ ಮತ್ತು ನಿರಂತರ ಸೇವೆಯ ಹಿನ್ನೆಲೆಯಲ್ಲಿ ಇವರನ್ನು ೨೦೦೨ರಲ್ಲಿ ರಾಜ್ಯಸಭೆಗೆ ಸದಸ್ಯರನ್ನಾಗಿ ಆಯ್ಕೆ ಮಾಡಿರುವುದು ನಿಜವಾಗಿಯೂ ಶ್ಲಾಘನೀಯವಾಗಿದೆ. ಇದರಿಂದಾಗಿ ಈಗಾಗಲೇ ರಾಷ್ಟ್ರಕ್ಕೆ ನಿರಂತರವಾಗಿ ದೊರೆಯುತ್ತಿರುವ ಇವರ ಸೇವೆಗೆ ಮತ್ತಷ್ಟು ಪುಷ್ಟಿಯನ್ನು ಕೊಟ್ಟಂತಾಗಿದೆ. ಇದೀಗ ಅವರ ೭೫ನೇ ವರ್ಷದ ಸಂದರ್ಭದಲ್ಲಿ ಶ್ರೀಯುತ ರಾಜಶೇಖರನ್‌ರವರನ್ನು ಸನ್ಮಾನಿಸುತ್ತಿರುವುದು ಅತ್ಯಂತ ಸಂತೋಷ ತರುವಂತಹ ವಿಷಯ. ಈ ಸನ್ಮಾನದಿಂದ ಒಬ್ಬ ನಿಷ್ಠಾವಂತ ಗ್ರಾಮೀಣ ಕೃಷಿಕನನ್ನು ಸನ್ಮಾನಿಸಿದಂತಾಗುತ್ತದೆ. ಶ್ರೀಯುತರು ಇನ್ನೂ ನೂರ್ಕಾಲ ನಮ್ಮೊಂದಿಗಿರಲು ಭಗವಂತನು ಅವರಿಗೆ ಆಯುರಾರೋಗ್ಯ ಭಾಗ್ಯವನ್ನು ಕರುಣಿಸಲೆಂದು ಪ್ರಾರ್ಥಿಸುವೆ.

***

# ಗಾಂಧಿ ವಿಚಾರಧಾರೆಯಲ್ಲಿ ಮಿಂದ ವ್ಯಕ್ತಿತ್ವ

**ಪ್ರಮೀಳಾದೇವಿ ಕೃಷ್ಣಪ್ಪ**

ಎಂ.ವಿ.ರಾಜಶೇಖರನ್‌ರವರಿಗೆ ೭೫ರ ಹುಟ್ಟುಹಬ್ಬ ಆಚರಿಸುತ್ತಿರುವ ವಿಚಾರ ತಿಳಿದು ನನಗೆ ತುಂಬಾ ಸಂತೋಷವಾಯಿತು. ರಾಜಶೇಖರನ್ ಅವರನ್ನು ೫೦ ವರ್ಷಗಳಿಂದ ನೋಡುತ್ತಾ ಬಂದಿದ್ದೇನೆ. ಅವರಲ್ಲಿ ಮಗುವಿನ ಮುಗ್ಧತೆ ಇದೆ. ಸಕಲರನ್ನು ಒಂದೆನ್ನುವ ವಿಶಾಲ ಮನೋಭಾವ ಅವರದು.

ನಮ್ಮ ಯಜಮಾನರಾದ ಎಂ.ವಿ.ಕೃಷ್ಣಪ್ಪ ಅವರು ಐವತ್ತರ ದಶಕದಲ್ಲಿ ನೆಹರು ಕ್ಯಾಬಿನೆಟ್‌ನಲ್ಲಿ ಕೃಷಿ ಖಾತೆಯ ಸಹಾಯಕ ಸಚಿವರಾಗಿದ್ದರು. ಅವರು ೨೮ನೆಯ ವರ್ಷಕ್ಕೆ ಲೋಕಸಭಾ ಸದಸ್ಯರಾಗಿ ಅನಂತರ ಸಚಿವರಾದವರು. ಅವರು ಸಚಿವರಾದಾಗ ನನಗೆ ೨೦ ವರ್ಷ. ಯಶೋಧರಮ್ಮ ದಾಸಪ್ಪ ಅವರ ನೇತೃತ್ವದಲ್ಲಿ ನಡೆದ ಅನೇಕ ಚಳವಳಿಗಳಲ್ಲಿ ನಾನೂ ಸಹ ಭಾಗವಹಿಸಿದ್ದೆ. ಮೈಸೂರಿನ ಪಡುವಾರಳ್ಳಿ ರಾಜಕುಮಾರಿ ಯವರ ಬಂಗಲೆಯಲ್ಲಿ ಕಾಂಗ್ರೆಸ್ಸಿನ ಐವತ್ತು ಮಹಿಳಾ ಕಾರ್ಯಕರ್ತರಿಗೆ ಯಶೋಧರಮ್ಮ ಅವರು ಶಿಬಿರ ಏರ್ಪಡಿಸಿದ್ದರು. ನಾನು ಐದು ತಿಂಗಳ ಗರ್ಭಿಣಿ, ಆದರೂ ಅದರಲ್ಲಿ ಭಾಗವಹಿಸಬೇಕೆಂಬುದು ನಮ್ಮ ಯಜಮಾನರ ಕಟ್ಟಾಜ್ಞೆ. ನನಗೂ ಅದರಲ್ಲಿ ಭಾಗವಹಿಸುವುದು ಸಂತೋಷದ ವಿಚಾರ. ಗ್ರಾಮೀಣ ಪ್ರದೇಶದಲ್ಲಿದ್ದ ಅನೇಕ ಸಮಸ್ಯೆಗಳನ್ನು ಈ ಶಿಬಿರದಲ್ಲಿ ಚರ್ಚಿಸಲಾಗುತ್ತಿತ್ತು. ಗಾಂಧೀಜಿ ಅವರ ಸರ್ವೋದಯ ತತ್ವದ ಹಿನ್ನೆಲೆಯಲ್ಲಿ ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕೆಂದು ಅಲ್ಲಿನ ಎಲ್ಲ ಹಿರಿಯ ಕಾರ್ಯಕರ್ತರು ಅಭಿಪ್ರಾಯಪಡುತ್ತಿದ್ದರು. ದೈವಯೋಗದಿಂದ ನಮ್ಮ ಯಜಮಾನರಿಗೆ ಕೃಷಿ ಹಾಗೂ ಪಶುಸಂಗೋಪನೆ ಖಾತೆಗಳು ದೊರಕಿದವು. ಅವರಿಗೆ ವಿಶೇಷವಾಗಿ ಗ್ರಾಮೀಣ ಜನರ ಬಗ್ಗೆ ಪ್ರೀತಿ. ಇಂತಹ ಸಂದರ್ಭದಲ್ಲಿ ಕೃಷಿ ಚಟುವಟಿಕೆಗೆ ಪೂರಕವಾದ ಪಶುಸಂಗೋಪನೆ, ಕುರಿ ಸಾಗಾಣಿಕೆ, ಮೀನುಗಾರಿಕೆ, ತೋಟಗಾರಿಕೆ ಮೊದಲಾದವುಗಳಿಗೆ ಆದ್ಯತೆ ಕೊಡಬೇಕೆಂದು ಅವರು ನಿರ್ಧರಿಸಿದ್ದರು. ಅದರ ಫಲವೇ ಬೆಂಗಳೂರಿನಲ್ಲಿ ಇರುವ ಬೃಹತ್ ಹಾಲಿನ ಡೈರಿ. ನಿಜಲಿಂಗಪ್ಪ ಅವರ ಸಚಿವ ಸಂಪುಟದಲ್ಲಿ ಕೃಷಿ ಸಚಿವರಾಗಿದ್ದಾಗ ಈ ಯೋಜನೆಯನ್ನು ಅವರು ಅನುಷ್ಠಾನ ಮಾಡಿದ್ದು

ನಿಜ. ಆದರೆ ಅದಕ್ಕೆ ಪ್ರೇರಣೆ ದೊರಕಿದ್ದು ನೆಹರು ಸಂಪುಟದಲ್ಲಿ ಕೃಷಿ ಸಹಾಯಕ ಸಚಿವರಾಗಿದ್ದಾಗ. ಪಂಜಾಬ್, ಹರಿಯಾಣ ಹಾಗು ಗುಜರಾತ್‌ಗಳಲ್ಲಿ ರೈತರು ಹೆಚ್ಚು ಸುಖಿಗಳಾಗಿದ್ದಾರೆಂಬುದನ್ನು ಅವರು ಪ್ರತ್ಯಕ್ಷವಾಗಿ ಅರಿತಿದ್ದರು. ದೆಹಲಿಯ ತಮ್ಮ ಮನೆಯಲ್ಲೇ ವಿಸ್ತಾರವಾದ ಕೋಳಿಗೂಡನ್ನು ಪ್ರಾರಂಭಿಸಿದ್ದರು. ಒಟ್ಟಾರೆ ಭಾರತದ ರೈತ ಸಮುದಾಯ ಕೃಷಿಯನ್ನು ಜೀವನಾಧಾರವಾಗಿ ಅವಲಂಬಿಸದೆ ಕೃಷಿಗೆ ಪೂರಕವಾಗಿರುವ ಇತರ ಕ್ಷೇತ್ರಗಳತ್ತ ಗಮನ ಹರಿಸಬೇಕೆಂಬುದು ಅವರ ಮಹದಾಸೆಯಾಗಿತ್ತು. ಎಂ.ವಿ.ರಾಜಶೇಖರನ್ ಅವರಿಗೂ ಸಹ ಇದೇ ತರಹದ ಆಸೆಯಿದೆ. ಅವರು ಕಟ್ಟಿರುವ ಏಷಿಯನ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಗ್ರಾಮೀಣ ಜನರ ಕಲ್ಯಾಣಕ್ಕಾಗಿ ದುಡಿಯುತ್ತಿದೆ. ಇಂತಹ ಪ್ರೇರಣೆ ಅವರಿಗೆ ಬರಲು ಕೃಷ್ಣಪ್ಪ ಅವರು ಸಹ ಕಾರಣವೆಂಬುದು ಅನೇಕರಿಗೆ ಗೊತ್ತಿಲ್ಲ. ರಾಜಶೇಖರನ್ ೧೯೫೨ರಲ್ಲಿ ಕಾನೂನು ವ್ಯಾಸಂಗ ಮಾಡಲು ತುಳಸೀದಾಸಪ್ಪನ ಜೊತೆ ದೆಹಲಿಯ ನಮ್ಮ ಮನೆಗೆ ಬಂದರು. ಆಗ ನಮ್ಮ ಜೊತೆಯಲ್ಲಿ ನನ್ನ ಮೈದುನ ಎಂ.ವಿ.ವೆಂಕಟಪ್ಪ ಸಹ ಇದ್ದ. ಈ ಮೂವರಿಗೂ ಒಂದು ದೊಡ್ಡ ಕೋಣೆಯನ್ನು ಕೊಟ್ಟಿದ್ದೆವು. ನಮ್ಮಲ್ಲೇ ಊಟ ತಿಂಡಿ ಮಾಡಿಕೊಂಡು ರಾಜಶೇಖರನ್ ಕಾನೂನು ಪದವಿಯನ್ನು ಅಭ್ಯಾಸ ಮಾಡುತ್ತಿದ್ದರು. ರಾಜಶೇಖರನ್ ವಿದ್ಯಾರ್ಥಿ ದೆಸೆಯಲ್ಲೂ ತುಂಬಾ ಚಟುವಟಿಕೆಯ ವ್ಯಕ್ತಿ. ದೆಹಲಿ ವಿಶ್ವವಿದ್ಯಾಲಯದ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ. ಮನೆಗೆ ಬಂದು ಸಂಜೆ 'ಅಮ್ಮ ಇಂತಿಂತಹ ಕೆಲಸ ಮಾಡಿದೆ' ಎಂದು ವರದಿ ಒಪ್ಪಿಸುತ್ತಿದ್ದ. ಮೌಲಾನಾ ಅಬುಲ್ ಕಲಾಂ ಅಜಾದ್ ಅವರನ್ನು ತನ್ನ ಸಹಪಾಠಿಗಳೊಡನೆ ಭೇಟಿ ಮಾಡಿ ಅವರಿಗೆ ಯುವಜನಾಂಗದ ಸಮಸ್ಯೆಯನ್ನು ತಿಳಿಸಿದ್ದು ನನಗೆ ಇಂದಿಗೂ ನೆನಪಿನಲ್ಲಿ ಉಳಿದಿದೆ. ನಮ್ಮವರ ಜೊತೆ ಆತ ಪ್ರತಿನಿತ್ಯ ರೈತರ ಹಾಗೂ ಆಧುನಿಕ ಕೃಷಿಯ ಬಗ್ಗೆ ಮಾತಾಡುತ್ತಿದ್ದ.

ನಮ್ಮವರಿಗೂ ರಾಜಶೇಖರನ್ ಕಂಡರೆ ತುಂಬಾ ಪ್ರೀತಿ. 'ಆತ ಎಷ್ಟು ಬುದ್ಧಿವಂತ, ಬಡವರ ಬಗ್ಗೆ ಆತನಿಗೆ ಎಷ್ಟು ಆದರ ಇದೆ' ಎಂದು ಹೇಳುತ್ತಿದ್ದರು. ರಾಜಶೇಖರನ್ ಅವರ ತಂದೆ ನಿಧನರಾದ ಕಾರಣ ವಿದ್ಯಾಭ್ಯಾಸ ನಿಲ್ಲಿಸಿ ತಮ್ಮ ಊರು ಕನಕಪುರದ ಮರಳವಾಡಿಗೆ ಬಂದರು. ಆಮೇಲೆ ಅವರು ನಿಜಲಿಂಗಪ್ಪನವರ ಅಳಿಯರಾದುದು. ೧೯೫೮ ಇರಬೇಕು, ರಾಜಶೇಖರನ್ ಮೊದಲ ಬಾರಿಗೆ ಅಮೆರಿಕಾಕ್ಕೆ ಹೊರಟಿದ್ದರು. ತಮ್ಮ ಮಡದಿ ಗಿರಿಜಾಳನ್ನು ನಮ್ಮ ಮನೆಗೆ ಕರೆದುಕೊಂಡು ಬಂದು ಅಲ್ಲಿಂದಲೇ ಅಮೆರಿಕಾಕ್ಕೆ ಹೊರಟರು. ಆಕೆ ಕೂಡ ಅಷ್ಟೆ. ರಾಜಶೇಖರನ್‌ಗೆ ಅನುರೂಪಳಾದ ಪತ್ನಿ. ತಾನು ಮುಖ್ಯಮಂತ್ರಿಯ ಮಗಳು ಎಂಬ ಅಹಂಕಾರ ಆಕೆಗೆ ಎಂದೂ ಇರಲಿಲ್ಲ. ರಾಜಶೇಖರನ್ ಅವರಲ್ಲಿರುವ ಮುಗ್ಧತೆ ಹಾಗೂ ಸ್ನೇಹಶೀಲತೆ ಗಿರಿಜಾಳಲ್ಲೂ ಇದೆ. ಆಗಿನಿಂದಲೂ ಕೂಡ ಅವರು ನಮ್ಮ ಮನೆಗೆ ಬರುತ್ತಿದ್ದಾರೆ. ಅವರ ನಡೆ ನುಡಿಯಲ್ಲಿ ಒಂದಿಷ್ಟೂ ಬದಲಾವಣೆ ಇಲ್ಲ. ಮಕ್ಕಳನ್ನೂ ಕೂಡ ಅದೇ ರೀತಿ ಬೆಳೆಸಿದ್ದಾರೆ. ಎಲ್ಲಾ ವಿಧದಲ್ಲೂ ಅವರದು ಆದರ್ಶ ಎನಿಸುವಂತಹ ಸಂಸಾರ.

ಇತ್ತೀಚಿಗೆ ನನ್ನ ಮೊಮ್ಮಗ ನಾಲ್ಕನೆಯ ಕ್ಲಾಸಿನ ವಿದ್ಯಾರ್ಥಿ, ಸೋಫಿಯಾ ಶಾಲೆಯಲ್ಲಿ ತನ್ನ ಪಕ್ಕದವರು ಯಾವಾಗಲೂ ಹೇಳುತ್ತಾರೆಂದು ಹೇಳಿದ ವಿಚಾರವಿದು: 'ನೀವು ಒಕ್ಕಲಿಗರು ಕಣೋ, ನಾವು ಲಿಂಗಾಯಿತರು'. ನನಗಾಗಲಿ, ನಮ್ಮ ಮನೆಯವರಿಗಾಗಲಿ ಅಥವಾ ಯಶೋಧರಮ್ಮ ದಾಸಪ್ಪನವರಿಗಾಗಲಿ ರಾಜಶೇಖರನ್ ಯಾವ ಜಾತಿಯವರೆಂದು ಗೊತ್ತೇ ಇರಲಿಲ್ಲ. ನಿಜಲಿಂಗಪ್ಪನವರ ಅಳಿಯ ಎಂಬುದು ಬಿಟ್ಟರೆ ಉಳಿದ ವಿಚಾರ ಯೋಚಿಸಿಲ್ಲ. ಆ ಸಂಬಂಧ ಆಗುವುದಕ್ಕಿಂತ ಮುಂಚೆ ಕೂಡ ನಮ್ಮ ಕುಟುಂಬಕ್ಕೆ ಅವರು ಹತ್ತಿರವಾಗಿದ್ದರು. ಜಾತಿ ಭಾವನೆ ಎಂದೂ ನಮ್ಮ ಮನಸ್ಸಿನಲ್ಲಿ ಉದ್ಭವವಾಗಿರಲಿಲ್ಲ. ಇಂತಹ ಮನೋಭಾವ ಬೆಳೆಯಲು ನಾವುಗಳು ಗಾಂಧಿ ವಿಚಾರಧಾರೆಯಲ್ಲಿ ಬೆಳೆದದ್ದೇ ಕಾರಣ. ರಾಜಶೇಖರನ್ ಕೂಡ ಇದೇ ತರಹದ ವಿಚಾರವಿದ್ದವರು. ರಾಜಕೀಯದಲ್ಲಿ ಜಾತಿಗಿರುವ ಮಹತ್ವ ಅಪರಿಮಿತವಾದುದು. ಅದನ್ನು ಮೆಟ್ಟಿನಿಂತ ವ್ಯಕ್ತಿ ರಾಜಶೇಖರನ್.

***

# ದೇಗುಲಮಠ-ಎಂ.ಪಿ.ಆರ್.

ಪೂಜ್ಯ ಶ್ರೀ ನಿರ್ವಾಣ ಸ್ವಾಮಿ

**ಆನೆ ಕನ್ನಡಿಯಲ್ಲಿ ತಾನಡಗಿ ಇಪ್ಪಂತೆ**
**ಜ್ಞಾನವುಳ್ಳವರ ಹೃದಯದಲಿ-ಪರಶಿವನು**
**ತಾನಡಗಿ ಇಹನು ಸರ್ವಜ್ಞ.**

ಜ್ಞಾನವುಳ್ಳವರ ಹೃದಯದಲಿ ಪರಶಿವನು ಸದಾ ನೆಲೆಸಿರುತ್ತಾನೆಂಬ ಈ ಅನುಭವದ ನುಡಿ ನಮ್ಮ ಎಂ.ವಿ. ರಾಜಶೇಖರನ್ ಅವರಿಗೆ ಅನ್ವರ್ಥವಾಗುತ್ತದೆ.

ನಮ್ಮ ಮಠದಲ್ಲಿ ವಿದ್ಯಾರ್ಥಿಯಾಗಿ ಬೆಳೆದು ದೊಡ್ಡವರಾಗಿರುವ ಎಂ.ವಿ. ರಾಜಶೇಖರನ್ ಅವರಿಗೆ ಎಪ್ಪತ್ತೈದು ವರ್ಷಗಳು ತುಂಬುತ್ತಿರುವ ಈ ಸಂದರ್ಭದಲ್ಲಿ ಸದಾಶಿವನ ಮಂಗಲಾಶೀರ್ವಾದಗಳು. ದೀರ್ಘಾಯುಷ್ಯ ವಂತರಾಗಲಿ ಮತ್ತು ಅನನ್ಯ ಜೀವನೋತ್ಸಾಹದಿಂದ ಈ ನಾಡಿನ, ಈ ಸಮಾಜದ ಸೇವೆ ಮಾಡುತ್ತಾ ಅವರ ಜೀವನ ಸಾರ್ಥಕವಾಗಲಿ ಎಂದು ಹಾರೈಸುತ್ತೇವೆ.

ಶ್ರೀ ಎಂ.ವಿ. ರಾಜಶೇಖರನ್ ಅವರು ವಯೋಮಾನದಲ್ಲಿ ನನಗಿಂತ ಹಿರಿಯರು. ಜೀವನಾನುಭವಿಗಳು; ಪ್ರಾಜ್ಞರು. ರಾಜಕೀಯದಲ್ಲಿ ನಿಸ್ವಾರ್ಥದಿಂದ ದುಡಿದು ನಾಡಿನ - ಸಮಾಜದ ಋಣ ತೀರಿಸುತ್ತಿದ್ದಾರೆ. ಈ ಮಠಕ್ಕಂತೂ ನನಗಿಂತ ಹಿರಿಯರು. ಏಕೆಂದರೆ ನಾನು ಈ ಮಠಕ್ಕೆ ೧೯೭೭ರಲ್ಲಿ ಬಂದದ್ದು. ಕಳೆದ ಶತಮಾನದ ಮುವತ್ತು ಮತ್ತು ನಲವತ್ತರ ದಶಕದಿಂದಲೂ ಈ ಮಠದಲ್ಲಿ ಅದರ ಅಭಿವೃದ್ಧಿಗೆ ದುಡಿದವರು ಅವರಾಗಿದ್ದಾರೆ. ಪ್ರಾಜ್ಞರಾದ ಶ್ರೀ ಎಂ.ವಿ. ರಾಜಶೇಖರನ್ ಅವರು ಧರ್ಮನಿಷ್ಠರು. ರಾಜಕಾರಣ ಮತ್ತು ಗ್ರಾಮೀಣಾಭಿವೃದ್ಧಿಯ ಬಗೆಗಿರುವ ಆಸಕ್ತಿಯಷ್ಟೇ ಧರ್ಮ ಸಂಸ್ಕೃತಿಯ ಅಭಿವೃದ್ಧಿಯ ಬಗೆಗೂ ಕಾಳಜಿ ವಹಿಸುತ್ತಿರುವುದು ನನಗೆ ಗೊತ್ತು. ಅವರು ರಾಜಕೀಯದ ಯಾವುದೇ ಹುದ್ದೆಯಲ್ಲಿರಲಿ ಇರದಿರಲಿ, ಅವರ ಧರ್ಮ ಶ್ರದ್ಧೆ ಮಾತ್ರ ನಿತ್ಯ ನಿರಂತರವಾದದ್ದು. ಸದುವಿನಯದ ಶ್ರೀ ಎಂ.ವಿ. ರಾಜಶೇಖರನ್ ಅವರ

ಧಾರ್ಮಿಕ ಶ್ರದ್ಧೆಯ ಕೇಂದ್ರ ಈ ಮಠವಾಗಿದೆ. ಅವರು ಯಾವುದೇ ಅಭಿವೃದ್ಧಿ ಕೆಲಸಕ್ಕೆ ಕೈ ಹಾಕಿದರೂ ಅದು ಅಧಿಕೃತವಾಗಿ ಈ ಧರ್ಮ ಮತ್ತು ಶಕ್ತಿಕೇಂದ್ರದಿಂದಲೇ ಆರಂಭವಾಗುವುದು. ಗ್ರಾಮೀಣ ಬದುಕನ್ನು ಚೆನ್ನಾಗಿ ಬಲ್ಲ ಅವರು ಅದರ ಜೀವನಮಟ್ಟವನ್ನು ಸುಧಾರಿಸುವಲ್ಲಿ ನಿರಂತರ ಶ್ರಮವಹಿಸಿರುವರು. ಆ ಎಲ್ಲಾ ಕಾರ್ಯಕ್ರಮಗಳನ್ನು ಮಠದಲ್ಲೇ ಕುಳಿತು ಹಿರಿಯರೊಡನೆ ಸಮಾಲೋಚಿಸಿ ಅನುಷ್ಠಾನಕ್ಕೆ ತರುತ್ತಿದ್ದರು. ಅವರ 'ಏಷಿಯನ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ'ಯ ಹಲವು ಕಾರ್ಯಕ್ರಮಗಳು ನಮ್ಮ ಮಠದಲ್ಲೇ ನಡೆದಿವೆ. ಬಡವರಿಗೆ, ದುರ್ಬಲರಿಗೆ ಅವರ ಮಾಡಿದ ಕೆಲಸಕ್ಕೆ ಮಠವು ಸಾಕ್ಷಿಯಾಗಿ ನಿಲ್ಲುತ್ತದೆ.

ಎಂ.ವಿ. ರಾಜಶೇಖರನ್ ಅವರು ಇಂದಿಗೂ ನಮ್ಮ ಮಠದಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲರಿಗೂ ಮಾದರಿಯಾಗಿದ್ದಾರೆ. ಹನ್ನೆರಡನೆಯ ಶತಮಾನದ ಸಮಾಜೋ-ಬೌದ್ಧಿಕ ಕ್ರಾಂತಿಯ ಹಿನ್ನೆಲೆಯಿಂದ ಬಂದ ಮಠ ಇದಾಗಿರುವುದರಿಂದ ಇಲ್ಲಿ ಶಿಕ್ಷಣ ಮತ್ತು ದಾಸೋಹ ಪ್ರಕ್ರಿಯೆಗಳು ನಿರಂತರವಾಗಿ ನಡೆಯುತ್ತಿವೆ. ಸಾವಿರಾರು ವಿದ್ಯಾರ್ಥಿಗಳಿಗೆ ಇಲ್ಲಿ ತಂಗಿ ವ್ಯಾಸಂಗಮಾಡಲು ಅನುಕೂಲ ಕಲ್ಪಿಸಿಕೊಡಲಾಗಿದೆ. ಭಕ್ತಾದಿಗಳು ನೀಡುವ ಕಾಣಿಕೆಯೇ ಮಠದ ಪ್ರಮುಖ ಆದಾಯ. ಬಡವರು, ನಿರ್ಗತಿಕ ಮಕ್ಕಳು, ಅನಾಥರು ಕೂಲಿಕಾರ್ಮಿಕರ ಎಲ್ಲಾ ಕೋಮಿನ ಮಕ್ಕಳು ಇಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಇದು ಹೆಸರಿಗೆ ವೀರಶೈವರ ಮಠವಾಗಿದೆ. ವೀರಶೈವೇತರರೇ ಮಠದ ಪುರೋಭಿವೃದ್ಧಿಗೆ ನೇರವಾಗಿ ದುಡಿಯುತ್ತಿರುವುದು ನಮ್ಮ ಮಠದ ಜಾತ್ಯತೀತತೆಯನ್ನೂ ಎತ್ತಿ ತೋರಿಸುತ್ತದೆ.

ಈ ಮಠ ಸಿದ್ಧಗಂಗೆಯ ಮಠದ ಶಾಖಾಮಠವಾಗಿರುವುದರಿಂದ ಹಿರಿಯ ಮಹಾಂತರಾದ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳ ಅಭೀಪ್ಸೆಯಂತೆ ಮಠವನ್ನು ಬೆಳೆಸುವ ಆಲೋಚನೆಯಿದೆ. ಇದಕ್ಕೆ ಈ ಭಾಗದಲ್ಲಿ ರಾಜಶೇಖರನ್ ಅವರಾದಿಯಾಗಿ ಎಲ್ಲರ ಒಕ್ಕೊರಲ ಪ್ರಯತ್ನ ವ್ಯಕ್ತವಾಗಿರುವುದು ನಮಗೆ ಹರ್ಷ ತಂದಿದೆ. ಈ ಭಾಗದ ಎಲ್ಲ ಸಂಸದರೂ, ಶಾಸಕರೂ ಮಠಕ್ಕೆ ಏನೇನು ಬೇಕೆಂಬುದನ್ನು ಅವರೇ ನಿರ್ಧರಿಸಿ ತಂದುಕೊಡುತ್ತಿದ್ದಾರೆ. ಇಂತಹ ಘನತೆವೆತ್ತ ಕಾರ್ಯಕ್ಕಾಗಿ ಅವರನ್ನೆಲ್ಲಾ ಅಭಿನಂದಿಸುವೆನು. ಎಂ.ವಿ. ರಾಜಶೇಖರನ್ ಈ ಮಠವನ್ನೂ ತಮ್ಮ ಮನೆಯಂತೆಯೇ ನೋಡಿಕೊಳ್ಳುತ್ತಿದ್ದಾರೆ. ಮಠದ ಯಾವುದೇ ಕಾರ್ಯಕ್ರಮ ನಡೆಯಲಿ, ಅದರ ಪತ್ರಿಕೆಗಳಲ್ಲಿ ಅವರ ಹೆಸರನ್ನು ಹಾಕಲಿ - ಹಾಕದಿರಲಿ, ಸ್ವಯಂ ಪ್ರೇರಣೆಯಿಂದ ಬಂದು ನಿಂತು ತಮ್ಮ ಸೇವೆಯನ್ನು ಸಲ್ಲಿಸಿ ಹೋಗುತ್ತಾರೆ. ಅವರ ಮನೆದೇವರಾದ ಶ್ರೀ ಮುಡಿಪುತಿಲೆ ಮಲ್ಲಿಕಾರ್ಜುನದೇವರಿಗೆ ಹೋಗುವಾಗಲಂತೂ ಕಡ್ಡಾಯವಾಗಿ ಅವರು ಇಲ್ಲಿಗೆ ಬಂದು ಹೋಗುವ ಪರಿಪಾಠವಿದೆ.



ನಮ್ಮ ಮಠದ ಕಾರ್ಯಕ್ರಮಗಳಲ್ಲಿ 'ಶಿವರಾತ್ರಿ' ವಿಶೇಷ ಆಚರಣೆಗಳಲ್ಲಿ ಮಹತ್ವವಾದದ್ದು. ಅನಂತರ ರಾಮನವಮಿಯ ಆಚರಣೆ ಇಲ್ಲಿ ಸಂಭ್ರಮದಿಂದ ನಡೆಯುತ್ತದೆ. ಆ ಸಂದರ್ಭದಲ್ಲೇ ೬ ದಿನಗಳ ಕಾಲ ಹೋಳಿ ಪರಸೆ ನಡೆಯುತ್ತದೆ. ಆಂಜನೇಯ ಸ್ವಾಮಿಯ ಈ ಜಾತ್ರೆಯಲ್ಲಿ

ಪಾಲ್ಗೊಳ್ಳುವ ಭಕ್ತಾದಿಗಳು ಬಹುತೇಕ ಮಠವನ್ನು ಆಶ್ರಯಿಸುತ್ತಾರೆ. ಶ್ರಾವಣ ಬಹುಳ ಅಷ್ಟಮಿಯಂದು ಮಹಾಲಿಂಗ ಸ್ವಾಮೀಜಿಯವರ ಪುಣ್ಯ ತಿಥಿ ಇರುತ್ತದೆ. ಕಾರ್ತೀಕ ಮಾಸದಲ್ಲಿ ಲಕ್ಷದೀಪೋತ್ಸವ ಕಾರ್ಯಕ್ರಮ ನಡೆಯುತ್ತದೆ. ಇಂತಹ ಎಲ್ಲಾ ಸಂದರ್ಭಗಳ ಬಹುತೇಕ ಕಾರ್ಯಕ್ರಮಗಳಲ್ಲಿ ಶ್ರೀ ಎಂ.ವಿ. ರಾಜಶೇಖರನ್ ಅವರು ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಹಾಜರಿರುತ್ತಾರೆ. ಹೈಸ್ಕೂಲು, ಪ್ರಾಥಮಿಕ ಶಾಲೆ ಮತ್ತು ಜೂನಿಯರ್ ಕಾಲೇಜುಗಳು ಮಠದ ವತಿಯಿಂದ ನಡೆಯುತ್ತವೆ. ಸಂಸ್ಕೃತ ಪಾಠಶಾಲೆ (ಸಾಹಿತ್ಯದವರೆಗೆ) ಇದೆ. ವೇದಾಗಮ ವಿಷಯಗಳ ಪಠಣ-ಮನನ ನಡೆಯುತ್ತಿದೆ. ಈ ವರ್ಷ ಈ ಕ್ಷೇತ್ರದ ಎಲ್ಲಾ ಸಂಸದ - ಶಾಸಕರ ಪ್ರಯತ್ನದಿಂದಾಗಿ ನಮ್ಮ ಶಿಕ್ಷಣ ಸಂಸ್ಥೆಗೆ ಟಿ.ಸಿ.ಎಚ್. ಕಾಲೇಜು ಆರಂಭವಾಗಲಿದೆ. ಇನ್ನು ಬಿ.ಈಡಿ, ಪಾಲಿಟೆಕ್ನಿಕ್ ತರಗತಿಗಳನ್ನೂ ಆರಂಭಿಸುವ ಆಲೋಚನೆಯಿದೆ.

ಸಂಪೂರ್ಣ ಕೃಷಿಕ ಸಮುದಾಯದ ನಡುವಿರುವ ಈ ಮಠ ಅವರ ಪುರೋಭಿವೃದ್ಧಿಗೆ ದುಡಿಯಬೇಕಾಗಿದೆ. ಆದುದರಿಂದ ಕೃಷಿ ಕಾಲೇಜು ಆರಂಭಗೊಂಡರೆ ಒಳಿತು. ಬಿಎಸ್ಸಿ (ಎಜಿ) ತರಗತಿ ಇಲ್ಲಿ ಆರಂಭವಾಗಬೇಕಾಗಿದೆ. ಎಂ.ವಿ. ರಾಜಶೇಖರನ್ ಅವರು ಸ್ವತಃ ಕೃಷಿಕರು. ಗ್ರಾಮೀಣ ಅಭಿವೃದ್ಧಿಯ ಸಂಸ್ಥೆಯೊಂದನ್ನು ಕಟ್ಟಿಕೊಂಡು ದುಡಿಯುತ್ತಿದ್ದಾರೆ. ಅವರು ಸಂಸ್ಥೆಯ ಜೊತೆಗೆ ನಮ್ಮ ಮಠವನ್ನೂ ಸೇರಿಸಿಕೊಂಡು ಹೆಜ್ಜೆ ಇಡೋಣವಾಗಲೆಂದು ಅವರಲ್ಲಿ ವಿನಂತಿಸಿಕೊಳ್ಳುವೆ.

ಶ್ರೀ ಎಂ.ವಿ. ರಾಜಶೇಖರನ್ ಅವರ ದೊಡ್ಡ ಗುಣದಿಂದಾಗಿಯೇ ಮಠ ಈ ಸ್ಥಾನದಲ್ಲಿದೆ. ಮಠದ ಆರ್ಥಿಕ ಮತ್ತು ಶೈಕ್ಷಣಿಕ ಮಟ್ಟವನ್ನು ಸುಧಾರಿಸುವತ್ತ ಶ್ರಮ ತೆಗೆದುಕೊಳ್ಳಲು ಕೋರುವೆವು. ಪ್ರಾಜ್ಞರ ಬಗೆಗೆ, ಅರಿತವರ ಬಗೆಗೆ ನಾವೇನು ಬರೆಯುವುದಿದೆ. ಏನಾದರೂ ಬರೆದರೆ ಸರ್ವಜ್ಞನು ಹೇಳಿದಂತೆ ಕನ್ನಡಿಯಲ್ಲಿ ಐರಾವತನ್ನೂ ತೋರಿಸಿದಂತಾಗುತ್ತದೆ. ಪರಶಿವನ ಸಕಲ ಸದ್‌ಗುಣಗಳನ್ನೂ ಹೊಂದಿರುವ ರಾಜಶೇಖರನ್ ನೂರಾರು ವರ್ಷ ಬಾಳಿ ಸಾರ್ಥಕ ಸೇವೆಯನ್ನು ನೀಡಲಿ. ಭಾರತದ ಚರಿತ್ರೆಯಲ್ಲಿ ಅವರ ಹೆಸರೂ ಸುವರ್ಣಾಕ್ಷರಗಳಿಂದ ಬರೆಯಲ್ಪಡಲಿ ಎಂದು ಆಶೀರ್ವದಿಸುವೆವು.

***

# ಉತ್ಸಾಹಶೀಲರು

ಕೆ.ಪ್ರಭಾಕರ್

ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ೭೫ರ ಹುಟ್ಟುಹಬ್ಬ ಆಚರಿಸುತ್ತಿರುವ ವಿಚಾರ ತಿಳಿದು ನಾನು ತುಂಬಾ ಸಂತಸಗೊಂಡಿದ್ದೇನೆ. ನನಗೆ ೮೪ ವರ್ಷ. ರಾಜಶೇಖರನ್ ಅವರನ್ನು ನೋಡಿದರೆ, ಅವರಿಗೆ ೭೫ ತುಂಬಿದೆ ಎಂದರೆ ನಂಬಲು ಸಾಧ್ಯವಿಲ್ಲ. ಈಗಲೂ ನಾನು ನೆಲಮಂಗಲಕ್ಕೆ ಹೋಗಿ ಬಂದಂತೆ ಅವರು ವಿದೇಶಗಳಿಗೆ ಹೋಗಿ ಬರುತ್ತಾರೆ. ಕುಡಿಯುವ ನೀರು, ಕೃಷಿ, ರೇಷ್ಮೆ, ಗ್ರಾಮೀಣಾಭಿವೃದ್ಧಿ ಮೊದಲಾದ ಹತ್ತಾರು ವಿಚಾರಗಳನ್ನು ಅಲ್ಲಿನವರಿಗೆ ತಿಳಿಹೇಳಲು ಅವರು ವಿದೇಶಕ್ಕೆ ಹೋಗುತ್ತಾರೆ. ಈ ಇಳಿವಯಸ್ಸಿನಲ್ಲೂ ಅವರ ಉತ್ಸಾಹ, ರೈತಾಪಿ ಜನರನ್ನು ಕುರಿತಾದ ಅವರ ಪ್ರೇಮ ಕಂಡು ನನಗೆ ತುಂಬಾ ಸಂತೋಷವಾಗಿದೆ.

೧೯೫೨ರಿಂದಲೂ ನಾನು ಕಾಂಗ್ರೆಸ್ ಪಕ್ಷದ ನಿಷ್ಠಾವಂತ ಕಾರ್ಯಕರ್ತ. ನೆಲಮಂಗಲ ವಿಧಾನಸಭಾ ಕ್ಷೇತ್ರದಿಂದ ನಿರಂತರವಾಗಿ ಆಯ್ಕೆಯಾಗಿ ಬರುತ್ತಿದ್ದೆ. ನಿಜಲಿಂಗಪ್ಪನವರು ಮುಖ್ಯಮಂತ್ರಿ ಆಗಿದ್ದ ಕಾಲದಲ್ಲಿ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಸಮಾಜ ಕಲ್ಯಾಣ ಖಾತೆಯ ಮಂತ್ರಿಗಳು. ಆಗ ನಾನು ಸಮಾಜ ಕಲ್ಯಾಣ ಖಾತೆಯ ಉಪಮಂತ್ರಿ. ಆ ಕಾಲದಲ್ಲಿ ಇದ್ದ ರಾಜಕೀಯ ವಾತಾವರಣ ಬೇರೆ. ಮದ್ಯಪಾನ ನಿರೋಧ, ಸ್ತ್ರೀ ಶಕ್ತಿಯ ಸದ್ಬಳಕೆ, ವಿದಾಭ್ಯಾಸ, ಅಸ್ಪೃಶ್ಯತಾ ನಿವಾರಣೆ ಇವೇ ಮೊದಲಾದ ವಿಚಾರಗಳಲ್ಲಿ ಆ ಕಾಲದ ಬಹುಮಟ್ಟಿನ ರಾಜಕಾರಣಿಗಳಲ್ಲಿ ಬದ್ಧತೆ ಇತ್ತು. ಸ್ವಾತಂತ್ರ್ಯ ಬಂದ ತರುಣ ಕಾಲವದು. ಸ್ವಾತಂತ್ರ್ಯ ಹೋರಾಟದ ತತ್ತ್ವಗಳು ಜನರ ಮನದಲ್ಲಿ ಅಚ್ಚಳಿಯದೆ ನಿಂತಿತ್ತು. ಗ್ರಾಮೀಣ ಪ್ರದೇಶದಲ್ಲಿ, ವಿದ್ಯಾಭ್ಯಾಸ ಸಂಪರ್ಕ, ಆರಂಭಗಾರರಿಗೆ ಪ್ರೋತ್ಸಾಹ ಮೊದಲಾದ ವಿಚಾರಗಳಲ್ಲಿ ಪಕ್ಷಭೇದ ಮರೆತು ರಾಜಕಾರಣಿಗಳು ಕೆಲಸಮಾಡುತ್ತಿದ್ದರು. ಈ ಸಂದರ್ಭದಲ್ಲಿ ನಮ್ಮ ಮುಖ್ಯಮಂತ್ರಿ ನಿಜಲಿಂಗಪ್ಪನವರ ದೃಷ್ಟಿಕೋನವನ್ನು ಪ್ರತಿಬಿಂಬಿಸುವ ಎರಡು ಘಟನೆಗಳನ್ನು ಉಲ್ಲೇಖಿಸಬಯಸುತ್ತೇನೆ. ೧೯೬೭ರ ಸಮಯ ಇರಬಹುದು. ಮುಖ್ಯಮಂತ್ರಿ

ನಿಜಲಿಂಗಪ್ಪನವರು ಗೃಹಸಚಿವ ರಾಮ್‌ರಾವ್ ಜೊತೆ ಕುಣಿಗಲ್‌ನ ಸಮಾರಂಭಕ್ಕೆ ಬಂದಿದ್ದರು. ನಾನು ಆ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದೆ. ಸಮಾರಂಭದ ನಂತರ ನಾವೆಲ್ಲಾ ಊಟಕ್ಕೆ ಪ್ರವಾಸಿ ಮಂದಿರಕ್ಕೆ ಹೋದೆವು. ಮುಖ್ಯಮಂತ್ರಿ ನಿಜಲಿಂಗಪ್ಪನವರು ಉಪಮಂತ್ರಿಯಾದ ನನ್ನನ್ನು 'ಬಾ ಪ್ರಭಾಕರ್, ನನ್ನ ಜೊತೆ ಊಟಕ್ಕೆ ಕುಳಿತುಕೋ' ಎಂದರು. ಕೈ ತೊಳೆದುಕೊಂಡು ನಿಜಲಿಂಗಪ್ಪನವರ ಹತ್ತಿರ ಹೋದೆ. ಅಲ್ಲೇ ಕುಳಿತಿದ್ದ ರಾಮರಾವ್‌ರವರು ಅಗತ್ಯಕ್ಕಿಂತ ಹೆಚ್ಚು ದೂರ ಸರಿದರು. ನಿಜಲಿಂಗಪ್ಪನವರು ಇದನ್ನು ಸೂಕ್ಷ್ಮವಾಗಿ ಗಮನಿಸಿದರೆಂದು ಕಾಣುತ್ತದೆ. ತಮ್ಮ ಕುರ್ಚಿಯನ್ನು ನನ್ನ ಪಕ್ಕಕ್ಕೆ ಎಳೆದುಕೊಂಡು 'ರಾಮರಾಯರೇ, ನೀವು ಅಷ್ಟು ದೂರ ಹೋಗುವ ಅಗತ್ಯವಿಲ್ಲ. ಪ್ರಭಾಕರ್‌ನ ಹತ್ತಿರ ಬರಬಹುದು' ಎಂದರು. ವಸ್ತು ಸ್ಥಿತಿಯನ್ನು ಗಮನಿಸಿದ ರಾಮ್‌ರಾವ್‌ರವರು 'ಹಾಗಲ್ಲ, ತಾವೆಲ್ಲಾ ಫ್ರೀಯಾಗಿ ಕುಳಿತುಕೊಳ್ಳಲಿ ಎಂದುಕೊಂಡೆ' ಎನ್ನುತ್ತಾ ನನ್ನ ಪಕ್ಕಕ್ಕೆ ಬಂದರು. ಅಸ್ಪೃಶ್ಯತಾ ನಿವಾರಣೆ ಬಗ್ಗೆ ಗಂಟೆಗಟ್ಟಲೆ ಮಾತನಾಡದೆ, ತಮ್ಮ ನಡತೆಯಲ್ಲಿ ಅದನ್ನು ತೋರಿಸಿದ ವ್ಯಕ್ತಿಗಳವರು.

ಮತ್ತೊಂದು ಸನ್ನಿವೇಶ : ೧೯೬೪ರ ಏಪ್ರಿಲ್ ತಿಂಗಳು ಇರಬಹುದು. ಬಸವಣ್ಣನವರ ಜಯಂತಿ ಆಚರಿಸಲು ಸಚಿವರಾದ ಬಿ.ಡಿ. ಜತ್ತಿ ಮೊದಲಾದವರು ಸಿದ್ಧತೆ ಮಾಡಿದ್ದರು. ಬಸವಣ್ಣನವರ ಕಂಚಿನ ಪ್ರತಿಮೆ ಅನಾವರಣ ಮಾಡುವ ಆಲೋಚನೆ ಅವರಿಗಿದ್ದಿರಬಹುದು. ಆ ಪ್ರತಿಮೆಯ ಆಕಾರಕ್ಕೆ ಸಂಬಂಧಪಟ್ಟಂತೆ ಕಲಾವಿದರೊಬ್ಬರು ರಚಿಸಿದ ಚಿತ್ರವನ್ನು ಅವರು ಮುಖ್ಯಮಂತ್ರಿಗಳಿಗೆ ತೋರಿಸಿದರು. ಆಗ ತಕ್ಷಣ ಮುಖ್ಯಮಂತ್ರಿಗಳು, 'ಯಾರ್ರಿ ಈ ಚಿತ್ರ ಬರೆದವರು? ಬಸವಣ್ಣನಿಗೆ ಕಿರೀಟ ತೊಡಿಸಿ ಕುದುರೆ ಮೇಲೆ ಕೂಡಿಸಿದ್ದಾರೆ. ಆತ ಮಹಾಮಂತ್ರಿ ಎಂಬುದನ್ನು ಯಾರೂ ನೆನೆಯುವುದಿಲ್ಲ. ಅವರು ಒಬ್ಬ ಸಮಾಜ ಸುಧಾರಕರು, ದೀನದಲಿತರ ಕಣ್ಣೀರು ಒರೆಸಿದವರು, ಜನರ ಆಡುಮಾತಿನಲ್ಲಿ ಧರ್ಮಬೋಧನೆ ಮಾಡಿದವರು. ಅವರ ಚಿತ್ರ ಈ ಗುಣಗಳನ್ನು ಹೊಂದಿರಬೇಕು' ಎಂದರು. ಅಲ್ಲಿದ್ದ ನನ್ನ ಮತ್ತು ರಾಜಶೇಖರನ್ ಕುರಿತು 'ನೀವೇನು ಹೇಳುತ್ತೀರಿ' ಎಂದರು. ತಕ್ಷಣ ರಾಜಶೇಖರನ್‌ರವರು 'ಬುದ್ಧ ಮೂಲತಃ ರಾಜನಾದರೂ, ಯಾರು ಅವನ ರಾಜತ್ವವನ್ನು ನೆನೆಯುತ್ತಾರೆ? ಅವನೊಬ್ಬ ಧರ್ಮ ಸುಧಾರಕ ಎಂಬುದು ಪ್ರಮುಖ' ಎಂದರು. ಆದರೆ, ನಿಜಲಿಂಗಪ್ಪನವರ ಸಲಹೆಯನ್ನು ಅಲ್ಲಿದ್ದವರು ಒಪ್ಪಲಿಲ್ಲ. ಅದು ಬೇರೆ ಮಾತು. ಆದರೆ, ನಿಜಲಿಂಗಪ್ಪನವರು ಹೇಗೆ ಚಿಂತಿಸುತ್ತಿದ್ದರು ಎಂಬುದಕ್ಕೆ ಇದು ಸಾಕ್ಷಿ ನೀಡುತ್ತದೆ. ಅದೇ ರೀತಿ ರಾಜಶೇಖರನ್ ಸಹ ಕೆಳಸ್ತರದ ಜನರ ಬಗ್ಗೆ ವಿಶೇಷವಾದ ಒಲವು ತೋರಿಸುತ್ತಿದ್ದರು. ಅವರ ಮಾವನ ಎಲ್ಲಾ ಆಲೋಚನೆಗಳನ್ನು ಸಮರ್ಪಕವಾಗಿ ಗ್ರಹಿಸಿದವರು ರಾಜಶೇಖರನ್ ಮಾತ್ರ. ನಿಜಲಿಂಗಪ್ಪನವರಿಗೆ ನೀರಾವರಿ ಹಾಗೂ ಕೃಷಿ ಅತ್ಯಂತ ಪ್ರಮುಖವಾದ ವಿಚಾರ. ಅದೇ ರೀತಿ ರಾಜಶೇಖರನ್ ಅವರಿಗೆ ಗ್ರಾಮೀಣ ಅಭಿವೃದ್ಧಿ ಹಾಗೂ ಯುವಜನತೆ ಪ್ರಮುಖವಾದ ವಿಷಯಗಳು.

# ನಿಜಬಿಂಬ

ನಾನು ಯಶೋಧರಮ್ಮ ದಾಸಪ್ಪನವರ ಕೈ ಕೆಳಗೆ ಉಪಮಂತ್ರಿ ತಾನೇ! ಆಕೆ ನೇರವಾಗಿ ಮಹಾತ್ಮ ಗಾಂಧಿಯವರ ಕೈ ಕೆಳಗೆ ಸಿದ್ಧವಾದವರು. ಸರ್ವೋದಯ ತತ್ತ್ವಗಳಲ್ಲಿ ಅವರಿಗೆ ಅಪಾರವಾದ ಶ್ರದ್ಧೆ. ರಾಜಶೇಖರನ್ ಅವರಿಗೆ ಯಶೋಧರಮ್ಮ ದಾಸಪ್ಪನವರನ್ನು ಕಂಡರೆ ಸ್ವತಃ ತಾಯಿಗಿಂತ ಹೆಚ್ಚಿನ ಭಕ್ತಿ. ಹೀಗಾಗಿ ಅನೇಕ ಸಾರಿ ಅವರು ನಮ್ಮ ಕಛೇರಿಗೆ ಬರುತ್ತಿದ್ದರು. ಹಾಗೆ ಬಂದ ಪ್ರತಿಯೊಂದು ಸಂದರ್ಭದಲ್ಲೂ ಅವರು ತಮ್ಮ ಅನುಭವವನ್ನು ನಮ್ಮೊಡನೆ ಸೊಗಸಾಗಿ ಹಂಚಿಕೊಳ್ಳುತ್ತಿದ್ದರು. ಕಳೆದ ವರ್ಷ ನೆದರ್‌ಲ್ಯಾಂಡ್‌ಗೆ ಹೋಗಿದ್ದೆ. ಅಲ್ಲಿನ ರೈತರು ಕೃಷಿ ಜೊತೆ ಉಪಕಸುಬುಗಳನ್ನು ರೂಢಿಸಿಕೊಂಡಿದ್ದಾರೆ. ಪಶುಸಂಗೋಪನೆ ಅಲ್ಲಿ ವ್ಯವಸಾಯಕ್ಕೆ ಸರಿಸಮಾನವಾಗಿ ಬೆಳೆದಿದೆ. ನಮ್ಮಲ್ಲಿ ಜಾನುವಾರುಗಳ ಸಾಕಾಣಿಕೆ ಕೇವಲ ಕೃಷಿ ಚಟುವಟಿಕೆಗೆ ಮಾತ್ರ ಸೀಮಿತಗೊಂಡಿದೆ. ಜಾನುವಾರುಗಳನ್ನು ಸಾಕುವ ಮೂಲಕ ಗ್ರಾಮೀಣ ಮಹಿಳೆ ಪ್ರತಿನಿತ್ಯ ಹಣ ಸಂಪಾದನೆ ಮಾಡಬಹುದು. ಹಾಲು ಮಾರಾಟದ ಬಗ್ಗೆ ನಾವು ಸಮರ್ಪಕವಾಗಿ ಚಿಂತಿಸಿಯೇ ಇಲ್ಲ. ಡೈರಿ ಮಾಡಿದರೆ ಹೆಚ್ಚು ಪ್ರಯೋಜನ ಆಗುತ್ತದೆ ಎನ್ನುತ್ತಿದ್ದರು. ಈ ಬಗ್ಗೆ ಕೃಷಿ ಸಚಿವ ಎಂ.ವಿ. ಕೃಷ್ಣಪ್ಪನವರ ಪ್ರಯತ್ನವನ್ನು ಅವರು ಮನಸಾರೆ ಪ್ರಶಂಸಿಸುತ್ತಿದ್ದರು.

ಮತ್ತೊಂದು ಸಾರಿ ಜಪಾನಿನ ಪ್ರವಾಸದ ಅನುಭವವನ್ನು ಹೇಳುತ್ತಾ ಅಲ್ಲಿನ ವೈವಿಧ್ಯಮಯ ಬತ್ತದ ತಳಿಗಳ ಬಗ್ಗೆ ಮಾಹಿತಿ ನೀಡಿದರು. ಚೀನಾದಲ್ಲಿ ಯುವಶಕ್ತಿಯನ್ನು ಬಳಸಿಕೊಂಡು ಹೇಗೆ ರಾಷ್ಟ್ರನಿರ್ಮಾಣ ಮಾಡಲಾಗುತ್ತದೆ ಎಂಬುದನ್ನು ಅವರು ಸ್ವಾರಸ್ಯಕರವಾಗಿ ವಿವರಿಸುತ್ತಿದ್ದರು. ರಾಜಶೇಖರನ್‌ರವರು ಭಾರತದಲ್ಲಿ ಇರುತ್ತಿದ್ದುದು ಕಡಿಮೆ. ಆ ದೇಶ, ಈ ದೇಶ ಎಂದು ಸುತ್ತುತ್ತಿದ್ದುದೇ ಅವರ ವೈಶಿಷ್ಟ್ಯ. ಇಂದೂ ಸಹ ಆ ಪದ್ಧತಿಯಿಂದ ದೂರ ಸರಿದಿಲ್ಲ. ನಮ್ಮ ರಾಜಕಾರಣಿಗಳಲ್ಲಿ ರಾಜಶೇಖರನ್ ಅವರಷ್ಟು ವಿದೇಶಗಳನ್ನು ಸುತ್ತಿದವರು ಯಾರಿದ್ದಾರೆ? ಆ ಪ್ರವಾಸ ಅವರಿಗೆ ಯಾವುದೇ ಅಧಿಕಾರ ಸ್ಥಾನದ ಬಲದಿಂದ ಬಂದಿಲ್ಲ. ೧೯೫೦ರಿಂದಲೂ ಪ್ರಾರಂಭವಾದ ಈ ವಿದೇಶಿ ಪ್ರವಾಸ ಇಂದಿಗೂ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ಅವರು ಪ್ರಪಂಚದ ಎಲ್ಲಾ ರಾಷ್ಟ್ರಗಳನ್ನು ಕಂಡಿದ್ದಾರೆ. ಕೃಷಿ, ಗ್ರಾಮೀಣ ಅಭಿವೃದ್ಧಿ, ರೇಷ್ಮೆ, ಪಶುಸಂಗೋಪನೆ, ಯುವ ಜನಾಂಗ, ಶಿಕ್ಷಣ ಮೊದಲಾದ ವಿಚಾರಗಳ ಬಗೆಗೆ ಆಯಾ ದೇಶದ ವಿವಿಧ ವೇದಿಕೆಯಲ್ಲಿ ಉಪನ್ಯಾಸ ಕೊಡಲು ರಾಜಶೇಖರನ್‌ರವರು ಹೋಗಿದ್ದಾರೆ. ಹೀಗೆ ಬೇರೆ ದೇಶದವರು ಹಣ ಕೊಟ್ಟು ನಮ್ಮ ರಾಜಶೇಖರನ್ ಅವರನ್ನು ಕರೆಸಿಕೊಳ್ಳಬೇಕಾದರೆ ಆ ಕ್ಷೇತ್ರದಲ್ಲಿ ಅವರ ಜ್ಞಾನ ಏನು ಎಂಬುದನ್ನು ನಾವು ತಿಳಿದುಕೊಳ್ಳಬೇಕಾದ ವಿಚಾರ. ರಾಜಕಾರಣದಲ್ಲಿದ್ದ ವ್ಯಕ್ತಿಯೊಬ್ಬರು ಇಷ್ಟೊಂದು ವಿದ್ವತ್ ಪಡೆದಿರುವುದು ಈ ಕ್ಷೇತ್ರದಲ್ಲಿ ಕೆಲಸ ಮಾಡುವ ಎಲ್ಲರಿಗೂ ಅಭಿಮಾನದ ಸಂಗತಿ.

ಕನಕಪುರ ಲೋಕಸಭಾ ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿದ್ದ ರಾಜಶೇಖರನ್‌ರವರ

ವೈಯಕ್ತಿಕ ಆಸಕ್ತಿಯಿಂದ ಮಂಚನಬೆಲೆ ನೀರಾವರಿ ಯೋಜನೆ ಇಂದು ಅನುಷ್ಠಾನಗೊಂಡಿದೆ. ತಿಪ್ಪಗೊಂಡನಹಳ್ಳಿ ಟ್ಯಾಂಕ್ ಮೇಲೆ ಇದು ನಿರ್ಮಾಣ ಆಗಬೇಕೆಂದು ಮೊದಲು ಯೋಚಿಸಲಾಗಿತ್ತು. ಆದರೆ, ಬೆಂಗಳೂರಿಗೆ ಕುಡಿಯುವ ನೀರಿಗೆ ತೊಂದರೆ ಆಗುವ ಕಾರಣ ಅಲ್ಲಿ ಬೇಡವೆಂದು ತಜ್ಞರು ಅಭಿಪ್ರಾಯಪಟ್ಟರು. ರಾಜಶೇಖರನ್‌ರವರು ಇದನ್ನು ಒಪ್ಪಿಕೊಂಡು ರಾಮನಗರದ ಮಂಚನಬೆಲೆ ಹತ್ತಿರಕ್ಕೆ ಈ ಯೋಜನೆಯನ್ನು ತೆಗೆದುಕೊಂಡು ಹೋದರು. ಕೇಂದ್ರ ಸರ್ಕಾರದ ನೀರಾವರಿ ಸಚಿವರಾದ ಡಾ. ಕೆ.ಎಲ್.ರಾವ್ ಅವರನ್ನು ಯೋಜನಾ ಸ್ಥಳಕ್ಕೆ ಕರೆದುಕೊಂಡು ಬಂದ ಕೀರ್ತಿ ಅವರದು. ಅವರ ದೂರದೃಷ್ಟಿಯ ಫಲವಾಗಿ ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ಆರ್ಥಿಕವಾಗಿ ಸಾಕಷ್ಟು ಸಬಲವಾಗಿದೆ.

ರಾಜಶೇಖರನ್ ಅವರಷ್ಟು ಉತ್ಸಾಹಶೀಲರು ಬಹಳ ಕಡಿಮೆ. ಚುನಾವಣೆಗಳಲ್ಲಿ ಸೋತಾಗ ಧೈರ್ಯ ಕಳೆದುಕೊಂಡು ಮನೆಯಲ್ಲಿ ಕುಳಿತವರಲ್ಲ. ಅವರ ಕೋಪ-ತಾಪಗಳೆಲ್ಲಾ ಕೇವಲ ೨೪ ಗಂಟೆ ಮಾತ್ರ. ಆ ನಂತರ ಮೊದಲಿನ ರಾಜಶೇಖರನ್ ಆಗುತ್ತಾರೆ. ಜನರ ಕೆಲಸಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಯಾರನ್ನೂ ಎಂದೂ ದುರುಪಯೋಗ ಮಾಡಿಕೊಳ್ಳದ ರಾಜಶೇಖರನ್‌ರವರು ನಮ್ಮ ಸಮಕಾಲೀನ ರಾಜಕೀಯದಲ್ಲಿ ನಿರ್ಲಿಪ್ತ ಸನ್ಯಾಸಿಯಂತಿದ್ದಾರೆ. ಇಂತಹ ಅಪರೂಪದ ವ್ಯಕ್ತಿ ನೂರು ವರ್ಷಗಳ ಕಾಲ ನಮ್ಮೊಡನೆ ಬಾಳಲಿ. ಅವರ ಜೀವನೋತ್ಸಾಹ ಯುವ ಜನಾಂಗಕ್ಕೆ ಮಾರ್ಗದರ್ಶನ ನೀಡಲಿ ಎಂಬುದು ನನ್ನ ಆಶಯ.

***

# ಕನಕಪುರ ಲೋಕಸಭಾ ಕ್ಷೇತ್ರ

**ರಾಮಚಂದ್ರಗೌಡ**

ಪ್ರಜಾಪ್ರಭುತ್ವದಲ್ಲಿ ಪ್ರಜಾಪ್ರತಿನಿಧಿಗಳ ಬಗ್ಗೆ ಸಂವಿಧಾನ ಕರ್ತೃಗಳು ನಡೆಸಿದ್ದ ಚಿಂತನೆ ಮತ್ತು ದೃಷ್ಟಿಕೋನಗಳ ಬಗ್ಗೆ ನಾವು ತಿಳಿದುಕೊಳ್ಳಲು ಪ್ರಯತ್ನಿಸಿದರೆ ನಮ್ಮ ಮುಂದೆ ನಿಲ್ಲುವ ಉದಾಹರಣೆಯ ರೂಪವೆಂದರೆ ಸನ್ಮಾನ್ಯ ಶ್ರೀ ಎಂ.ವಿ.ರಾಜಶೇಖರನ್‌ರವರ ಕಾರ್ಯಶೈಲಿ.

ಪ್ರಸ್ತುತ ಮಾಹಿತಿ ತಂತ್ರಜ್ಞಾನದ ಯುಗದಲ್ಲಿ ಪ್ರಜಾಪ್ರಭುತ್ವದಲ್ಲಿ ಪ್ರಜಾಪ್ರತಿನಿಧಿಗಳು ಅನುಸರಿಸುತ್ತಿರುವ ರೀತಿ-ನೀತಿಗಳನ್ನು ಗಮನಿಸಿದಾಗ ಮೇಲಿನ ಮಾತುಗಳು ಮತ್ತಷ್ಟು ಪುಷ್ಟಿಗೊಳ್ಳುತ್ತವೆ.

ಕಾರಣ, ಇಂದು ಪ್ರಜಾಪ್ರತಿನಿಧಿ ಸಭೆಗಳು ಮಾಧ್ಯಮ ಆಧಾರಿತವಾಗಿ ನಡೆಯುತ್ತಿರುವುದನ್ನು ನೋಡಿದಾಗ ನನಗೆ ಕಸಿವಿಸಿಯುಂಟಾಗುತ್ತದೆ.

ಹಿಂದೆ ಮಾನ್ಯ ರಾಜಶೇಖರನ್‌ರವರು ಲೋಕಸಭಾ ಅಧಿವೇಶನಕ್ಕೆ ತೆರಳುವ ಮುನ್ನ ಕ್ಷೇತ್ರದಲ್ಲಿ, ಕ್ಷೇತ್ರದ ಹಾಗೂ ದೇಶದ ಬಗ್ಗೆ ಚಿಂತನೆ ನಡೆಸುವ ಸುಮಾರು ೫೦೦-೬೦೦ ಮಂದಿಗೆ ಪತ್ರ ಬರೆದು ಲೋಕಸಭೆಯಲ್ಲಿ ಚರ್ಚಿಸಬೇಕಾಗಿರುವ ವಿಚಾರಗಳನ್ನು ತಿಳಿಸಲು ಕೋರುತ್ತಿದ್ದರು. ಈ ರೀತಿಯ ಪತ್ರ ಸ್ವೀಕರಿಸಿದವರಲ್ಲಿ ನಾನು ಕೂಡಾ ಒಬ್ಬನಾಗಿದ್ದೇನೆ (ರಾಜಕೀಯ ಪಕ್ಷಭೇದ ಹೊರತುಪಡಿಸಿ). ಈ ರೀತಿಯಲ್ಲಿ ಸ್ವೀಕರಿಸಿದ ಸಲಹೆ-ಸೂಚನೆಗಳನ್ನು ಅಗತ್ಯ ಹಾಗೂ ಸೂಕ್ತ ರೀತಿಯಲ್ಲಿ ಲೋಕಸಭೆ ಹಾಗೂ ಇತರ ಸಂಬಂಧಿತ ವೇದಿಕೆಗಳಲ್ಲಿ ಚರ್ಚಿಸಿ ಸಾರ್ವಜನಿಕ ಕಾರ್ಯಗಳು ಅಭಿವೃದ್ಧಿಯತ್ತ ಸಾಗುವುದಕ್ಕೆ ಪ್ರಜಾಪ್ರತಿನಿಧಿಯಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ರೀತಿ ಪ್ರಜಾಪ್ರಭುತ್ವಕ್ಕೆ ಮಾದರಿ.

ಲೋಕಸಭೆ ಹಾಗೂ ಇತರ ವೇದಿಕೆಗಳಲ್ಲಿ ಚರ್ಚಿತ ವಿಚಾರಗಳನ್ನು ಸಂಬಂಧಿತರಿಗೆ ನಡವಳಿಕೆಗಳನ್ನು ನಂತರ ತಪ್ಪದೆ ಕಳುಹಿಸಿಕೊಡುವ ಪರಿಪಾಠವನ್ನಿಟ್ಟುಕೊಂಡಿದ್ದವರು ಶ್ರೀ ಎಂ.ವಿ.ರಾಜಶೇಖರನ್‌ರವರು.

ಎಂ.ವಿ. ರಾಜಶೇಖರನ್‌ರವರ ಸಮಾಜಾಭಿವೃದ್ಧಿಯ ಬಹುಮುಖ

ಕಳಕಳಿಯ ಕಾರ್ಯತತ್ಪರತೆಯ ಮುಂದೆ ಕನಕಪುರ ಲೋಕಸಭಾ ಕ್ಷೇತ್ರದ ಅಭಿವೃದ್ಧಿಯ ಕೆಲವು ಉದಾಹರಣೆಗಳನ್ನು ಕೇವಲ ಅನ್ನ ಬೆಂದಿರುವಿಕೆಯ ಪರೀಕ್ಷಾ ಅನ್ನದಗಳಿನ ರೀತಿಯಲ್ಲಿ ನಾನು ಕಾಣಿಸುತ್ತಿದ್ದೇನೆ :

೧೯೬೦ರ ದಶಕದಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಕ್ಕೆ ದೊಡ್ಡ ಸಮಸ್ಯೆ ಎಂದರೆ ಹಣಕಾಸಿನದ್ದು. ಅಂಥ ತೀವ್ರ ಹಣಕಾಸಿನ ಕೊರತೆಯ ಹಿನ್ನೆಲೆಯಲ್ಲಿ ಕೇವಲ ಪಿಡಬ್ಲ್ಯೂಡಿ ಇಲಾಖೆಯಿಂದ ಕ್ಷೇತ್ರದಲ್ಲಿ ಸುಮಾರು ೧೫೦-೧೭೦ ರಸ್ತೆ - ಸೇತುವೆಗಳನ್ನು ಕಟ್ಟಿಸುವ ಕಾರ್ಯವನ್ನು ರಾಜಶೇಖರನ್‌ರವರು ಮಾಡಿದ್ದಾರೆ.

ಮಂಚನಬೆಲೆ ಹಾಗೂ ಇಗ್ಗಲೂರಿನ ನೀರಾವರಿ ಯೋಜನೆ ಬಗ್ಗೆ ಸತತ ಪ್ರಯತ್ನದಿಂದ ಯೋಜನೆಗಳು ಕ್ಷೇತ್ರದ ಬರಗಾಲ ನೀಗಿಸುವಂತೆ ಮಾಡಲು ಸಾಧ್ಯವಾದ್ದು ಎಂ.ವಿ. ರಾಜಶೇಖರನ್‌ರವರ ಪ್ರಯತ್ನದಿಂದ.

ಕ್ಷೇತ್ರದ ಪ್ರಮುಖ ವ್ಯವಸಾಯ ರೇಷ್ಮೆ. ರೇಷ್ಮೆ ಆಧಾರಿತ ಕೈಗಾರಿಕಾ ಕ್ಷೇತ್ರ ರಾಮನಗರದಲ್ಲಿ ವಿಸ್ತರಣೆಯಾಗುವಂತೆ ಮಾಡುವುದರಲ್ಲಿ ರಾಜಶೇಖರನ್‌ರವರ ಕೊಡುಗೆ ಗಮನಾರ್ಹವಾಗಿದೆ.

ಕನಕಪುರದಂಥ ಹಿಂದುಳಿದ ಲೋಕಸಭಾ ಕ್ಷೇತ್ರ ರಾಜಶೇಖರನ್‌ರವರಿಗೆ ಸದಾ ಕಾಲ ಬಡತನ ನಿರ್ಮೂಲನೆ ಬಗ್ಗೆ ಚಿಂತನೆಗೆ ಒಡ್ಡಿರುವುದು ಸಹಜವೇ ಆಗಿದೆ. ಈ ಕ್ಷೇತ್ರದ ಓಡಾಟ-ಅನುಭವಗಳನ್ನು ವಿಶ್ವದ ವಿವಿಧ ವೇದಿಕೆಗಳಲ್ಲಿ ವಿವಿಧ ಸ್ತರಗಳಲ್ಲಿ ಇವರು ರಾಷ್ಟ್ರದ ಧ್ವನಿಯಾಗಿರುವುದಷ್ಟೇ ಅಲ್ಲದೆ ಬಡವರ ಧ್ವನಿಯಾಗಿದ್ದರು ಎಂದು ಹೇಳುವುದು ಹೆಚ್ಚು ಸೂಕ್ತವಾಗುತ್ತದೆ.

ಬಡತನ ಹಾಗೂ ಬಡತನ ನಿರ್ಮೂಲನೆ ನಡುವೆ ಇರುವ ವ್ಯವಸ್ಥೆಯ ಸುಧಾರಣೆಯ ಇವರ ಸತತ ಚಿಂತನೆಯ ತುಮುಲಕ್ಕೆ, ಇವರು ಅಂತಾರಾಷ್ಟ್ರೀಯ ವಿಚಾರ ವೇದಿಕೆಯಲ್ಲಿ ನೀಡಿದ ಚಿಂತನೆಯ ಸಾಕ್ಷಿಗೆ ಒಂದು ಅಂಶ ಇದೊಂದೇ ಸಾಕು ಎಂದು ನಾನು ತಿಳಿದಿದ್ದೇನೆ. ಅವರ ಹೇಳಿಕೆಯ ಅಂಶವೆಂದರೆ,

"Poverty and degrees of poverty are not concepts, which are easy to pin down, let alone quantity. What is required is a clear perspective on people who live in poverty, so that policy makers can understand the underlying issues. When these are understood by the planners, together with the poor, can design realistic and feasible projects. These will provide indicators of activity and output which are meaningful both to poor and to development practitioner".

ಈ ರೀತಿಯ ಅಂಶಗಳು ರಾಜಶೇಖರನ್‌ರವರ ಪ್ರಬಂಧಗಳಲ್ಲಿ ಹಲವಾರು ಸಿಗುತ್ತವೆ.

ಆದರೆ ದೇಶದಲ್ಲಿ ಎಷ್ಟು ಮಂದಿ ಪ್ರಜಾಪ್ರತಿನಿಧಿಗಳು ಕಾರ್ಯಶೀಲ-ಚಿಂತನಪರ ಅಧ್ಯಯನಶೀಲರಿದ್ದಾರೆ? ಇಂಥ ದಿನಗಳಲ್ಲಿ ರಾಜಶೇಖರನ್‌ರವರಂತಹವರು ರಾಜ್ಯಸಭೆಯಲ್ಲಿರುವುದು ರಾಜ್ಯಸಭೆ ಹಾಗೂ ಕರ್ನಾಟಕಕ್ಕೆ ಹೆಮ್ಮೆ ಎಂದೇ ನಾನು ಭಾವಿಸುತ್ತೇನೆ.

ರಾಜಶೇಖರನ್‌ರವರ ಅನುಭವ ಹಾಗೂ ಅಧ್ಯಯನ ಲಾಭ ದೀರ್ಘಾಯು ಮರದ ಮಾಗಿದ ಸಿಹಿ ಹಣ್ಣು ಹೆಚ್ಚು ಹೆಚ್ಚು ಅಮೃತವನ್ನೀಯುವಂತೆ ಸಮಾಜಕ್ಕೆ ಇನ್ನೂ ದೀರ್ಘಕಾಲ ಲಭಿಸಬೇಕೆಂದು ಯಾರೇ ಆದರೂ ಅಪೇಕ್ಷೆಪಡುವ ಹಿರಿಯ ಚೇತನವಾಗಿದ್ದಾರೆ.

***

# ಶುದ್ಧಜೀವಿ

**ಕೆ.ಎಂ.ನಂಜಪ್ಪ**

ಶ್ರೀ ಎಂ.ವಿ. ರಾಜಶೇಖರನ್‌ರವರ ಪರಿಚಯ ನನಗೆ ನಾಲ್ಕು ದಶಕಗಳಷ್ಟು ಹಳೆಯದು. ಇಂದಿಗೂ ಅವರನ್ನು ಅನೇಕ ಕಾರ್ಯಕ್ರಮಗಳಲ್ಲಿ ಕಾಣುತ್ತಿರುತ್ತೇನೆ. ಬೆಂಗಳೂರಿನಲ್ಲಿ ಅಷ್ಟೇ ಏಕೆ, ಕರ್ನಾಟಕ ರಾಜ್ಯದ ಸಾರ್ವಜನಿಕ ಚಟುವಟಿಕೆಗಳಲ್ಲಿ ರಾಜಶೇಖರನ್‌ರವರು ಇಲ್ಲದಿದ್ದರೆ ಅದಕ್ಕೆ ಪೂರ್ಣತೆ ದೊರೆಯುವುದಿಲ್ಲ. ಇಲ್ಲಿನ ಶೈಕ್ಷಣಿಕ ಸಂಸ್ಥೆ, ಆಸ್ಪತ್ರೆ, ಸಾರ್ವಜನಿಕ ಉದ್ಯಮ, ನಾಗರಿಕರ ಕುಂದು-ಕೊರತೆ, ರಸ್ತೆ ರಿಪೇರಿ, ಕುಡಿಯುವ ನೀರು, ಆರೋಗ್ಯ, ನೈರ್ಮಲ್ಯ, ಯುವಜನಾಂಗ - ಹೀಗೆ ಯಾವ ಪ್ರಮುಖ ಕ್ಷೇತ್ರಗಳನ್ನು ತೆಗೆದುಕೊಂಡರೂ ರಾಜಶೇಖರನ್‌ರವರು ಇದ್ದೇ ಇರುತ್ತಾರೆ. ಇಲ್ಲೆಲ್ಲಾ ಅವರಿಗೆ ವಯಸ್ಸಿನ ಹಿನ್ನೆಲೆಯಲ್ಲಿ ಮಹತ್ವ ದೊರೆತಿಲ್ಲ ಅಥವಾ 'ನಿಜಲಿಂಗಪ್ಪನವರ ಅಳಿಯ' ಎಂಬ ವಿಶೇಷಣ ಕೂಡ ಅವರಿಗೆ ಸಹಾಯ ಮಾಡುತ್ತಿಲ್ಲ. ಮೂಲತಃ ರಾಜಶೇಖರನ್‌ರವರು ಪ್ರಾಮಾಣಿಕ ದುಡಿಮೆಗಾರರು. ಒಂದು ನಿಮಿಷವನ್ನೂ ಅವರು ವ್ಯರ್ಥವಾಗಿ ಕಳೆಯುವವರಲ್ಲ. ಅವರ ಶಿಸ್ತು ಎಂಥಾದ್ದು ಎಂಬುದು ಅವರನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗುವ ವಿಚಾರ. ಬೆಳಗ್ಗೆ ಐದು ಗಂಟೆಗೆ ಎದ್ದು ಲಾಲ್‌ಬಾಗ್‌ನಲ್ಲಿ ವಾಕಿಂಗ್ ಮುಗಿಸಿಕೊಂಡು ಬಂದು ದಿನಪತ್ರಿಕೆ ಓದಿ, ಸ್ನಾನ, ದೇವರ ಪೂಜೆ, ಉಪಾಹಾರಗಳನ್ನು ಮುಗಿಸಿ ಒಂಬತ್ತು ಗಂಟೆ ಸುಮಾರಿಗೆ ಅವರು ತಮ್ಮ ಕೆಲಸಗಳಿಗೆ ರೆಡಿ ಆಗುತ್ತಾರೆ. ಪುನಃ ರಾತ್ರಿ ೧೦.೩೦ ಗಂಟೆ ತನಕ ಅವರಿಗೆ ವಿಶ್ರಾಂತಿ ಎಂಬುದು ಇರುವುದಿಲ್ಲ. ಸದಾ ದುಡಿಮೆಯೇ ಅವರ ಕಾಯಕ. ಅವರದು ಅದಮ್ಯ ಚೈತನ್ಯ. ಇಂತಹ ದುಡಿಮೆಯಿಂದ ಸ್ವಂತಕ್ಕೆ ಲಾಭ ಮಾಡಿಕೊಳ್ಳುವವರಲ್ಲ ರಾಜಶೇಖರನ್. ಪಕ್ಷದ ಕೆಲಸ ಆಗಿರಬಹುದು, ಏಷ್ಯಾ ಗ್ರಾಮೀಣ ಅಭಿವೃದ್ಧಿ ಆಗಿರಬಹುದು, ಇಲ್ಲವೇ ಮಿತ್ರರ ಖಾಸಗಿ ಕೆಲಸ ಆಗಿರಬಹುದು. ಒಂದೇ ಆಸಕ್ತಿಯಿಂದ ಎಲ್ಲವನ್ನೂ ಮುಗಿಸುವ ತಾದಾತ್ಮ್ಯತೆ ಅವರ ವ್ಯಕ್ತಿತ್ವದಲ್ಲಿದೆ.

೧೯೬೪ರಲ್ಲಿ ನಾನು ಬೆಂಗಳೂರಿನ ಮೇಯರ್ ಆಗಿದ್ದೆ. ಆ ಹೊತ್ತಿಗೆ

ನಿಜಲಿಂಗಪ್ಪನವರ ಅಳಿಯ ಎಂದು ರಾಜಶೇಖರನ್ ರಾಜಕೀಯ ವಲಯದಲ್ಲಿ ಪ್ರಸಿದ್ಧರಾಗಿದ್ದರು. ನಮಗೆಲ್ಲಾ ರಾಜಶೇಖರನ್‌ರವರನ್ನು ಕಂಡರೆ ವಿಶೇಷವಾದ ಆದರ. ರಾಜಶೇಖರನ್ ಎಂದೂ ತಾವು ಮುಖ್ಯಮಂತ್ರಿ ಅಳಿಯ ಎಂದು ಬೀಗಿದವರಲ್ಲ. ಬೆಂಗಳೂರು ಅಭಿವೃದ್ಧಿ ಕುರಿತು ನನ್ನ ಜೊತೆ ಹತ್ತಾರು ಸಾರಿ ಮಾತನಾಡಿದ್ದಾರೆ. ವಿಶೇಷವಾಗಿ ಬೆಂಗಳೂರಿನ ಪಾವಿತ್ರ್ಯತೆಯನ್ನು, ಅಂದರೆ ಇಲ್ಲಿನ ಹಸಿರು ಹಾಗೂ ಜನಜೀವನದಲ್ಲಿರುವ ಸೌಹಾರ್ದತೆಯನ್ನು ಕಾಪಾಡಬೇಕೆಂಬುದು ಅವರ ಹಿರಿದಾಸೆ. ರಾಜಕೀಯದಲ್ಲಿ ಅನೇಕ ಏರು-ಪೇರುಗಳಾಗಿರಬಹುದು. ಆದರೆ ರಾಜಶೇಖರನ್ ತಮ್ಮ ಅಭಿವೃದ್ಧಿ ಕೆಲಸದಿಂದ ಒಂದಿಂಚೂ ದೂರ ಸರಿದವರಲ್ಲ. ದೇಶ ವಿದೇಶಗಳನ್ನು ಸುತ್ತಾಡಿರುವ ಅವರಿಗೆ ಸಮಯದ ಮಹತ್ವ ಚೆನ್ನಾಗಿ ಗೊತ್ತಿದೆ. ಸೋಮಾರಿತನವನ್ನು ಅವರು ಮೆಚ್ಚುವುದಿಲ್ಲ. ಶರಣರ 'ಕಾಯಕ ಸಿದ್ಧಾಂತ' ಅವರಿಗೆ ಪ್ರಿಯವಾದ ವಿಚಾರ. ಅದನ್ನು ಶ್ರದ್ಧಾಪೂರ್ವಕವಾಗಿ ಅನುಷ್ಠಾನ ಮಾಡುತ್ತಿದ್ದಾರೆ. ಈ ಗುಣದಿಂದಲೇ ಅವರಿಗೆ ತಡವಾದರೂ ರಾಜ್ಯಸಭಾ ಸದಸ್ಯತ್ವ ಸ್ಥಾನ ದೊರಕಿದೆ. ಕಾಂಗ್ರೆಸ್ ಪಕ್ಷ ರಾಷ್ಟ್ರಮಟ್ಟದಲ್ಲಿ ಅವರ ಪ್ರತಿಭೆಯನ್ನು ಗುರುತಿಸಿರುವುದು ನನಗೆ ವೈಯಕ್ತಿಕವಾಗಿ ಸಂತೋಷ ತಂದ ವಿಚಾರ.

ಅವರು ರಾಜ್ಯಸಭಾ ಸದಸ್ಯರಾದ ಮೇಲೆ ನಮ್ಮ ಮನೆಗೆ ಒಂದೆರಡು ಸಾರಿ ಬಂದಿದ್ದರು. ನನ್ನ ಧರ್ಮಪತ್ನಿ ಸರೋಜ, ಜಿ.ಎಸ್.ಶಿವರುದ್ರಪ್ಪನವರ ಧರ್ಮಪತ್ನಿ ಜಿ.ಎಸ್.ರುದ್ರಾಣಿಯವರ ನೇತೃತ್ವದಲ್ಲಿ 'ಸಂಧ್ಯಾ ದೀಪ' ಎಂಬ ವೃದ್ಧಾಶ್ರಮ ನಡೆಯುತ್ತಿದೆ. ಅಲ್ಲಿನ ಕೆಲಸ ಕಾರ್ಯಗಳನ್ನು ಗಮನಿಸಿದ ರಾಜಶೇಖರನ್ ತಮ್ಮ ಎಂ.ಪಿ.ಫಂಡ್‌ನಿಂದ ಐದು ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದರು. ಹೀಗೆ ಸತ್ಕಾರ್ಯಗಳನ್ನು ಮೆಚ್ಚಿ ಧನಸಹಾಯ ಮಾಡುವವರು ಯಾರಿದ್ದಾರೆ? ಪ್ರಸ್ತುತ ಎಂ.ಪಿ. ಫಂಡ್‌ನ ಗತಿ ಏನಾಗಿದೆ ಎಂಬುದನ್ನು ವರ್ಣಿಸುವ ಹಾಗಿಲ್ಲ. ಅಂತಹ ಮರಳುಗಾಡಿನಲ್ಲಿ ರಾಜಶೇಖರನ್‌ರಂಥವರು ಓಯಸಿಸ್ ತರಹ ಇದ್ದಾರೆ. ಅವರು ನಮ್ಮ ಮನೆಯವರಿಗೆ, 'ಅಮ್ಮ ನೀವು ಚೆನ್ನಾಗಿ ಕೆಲಸ ಮಾಡುತ್ತಿದ್ದೀರಿ, ನಮ್ಮ ಸಮಾಜ ವೃದ್ಧರನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ, ಅವರು ಹೊರೆ ಎಂಬಂತೆ ನಾವು ಭಾವಿಸಿದ್ದೇವೆ. ಆ ವೃದ್ಧರು ಹಿಂದೆ ಸಮಾಜಕ್ಕೆ ಸಲ್ಲಿಸಿದ್ದ ಸೇವೆಯನ್ನು ನಾವು ಮರೆತಿದ್ದೇವೆ. ಇಂತಹ ವೃದ್ಧರಲ್ಲಿ ಅನಾಥ ಪ್ರಜ್ಞೆ ಮೂಡಬಾರದು. ಅದನ್ನು ತಡೆಯುವಲ್ಲಿ ನೀವು ಪ್ರಯತ್ನ ಮಾಡುತ್ತಿರುವುದು ನನಗೆ ತುಂಬಾ ಸಂತೋಷ ತಂದಿದೆ' ಎಂದಿದ್ದರು. ರಾಜಶೇಖರನ್‌ರವರು ತಮ್ಮ ತಾಯಿಯನ್ನು ಹೇಗೆ ನೋಡಿಕೊಂಡರು ಎಂಬುದು ಎಲ್ಲರಿಗೂ ಗೊತ್ತು. ಹಾಗೆಯೇ ತಮ್ಮ ಮಾವನವರಾದ ನಿಜಲಿಂಗಪ್ಪನವರ ವಿಚಾರದಲ್ಲೂ ಅವರಿಗೆ ಅಷ್ಟೇ ಅಕ್ಕರೆ. 'ಅಳಿಯ ಮನೆ ತೊಳೆಯ' ಎಂಬ ಗಾದೆ ಗ್ರಾಮೀಣ ಪ್ರದೇಶಗಳಲ್ಲಿ ಜನಪ್ರಿಯವಾಗಿದೆ. ಆದರೆ ಅದಕ್ಕೆ ವಿರುದ್ಧವಾಗಿ ರಾಜಶೇಖರನ್‌ರವರು ನಿಜಲಿಂಗಪ್ಪನವರ ಮನೆಯನ್ನು ಬೆಳಗಿದ್ದಾರೆ. ನಿಜಲಿಂಗಪ್ಪನವರ ಮಗನಂತೆ, ಅದಕ್ಕೂ ಮಿಗಿಲಾಗಿ ಅವರ ಶಿಷ್ಯರಂತೆ ಅವರು ನಡೆದಿದ್ದಾರೆ.

ನಿಜಲಿಂಗಪ್ಪನವರಂತೆ ರಾಜಶೇಖರನ್‌ರವರಿಗೂ "ಕೈ-ಬಾಯಿ-ಕಚ್ಚೆ' ಪೂರ್ಣ ಶುದ್ಧ. ತಮ್ಮ ಹಿರಿಯರ ಆಸ್ತಿ ಬಿಟ್ಟು ಒಂದು ಪೈಸೆಯನ್ನೂ ಹೆಚ್ಚಾಗಿ ಸಂಪಾದನೆ ಮಾಡಿಲ್ಲ. ಮಾವನವರ ಹೆಸರನ್ನು ಎಂದೂ ಬಳಸಿಕೊಂಡು ಸ್ವಾರ್ಥ ಸಾಧಿಸಲಿಲ್ಲ. ನಿಜಲಿಂಗಪ್ಪನವರ ಕೊನೆಯ ದಿನಗಳಲ್ಲೂ ರಾಜಶೇಖರನ್‌ರವರು ಅವರಿಗೆ ಆಸರೆ ಆಗಿದ್ದರು.

ಕಳೆದ ಜನವರಿ ಮತ್ತು ಏಪ್ರಿಲ್ ತಿಂಗಳಲ್ಲಿ ಜರುಗಿದ ಎಸ್.ನಿಜಲಿಂಗಪ್ಪನವರ ಜನ್ಮ ಶತಮಾನೋತ್ಸವ ಅಷ್ಟು ಅದ್ದೂರಿಯಾಗಿ, ಅಚ್ಚುಕಟ್ಟಾಗಿ ನಡೆಯಲು ರಾಜಶೇಖರನ್‌ರವರು ಕಾರಣಕರ್ತರಾಗಿದ್ದರು. ಎಸ್.ಎನ್.ಪ್ರತಿಮೆ ವಿಧಾನಸೌಧದ ಬಳಿ ಹಾಗೂ ಅವರ ಹೆಸರಿನಲ್ಲಿ ನಾಲ್ಕಾರು ಪುಸ್ತಕಗಳು ಸರ್ಕಾರದ ಮೂಲಕ ಹೊರಬರಲು ಇವರೇ ಪ್ರೇರಕ ಶಕ್ತಿ. ಈ ಸಮಾರಂಭದಲ್ಲಿ ಉಪರಾಷ್ಟ್ರಪತಿ ಶ್ರೀ ಬೈರೋನ್‌ಸಿಂಗ್ ಶೆಖಾವತ್‌ರವರು ಭಾಗವಹಿಸಿದ್ದರು. ಅವರು ಬೆಂಗಳೂರಿಗೆ ರಾಜಶೇಖರನ್‌ರವರ ಪ್ರಭಾವದಿಂದ ಬಂದರು. ನಿಜಲಿಂಗಪ್ಪನವರಂತೆ ಆದರ್ಶಗಳನ್ನು ನಂಬಿ ನಡೆದ ಎಲ್ಲಾ ಹಿರಿಯರನ್ನು ರಾಜಶೇಖರನ್ ಗೌರವಿಸುತ್ತಿದ್ದಾರೆ. ಇಂತಹ ಗೌರವ ಭಾವನೆಯಿಂದಲೇ ನಮ್ಮ ವೃದ್ಧಾಶ್ರಮಕ್ಕೆ ಎಂ.ಪಿ. ಫಂಡ್‌ನಿಂದ ಸಹಾಯ ಮಾಡಿದ್ದರು. ಹಿರಿಯರನ್ನು ಗೌರವಿಸುವ ಅವರ ಸಹೃದಯತೆಗೆ ಅನಂತಾನಂತ ಧನ್ಯವಾದಗಳು.

❊❊❊

# ಸಂಭಾವಿತ ಸ್ನೇಹಪರ ವ್ಯಕ್ತಿ

**ಕೆ.ಎಂ. ರುದ್ರಪ್ಪ**

ನಾನು ಎಂ.ವಿ.ರಾಜಶೇಖರನ್‌ರವರನ್ನು ಮೊದಲು ನೋಡಿದ್ದು ಅವರು ಶ್ರೀಮತಿ ಮುರಿಗೆಮ್ಮ ಮತ್ತು ಶ್ರೀ ಎಸ್.ನಿಜಲಿಂಗಪ್ಪನವರ ನಾಲ್ಕನೆಯ ಮಗಳು ಗಿರಿಜಾ ಅವರನ್ನು ವಿವಾಹವಾದ ದಿವಸ. ಅದು ನಡೆದದ್ದು ಎಸ್.ನಿಜಲಿಂಗಪ್ಪನವರ ಚಿತ್ರದುರ್ಗದ ನಿವಾಸದಲ್ಲಿ, ಮಾರ್ಚ್ ತಿಂಗಳು ೧೯೫೯ರಲ್ಲಿ ಆ ಮದುವೆಗೆ ನಾನು, ಹಾರನಹಳ್ಳಿ ರಾಮಸ್ವಾಮಿಯವರು, ಸಿ.ಎಸ್.ಕೃಷ್ಣಪ್ಪ ಮತ್ತು ಅರಸೀಕೆರೆಯ ಕೆ.ಎನ್.ನೀಲಶೇಖರ ಶೆಟ್ಟಿಯವರು ಹಾಸನದಿಂದ ಟ್ಯಾಕ್ಸಿಯಲ್ಲಿ ಹೋಗಿದ್ದೆವು. ಅದೊಂದು ಸರಳ ಆದರೆ ತುಂಬಾ ವೈಶಿಷ್ಟ್ಯಪೂರ್ಣವಾದ ಮದುವೆ.

ಎಸ್.ನಿಜಲಿಂಗಪ್ಪನವರು ವಕೀಲರಾಗಿದ್ದಾಗ ಕಟ್ಟಿಸಿರುವ ಸ್ವಂತ ಮನೆ. ಚಿತ್ರದುರ್ಗದ ವೆಂಕಟೇಶಪುರ ಬಡಾವಣೆಯಲ್ಲಿ ಈಗಲೂ ಅಚ್ಚಳಿಯದೆ ಕಾಂತಿಯುಕ್ತವಾಗಿ ನಿಂತಿದೆ. ವಿಶಾಲವಾದ ಕಾಂಪೌಂಡ್ ಹೊಂದಿರುವ 'ವಿನಯ' ಎಂಬ ಅರ್ಥಪೂರ್ಣ ಹೆಸರನ್ನು ಹೊತ್ತು ಶುಭ್ರವಾದ ಬಿಳಿಬಣ್ಣದಿಂದಲೂ ಬಣ್ಣ ಬಣ್ಣದ ಹೂ, ಸೀಬೆ, ಮಾವು, ಸಪೋಟ ಮುಂತಾದ ಗಿಡಗಳಿಂದಲೂ ಕೂಡಿ ನಿಜಲಿಂಗಪ್ಪನವರ ಸದಭಿರುಚಿಗೆ ತಕ್ಕಂತೆ ರಚಿತವಾಗಿದ್ದ ಸೊಬಗಿನ ಸಣ್ಣ ಉದ್ಯಾನವನದ ಮಧ್ಯೆ ಇರುವ ಈ ಮನೆಯಲ್ಲಿ ಗಿರಿಜಾ ಮತ್ತು ಎಂ.ವಿ.ರಾಜಶೇಖರನ್ ಮದುವೆ ನಡೆದು ೪೪ ವರ್ಷಗಳೇ ಆಗಿವೆ. ಈಗಲೂ ಎಸ್.ನಿಜಲಿಂಗಪ್ಪನವರ ದ್ವಿತೀಯ ಪುತ್ರ ಎನ್.ರಾಜಶೇಖರ್‌ರವರ ಶ್ರಮದಿಂದಾಗಿ ಆ ಐತಿಹಾಸಿಕ ಮನೆ ತನ್ನ ವೈಭವವನ್ನು ಮತ್ತು ಗತವೈಭವವನ್ನು ಸಾರುತ್ತಾ ಸ್ಥಿರವಾಗಿ ನಿಂತಿದೆ. ಆ ಮದುವೆಯ ನೆನಪು ಈಗಲೂ ನನ್ನ ಸ್ಮೃತಿಪಟಲದಲ್ಲಿ ಹಸಿರಾಗಿ ಮರೆಯಲಾರದ ನೆನಪಾಗಿ ಉಳಿದಿದೆ.

ಇಂತಹ ವೈಶಿಷ್ಟ್ಯಪೂರ್ಣವಾದ ಮನೆಯಲ್ಲಿ ನಡೆದ ಗಿರಿಜಾ ಮತ್ತು ಎಂ.ವಿ.ರಾಜಶೇಖರನ್ ಅವರ ಮದುವೆಯೂ ಒಂದು ರೀತಿಯಲ್ಲಿ ಅಪೂರ್ವವಾದ ಕಾರ್ಯವೆಂದೇ ಹೇಳಬಹುದು. ನಾನು, ಹಾರನಹಳ್ಳಿ

ರಾಮಸ್ವಾಮಿಯವರು ನಮ್ಮ ಸ್ನೇಹಿತರೊಡನೆ ಮದುವೆ ಮನೆಗೆ ಹೋದಾಗ ನಮ್ಮನ್ನು ಸ್ವಾಗತಿಸಿದವರು ಕಾಂಗ್ರೆಸ್ ನಾಯಕರಾದ ಹೆಚ್.ಸಿ.ದಾಸಪ್ಪನವರು ಮತ್ತು ಅವರ ಪತ್ನಿ ಯಶೋಧರಾ ದಾಸಪ್ಪ ಹಾಗೂ ಅವರ ಪುತ್ರ ತುಳಸೀ ದಾಸಪ್ಪ. "ನಾವು ವರನ ಕಡೆಯವರು, ನಿಜಲಿಂಗಪ್ಪನವರ ಬೀಗರು" ಎಂದು ನಗುಮುಖದೊಂದಿಗೆ ಆತ್ಮೀಯವಾಗಿ ಸ್ವಾಗತಿಸಿದ ದಾಸಪ್ಪ ದಂಪತಿಗಳ ಮುಖದಲ್ಲಿ ಇದೊಂದು ತಮ್ಮ ಮಗನ ಮದುವೆ ಎಂಬ ಸಂಭ್ರಮ ಎದ್ದು ಕಾಣುತ್ತಿತ್ತು. ಮೈಸೂರು ಹೈಕೋರ್ಟ್‌ನ ಮುಖ್ಯ ನ್ಯಾಯಾಧೀಶರಾಗಿ ನಿವೃತ್ತರಾಗಿದ್ದ ಜಸ್ಟೀಸ್ ಪಿ. ಮೇದಪ್ಪ, ಕಾಂಗ್ರೆಸ್ ಮುಖಂಡರುಗಳಾದ ಎಸ್.ಗುರುನಾಥ್, ಎಸ್.ವೀರಬಸಪ್ಪ, ಗಾಂಜಿವೀರಪ್ಪ, ಕೆ.ಎಂ. ರಾಜಶೇಖರಯ್ಯ ಹಿರೇಮಠ, ಬಳ್ಳಾರಿ ಸಿದ್ದಮ್ಮ, ಲೋಕಸಭಾ ಸದಸ್ಯರಾಗಿದ್ದ ಜೆ.ಮಹಮದ್ ಇಮಾಂ ಸಾಹೇಬರು, ಮಾಜಿಮಂತ್ರಿ ಹರಿಜನ ಮುಖಂಡರಾದ ಆರ್.ಚನ್ನಿಗರಾಮಯ್ಯ, ನಿಜಲಿಂಗಪ್ಪನವರ ಆಪ್ತ ಸ್ನೇಹಿತರಾದ ಹೆಚ್.ಎಲ್.ತಿಮ್ಮೇಗೌಡರು, ಕೆ.ವಿ. ಶಂಕರಗೌಡರು ಎಲ್ಲರೂ ಸೇರಿ ಇದು ತಮ್ಮ ಮನೆ ಮದುವೆ ಎಂದು ಭಾವಿಸಿ ಸಡಗರದಿಂದ ಓಡಾಡುತ್ತಾ ಆಹ್ವಾನಿತರನ್ನು ಪ್ರೀತಿ ವಿಶ್ವಾಸದಿಂದ ಸ್ವಾಗತಿಸಿ ಅವರುಗಳನ್ನು ಉಚಿತಾಸನಗಳಲ್ಲಿ ಕೂಡಿಸಿ ಅವರಿಗೆ ನಿಂಬೇಹಣ್ಣಿನ ಪಾನಕ ನೀಡಿ ಉಪಚರಿಸುತ್ತಿದ್ದ ದೃಶ್ಯ ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಹೀಗೆ ಇದೊಂದು ಅಪೂರ್ವ ಹಾಗೂ ಎಂದೂ ಮರೆಯಲಾಗದ ಸುಮನೋಹರವಾದ, ಸಂಭ್ರಮದ ಲಗ್ನ ಕಾರ್ಯ. ಇದರ ಕೇಂದ್ರಬಿಂದುವಾಗಿದ್ದವರು ಮುರಿಗೆಮ್ಮ-ನಿಜಲಿಂಗಪ್ಪನವರ ಮುದ್ದಿನ ಮಗಳು ಗಿರಿಜಾ ಮತ್ತು ಯಶೋಧರಾ - ಹೆಚ್.ಸಿ.ದಾಸಪ್ಪನವರ ಮಾನಸಪುತ್ರರಂತಿದ್ದ ಎಂ.ವಿ.ರಾಜಶೇಖರನ್.

ನನಗೆ ಎಸ್.ನಿಜಲಿಂಗಪ್ಪನವರೊಡನೆ ೧೯೪೧ರಿಂದ ಪತ್ರ ವ್ಯವಹಾರವಿದ್ದರೂ ಅವರ ನಿಕಟ ಸಂಪರ್ಕ ದೊರೆತದ್ದು ೧೯೪೮ರಲ್ಲಿ ಅವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ. ನಾನು ಮುಂಬೈ ವಿಶ್ವವಿದ್ಯಾನಿಲಯಕ್ಕೆ ಸೇರಿದ ಕೊಲ್ಲಾಪುರ ಸೈನ್ಸ್ ಲಾ ಕಾಲೇಜು ಮತ್ತು ಎರಡನೇ ವರ್ಷದ ಎಲ್.ಎಲ್.ಬಿ.ಯನ್ನು ಬೆಳಗಾಂ ಆರಂ.ಎಲ್. ಲಾ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಸ್ವಾತಂತ್ರ್ಯ ಹೋರಾಟದಲ್ಲಿ ಹಾಗೂ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ದಸ್ತಗಿರಿಯಾಗಿ ಹಿಂಡಲಗ ಜೈಲಿನಲ್ಲಿದ್ದೆ. ೧೯೪೯ರಲ್ಲಿ ದಾವಣಗೆರೆಯಲ್ಲಿ ನಡೆದ ಚರಿತ್ರಾರ್ಹವಾದ ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ ಮೈಸೂರನ್ನು ವಿಲೀನಗೊಳಿಸಿ ಕರ್ನಾಟಕ ಪ್ರಾಂತ ನಿರ್ಮಾಣವನ್ನು ಆಗಗೊಳಿಸಲು ಬಹಳವಾಗಿ ನಾನು ಶ್ರಮಿಸುತ್ತಿದ್ದಾಗ ಕರ್ನಾಟಕ ಏಕೀಕರಣದ ನೇತಾರ ಎಸ್.ನಿಜಲಿಂಗಪ್ಪನವರೊಡನೆ ನನಗೆ ನಿಕಟ ಹಾಗೂ ಆತ್ಮೀಯ ಸಂಪರ್ಕ ಒದಗಿ ಬಂದಿತ್ತು. ಅದೇ ರೀತಿ ಸ್ವಾತಂತ್ರ್ಯ ಹೋರಾಟಗಾರರೂ, ಕರ್ನಾಟಕ ಏಕೀಕರಣಕ್ಕೆ ತುಂಬಾ ಶ್ರದ್ಧೆಯಿಂದ ಕೆಲಸ ಮಾಡಿದವರೂ ಸರ್ದಾರ್ ಕೆ.ವಿ.ವೆಂಕಟರಾಮಯ್ಯನವರ ಮಗಳು ಸುಶೀಲರವರನ್ನು ನಿಜಲಿಂಗಪ್ಪನವರ ಪ್ರಯತ್ನದಿಂದಾಗಿ ಮದುವೆಯಾದ ಹಾರನಹಳ್ಳಿ

ರಾಮಸ್ವಾಮಿಯವರು ಎಸ್.ನಿಜಲಿಂಗಪ್ಪನವರ ಮನೆಯಲ್ಲಿ ನಡೆದ ಆ ಶುಭಲಗ್ನ ಕಾರ್ಯದಲ್ಲಿ ಭಾಗವಹಿಸಲು ಹೋಗಿದ್ದಾಗ ಉತ್ಸಾಹದ ಬುಗ್ಗೆಯಂತಿದ್ದ ನಗುಮುಖದ ಎಂ.ವಿ.ರಾಜಶೇಖರನ್ ಅವರನ್ನು ಪ್ರಥಮವಾಗಿ ನೋಡಿದ್ದು ಮತ್ತು ಮಾತನಾಡಿಸಿದ್ದು ನನ್ನ ನೆನಪಿನಂಗಳದಲ್ಲಿ ಹಸಿರಾಗಿದೆ. ಎಂ.ವಿ.ರಾಜಶೇಖರನ್ ಅವರ ಮುಖದಲ್ಲಿ ಕಂಡ ಅಂದಿನ ಮಂದಹಾಸ, ಲವಲವಿಕೆ ಅವರ ಮುಖದಲ್ಲಿ ಈಗಲೂ ಮಾಸಿಲ್ಲ. ಸಹೃದಯತೆ ಹಾಗೂ ಸ್ನೇಹಪರತೆಯ ದ್ಯೋತಕವಾಗಿರುವ ರಾಜಶೇಖರನ್‌ರವರು ನಡೆದುಬಂದ ದಾರಿಯಲ್ಲಿ ಅನೇಕ ಏಳುಬೀಳುಗಳನ್ನು ಕಂಡರೂ, ರಾಜಕೀಯ ಏರಿಳಿತಗಳನ್ನು ಅನುಭವಿಸಿದ್ದರೂ ತಮ್ಮ ಜೀವನದಲ್ಲಿ ಉತ್ಸಾಹವನ್ನು ಕಳೆದುಕೊಳ್ಳದೆ, ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಂಡು, ಸುಖಸಂಸಾರದಿಂದ ಸಂತೃಪ್ತರಾಗಿ, ೭೫ರ ಈ ವಯಸ್ಸಿನಲ್ಲಿಯೂ ಚೇತೋಹಾರಿಯಾಗಿ ಬದುಕು ಸಾಗಿಸುತ್ತಿರುವುದನ್ನು ನೋಡಿದರೆ ಇವರೊಬ್ಬ ಸಾಹಸಿಯಂತೆ ಗೋಚರಿಸುತ್ತಾರೆ.

ಎಂ.ವಿ.ರಾಜಶೇಖರನ್ ಅವರು ತುಂಬಾ ಸೌಜನ್ಯಶಾಲಿ; ಸುಸಂಸ್ಕೃತ ನಡವಳಿಕೆಗೆ ಹೆಸರಾದವರು. ಪತ್ರವ್ಯವಹಾರದಲ್ಲಿ ಇವರು ತುಂಬಾ ನಿಷ್ಣಾತರು. ಇದನ್ನು ತಮ್ಮ ಮಾವಯ್ಯನವರಾದ ಎಸ್.ನಿಜಲಿಂಗಪ್ಪನವರಿಂದ ನೋಡಿ ಕಲಿತುಕೊಂಡಿದ್ದಾರೆ. ಇದರಿಂದಾಗಿ ಇವರು ಭಾರತದಲ್ಲಿಯೇ ಅಲ್ಲದೆ ಇವರು ಭೇಟಿ ಇತ್ತಿರುವ ಸುಮಾರು ೩೦ ಪರರಾಷ್ಟ್ರಗಳಲ್ಲಿಯೂ ಸ್ನೇಹಿತರನ್ನು ಹೊಂದಿ ಆ ರಾಷ್ಟ್ರಗಳ ಆರ್ಥಿಕ ಹಾಗೂ ರಾಜಕೀಯ ಪರಿಸ್ಥಿತಿಗಳನ್ನು ತಿಳಿದುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ರಾಷ್ಟ್ರನಾಯಕ ಎಸ್.ನಿಜಲಿಂಗಪ್ಪನವರ ಅಳಿಯನೆಂಬ ಕಾರಣದಿಂದಾಗಿ ಇವರು ರಾಜಕೀಯವಾಗಿ ರಂಜಿಸದೆ, ತಮ್ಮ ಸ್ವಯಂ ಶಕ್ತಿಯಿಂದ, ಸತತವಾದ ಶ್ರಮದಿಂದ ಮೇಲಕ್ಕೆ ಬಂದಿದ್ದಾರೆ. ಕೆಲವು ವೇಳೆ ಇವರು ನಿಜಲಿಂಗಪ್ಪ ಅವರ ಅಳಿಯರೆಂಬ ಕಾರಣದಿಂದಾಗಿ ಇವರಿಗೆ ಸಿಗಬೇಕಾಗಿದ್ದ ಸ್ಥಾನಗಳು ಲಭ್ಯವಾಗಿಲ್ಲ. ಆದರೆ ಇವುಗಳ ಬಗ್ಗೆ ಚಿಂತಿಸದೆ ತಮ್ಮ ಪರಿಶ್ರಮವನ್ನು ಮುಂದುವರಿಸಿಕೊಂಡು ಹೋಗುತ್ತಾ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಂಡು ಗುರಿಮುಟ್ಟಲು ಅವಿಶ್ರಾಂತ ಹೋರಾಡುತ್ತಿರುವ ನನ್ನ ಆಪ್ತ ಮಿತ್ರರಲ್ಲೊಬ್ಬರಾದ ಎಂ.ವಿ.ರಾಜಶೇಖರನ್ ಅವರಿಗೆ ನನ್ನ ಹಾರ್ದಿಕ ಶುಭ ಹಾರೈಕೆಗಳು.

***

# ಸಮುದಾಯ ಚಿಂತಕ

**ಶ್ಯಾಮನೂರು ಶಿವಶಂಕರಪ್ಪ**

ಹಿರಿಯರಾದ ಎಂ.ವಿ.ರಾಜಶೇಖರನ್ ಅವರಿಗೆ ೭೫ರ ಹುಟ್ಟುಹಬ್ಬ ಆಚರಿಸುತ್ತಿರುವುದು ತುಂಬಾ ಅರ್ಥಪೂರ್ಣವಾದ ಕೆಲಸ. ರಾಜಶೇಖರನ್ ಅವರು ಲೋಕಸಭಾ ಸದಸ್ಯರಾಗಿದ್ದಾಗ ನಾನಿನ್ನೂ ಸಾರ್ವಜನಿಕ ಕ್ಷೇತ್ರಕ್ಕೆ ಬಂದಿರಲಿಲ್ಲ. ೧೯೮೦ರ ನಂತರ ನಾನು ಇಡೀ ರಾಜ್ಯದ ಸಾರ್ವಜನಿಕ ಕ್ಷೇತ್ರವನ್ನು ಸಮರ್ಪಕವಾಗಿ ತಿಳಿದುಕೊಳ್ಳುತ್ತಾ ಹೋದೆ. ಆಗ ನನಗೆ ರಾಜಶೇಖರನ್ ಅವರ ಮಹತ್ವ ಅರ್ಥವಾಯಿತು. ೧೯೬೭ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಲಿಂಗಾಯತ ಜನಾಂಗದ ನಾಯಕರುಗಳೇ ಇರಲಿಲ್ಲ. ಅಂತಹ ಸಂದರ್ಭದಲ್ಲಿ ತಮ್ಮ ಸ್ವಂತ ವರ್ಚಸ್ಸಿನಿಂದ ಲೋಕಸಭೆಗೆ ಸ್ಪರ್ಧಿಸಿ ಆಯ್ಕೆಯಾದ ಕೀರ್ತಿ ರಾಜಶೇಖರನ್ ಅವರದು. ಅದಕ್ಕೂ ಮೊದಲಿನಿಂದಲೂ ಅವರು ಗ್ರಾಮೀಣ ಜನರ ಸೇವೆ ಮಾಡುತ್ತಲೇ ಬಂದಿದ್ದಾರೆ. ಆ ಸೇವೆ ಕೂಡ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದ್ದು. ಇಂತಹ ನಿಷ್ಕಾಮ ಕೆಲಸಗಾರರೇ ನಮ್ಮ ಸಮಾಜದ ಆಸ್ತಿ.

ರಾಜಶೇಖರನ್ ಅವರನ್ನು ನಾನು ಅನೇಕ ಸಾರಿ ಕಂಡಿದ್ದೇನೆ. ಅನೇಕ ಸಾರಿ ಅವರ ಜೊತೆ ವಿಚಾರ ವಿನಿಮಯ ನಡೆಸಿದ್ದೇನೆ. ಆಗೆಲ್ಲ ಅವರು ಎಂದೂ ಸಣ್ಣದಾಗಿ ಯೋಚಿಸಿದವರಲ್ಲ. ಜಾತಿ, ಪಂಗಡ, ಇತರ ಪ್ರಭೇದಗಳ ಬಗ್ಗೆ ಅವರಿಗೆ ಆಸಕ್ತಿ ಇಲ್ಲ. ದೊಡ್ಡದಾಗಿ ಯೋಚಿಸುವವರು ಅವರು. ಒಂದು ಸಮುದಾಯವನ್ನು ಎಲ್ಲಾ ತರಹದಲ್ಲೂ ಬಲಿಷ್ಠ ಮಾಡಬೇಕೆಂಬುದು ಅವರ ಧ್ಯೇಯವಾಗಿದೆ. ದೆಹಲಿಯಲ್ಲಿ ರಾಜಶೇಖರನ್ ಅವರಿಗೆ ಅನೇಕ ಮಿತ್ರರಿದ್ದಾರೆ. ಕಾಂಗ್ರೆಸ್ಸಿನ ಹಿರಿಯ ನಾಯಕರು ರಾಜಶೇಖರನ್‌ರನ್ನು ಕಂಡರೆ ವಿಶೇಷ ಗೌರವಾದರಗಳನ್ನು ತೋರಿಸುತ್ತಾರೆ. ೧೯೯೯ರ ಚುನಾವಣಾ ಸಂದರ್ಭದಲ್ಲಿ ಅಖಿಲ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿ ಅವರನ್ನು ಕರ್ನಾಟಕದ ಕೆಲವು ವೀರಶೈವ ಮುಖಂಡರು ಭೇಟಿ ಮಾಡಲು ಇಚ್ಛಿಸಿದ್ದರು. ನಿರೀಕ್ಷೆಯಂತೆ ಅಧ್ಯಕ್ಷರ ಭೇಟಿಗೆ ಅವಕಾಶ ದೊರೆಯಿತು. ಇಂತಹ ಗುಂಪಿನಲ್ಲಿ ನಮ್ಮೊಡನೆ ಬರಲು ಮೊದಲು

ರಾಜಶೇಖರನ್ ಒಪ್ಪಲಿಲ್ಲ. ಅನಂತರ ನಾನು ಬಲವಂತ ಮಾಡಿದೆ. ಜೊತೆಗೆ ಬಂದರು. ಅಧ್ಯಕ್ಷರಾದ ಸೋನಿಯಾ ಅವರು "ರಾಜಶೇಖರನ್ ಏನು ಹೇಳುತ್ತಾರೆ" ಎಂದು ಪ್ರಶ್ನಿಸಿದರು. ಆಗ ರಾಜಶೇಖರನ್ Madam, "The community under the leadership of Basavanna which was fought for social justice, is now seeking social justice from us." ಆಗ ಸೋನಿಯಾರವರು ತಕ್ಷಣ ಆಸ್ಕರ್‌ರವರತ್ತ ತಿರುಗಿ ಬಸವಣ್ಣನವರ ಬಗ್ಗೆ ಪ್ರಶ್ನಿಸಿದರು. ಎಂ.ವಿ.ರಾಜಶೇಖರನ್ 'ಮೇಡಂ, ನಾಳೆ ಬೆಳಿಗ್ಗೆ ಬಸವಣ್ಣನವರ ಕುರಿತಾದ ಗ್ರಂಥಗಳನ್ನು ನಿಮಗೆ ತಲುಪಿಸುತ್ತೇನೆ' ಎಂದರು. ಹೀಗೆ ರಾಜಶೇಖರನ್ ಮುಕ್ತವಾಗಿ ಮಾತನಾಡಬಲ್ಲ ನಮ್ಮ ಅಪರೂಪದ ನಾಯಕರು.

ರಾಜಶೇಖರನ್ ಸ್ವಾರ್ಥಕ್ಕಾಗಿ ಎಂದೂ ಯಾರನ್ನೂ ಬಳಸಿಕೊಂಡಿಲ್ಲ. ಇನ್ನೊಬ್ಬರಿಗೆ ಹೇಳಿ ತಮ್ಮವರಿಗೆ ವಿಶೇಷವಾದ ಸಹಾಯವನ್ನು ಮಾಡಿಲ್ಲ. ಅವರ ದೃಷ್ಟಿಯೆಲ್ಲ ಸಮುದಾಯದ ಕಡೆಗೆ ಕೇಂದ್ರಿಕೃತವಾಗಿತ್ತು. ವಿಶಾಲ ಮನೋಭಾವದಿಂದಾಗಿ ಅವರು ನಮಗೆ ಸಹಾಯ ಮಾಡಿಲ್ಲವೆಂದು ಕೆಲವರಿಂದ ದೂರಿಸಿಕೊಂಡಿರಬಹುದು. ಆದರೆ, ಅವರು ಸದಾ ಪಕ್ಷದ ನಿಷ್ಠೆಯನ್ನು ಬಿಟ್ಟವರಲ್ಲ. ವೈಯಕ್ತಿಕ ಹಿತಕ್ಕಿಂತ ಸಮುದಾಯದ ಹಿತ ದೊಡ್ಡದೆಂಬ ಭಾವನೆ ಅವರಲ್ಲಿದೆ.

ಅವರ ಕುಟುಂಬವನ್ನು ಸಹ ನಾನು ನೋಡುತ್ತಾ ಬಂದಿದ್ದೇನೆ. ಶ್ರೀಮತಿ ಗಿರಿಜಕ್ಕ ಅವರು ಸಹ ಗಂಡನ ತತ್ವಗಳಿಗೆ ಚ್ಯುತಿ ಬರದಂತೆ ನಡೆದುಕೊಂಡಿದ್ದಾರೆ. ಅವರ ಮಕ್ಕಳು ಸಹ ಸುಸಂಸ್ಕೃತರು. ಅವರ ಮೊದಲ ಸೊಸೆಯ ತಂದೆ ಮುಳುಗುಂದ ಚನ್ನಪ್ಪ ಅವರು ನನ್ನ ಆತ್ಮೀಯರು. ನಾನೇ ಹೇಳಿ ಈ ಸಂಬಂಧವನ್ನು ಕುದುರಿಸಿದ್ದು. ರಾಜಶೇಖರನ್ ಅವರ ನಿಷ್ಠುರ ಹಾಗು ತಾತ್ವಿಕ ವ್ಯಕ್ತಿತ್ವ ಅವರ ಎಲ್ಲಾ ವ್ಯವಹಾರದಲ್ಲೂ ಎದ್ದು ಕಾಣುತ್ತದೆ. ಮೊದಲಿನಿಂದಲೂ ಆದರ್ಶವನ್ನಿಟ್ಟುಕೊಂಡು ಬಾಳಿದವರು. ಯಾವುದೇ ಸಂದರ್ಭದಲ್ಲೂ ಆ ಆದರ್ಶಗಳಿಂದ ದೂರ ಸರಿದವರಲ್ಲ. ಆದರ್ಶಗಳಿಗೆ ಚ್ಯುತಿ ಬಂದಾಗ ನಿಷ್ಠುರವಾಗಿ ವರ್ತಿಸುತ್ತಿದ್ದರು. ಇಂತಹ ಗುಣ ಬೆಳೆಯಲು ಅಪಾರ ಸಾಧನೆ ಅಗತ್ಯ. ರಾಜಶೇಖರನ್ ಮೊದಲಿನಿಂದಲೂ ಈ ದಾರಿಯಲ್ಲಿ ಸಾಗಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಅವರು ಮತ್ತಷ್ಟು ಕಾಲ ಇದೇ ರೀತಿ ಇರಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

***

# ನೈಜ ಗಾಂಧೀವಾದಿ

ಸಿ.ಎಂ. ಇಬ್ರಾಹಿಂ

ಶ್ರೀ ಎಂ.ವಿ. ರಾಜಶೇಖರನ್ ನನಗಿಂತ ಹಿರಿಯರು. ಮುತ್ಸದ್ಧಿ ರಾಜಕಾರಣಿ. ನಿಸ್ವಾರ್ಥ ಜನಸೇವಕ. ಅವರಿಗೆ ಎಪ್ಪತ್ತೈದು ವರ್ಷಗಳು ತುಂಬಿದ ಈ ಸಂದರ್ಭದಲ್ಲಿ ಅವರನ್ನು ಮನದುಂಬಿ ಅಭಿನಂದಿಸುವೆ. ನೂರಾರು ವರ್ಷ ಬಾಳಿ ಅವರು ಸಾರ್ಥಕ ಜೀವನವನ್ನು ಅನುಭವಿಸಲಿ ಎಂದು ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಶ್ರೀ ಎಂ.ವಿ. ರಾಜಶೇಖರನ್ ಅವರು ನನಗೆ ಸುಮಾರು ೩೫ ವರ್ಷಗಳಿಂದ ಪರಿಚಿತರು. ಅವರೊಡನೆ ಸೇರಿ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರವಾದ ಅಂಶಗಳ ಜೊತೆಗೆ ಮುಖಾಮುಖಿ ಚಿಂತನ ನಡೆಸಿದ್ದೇನೆ. ಸಾಮಾಜಿಕವಾಗಿ ರಾಜಕೀಯವಾಗಿ ಅವರ ಕಾಳಜಿ ಶ್ಲಾಘನೀಯವಾದದ್ದು. ಅವರ ಅನುಭವಗಳು, ನಿಷ್ಕಾಮ ಸೇವಾಮನೋಭಾವಗಳು ಸತತ ಸ್ಮರಣೀಯವೆಂದು ನಾನು ಭಾವಿಸುವೆ.

ಸರಳ ಸಜ್ಜನಿಕೆಯ ವ್ಯಕ್ತಿತ್ವದ ಎಂ.ವಿ. ರಾಜಶೇಖರನ್ ರಾಜಕೀಯವನ್ನು ಚದುರಂಗದಾಟವೆಂದು ಭಾವಿಸಿದವರಲ್ಲ. ಅದೊಂದು ನೈಜ ಜನಸೇವೆಯ ಮಾರ್ಗವೆಂದು ಬಗೆದವರು. ನವಕರ್ನಾಟಕದ ಶಿಲ್ಪಿ ನಿಜಲಿಂಗಪ್ಪನವರ ಅಳಿಯಂದಿರಾದರೂ ಅವರ ಹೆಸರನ್ನು ದುರುಪಯೋಗಮಾಡಿಕೊಳ್ಳಲಿಲ್ಲ. ಹಾಗೆಯೇ ಸದುಪಯೋಗವನ್ನೂ ಮಾಡಿಕೊಳ್ಳಲಿಲ್ಲ. ಅದನ್ನೊಂದು ರಾಜಕೀಯ ಸಂಗತಿ ಅಂದುಕೊಳ್ಳದೆ ಕೇವಲ ಮಾನವ ಸಂಬಂಧವೆಂದು ಬಗೆದವರು ಅವರಾಗಿದ್ದರು. ಶ್ರೀ ನಿಜಲಿಂಗಪ್ಪನವರ ಹೆಸರನ್ನು ಹೇಳಿ ರಾಜಕೀಯದ ಏಣಿ ಹತ್ತಿದವರಲ್ಲ. ಇಂತಹ ಒಬ್ಬ ಸಭ್ಯ ಮನುಷ್ಯನನ್ನು ರಾಜಕೀಯದ ಪ್ರಧಾನ ಧಾರೆಗೆ ನಮ್ಮ ಜನತೆ ತರಲಿಲ್ಲ. ಮುಖ್ಯಮಂತ್ರಿ ಆಗುವ ಎಲ್ಲಾ ಅರ್ಹತೆಗಳಿದ್ದರೂ ಜಾತಿಯ ಜಾಡ್ಯ ಮತ್ತು ಪಕ್ಷದ ಮುಖಂಡರ ವೈಯಕ್ತಿಕ ಹಾಗೂ ಅಧಿಕಾರ ಲೋಪ ಮತ್ತು ರಾಜಕೀಯ ಹಿತಾಸಕ್ತಿಗಾಗಿ ರಾಜಶೇಖರನ್ ಅವರನ್ನು ಬಲಿಯಾಗಿದ್ದಾರೆ. ಕಾಂಗ್ರೆಸ್ ಪಕ್ಷವಾಗಲೀ ಜನತಾಪಕ್ಷವಾಗಲೀ ರಾಜಶೇಖರನ್ ಅವರ ಸಾಮರ್ಥ್ಯವನ್ನು ಗುರುತಿಸುವಲ್ಲಿ ಸಂಪೂರ್ಣ ವಿಫಲವಾಗಿವೆ ಎಂಬುದೇ ನನ್ನ ಅನಿಸಿಕೆ.

ಶ್ರೀ ವೀರೇಂದ್ರ ಪಾಟೀಲ ಅವರು ಮುಖ್ಯಮಂತ್ರಿಯಾಗಿದ್ದಾಗ ರಾಜಶೇಖರನ್ ಅವರ ಮತ್ತು ನನ್ನ ಹೆಸರನ್ನು ರಾಜ್ಯಸಭೆಗೆ ಸೂಚಿಸಿ ಶ್ರೀ ರಾಜೀವ್‌ಗಾಂಧಿಯವರಿಗೆ ಕಳಿಸಿದ್ದರು. ಅಲ್ಲಿ ನಡೆದುಹೋದ ಕೆಲ ಅನಿವಾರ್ಯ ಘಟನೆಗಳಿಂದಾಗಿ ಅವರು ಅದರಿಂದ ವಂಚಿತರಾದರು. ತಡವಾಗಿಯಾದರೂ ಅವರನ್ನು ಕಾಂಗ್ರೆಸ್ ಪಕ್ಷ ಅವರನ್ನು ರಾಜ್ಯಸಭೆಯ ಸಂಸದರನ್ನಾಗಿ ಮಾಡಿದೆ. ಒಟ್ಟಾರೆ ಸಭ್ಯ, ಸಜ್ಜನನಾದ ವ್ಯಕ್ತಿ ರಾಜಕಾರಣದಲ್ಲಿರಲು ಸೂಕ್ತವಲ್ಲವೆಂದೇ ಪಕ್ಷಗಳು ನಿರ್ಧರಿಸುತ್ತಿರುವುದು ವಿಷಾದನೀಯ ಬೆಳವಣಿಗೆ. ಅವರ ನಿಸ್ವಾರ್ಥ ಮತ್ತು ಮುತ್ಸದ್ದಿತನದ ಸೇವೆಯನ್ನು ಗುರುತಿಸದಿರುವುದು ರಾಷ್ಟ್ರದ ಮತ್ತು ಸಮಾಜದ ದುರ್ದೈವವೆಂದು ನಾನು ಅಭಿಪ್ರಾಯಪಡುವೆ.

ಎಂ.ಪಿ. ರಾಜಶೇಖರನ್ ಅವರು ಈಗಲೂ ಉತ್ಸಾಹಿಗಳು. ಹಲವು ದೇಶಗಳನ್ನು ಸುತ್ತಿ ಕೃಷಿ, ಗ್ರಾಮೀಣಾಭಿವೃದ್ಧಿ ವಿಷಯಗಳಲ್ಲಿ ಹಲವು ಅಧ್ಯಯನಗಳನ್ನು ನಡೆಸಿದ್ದಾರೆ. ಯುವ ಸಂಘಟನೆಯಲ್ಲಿ ಅವರದ್ದು ಎತ್ತಿದ ಕೈ. ರಾಜಕಾರಣದಲ್ಲಿಯೂ ಶುದ್ಧ ಹಸ್ತರಾದ ಅವರು ರಾಜಕೀಯವನ್ನು ನಿಜ ಅರ್ಥದಲ್ಲಿ ಸಮಾಜಸೇವೆಯೆಂದು ತಿಳಿದು ಬಂದವರಾಗಿದ್ದಾರೆ. ನಿಜ ಗಾಂಧೀವಾದ ಎನ್ನುವುದು ಏನಾದರೂ ಇದ್ದರೆ ಅದು ಇವರು ನಡೆದುಬಂದ ದಾರಿಯೇ ಇರಬೇಕು. ಗ್ರಾಮೀಣ ಪ್ರದೇಶದ ಆರ್ಥಿಕ ಪರಿಸ್ಥಿತಿಯನ್ನು ಅದರಲ್ಲೂ ರೈತ ಸಮುದಾಯಕ್ಕೆ ಜೀವ ತುಂಬುವ ಕೆಲಸದಲ್ಲಿ ಅರ್ಥಪೂರ್ಣ ಪ್ರಯತ್ನದಲ್ಲಿ ತೊಡಗಿದ್ದಾರೆ. ಅವರ ಇಂತಹ ಆಲೋಚನೆ ಮತ್ತು ಪ್ರಯತ್ನಗಳ ಬಗೆಗೆ ಸಾವಿರ ಪುಟ ಬರೆದರೂ ಕಡಿಮೆಯೇ. ರಾಜಕೀಯ ರಂಗದಲ್ಲಿ ಅವರನ್ನು ಅರ್ಥಮಾಡಿಕೊಳ್ಳದವರೂ ಇದ್ದಾರೆ. ಹಾಗಾಗಿ ಅವರು ರಾಜಕೀಯ ರಂಗದ ತೆರೆಮರೆಯಲ್ಲಿ ಕೆಲಕಾಲ ಇರಬೇಕಾಯಿತು. ಅರ್ಥಮಾಡಿ ಕೊಂಡವರಾದ ನಾವು ಅವರ ಜೀವನದ ಘಟನೆಗಳನ್ನು ನೆನೆದುಕೊಂಡರೆ ವ್ಯಥೆ ಪಟ್ಟುಕೊಳ್ಳಬೇಕಾಗುತ್ತದೆ. ಆದರೂ ಒಂದು ಮಾತ್ರ ಸತ್ಯ. ಅವರನ್ನು ಎಲ್ಲಾ ಪಕ್ಷದವರೂ ಗೌರವಿಸುತ್ತಾರೆ. ಅವರನ್ನು ಪ್ರೀತಿಸುವ ಜನತೆಯಿದೆ. ಕಾರಣ ಅವರ ಬಿಳಿ ಬಣ್ಣದ ಖಾದಿ ಶುಭ್ರವಾಗಿದೆ. ಅದು ಎಲ್ಲೂ ಮಾಸಿಲ್ಲ. ಅವರನ್ನು ಗೌರವಿಸಲು ಜಾತಿ, ಮತ, ಪಕ್ಷಗಳ್ಯಾವವೂ ಹಿಂದೆ ಬಿದ್ದಿಲ್ಲ. ಅವರನ್ನು ಹತ್ತಿರದಿಂದ ಕಂಡ ನನಗೆ ಅವರ ವ್ಯಕ್ತಿತ್ವಕ್ಕೆ, ಘನತೆಗೆ ತಕ್ಕಂತಹ ಹುದ್ದೆಯನ್ನು ದೊರಕಿಸಿಕೊಡುವಲ್ಲಿ ನನ್ನ ಪೂರ್ಣ ಪ್ರಮಾಣದ ಸಹಕಾರ - ಬೆಂಬಲವಿರುತ್ತದೆ. ಇಂತಹವರನ್ನು ಒಮ್ಮೆ ಕರ್ನಾಟಕದ ಮುಖ್ಯಮಂತ್ರಿಯನ್ನಾಗಿ ನಾವು ನೋಡಬೇಕಾಗಿದೆ. ಕರ್ನಾಟಕದ ಜನತೆ ಇಂತಹ ಒಂದು ಅವಕಾಶವನ್ನು ಕಲ್ಪಿಸಿಕೊಡಲಿ ಎಂದು ಅವರಲ್ಲಿ ನಾನು ವಿನಂತಿಸಿಕೊಳ್ಳುವೆ. ಈ ನನ್ನಾಸೆಯನ್ನು ಭಗವಂತ ಈಡೇರಿಸುತ್ತಾನೆಂದು ನಂಬುತ್ತೇನೆ. ಕರ್ನಾಟಕದ ಪ್ರಜೆಗಳು ಕೂಡಾ ಎಚ್ಚೆತ್ತು ಇಂತಹ ನಾಯಕನನ್ನು ಪ್ರಧಾನ ಧಾರೆಗೆ ಕರೆತಂದು ನಿಲ್ಲಿಸಲು ಮತ್ತು ಅವರ ಆದರ್ಶದಿಂದ ಕರ್ನಾಟಕದ ಕನಸನ್ನು ಸಾಕಾರಗೊಳಿಸಿಕೊಳ್ಳುವಲ್ಲಿ ಸಹಾಯ ಮಾಡುವರೆಂದು ವಿಶ್ವಾಸಪಡುತ್ತೇನೆ. ಕಾಲವೇ ಸಕಲವನ್ನೂ ನಿರ್ಣಯಿಸುತ್ತದೆ. ಈಗ ಅದಕ್ಕಾಗಿ ಕಾಯುವುದೇ ಒಳಿತು.

***

# ಗ್ರಾಮೀಣ ಭಾರತದ ರಾಯಭಾರಿ

ಎಂ.ಶ್ರೀನಿವಾಸ್

ಪ್ರಸ್ತುತ ರಾಜಕಾರಣವನ್ನು ಕಾಣುತ್ತಾ ಎಂ.ವಿ.ರಾಜಶೇಖರನ್ ಅವರತ್ತ ನೋಡಿದರೆ 'ಅವರೊಬ್ಬ ದೇವತಾ ಪುರುಷ' ಎಂಬುದು ನನ್ನ ಭಾವನೆ. ಅವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಎಂ.ಪಿ. ಆಗಿದ್ದರು. ಅದೇ ರೀತಿ ಉತ್ತರಹಳ್ಳಿ ಕ್ಷೇತ್ರದಿಂದ ಎಂ.ಎಲ್.ಎ. ಆಗಿದ್ದರು. ನಾನು ಸಹ ಕನಕಪುರದಿಂದ ಎಂ.ಪಿ. ಹಾಗೂ ಉತ್ತರಹಳ್ಳಿಯಿಂದ ಎಂ.ಎಲ್.ಎ. ಆಗಿದ್ದೆ. ರಾಜಶೇಖರನ್‌ರವರು ಹಾಕಿಕೊಟ್ಟ ಪ್ರಗತಿಯ ರಾಜಮಾರ್ಗ ನನಗೆ ಚಿರಪರಿಚಿತವಾದುದು. ಅವರ ಪ್ರಾಮಾಣಿಕತೆ, ಜನಕ್ಕೆ ಏನಾದರೂ ಒಳ್ಳೆಯದು ಮಾಡಬೇಕು ಎಂಬ ತುಡಿತ ನನಗೆ ಮೆಚ್ಚುಗೆ ಆದ ವಿಚಾರ. ನಾನು ಕಾರ್ಮಿಕ ಸಂಘಟನೆ ಮೂಲಕ ರಾಜಕಾರಣಕ್ಕೆ ಬಂದವನು. ತುರ್ತು ಪರಿಸ್ಥಿತಿಯ ಕಾಲದಲ್ಲಿ ಅದರ ವಿರುದ್ಧ ಹೋರಾಟ ಮಾಡಿದೆ. ೧೯೭೭ರಲ್ಲಿ ರಾಜಶೇಖರನ್ ಕನಕಪುರ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ನಾವೆಲ್ಲಾ ಜನತಾ ಪಕ್ಷದ ಕಾರ್ಯಕರ್ತರು. ಆಗ ರಾಜಶೇಖರನ್ ಅವರ ಪರವಾಗಿ ಸೈಕಲ್ ತುಳಿದುಕೊಂಡು ಹಳ್ಳಿ ಹಳ್ಳಿಗೆ ಹೋಗಿ ಕೆಲಸ ಮಾಡಿದ್ದೇವೆ. ನನ್ನ ಹುಟ್ಟೂರು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಬರುತ್ತದೆ. ಅದು ಕನಕಪುರ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿದೆ. ಈ ಮಧ್ಯೆ, ಉತ್ತರಹಳ್ಳಿಯಲ್ಲಿರುವ ಆಂಜನೇಯಸ್ವಾಮಿ ದೇವಸ್ಥಾನದ ಪ್ರತಿಷ್ಠಾಪನಾ ಕಾರ್ಯಕ್ಕೆ ರಾಜಶೇಖರನ್ ಅವರನ್ನು ಕರೆದುಕೊಂಡು ಹೋಗಿ ನಮ್ಮವರಿಗೆ ಪರಿಚಯಿಸಿದೆ. ಹೀಗೆ ಪ್ರಾರಂಭವಾದ ನಮ್ಮ ಸ್ನೇಹ ಇಂದಿಗೂ ಬಿರುಕಿಲ್ಲದಂತೆ ಸಾಗಿದೆ. ಈ ಚುನಾವಣೆಯಲ್ಲಿ ರಾಜಶೇಖರನ್‌ರವರು ನ್ಯಾಯೋಚಿತವಾಗಿ ಗೆಲ್ಲಬೇಕಾಗಿತ್ತು. ರಾಮನಗರ, ಚನ್ನಪಟ್ಟಣಗಳಲ್ಲಿ 'ಜಾತಿ' ಪ್ರಭಾವ ಬೀರಿದ ಕಾರಣ ಅವರು ಸೋತರು. ಅವರು ಕರ್ನಾಟಕಕ್ಕೆ ಮಾತ್ರವಲ್ಲ, ಇಡೀ ರಾಷ್ಟ್ರಕ್ಕೆ ಮಾರ್ಗದರ್ಶನ ನೀಡುವ ನಾಯಕರಾಗಿದ್ದಾರೆ. ಅವರು ಈ ಚುನಾವಣೆಯಲ್ಲಿ ಗೆದ್ದಿದ್ದರೆ ಅದರ ಕತೆಯೇ ಬೇರೆ ಇರುತ್ತಿತ್ತು. ದೆಹಲಿಯಲ್ಲಿ ಜನತಾ ಪಕ್ಷದ ನಾಯಕರಾದ ಮೊರಾರ್ಜಿ, ಚರಣ್‌ಸಿಂಗ್,

ಜಗಜೀವನ್‌ರಾಂ ಹಾಗೂ ಹೆಚ್.ಎನ್. ಬಹುಗುಣರವರು ರಾಜಶೇಖರನ್ ಅವರಿಗೆ ಚಿರಪರಿಚಿತರು. ಅವರ ಮಾತುಗಳನ್ನು ಪ್ರೀತಿಯಿಂದ ಕೇಳುತ್ತಿದ್ದರು. ಇಂಥವರು ಜನತಾ ಪಕ್ಷದ ಪರವಾಗಿ ಲೋಕಸಭೆಯಲ್ಲಿ ಕುಳಿತಿದ್ದರೆ ಜನತಾ ಪಕ್ಷದ ಆಂತರಿಕ ಕಿತ್ತಾಟ ಕಡಿಮೆ ಆಗುತ್ತಿತ್ತೇನೋ? ಆ ಜನತಾ ಪಕ್ಷ ಐದು ವರ್ಷಗಳ ಕಾಲ ಉಳಿದು ಸರ್ಕಾರ ನಡೆಸಿದ್ದರೆ ರಾಷ್ಟ್ರದ ರಾಜಕೀಯ ಇತಿಹಾಸ ಖಂಡಿತ ಬದಲಾಗುತ್ತಿದ್ದುದರಲ್ಲಿ ಯಾವುದೇ ಸಂಶಯವಿಲ್ಲ. ಕನಕಪುರ ಲೋಕಸಭಾ ಕ್ಷೇತ್ರದಿಂದ ರಾಜಶೇಖರನ್‌ರವರು ಸೋತಿದ್ದರೂ, ಉತ್ತರಹಳ್ಳಿ ಕ್ಷೇತ್ರದಿಂದ ಅವರಿಗೆ ಆಗ ಬಹುಮತ ದೊರಕಿತ್ತು. ಇದನ್ನು ನೆಚ್ಚಿಕೊಂಡು ೧೯೭೭ರಲ್ಲಿ ಅವರು ಉತ್ತರಹಳ್ಳಿ ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸಿದರು. ನಮ್ಮೆಲ್ಲರ ನಿರೀಕ್ಷೆಯಂತೆ ಅವರು ಜಯಶೀಲರಾದರು. ಆಗ ಉತ್ತರಹಳ್ಳಿ ಕ್ಷೇತ್ರ ಬೆಂಗಳೂರಿಗೆ ಈಗಿನಂತೆ ಅಂಟಿಕೊಂಡಿರಲಿಲ್ಲ. ಆ ಕ್ಷೇತ್ರದಲ್ಲಿ ಸುಮಾರು ೨೫ ಗ್ರಾಮ ಪಂಚಾಯತಿಗಳಿದ್ದವು. ಸುಮಾರು ೩೦೦ ಹಳ್ಳಿಗಳು ಈ ಕ್ಷೇತ್ರದ ವ್ಯಾಪ್ತಿಯಲ್ಲಿದ್ದವು. ದಾಸರಹಳ್ಳಿ, ಪೀಣ್ಯ, ಉತ್ತರಹಳ್ಳಿ, ಸಾರಕ್ಕಿ, ಕಾಮಾಕ್ಷಿಪಾಳ್ಯ, ಬೊಮ್ಮನಹಳ್ಳಿ, ಮಲ್ಲತ್ತಹಳ್ಳಿ, ಕಬ್ಬಗೆರೆ ಮೊದಲಾದವುಗಳು ಇಂದು ಬೆಂಗಳೂರಿನ ಪ್ರಮುಖ ಬಡಾವಣೆಗಳಾಗಿದ್ದರೆ ಅಂದು ಕೇವಲ ಗ್ರಾಮ ಪಂಚಾಯತಿಗಳಾಗಿದ್ದವು. ಅಲ್ಲಿನ ನಿವಾಸಿಗಳಿಗೆ ಯಾವುದೇ ಮೂಲಭೂತ ಸೌಕರ್ಯ ಇರಲಿಲ್ಲ. ಕೆಲವು ಕಡೆ ಎತ್ತಿನಗಾಡಿ ಓಡಾಟದ ರಸ್ತೆ ಇತ್ತು. ಕುಡಿಯುವ ನೀರಿಗೂ ಆಸರೆ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಶಾಸಕರಾದ ರಾಜಶೇಖರನ್, ಅಲ್ಲಿ ಕುಡಿಯುವ ನೀರು, ರಸ್ತೆ ಸಂಪರ್ಕ ಹಾಗೂ ಬೀದಿ ದೀಪ ಕಲ್ಪಿಸುವ ಕೆಲಸಗಳಿಗೆ ಮುಂದಾದರು. ಉತ್ತರಹಳ್ಳಿಯ ಮುಖ್ಯ ರಸ್ತೆ ಅವರ ಕಾಲದಲ್ಲಿ ನಿರ್ಮಾಣವಾಯಿತು. ಕ್ಷೇತ್ರದ ಎಲ್ಲೆಡೆ ಕುಡಿಯುವ ನೀರಿಗೆ ಓವರ್‌ಹೆಡ್ ಟ್ಯಾಂಕ್ ನಿರ್ಮಾಣವಾಯಿತು. ರಾಜಶೇಖರನ್ ವಿರೋಧ ಪಕ್ಷದಲ್ಲಿದ್ದರೂ ಸಚಿವರುಗಳಿಗೆ ಅವರ ಮಾತುಗಳೆಂದರೆ ತುಂಬಾ ಗೌರವ. ಮುಖ್ಯಮಂತ್ರಿ ದೇವರಾಜ ಅರಸು ರಾಜಶೇಖರನ್‌ರವರಿಗೆ ಯೌವ್ವನದ ಕಾಲದಿಂದಲೂ ಪರಿಚಿತರು. ಆ ನಂತರ ಮುಖ್ಯಮಂತ್ರಿ ಆದ ಗುಂಡೂರಾವ್ ಅವರನ್ನು ಅರವತ್ತರ ದಶಕದಲ್ಲಿ ಯುವ ಕಾಂಗ್ರೆಸ್‌ನ ಅಧ್ಯಕ್ಷರನ್ನಾಗಿ ನೇಮಿಸಲು ರಾಜಶೇಖರನ್‌ರವರು ಸಹಾಯ ಮಾಡಿದ್ದರು. ಇದರ ಜೊತೆ ರಾಜಶೇಖರನ್‌ರವರ ಪ್ರಾಮಾಣಿಕತೆ ಹಾಗೂ ಅಭಿವೃದ್ಧಿ ವಿಚಾರಗಳಲ್ಲಿ ಅವರಲ್ಲಿನ ಆಸಕ್ತಿ ಎಲ್ಲರಿಗೂ ಚಿರಪರಿಚಿತವಾದ ವಿಚಾರ. ರಾಜಶೇಖರನ್ ಯಾವುದಾದರೂ ಕೆಲಸ ಹೇಳಿದರೆ ಅದು ಜನರ ಉಪಯೋಗಕ್ಕೆ ಮಾತ್ರ ಎಂಬ ಭಾವನೆ ಎಲ್ಲರಲ್ಲೂ ಇತ್ತು. ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ಯಾವುದೇ ಕೆಲಸಗಳಿಗೂ ಎಂದೂ ತೊಂದರೆ ಆಗಿರಲಿಲ್ಲ. ಈ ಸಂದರ್ಭದಲ್ಲಿ ಈ ಕ್ಷೇತ್ರದಲ್ಲಿ ಅನೇಕ ಖಾಸಗಿ ಬಡಾವಣೆಗಳು ತಲೆ ಎತ್ತುತ್ತಿದ್ದವು. ಆದರೆ ರಾಜಶೇಖರನ್‌ರವರು ಯಾರನ್ನೂ ಹತ್ತಿರ ಬಿಟ್ಟುಕೊಳ್ಳಲಿಲ್ಲ. ಇಂದಿಗೂ ಈ ಕ್ಷೇತ್ರದಲ್ಲಿ ಅವರಿಗೆ ಒಂದು ನಿವೇಶನ ಸಹ ಇಲ್ಲ. ರಾಜಶೇಖರನ್ ಸ್ವಲ್ಪ ಅಪ್ರಾಮಾಣಿಕರಾಗಿದ್ದರೂ

ಆ ಸಂದರ್ಭದಲ್ಲಿ ಅವರು ಏನನ್ನು ಬೇಕಾದರೂ ಗಳಿಸಬಹುದಾಗಿತ್ತು. ಆ ಪರಂಪರೆಯಲ್ಲಿ ಬೆಳೆಯದ ರಾಜಶೇಖರನ್ ತಮ್ಮ ಆತ್ಮಸಾಕ್ಷಿಗನುಗುಣವಾಗಿ ನಡೆದಿದ್ದಾರೆ.

ರಾಜಶೇಖರನ್‌ರವರಿಗೆ ಯುವಶಕ್ತಿ ಬಗ್ಗೆ ಅಪಾರ ನಂಬಿಕೆ. ತಮ್ಮ ಕ್ಷೇತ್ರದ ಯುವಕ ಯುವತಿಯರ ಅನುಕೂಲಕ್ಕಾಗಿ ವಾಣಿಜ್ಯ ಬ್ಯಾಂಕುಗಳ ಸಹಾಯದಿಂದ ಸ್ವಯಂ ಉದ್ಯೋಗದ ತರಬೇತಿಗಳನ್ನು ನೀಡಿದ್ದರು. ಇನ್ನುಳಿದಂತೆ ರಾಜಶೇಖರನ್‌ರವರು ಎಲ್ಲಾ ಮತದಾರರಲ್ಲೂ ಸುಮಧುರ ಬಾಂಧವ್ಯ ಇಟ್ಟುಕೊಂಡಿದ್ದರು. ಸ್ವತಃ ಎಲ್ಲರನ್ನು ನೋಡಲು ಸಾಧ್ಯವಿಲ್ಲದಿದ್ದರೂ ಮುಖಂಡರಿಗೆ ಆಗಾಗ ಪತ್ರ ಬರೆದು ತಮ್ಮ ಭಾವನೆಗಳನ್ನು ಹಂಚಿಕೊಳ್ಳುತ್ತಿದ್ದರು. ಇಷ್ಟು ಹೊತ್ತಿಗೆ ಜನತಾ ಪಕ್ಷದಲ್ಲಿ ರಾಜ್ಯ ಮತ್ತು ಕೇಂದ್ರ ಮಟ್ಟದಲ್ಲಿ ಕಿತ್ತಾಟ ಪ್ರಾರಂಭವಾಗಿತ್ತು. ಅದಕ್ಕೆ ಬೇಸತ್ತು ೧೯೮೨ರಲ್ಲಿ ವಿಧಾನಸಭಾ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಇದಕ್ಕೂ ಪೂರ್ವದಲ್ಲಿ ಅಂದರೆ, ೧೯೮೦ರಲ್ಲಿ ರಾಜಶೇಖರನ್‌ರವರು ಜಗಜೀವನ್‌ರಾಂರವರ ನೇತೃತ್ವದ ಜನತಾ ಪಕ್ಷದ ಮೂಲಕ ಕನಕಪುರ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಸೋತಿದ್ದರು. ಈ ನೋವಿನ ತೀವ್ರತೆ ಅವರಲ್ಲಿ ಅಪಾರವಾಗಿತ್ತು. ರಾಜ್ಯ ಹಾಗೂ ರಾಷ್ಟ್ರದ ಜನತಾ ಪಕ್ಷದ ನಾಯಕರುಗಳು ತಮ್ಮ ಲೋಕದಲ್ಲೇ ಮುಳುಗಿದ್ದರು. ಯಾರಿಗೂ ಜನಹಿತ ಬೇಕಾಗಿರಲಿಲ್ಲ. ಅಂತಹ ಸಂದರ್ಭದಲ್ಲಿ ೧೯೮೩ರ ವಿಧಾನಸಭಾ ಚುನಾವಣೆ ಬಂತು. ಅವರು ಉತ್ತರಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಿದ್ದರೆ ಅಭಿವೃದ್ಧಿ ಕೆಲಸಗಳ ಬಲದಿಂದ ಆಯ್ಕೆ ಆಗುತ್ತಿದ್ದರು. ಅವರಿಗೆ ಟಿಕೆಟ್ ಸಿಗುವುದು ಕೂಡ ತೊಂದರೆ ಆಗುತ್ತಿರಲಿಲ್ಲ. ಆದರೆ, ಕಹಿಮನಸ್ಸು ಮಾಡಿಕೊಂಡ ರಾಜಶೇಖರನ್ ಈ ಚುನಾವಣೆ ಸಂದರ್ಭದಲ್ಲಿ ಜಪಾನ್ ಪ್ರವಾಸಕ್ಕೆ ಹೋದರು. ಆಗ ನನಗೆ ಜನತಾ ಪಕ್ಷದ ಪರವಾಗಿ ಸ್ಪರ್ಧಿಸಲು ಅವಕಾಶ ದೊರೆಯಿತು. ರಾಜಶೇಖರನ್‌ರವರ ಅಭಿವೃದ್ಧಿ ಕೆಲಸಗಳೇ ನನಗೆ ಶ್ರೀರಕ್ಷೆಯಾಗಿ ನಾನು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಸುಲಭವಾಗಿ ಆಯ್ಕೆಯಾದೆ.

ರಾಜಶೇಖರನ್ ಅವರು ೧೯೮೪ರಲ್ಲಿ ರಾಜೀವ್‌ಗಾಂಧಿ ಪ್ರಧಾನಿಯಾದ ಮೇಲೆ ಕಾಂಗ್ರೆಸ್‌ಗೆ ಹೋದರು. ಸುಮಾರು ಇಪ್ಪತ್ತು ವರ್ಷಗಳ ಕಾಲ ಅವರು ಕಾಂಗ್ರೆಸ್‌ನಲ್ಲೇ ಇದ್ದರೂ ಅವರನ್ನು ಸರಿಯಾಗಿ ಆ ಪಕ್ಷ ದುಡಿಸಿಕೊಂಡಿಲ್ಲ. ಅಲ್ಲಿ ಎಂತೆಂಥವರೋ ವಿಧಾನ ಪರಿಷತ್ತಿನ ಸದಸ್ಯರು ಹಾಗೂ ರಾಜ್ಯಸಭಾ ಸದಸ್ಯರಾದರು. ರಾಜಶೇಖರನ್ ಅವರಿಗೆ ಆ ಅವಕಾಶ ಸಿಗಬೇಕಾದರೆ ಬಹಳ ಸಮಯ ಬೇಕಾಯಿತು. ಜನರಿಗೆ ರಾಜಶೇಖರನ್ ಅವರ ಮುಖ ತೋರಿಸಿ ಓಟು ತೆಗೆದುಕೊಳ್ಳುವುದನ್ನು ಜನತಾ ಪಕ್ಷ ಹಾಗೂ ಕಾಂಗ್ರೆಸ್ ಎರಡೂ ಮಾಡಿವೆ. ಆದರೆ ಅವರಿಗೆ ಸರಿಯಾದ ಅವಕಾಶವನ್ನು ಎರಡೂ ಪಕ್ಷಗಳೂ ಕೊಟ್ಟಿಲ್ಲ. ಅವರು ೧೯೯೯ರ ನಂತರ ಉಪ ಮುಖ್ಯಮಂತ್ರಿಯಾಗುತ್ತಾರೆ ಎಂದು ನಾನು ಭಾವಿಸಿಕೊಂಡಿದ್ದೆ. ಹಾಗೆ ಉಪ ಮುಖ್ಯಮಂತ್ರಿಯಾಗಿದ್ದರೆ ನಮ್ಮ ರಾಜಕಾರಣಕ್ಕೆ ಒಂದು ವಿಶಿಷ್ಟವಾದ ಬೆಲೆ ಇರುತ್ತಿತ್ತು. ಕೃಷಿ, ಗ್ರಾಮೀಣಾಭಿವೃದ್ಧಿ ಹಾಗೂ ಯುವಜನರ ಬಗ್ಗೆ

ಅಪಾರ ಬದ್ಧತೆ ಇರುವ, ಈ ಕ್ಷೇತ್ರಗಳಲ್ಲಿ ತುಂಬಾ ಕೆಲಸ ಮಾಡಿರುವ ಹಾಗೂ ಹೊಸ ಸಮಾಜವನ್ನು ಕಟ್ಟುವ ದೂರದೃಷ್ಟಿಯುಳ್ಳ ನಾಯಕರಾದ ರಾಜಶೇಖರನ್ ಅವರಿಗೆ ಅಧಿಕಾರ ಸಿಗದಿರುವುದು ಈ ರಾಜ್ಯದ ಜನತೆಯ ದೌರ್ಭಾಗ್ಯ. ಮುಂದಾದರೂ ಕಾಂಗ್ರೆಸ್ ಪಕ್ಷ ಈ ಬಗ್ಗೆ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುತ್ತದೆಂದು ನಾನು ಭಾವಿಸುತ್ತೇನೆ.

ನಮ್ಮ ಗ್ರಾಮೀಣ ಭಾರತದ ವಿಚಾರಗಳನ್ನು ಅವರು ಬೇರೆ ಬೇರೆ ದೇಶಗಳಿಗೆ ಹೋಗಿ ಅಲ್ಲಿ ನಡೆಯುವ ವಿಚಾರ ಗೋಷ್ಠಿಗಳಲ್ಲಿ ಪ್ರತಿಪಾದಿಸಿ ದೇಶಕ್ಕೆ ವಿವಿಧ ರೀತಿಯ ಬಂಡವಾಳ ಹರಿದು ಬರಲು ಕಾರಣರಾಗಿದ್ದಾರೆ. ಅವರು, ವಿಶ್ವಬ್ಯಾಂಕಿನ ಸಲಹಾ ಸಮಿತಿಯಾಗಿರಬಹುದು, ಯುನಿಸೆಫ್‌ನ ವೇದಿಕೆಯಾಗಿರಬಹುದು, ಆಸ್ಟ್ರೇಲಿಯಾದ ಕೃಷಿ ವಿಶ್ವವಿದ್ಯಾನಿಲಯವಾಗಿರಬಹುದು, ಜಪಾನ್‌ನ ಕೈಗಾರಿಕಾ ಸಂಘಟನೆಯಾಗಿರಬಹುದು, ರಾಜಶೇಖರನ್ ಅಲ್ಲಿಗೆ ಹೋದಾಗೆಲ್ಲ ಗ್ರಾಮೀಣ ಭಾರತವನ್ನು ಸಮರ್ಪಕವಾಗಿ ಪ್ರತಿನಿಧಿಸಿದ್ದಾರೆ. ಅವರೊಬ್ಬ ಗ್ರಾಮೀಣ ಭಾರತದ ರಾಯಭಾರಿಯಾಗಿ ಅಲ್ಲೆಲ್ಲಾ ದುಡಿದಿದ್ದಾರೆ.

ಪೂಜ್ಯ ಮಹಾತ್ಮ ಗಾಂಧೀಜಿಯವರ ಸಾಮಾಜಿಕ ಕಾರ್ಯಕ್ರಮಗಳು ಹಾಗೂ ಜೆ.ಪಿ. ಅವರ ಸಂಪೂರ್ಣ ಕ್ರಾಂತಿಯ ತತ್ತ್ವಗಳು ರಾಜಶೇಖರನ್ ಅವರಲ್ಲಿ ಮೇಳೈಸಿವೆ. ಲೋಕ ಅವರನ್ನು ನಿಜಲಿಂಗಪ್ಪ ಅವರ ಅಳಿಯ ಎಂದು ಗುರುತಿಸಿದರೂ ಅವರು ಮಾತ್ರ ಹಾಗೆ ಅಂದುಕೊಂಡವರಲ್ಲ. ಅವರಿಂದ ಇವರು ಯಾವ ಸಹಾಯವನ್ನೂ ಪಡೆದಿಲ್ಲ. ಮೂಲತಃ ಸ್ವಾಭಿಮಾನಿಗಳಾದ ರಾಜಶೇಖರನ್ ಸದ್ದಿಲ್ಲದೆ ಕೆಲಸ ಮಾಡುವ ಕಾಯಕಯೋಗಿ.

※※※

# ಅಗ್ರಗಣ್ಯ ಚಿಂತಕ

ಎಸ್. ಬಸವಾರಾಧ್ಯ

ಸುಮಾರು ಐವತ್ತು ವರ್ಷಗಳಿಗಿಂತಲೂ ಹಿಂದಿನ ನೆನಪುಗಳು. ೧೯೪೬ರಿಂದ ೧೯೫೦ರ ವರೆಗೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ನಾನು ಕನ್ನಡ ಎಂ.ಎ. ಓದಿ ಮುಗಿಸಿದೆ. ಆ ಅವಧಿಯಲ್ಲಿ ಶ್ರೀ ಎ.ವಿ.ರಾಜಶೇಖರನ್ ಅವರು ಬಿ.ಎ. ವಿದ್ಯಾರ್ಥಿಯಾಗಿ ವ್ಯಾಸಂಗ ಮಾಡುತ್ತಿದ್ದರು. ಅವರು ವಯಸ್ಸಿನಲ್ಲಿ ನನಗಿಂತ ಎರಡು ವರ್ಷ ಚಿಕ್ಕವರು. ನಾನು ಮೈಸೂರಿನ ಸುತ್ತೂರು ಮಠದ ವಿದ್ಯಾರ್ಥಿನಿಲಯದಲ್ಲಿದ್ದೆ. ಆ ಅವಧಿಯಲ್ಲಿ ರಾಜಶೇಖರನ್ ಅವರು ಅದೇ ವಿದ್ಯಾರ್ಥಿನಿಲಯದಲ್ಲಿದ್ದ ನೆನಪು. ನಾನು ಸುತ್ತೂರು ವಿದ್ಯಾರ್ಥಿನಿಲಯದ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿದ್ದೆ. ಅಂದಿನಿಂದಲೂ ಅವರ ಪರಿಚಯ, ಸ್ನೇಹವಾಗಿತ್ತು ಎಂದು ಭಾವಿಸಿದ್ದೇನೆ. ಈ ಸಂಗತಿಗಳು ಎಂತಾದರೂ ಇರಲಿ.

ರಾಜಶೇಖರನ್ ಅವರು ವಿದ್ಯಾರ್ಥಿ ದೆಸೆಯಿಂದಲೇ ತಮ್ಮ ಕಾರ್ಯ ಚಟುವಟಿಕೆಗಳಿಂದ ಎಲ್ಲರಿಗೂ ಪರಿಚಯವಾಗಿದ್ದರು. ಮಹಾರಾಜ ಕಾಲೇಜಿನ ಅಂದಿನ ಮಿತ್ರಮೇಳದ ಕಾರ್ಯನಿರ್ವಾಹಕರಾಗಿದ್ದರು. ಜೊತೆಗೆ ಹಿಂದಿ ಸಂಘದ ಕಾರ್ಯದರ್ಶಿಯಾಗಿಯೂ ಸೇವೆ ಸಲ್ಲಿಸಿ ಎಲ್ಲರಿಗೂ ಚಿರಪರಿಚಿತರಾಗಿದ್ದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಿ.ಎ. ಮುಗಿಸಿದ ರಾಜಶೇಖರನ್ ಅವರು ದೆಹಲಿ ವಿಶ್ವವಿದ್ಯಾನಿಲಯದಿಂದ ೧೯೫೫ರಲ್ಲಿ ಕಾನೂನು ಶಿಕ್ಷಣಕ್ಕೆ ಹೋದರು. ಅದಾದ ಮೇಲೆ ಅಮೆರಿಕದ ಮಿಸ್ಸೋರಿ ವಿಶ್ವವಿದ್ಯಾನಿಲಯದಿಂದ ಅಲ್ಪಾವಧಿಯ ತರಬೇತಿಯಲ್ಲಿ ಸಮತೂಕದ ಕೃಷಿಗಾರಿಕೆ, ಕೃಷಿ ವಿಸ್ತರಣೆ, ಸಹಕಾರ ವ್ಯವಸ್ಥೆ, ಕೊಳ್ಳುವಿಕೆ - ಮಾರುವಿಕೆ, - ಇವೇ ಮೊದಲಾದ ವಿಷಯಗಳ ಬಗೆಗೆ ವ್ಯಾಸಂಗ ಮಾಡಿದರು. ಇದೇ ವರ್ಷ ೧೯೫೯ರಲ್ಲಿ ಯುಎಸ್‌ಎಯ ಕನ್ಸಾಸ್ ಸ್ಟೇಟ್ ಯೂನಿವರ್ಸಿಟಿ ಆಫ್ ಅಗ್ರಿಕಲ್ಚರಲ್ ಅಂಡ್ ಅಪ್ಲೈಡ್ ಸೈನ್ಸ್‌ನಲ್ಲಿ ಟೆಕ್ನಿಕಲ್ ಟ್ರೈನಿಂಗ್ ಪಡೆದರು. ಈ ಎಲ್ಲ ತರಬೇತಿ ವ್ಯಾಸಂಗಗಳಿಂದ ಗ್ರಾಮೀಣಾಭಿವೃದ್ಧಿ, ಕೃಷಿ, ಸಹಕಾರ ಮೊದಲಾದ ಕ್ಷೇತ್ರಗಳಲ್ಲಿ ಅಪಾರ ಅನುಭವವನ್ನು,

ಪರಿಣತಿಯನ್ನು ಪಡೆದುಕೊಂಡರು. ಇವೆಲ್ಲವನ್ನು ದೇಶದ ಪ್ರಗತಿಪರ ಕಾರ್ಯಗಳಲ್ಲಿ ಸಾಕಾರಗೊಳಿಸಲು ನಿರಂತರವಾಗಿ ಶ್ರಮಿಸಿದ್ದಾರೆ. ಶ್ರಮಿಸುತ್ತಲೂ ಇದ್ದಾರೆ. ಅನೇಕ ಪ್ರತಿಷ್ಠಿತ ಹುದ್ದೆಗಳಲ್ಲಿ ದೇಶ ವಿದೇಶಗಳನ್ನು ಭಾರತದ ಪರವಾಗಿ ಪ್ರತಿನಿಧಿಸಿದ್ದಾರೆ.

ರಾಜಶೇಖರನ್ ಮತ್ತು ನನ್ನ ಕ್ಷೇತ್ರಗಳೇ ಭಿನ್ನವಾದುದರಿಂದ ಪರಸ್ಪರ ಸಂಧಿಸುವ ಸನ್ನಿವೇಶಗಳೇ ಒದಗಿಬರಲಿಲ್ಲ. ತೀರ ಅನಿರೀಕ್ಷಿತವಾಗಿ ನಾವಿಬ್ಬರೂ ಪರಸ್ಪರ ಭೇಟಿಯಾಗುವ ಸದವಕಾಶ ಪ್ರಾಪ್ತಿಯಾಯಿತು. ೧೯೯೮-೨೦೦೧ರ ಅವಧಿಯಲ್ಲಿ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿ ಆಯ್ಕೆಗೊಂಡೆ. ಆ ಅವಧಿಯಲ್ಲಿ ಕನಕಪುರದಲ್ಲಿ ೬೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಹಮ್ಮಿಕೊಳ್ಳಲಾಯಿತು. ಸಾರಿಗೆ ಸಚಿವರಾಗಿದ್ದ ಸನ್ಮಾನ್ಯ ಪಿ.ಜಿ.ಆರ್. ಸಿಂಧ್ಯಾ ಅವರ ನೇತೃತ್ವದಲ್ಲಿ ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ವ್ಯವಸ್ಥಿತವಾಗಿ ನಡೆಸಲಾಯಿತು. ಆ ಸಂದರ್ಭದಲ್ಲಿ ರಾಜಶೇಖರನ್ ಮತ್ತು ಅವರ ಸಹೋದರರು ಸಕ್ರಿಯವಾಗಿ ಸಮ್ಮೇಳನದಲ್ಲಿ ಭಾಗವಹಿಸಿ ಆ ಸಮ್ಮೇಳನ ಅತ್ಯಂತ ಯಶಸ್ವಿಯಾಗುವಂತೆ ಸಹಕರಿಸಿದರು.

ಕರ್ನಾಟಕದ ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ನಿಸ್ವಾರ್ಥದಿಂದ ದುಡಿದು ಜನತೆಯ ಮನೋಮಂದಿರದಲ್ಲಿ ಸ್ಥಿರವಾಗಿ ನಿಂತವರು ಹಲವಾರು ಮಂದಿ. ಅವರಲ್ಲಿ ನನ್ನ ಮಿತ್ರರಾದ ರಾಜಶೇಖರನ್ ಅವರು ಅಗ್ರಗಣ್ಯರಾಗಿದ್ದಾರೆ. ಅವರ ನಿಷ್ಠೆ, ಪ್ರಾಮಾಣಿಕತೆ, ನಿರಂತರ ಕಾಯಕ, ಸರಳತೆ ಸಜ್ಜನಿಕೆಗಳಿಂದ ಅತ್ಯಂತ ಜನಪ್ರಿಯರಾಗಿದ್ದಾರೆ. ಶ್ರೀಯುತರು ನಡೆದು ಬಂದ ದಾರಿಯನ್ನು ಅವಲೋಕಿಸಿದವರಿಗೆ ಒಂದು ನೈಜ ಚಿತ್ರ ಕಣ್ಣಿಗೆ ಕಟ್ಟುತ್ತದೆ. ವಿದ್ಯಾರ್ಥಿ ದೆಸೆಯಲ್ಲೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ, ಕನಕಪುರ ತಾಲ್ಲೂಕು ಕಾಂಗ್ರೆಸ್‌ನ ಕೋಶಾಧ್ಯಕ್ಷರಾಗಿ, ಮೈಸೂರು ಚಲೋ ಚಳುವಳಿಯಲ್ಲಿ ಪಾಲ್ಗೊಂಡಿದ್ದಾರೆ.

ರಾಜಶೇಖರನ್ ಅವರು ಅಪಾರ ಲೋಕಾನುಭವ, ಗ್ರಾಮೀಣಾಭಿವೃದ್ಧಿಯ ಬಗೆಗೆ ಆಳವಾದ ಜ್ಞಾನ, ರಾಷ್ಟ್ರದ ಪ್ರಗತಿಯ ನಿರಂತರ ಚಿಂತನೆಗಳಿಂದ ಮಹೋನ್ನತ ಕಾರ್ಯಗಳನ್ನು ಮಾಡಿದ್ದಾರೆ. ಕೃಷಿ, ಗ್ರಾಮೀಣಾಭಿವೃದ್ಧಿ, ಯುವಶಕ್ತಿ, ಶಿಕ್ಷಣ, ನೀರಾವರಿ, ಮಾನವ ಸಂಪನ್ಮೂಲದ ಸದ್ಬಳಕೆ, ಪರಿಸರ - ಇವೇ ಮೊದಲಾದ ವಿಚಾರಗಳನ್ನು ಕುರಿತು ದೇಶ ವಿದೇಶಗಳ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ, ಪ್ರಬಂಧಗಳನ್ನು ಮಂಡಿಸಿ ಅಪಾರ ಕೀರ್ತಿಯನ್ನು ಗಳಿಸಿದ್ದಾರೆ. ವಿಶ್ವದ ಪ್ರಮುಖ ರಾಷ್ಟ್ರಗಳಿಗೆ ಹೋಗಿ ತಮ್ಮ ವಿಚಾರಧಾರೆಯನ್ನು ಚಿಂತನ ಮಂಥನಗಳಿಂದ ಅಭಿವ್ಯಕ್ತಿಪಡಿಸಿದ್ದಾರೆ. ವಿಶ್ವದ ಎಲ್ಲ ರಾಷ್ಟ್ರಗಳಿಗೂ ಭೇಟಿ ಕೊಟ್ಟ ಪ್ರಸಿದ್ಧ ಚಿಂತಕರಲ್ಲಿ ಅಗ್ರಗಣ್ಯರಾಗಿದ್ದಾರೆ. ಈ ತೆರನ ಕಾರ್ಯಗಳನ್ನು ಮಾಡಿದವರನ್ನು ಇಂದಿನ ದಿನಗಳಲ್ಲಿ ಕಾಣುವುದು ತೀರ ಅಪರೂಪ.

ರಾಜ್ಯ ಮತ್ತು ರಾಷ್ಟ್ರದ ರಾಜಕೀಯ ಕ್ಷೇತ್ರದಲ್ಲಿ ರಾಜಶೇಖರನ್ ಅವರ ಹೆಸರು

ಚಿರಸ್ಥಾಯಿಯಾಗಿ ಉಳಿಯುವಂತಹುದು. ಶ್ರೀಯುತರು ಕನಕಪುರ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಗೊಂಡವರು. ತರುವಾಯ ರಾಜ್ಯವಿಧಾನಸಭೆಗೆ, ೧೯೯೯ರಲ್ಲಿ ರಾಜ್ಯ ವಿಧಾನ ಪರಿಷತ್ತಿಗೆ ಮತ್ತು ೨೦೦೨ರಲ್ಲಿ ರಾಜ್ಯಸಭೆಗೆ ಚುನಾಯಿತರಾದವರು. ಕರ್ನಾಟಕದಲ್ಲಿ ರೈತ ಸಂಘಟನೆ, ಕೃಷಿಕ ಸಮಾಜ ಸ್ಥಾಪನೆ, ಯುವಜನಸೇವಾ ಇಲಾಖೆಯ ಪ್ರಾರಂಭ, ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ - ಇವೇ ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಲು ಕಾರಣೀಭೂತರಾದವರು ರಾಜಶೇಖರನ್ ಎಂಬುದು ಎಲ್ಲ ಕನ್ನಡಿಗರೂ ಹೆಮ್ಮೆಪಟ್ಟುಕೊಳ್ಳುವ ಸಂಗತಿಯಾಗಿದೆ. ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಒಂದು ಅಂತಾರಾಷ್ಟ್ರೀಯ ತರಬೇತಿ ಸಂಸ್ಥೆ. ಈ ಸಂಸ್ಥೆಯಲ್ಲಿ ಏಷ್ಯಾ ಖಂಡದ ಎಲ್ಲ ದೇಶಗಳ ಪ್ರತಿನಿಧಿಗಳೂ ಇದ್ದಾರೆ. ಸುಮಾರು ಇಪ್ಪತ್ತೈದು ವರ್ಷಗಳಿಂದ ರಾಜಶೇಖರನ್ ಅವರ ನೇತೃತ್ವದಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಸಂಸ್ಥೆ ಶ್ರೀಯುತರಿಗೆ ಅಪಾರ ಕೀರ್ತಿ, ಗೌರವ, ಪ್ರತಿಷ್ಠೆಗಳನ್ನು ತಂದುಕೊಟ್ಟಿದೆ.

ರಾಷ್ಟ್ರನಾಯಕ ಶ್ರೀ ಎಸ್.ನಿಜಲಿಂಗಪ್ಪನವರ ಅಳಿಯ ಎಂಬ ಹಮ್ಮು ಬಿಮ್ಮು ಲವಲೇಶವೂ ಇಲ್ಲದೆ ಎಲೆಮರೆಯ ಕಾಯಿಯಂತೆ ನಿಸ್ವಾರ್ಥ ಸೇವೆಯನ್ನು ಸಲ್ಲಿಸುತ್ತಿರುವ ಶ್ರೀ ಎಂ.ವಿ.ರಾಜಶೇಖರನ್ ಒಬ್ಬ ಅಪರೂಪದ ರಾಜಕಾರಣಿ; ಶ್ರೇಷ್ಠ ಚಿಂತಕ, ಪರಮ ಪ್ರಾಮಾಣಿಕ ಸಮಾಜ ಸೇವಕ. ಯಾವ ಲೌಕಿಕ ಲಾಭ ಲೋಭಗಳಿಗೂ ಕೀರ್ತಿ ಪ್ರತಿಷ್ಠೆಗಳಿಗೂ ಹಾತೊರೆಯದ, ಮನಸೋಲದ ದೇಶಭಕ್ತರಲ್ಲಿ ಅಗ್ರಗಣ್ಯರೆನಿಸಿದ್ದಾರೆ. ನಿಸ್ವಾರ್ಥ ಕಾಯಕವೇ ಜೀವನದ ಪರಮೋದ್ದೇಶ ಎಂದು ನೆರೆ ನಂಬಿರುವ ರಾಜಶೇಖರನ್ ಅವರನ್ನು ನೆನೆದಾಗ ಈ ಮುಂದಿನ ವಚನಗಳು ಮನದಲ್ಲಿ ಸುಳಿದಾಡುತ್ತವೆ.

**ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ**
**ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು**
**ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು...**

**ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ**
**ನಡೆ-ನುಡಿ ಎರಡನ್ನು ಪರಿಪೂರ್ಣ ತುಂಬಿ**
**ಲಿಂಗವ ಕೂಡಬಲ್ಲವನೆ ಶರಣ**

ಈ ವಚನಗಳ ಅಂತರಾರ್ಥವನ್ನು ರಾಜಶೇಖರನ್ ಅವರು ಸಾರ್ಥಕಗೊಳಿಸಿದ್ದಾರೆ. ಇದಕ್ಕೆ ನಿದರ್ಶನವೋ ಎಂಬಂತೆ ಶ್ರೀಲಂಕಾದ ನ್ಯಾಷನಲ್ ಎನ್‌ಜಿಓ ಕೌನ್ಸಿಲ್ ಈ ಸಹಸ್ರಮಾನದ “ವಿಶ್ವಶರಣ” ಎಂಬ ಪ್ರಶಸ್ತಿಯನ್ನು ನೀಡಿರುವುದು ಅತ್ಯಂತ ಔಚಿತ್ಯಪೂರ್ಣವಾಗಿದೆ.

ಶ್ರೀ ಎಂ.ವಿ.ರಾಜಶೇಖರನ್ ಅವರು ನಯವಿನಯ ಸಂಪನ್ನರು, ಸಜ್ಜನರು, ಸತ್ಪುರುಷರು, ಪರಮ ಪ್ರಾಮಾಣಿಕರು, ಅಪರಂಜಿಯಂತಹ ವ್ಯಕ್ತಿತ್ವವುಳ್ಳವರು. ರಾಜಕೀಯ ಕ್ಷೇತ್ರದಲ್ಲಿ

ಇಂತಹವರನ್ನು ಸಂದರ್ಶಿಸುವುದು ತೀರ ಅಪರೂಪ. ಇವರು ನನ್ನ ಸ್ನೇಹಿತರಾಗಿದ್ದರು, ಸಹಪಾಠಿಗಳಾಗಿದ್ದರು ಎಂಬುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಇಂತಹ ಸನ್ಮಿತ್ರರು ನೂರುಕಾಲ ಬಾಳಲಿ, ಲೋಕೋತ್ತರ ಕಾರ್ಯಗಳನ್ನು ಮಾಡಲಿ, ಶ್ರೀಯುತರಿಗೂ ಅವರ ಕುಟುಂಬ ವರ್ಗದವರಿಗೂ ದಯಾಮಯರಾದ ಪಾರ್ವತಿ-ಪರಮೇಶ್ವರರು ದೀರ್ಘಾಯುರಾರೋಗ್ಯಗಳನ್ನು ಕರುಣಿಸಲಿ ಎಂದು ಅನನ್ಯ ಭಕ್ತಿ ಭಾವದಿಂದ ಪ್ರಾರ್ಥಿಸುತ್ತೇನೆ. ಇಂತಹ ನಿಸ್ವಾರ್ಥ ಮನೋಭಾವದ ಸದಾ ಜನಹಿತ ಕಾರ್ಯಗಳಲ್ಲೇ ತಲ್ಲೀನರಾಗಿರುವ ಈ ನಿರಂತರ ಕಾರ್ಯಕದುಗಲಿಯನ್ನು ಗುರುತಿಸಿ ಅವರ ೭೫ರ ಹುಟ್ಟುಹಬ್ಬದ ಸಂದರ್ಭದಲ್ಲಿ ಅವರನ್ನು ಸತ್ಕರಿಸಿ, ಸನ್ಮಾನಿಸಿ ಗೌರವ ಗ್ರಂಥವನ್ನು ಸಮರ್ಪಿಸುವ ಸತ್ಕಾರ್ಯವನ್ನು ಕೈಗೊಂಡ ಎಲ್ಲ ಪುಣ್ಯ ಚೇತನಗಳನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

***

# ಸಹಪಾಠಿ ಮಿತ್ರ

ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ

ಈ ಕಥನವನ್ನು ಎಂದರೆ ಲೇಖನವನ್ನು ಹೇಗೆ ಆರಂಭಿಸಬೇಕು ಎನ್ನುವುದು ತಿಳಿಯುತ್ತಿಲ್ಲ. ರಾಜಶೇಖರನ್‌ರನ್ನು ಕಂಡು, ಮಾತಾಡಿ ಹತ್ತಿರ ಹತ್ತಿರ ನಾಲ್ಕೈದು ದಶಕಗಳೇ ಕಳೆದುಹೋಗಿವೆ. ಸುಮಾರು ಎಪ್ಪತ್ತರ ದಶಕದಲ್ಲಿ ಒಮ್ಮೆ ಅವರು ಬೆಂಗಳೂರಿಂದ ತಮ್ಮ ಊರು ಮರಳವಾಡಿಗೆ ಪ್ರಯಾಣ ಮಾಡುತ್ತಿದ್ದರು. ನಾನು ನಮ್ಮ ಊರು ಕನಕಪುರಕ್ಕೆ (ಆಗ್ಗೆ ಕಾನಕಾನಹಳ್ಳಿ ಎಂಬ ಹಳೆಯ ಹೆಸರು ಇನ್ನೂ ರೂಢಿಯಲ್ಲಿ ಬಿಟ್ಟುಹೋಗಿರಲಿಲ್ಲ) ಪ್ರಯಾಣ ಮಾಡುತ್ತಿದ್ದೆ. ಒಂದೇ ಬಸ್ಸಿನಲ್ಲಿ ಅಕ್ಕಪಕ್ಕದಲ್ಲಿ ನಾವು ಕುಳಿತಿದ್ದೆವು. ಅವರು ನಡುವೆ ಹಾರೋಹಳ್ಳಿಯಲ್ಲಿ ಇಳಿದು ಮರಳವಾಡಿಗೆ ಇನ್ನೊಂದು ಬಸ್ ಹಿಡಿಯಬೇಕಾಗಿತ್ತು, ಅಥವಾ ಅವರೂ ಕನಕಪುರಕ್ಕೇ ಬರುತ್ತಿದ್ದರೋ, ಜ್ಞಾಪಕವಿಲ್ಲ. ಬಸ್ಸಿನ ತಮ್ಮ ಸೀಟಿನಲ್ಲಿ ಅವರು ಬಿಗಿಯಾಗಿ ಕುಳಿತಿದ್ದರು. ಆ ವೇಳೆಗಾಗಲೇ ಅವರು ರಾಜಕೀಯ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದರು. ನಾನು ಬಹುಶಃ ಬೆಂಗಳೂರಿನ ಒಂದು ಖಾಸಗಿ ಕಾಲೇಜಿನಲ್ಲಿ ಹಂಗಾಮಿ ಅಧ್ಯಾಪಕ. ಅವರು ಸಮಾಜ ಸೇವಾಕಾರ್ಯದಲ್ಲಿ ತತ್ಪರತೆಯಿಂದ ತಮ್ಮನ್ನು ತೊಡಗಿಸಿಕೊಂಡಿದ್ದರು. ನಾನು ಗಟ್ಟಿಯಾಗಿ ಕಾಲೂರಲು ನೆಲಕ್ಕಾಗಿ ತಡಕಾಡುತ್ತಿದ್ದೆ. ಅವರ ಬಿಗಿ ನನಗೆ ಅರ್ಥವಾಗಲಿಲ್ಲ, ನಾನು ಸಡಿಲವಾಗಿ ಅವರನ್ನು ಪ್ರಶ್ನಿಸಿದೆ. "ರಾಜಶೇಖರನ್, ಈಗ ಏನು ಮಾಡುತ್ತಿದ್ದೀಯೆ?". ಈ ಪ್ರಶ್ನೆ ಅವರಿಗೆ ಸ್ವಲ್ಪ ಇರಿಸು ಮುರಿಸು ಮಾಡಿದಂತೆ ನನಗೆ ಕಂಡಿತು. ತಮ್ಮ ಬಿಗಿ ಸಡಿಲಮಾಡದೆ ಅವರು ಉತ್ತರಿಸಿದರು. "ಕೃಷಿ ಮಾಡುತ್ತಿದ್ದೇನೆ". ಅವರಿಗೆ ಸ್ವಸ್ಥಳದಲ್ಲಿ ಜಮೀನು ಸಮೀನು ಗಳಿದ್ದಿರಬಹುದು. ಅದು ನನಗೆ ತಿಳಿಯದು. ಅವರು ಹೇಳಿದ್ದು ನಿಜವೂ ಇರಬಹುದು. ಜೊತೆಗೆ ಅವರು ಸಕ್ರಿಯ ರಾಜಕಾರಣದ ಹೊಲಗದ್ದೆಗಳನ್ನು ಉದ್ದಗಲಗಳಲ್ಲಿ ಉತ್ತು ಬಿತ್ತಿ ಬೆಳೆಗಾಗಿ ಕಾಯುತ್ತಿದ್ದರೆನ್ನುವುದು ಆಗ ನನಗೆ ತಿಳಿದಿರಲಿಲ್ಲ. ಅವರ ಮಾತಿಗೆ ಮುಂದೆ ಏನು ಹೇಳಬೇಕೋ ತಿಳಿಯದೆ, ನಾನು ಸುಮ್ಮನಾದೆ.

ಅಲ್ಲಿಂದೀಚೆಗೆ ದಶಕಗಳೇ ಉರುಳಿಹೋಗಿವೆ. ಒಮ್ಮೆಯೂ ನಾನೂ

ಅವರೂ ಪರಸ್ಪರವಾಗಿ ಸಂಧಿಸಿಲ್ಲ. ಸಂದರ್ಭಗಳೇ ಬರಲಿಲ್ಲ. ಇದಾಯಿತಲ್ಲ; ಈಗ್ಗೆ ಮೂರು ವರ್ಷಗಳಿಗೆ ಹಿಂದೆ ಜುಲೈ ತಿಂಗಳಲ್ಲಿ ಒಂದು ದಿನ ನಾನು ನನ್ನ ಹಿರಿಯ ಮಿತ್ರರಾಗಿದ್ದು ಈಚೆಗೆ ದಿವಂಗತರಾದ ಇ.ಆರ್. ಸೇತೂರಾಂ (ಹಿರಿಯ ಪತ್ರಕರ್ತರು, ಪ್ರಶಸ್ತಿ ಪುರಸ್ಕೃತರು) ಅವರ ಮನೆಗೆ ಏನೋ ಕೆಲಸಕ್ಕೆ ಹೋಗಿದ್ದೆ. ಆ ಸರಸಿಯೊಂದಿಗೆ ಮಾತಾಡುವುದೇ ಒಂದು ಸುಖ. ಗಂಟೆಗಟ್ಟಲೆ ಮಾತಾಡುತ್ತಿದ್ದರೂ ಹೊತ್ತು ಹೋಗುವುದು ತಿಳಿಯುತ್ತಿರಲಿಲ್ಲ. ಮಾತು ಮುಗಿದು ನಾನು ಹೊರಡಲಿದ್ದಾಗ ಅವರು ನನಗೆ 'ಆಡಳಿತ ನಿರ್ವಹಣಾ ಪ್ರಯೋಗಗಳ ಕೈಪಿಡಿ' ಎಂಬ ಪುಸ್ತಕದ ಎರಡು ಸಂಪುಟಗಳನ್ನು ವಿಶ್ವಾಸಪೂರ್ವಕವಾಗಿ ಕೊಟ್ಟರು. ಅದು ಫರ್ನಾಂಡ್ ವಿನ್ಸೆಂಟ್ ಎಂಬವರು ಸಿದ್ಧಪಡಿಸಿದ್ದ ಸಾರ್ವಜನಿಕ ಆಡಳಿತಶಾಸ್ತ್ರ ಸಂಬಂಧವಾದ ಇಂಗ್ಲಿಷ್ ಪುಸ್ತಕದ ಕನ್ನಡ ಭಾಷಾಂತರ. ಆ ಸಂಪುಟಗಳನ್ನು ನನಗೆ ಕೊಡುವಾಗ ಸೇತೂರಾಂ ಅವರು ರಾಜಶೇಖರನ್ ಅವರ ಹೆಸರು ಹೇಳಿದರು. ಅವರೇ ಒತ್ತಾಯಮಾಡಿ ಆ ಕನ್ನಡ ಆವೃತ್ತಿಯನ್ನು ತಮ್ಮಿಂದ ಮಾಡಿಸಿದರು ಎಂದರು. ನನ್ನ ಹಳೆಯ ಗೆಳೆಯನೊಬ್ಬನ ಹೆಸರು ಬಹುಕಾಲದ ಮೇಲೆ ಹೀಗೆ ಕಿವಿಗೆ ಬಿದ್ದು, ಏನೋ ಸಂತೋಷವಾಯಿತು. ಜೊತೆಗೆ ಹಳೆಯ ನೆನಪುಗಳೂ ಮನಸ್ಸಿನ ಮೇಲ್ಮೆಲೆಗೆ ತೇಲಿಬಂದುವು. ಇವನ್ನು ಸೇತೂರಾಂ ಅವರಿಗೆ ತಿಳಿಸಿದೆ. ಪುಸ್ತಕದ ನಿವೇದನೆ ಓದಿದ ಮೇಲೆ ರಾಜಶೇಖರನ್ IRED ಸಲಹೆಗಾರರಲ್ಲಿ ಒಬ್ಬರಾಗಿ ಸ್ವತಃ ಈ ಕೆಲಸ ಕೈಗೂಡಿಸಿದ್ದರು ಎನ್ನುವುದು ಗಮನಕ್ಕೆ ಬಂತು.

ರಾಜಶೇಖರನ್ ಎರಡು ಘಟ್ಟಗಳಲ್ಲಿ ನನ್ನ ಸ್ನೇಹಿತರು. ಒಂದು ಹೈಸ್ಕೂಲ್ ವಿದ್ಯಾಭ್ಯಾಸದ ದಿನಗಳು, ಇನ್ನೊಂದು ಕಾಲೇಜ್ ಅಭ್ಯಾಸದ ದಿನಗಳು. ನೆನಪುಗಳು ಚಕ್ಕೆಯೇಳುತ್ತಿರುವ ಈ ಮುಪ್ಪಿನಲ್ಲಿ ಹುಡಿ ನೆನಪುಗಳು ಮಾತ್ರ ಉಳಿದಿವೆ. ನಮ್ಮಿಬ್ಬರ ನಡುವೆ ಒಡನಾಟ ಆತ್ಮೀಯತೆ ಬೆಳೆಯಲು ಅವಕಾಶವಾಗಲೇ ಇಲ್ಲವಾದ್ದರಿಂದ ಇರುವ ಸ್ವಲ್ಪವನ್ನೇ ನೆನಪಿಸಿಕೊಳ್ಳಬೇಕಾಗಿದೆ.

ಕಾನಕಾನಹಳ್ಳಿ (ಈಗಲೂ ನನಗೆ ಈ ಹೆಸರೇ ಇಷ್ಟ) ರೂರಲ್ ಹೈಸ್ಕೂಲಿನಲ್ಲಿ ೧೯೪೫-೪೮ರ ನಡುವೆ ಏಕಕಾಲದಲ್ಲಿ ನಾವಿಬ್ಬರೂ ವಿದ್ಯಾರ್ಥಿಗಳು. ಸಣ್ಣ ಊರು, ಕೋಟೆಯಲ್ಲಿದ್ದ ನನ್ನ ಮನೆಯಿಂದ ನಾನು ಶಾಲೆಗೆ ನಡೆದು ಬರುತ್ತಿದ್ದೆ. ಮನೆ ಶಾಲೆಗೆ ಹತ್ತಿರವೇ ಇತ್ತು. ಆದರೆ ಶಾಲೆಯಿಂದ ದೂರವಿದ್ದ ಶ್ರೀ ದೇಗುಲಮಠದಿಂದ ರಾಜಶೇಖರನ್ ನಡೆದು ಬರುತ್ತಿದ್ದರು. ಆ ಕಾಲಕ್ಕೆ ಮರಳವಾಡಿಯಲ್ಲಾಗಲಿ, ಅದಕ್ಕೆ ಸಮೀಪದ ಹಾರೋಹಳ್ಳಿಯಲ್ಲಾಗಲಿ ಹೈಸ್ಕೂಲು ಇರಲಿಲ್ಲ. ಕಾನಕಾನಹಳ್ಳಿಯಲ್ಲಿ ಕೂಡ ಹೈಸ್ಕೂಲು ಆರಂಭವಾಗಿ ಮೂರೋ-ನಾಲ್ಕೋ ವರ್ಷಗಳಾಗಿದ್ದುವು. ಹಾಗಾಗಿ ಅವರು ಕಾನಕಾನಹಳ್ಳಿ ದೇಗುಲಮಠದ ವಿದ್ಯಾರ್ಥಿನಿಲಯದ ವಿದ್ಯಾರ್ಥಿಯಾಗಿದ್ದರು ಎನ್ನುವುದು ನನ್ನ ನೆನಪು. ನನಗೆ ತಿಳಿದಂತೆ ಯಾವ ಅಧ್ಯಾಪಕರೂ ವಿದ್ಯಾರ್ಥಿಯೂ ಆ ಕಾಲಕ್ಕೆ ಯಾವುದೇ ವಾಹನದಲ್ಲಿ ಶಾಲೆಗೆ ಬರುತ್ತಿರಲಿಲ್ಲ. ಅದರ ಅಗತ್ಯವೂ ಇರಲಿಲ್ಲ.

ನನಗೆ ನೆನಪಿರುವಂತೆ ನಾವಿಬ್ಬರೂ ಆರ್ಟ್ಸ್ ತರಗತಿಯ ವಿದ್ಯಾರ್ಥಿಗಳು, ಒಂದೇ ಸೆಕ್ಷನ್ನಿನವರು, ಇದ್ದದ್ದು ಸಹ ಒಂದೇ ಸೆಕ್ಷನ್. ಬ್ರಿಟಿಷರ ಚರಿತ್ರೆ, ಭೂಗೋಳ, ಪೌರನೀತಿ ಇಂಥವು ಅಭ್ಯಾಸ ವಿಷಯಗಳು. ನಮಗಿದ್ದ ಅಧ್ಯಾಪಕರೆಲ್ಲ ಒಳ್ಳೆಯ ವಿಷಯಪ್ರಭುತ್ವ ಭಾಷಾಪ್ರಭುತ್ವ ಇದ್ದ ದಕ್ಷರಾದ ಅಧ್ಯಾಪಕರು. ವಿದ್ಯಾರ್ಥಿಗಳೆಲ್ಲ ಅವರಿಗೆ ಹೆದರುತ್ತಿದ್ದರು, ಗೌರವ ಕೊಡುತ್ತಿದ್ದರು. ಸಂಸ್ಥೆಯ ಮುಖ್ಯರಾದ ಎಸ್.ಕರಿಯಪ್ಪನವರೂ ಸಾಮಾನ್ಯ ಜೀವಶಾಸ್ತ್ರ ಪೌರನೀತಿ ಮುಂತಾದ ಪಾಠಗಳನ್ನು ತೆಗೆದುಕೊಳ್ಳುತ್ತಿದ್ದರು. (ಇವರ ಬಗ್ಗೆ ನಾನು ಬಹಳ ಹಿಂದೆ ಬರೆದಿದ್ದ ಲೇಖನವೊಂದನ್ನು ಈಚೆಗೆ ಪ್ರಕಟವಾದ 'ಮಾರ್ಗದರ್ಶಕ ಮಹನೀಯರು' ಎಂಬ ನನ್ನ ಪುಸ್ತಕದಲ್ಲಿ ಸೇರಿಸಿದ್ದೇನೆ). ಬಹುಶಃ ದೇಗುಲಮಠದಲ್ಲಿ ಊಟವೋ ಉಪಾಹಾರವೋ ಮುಗಿಸಿ ಶಾಲೆಗೆ ಬರುವ ವೇಳೆಗೆ ಒಂದೊಂದು ಸಲ ಸ್ವಲ್ಪ ತಡವಾಗುತ್ತಿತ್ತು, ರಾಜಶೇಖರನ್ ಅವರಿಗೆ. ನಮ್ಮ ಸಾಮಾನ್ಯ ಗಣಿತದ ಅಧ್ಯಾಪಕರು, ಎ.ವಿ. ರಾಮಸ್ವಾಮಿಗಳು, ಸ್ವಭಾವತಃ ಸರಸಿಗಳು, ವಿನೋದಿಗಳು, ವಿಡಂಬನಪ್ರಿಯರು. ಅವರ ಕಡೆ ನೋಡಿ, "ಏನಯ್ಯಾ ಲೇಟ್ ಲತೀಫ್" ಎಂದು ಹೇಳಿ ನಕ್ಕು, 'Get in' ಎನ್ನುತ್ತಿದ್ದರು. ಆ ಶಬ್ದದ ಮೊದಲ ಪರಿಚಯ ನನಗೆ ಆದುದು ಸಹ ಆಗಲೇ.

ಎಂ.ವಿ.ರಾಜಶೇಖರನ್ ಗೌರವರ್ಣದ, ಒಳ್ಳೆಯ ಸ್ಫುರದ್ರೂಪಿ ಆರೋಗ್ಯವಂತ ಹುಡುಗ. ಜೊತೆಯ ಹುಡುಗರ ನಡುವೆ ದಿಟ್ಟವಾಗಿ ಎದ್ದು ಕಾಣುತ್ತಿದ್ದರು. ಮುಖ ಕಣ್ಣು ಮೈಮಾಟಗಳಲ್ಲಿ ಶ್ರೀಮಂತಿಕೆಯ ವರ್ಚಸ್ಸು ಹೊರಹೊಮ್ಮುವಂತಿತ್ತು. ೧೯೪೬-೪೭ರ ನಡುವೆ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಕೋಲಾಹಲ ನಡೆಯುತ್ತಿತ್ತು. ಬಹುಶಃ ಅದು ಸ್ವಾತಂತ್ರ್ಯ ನಂತರದಲ್ಲಿ ತೀವ್ರಗೊಂಡು ಹೈಸ್ಕೂಲು ವಿದ್ಯಾರ್ಥಿಗಳೂ ಈ ಚಳವಳಿಯ ಸುಳಿಗೆ ಸಿಕ್ಕಿದ್ದರು. ನಮ್ಮ ಮಿತ್ರ ರಾಜಶೇಖರನ್ ನಮ್ಮ ಸ್ಕೂಲಿನಲ್ಲಿ ಒಬ್ಬ ಮುಂದಾಳಾಗಿ ನಿಂತರೆಂದು ನನ್ನ ನೆನಪು. ಹಾಗೆ ನೋಡಿದರೆ ನಮ್ಮ ಅಧ್ಯಾಪಕರೂ ಈ ಚಳವಳಿಯಲ್ಲಿ ಸಹಾನುಭೂತಿಯುಳ್ಳವರೇ. ಆದರೆ ಅದನ್ನು ಬಾಯಿಬಿಟ್ಟು ಹೇಳುತ್ತಿರಲಿಲ್ಲ.

ಶಾಲೆಯ ಮುಖ್ಯ ಕಟ್ಟಡದ ಉತ್ತರದಿಕ್ಕಿನ ಸಣ್ಣ ಕೋಣೆ ನಮ್ಮದು. ತರಗತಿಯಲ್ಲಿ ಯಾವುದೋ ಪಾಠ ನಡೆಯುತ್ತಿದೆ ಅಥವಾ ಆರಂಭವಾಗಬೇಕಾಗಿದೆ. ನಾನೂ ನನ್ನ ಇನ್ನೊಬ್ಬ ಸಹಪಾಠಿ ಕೆ.ಸಿ. ಪಂಚಲಿಂಗೇಗೌಡ (ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕ) ಅಕ್ಕಪಕ್ಕದಲ್ಲಿ ಕುಳಿತಿದ್ದೇವೆ, ಮೊದಲ ಬೆಂಚಿನ ಮೇಲೆ. ಅಧ್ಯಾಪಕರ ಬಲಪಕ್ಕದಲ್ಲಿ ಪ್ರತ್ಯೇಕವಾದ ಒಂದು ಬೆಂಚಿನ ಮೇಲೆ ನಾಲ್ವರು ವಿದ್ಯಾರ್ಥಿನಿಯರು ಕುಳಿತಿದ್ದಾರೆ. ನಮ್ಮ ಎಡಭಾಗಕ್ಕೆ ಆರೆಂಟು ಬೆಂಚುಗಳ ಸಾಲಿನಲ್ಲಿ ಇನ್ನಷ್ಟು ಹುಡುಗರು. ಆ ಪಕ್ಕಕ್ಕೆ ಬಾಗಿಲು, ಕಿಟಕಿ. ಇದ್ದಕ್ಕಿದ್ದಂತೆ ಆ ಪಕ್ಕದಿಂದಲೇ ಜಯಕಾರ - ಧಿಕ್ಕಾರಗಳ ಕೊಂಬು ಕಹಳೆ ಮೊಳಗಿತು. ನಾನು ಅತ್ತ ಕಣ್ಣು ತಿರುಗಿಸಿ ನೋಡಿದೆ. ಇತರರೂ ನೋಡುತ್ತಿದ್ದರು. ನನ್ನ ಕಣ್ಣಿಗೆ ರಾಜಶೇಖರನ್ ಮುಖ, ವ್ಯಗ್ರಗೊಂಡ ಮುಖ ಕಂಡಿತು. ಆತ ನನ್ನನ್ನು ಕಾಣುತ್ತಲೇ "ಲೇ

ಶಾಸ್ತ್ರೀ, ಎದ್ದು ಬಾರೋ ಈಚೆಗೆ" ಎಂದು ಕೂಗು ಹಾಕಿದ. ನಾನು ದಿಗ್ಭ್ರಾಂತನಾಗಿ ನೋಡುತ್ತಲೇ ಇದ್ದೆ. ಆ ಗಲಾಟೆಗೆ ಮರುಗಳಿಗೆಯಲ್ಲಿ ಕ್ಲಾಸು ಬರಖಾಸ್ತಾಯಿತು.

ಈ ಘಟನೆಯನ್ನು ನೆನೆಯುತ್ತಿರುವ ಈ ಗಳಿಗೆಯಲ್ಲಿ, ರಾಜಶೇಖರನ್ ಸಾರ್ವಜನಿಕ ಸೇವಾ ಕ್ಷೇತ್ರವನ್ನು, ಸಕ್ರಿಯ ರಾಜಕಾರಣವನ್ನು ಪ್ರವೇಶಿಸುವುದಕ್ಕೆ ಇದೆಲ್ಲ ಆತ ಪಡೆದ ತಾಲೀಮು, ಕೈಕೊಂಡ ಕಸರತ್ತು ಎಂದು ತೋರುತ್ತದೆ, "ಬೆಳೆಯುವ ಪೈರು ಮೊಳಕೆಯಲ್ಲೇ ಕಾಣುತ್ತದೆ".

ಈ ಮನೋಧರ್ಮ, ಕ್ರಿಯಾಶೀಲತೆಗಳನ್ನು ರಾಜಶೇಖರನ್ ಅವರ ಕಾಲೇಜು ಅಭ್ಯಾಸದ ದಿನಗಳಲ್ಲಿ ನಾನು ಇನ್ನೂ ನಿಚ್ಚಳವಾಗಿ ಕಂಡೆ. ನಾನು ನನ್ನ ಇಂಟರ್‌ಮೀಡಿಯೆಟ್ ಓದಿದ್ದು ಈಗಿನ ಯುವರಾಜ ಕಾಲೇಜಿನಲ್ಲಿ; ಆಗ ಅದು ಫಸ್ಟ್ ಗ್ರೇಡ್ ಕಾಲೇಜ್ ಎನ್ನಿಸಿತ್ತು (೧೯೪೮-೫೦). ಅವರು ಇಂಟರ್ ಎಲ್ಲಿ ಓದಿದರೋ ತಿಳಿಯದು. ಇಬ್ಬರೂ ಮೈಸೂರು ಮಹಾರಾಜ ಕಾಲೇಜಿನಲ್ಲಿ ಮುಂದಿನ ಓದಿಗೆ ಬಂದು ಸೇರಿದೆವು. ಅವರು ಬಿ.ಎ. ವಿದ್ಯಾರ್ಥಿ, ನಾನು ಬಿ.ಎ. ಆನರ್ಸ್ ವಿದ್ಯಾರ್ಥಿ. ನಮ್ಮ ಸ್ನೇಹ ಆತ್ಮೀಯತೆ ಒಡನಾಟಗಳ ನೆಲೆಯಲ್ಲಿ ಬೆಳೆಯಲು ನಮ್ಮ ಅಭ್ಯಾಸ ವಿಷಯಗಳು ಬೇರೆ ಬೇರೆ ಎಂಬುದು ಮಾತ್ರವೇ ಅಡ್ಡಿಯಾದ ಕಾರಣವೆಂದು ನಾನು ಹೇಳಲಾರೆ. ಅವರಿಗೆ ಅವರದೇ ಆದ ಧ್ಯೇಯಾದರ್ಶಗಳಿದ್ದವು. ಸಂಪರ್ಕಗಳಿದ್ದುವು, ಸ್ನೇಹಿತರಿದ್ದರು. ನನಗೆ ನನ್ನದೇ ಆದ ಲೋಕವೂ ಇತಿಮಿತಿಗಳೂ ಸ್ನೇಹವೂ ಇದ್ದುವು. ಆ ಕಾಲದ (೧೯೫೦-೫೩) ಮಹಾರಾಜ ಕಾಲೇಜು ಒಂದು ವಿಸ್ಮಯಕರ ವರ್ಣಮಯ ಪ್ರಪಂಚ ಎನ್ನುವಂತಿತ್ತು. ಎಲ್ಲಿ ನೋಡಿದರೂ ದಕ್ಷರಾದ, ಕಾರ್ಯತತ್ಪರರಾದ ಅಧ್ಯಾಪಕ ಪ್ರಾಧ್ಯಾಪಕ ವೃಂದ ಕಾಣುತ್ತಿತ್ತು. ನಾವು ವಿದ್ಯಾರ್ಥಿ ಚಳವಳಿಗಳನ್ನಾಗಲಿ, ಮುಷ್ಕರಗಳನ್ನಾಗಲಿ ಕಂಡವರಲ್ಲ. ಓದಾಯಿತು, ನಾವಾಯಿತು ಎನ್ನುವಂತಿದ್ದ ಕಾಲ ಅದು.

ನಾನು ರಾಜಶೇಖರನ್ ಅವರನ್ನು ಇಂದು ಸಕ್ರಿಯ ರಾಜಕಾರಣದಲ್ಲಿ ಪ್ರಸಿದ್ಧರಾದ ಕೆಲವರ ಒಡನಾಟದಲ್ಲಿಯೇ ವಿಶೇಷವಾಗಿ ಗುರುತಿಸುತ್ತಿದ್ದೆ. ಅಂದು ಎಸ್.ಎಂ.ಕೃಷ್ಣ, ತುಲಸೀದಾಸ್ ದಾಸಪ್ಪ, ಟಿ.ವಿ.ಶ್ರೀನಿವಾಸರಾವ್ ಇಂಥ ಕೆಲವರು ಅಲ್ಲಿ ವಿದ್ಯಾರ್ಥಿಗಳಾಗಿದ್ದರು. ರಾಜಶೇಖರನ್ ಅವರು ವಿಶೇಷವಾಗಿ ತುಲಸೀದಾಸ್ ದಾಸಪ್ಪನವರ ಒಡನಾಟದಲ್ಲಿ ಹೆಚ್ಚಾಗಿ ಓಡಾಡುತ್ತಿದ್ದರೆನ್ನುವುದು ನನ್ನ ನೆನಪು. ತುಲಸೀದಾಸರ ಬೈಕಿನ ಹಿಂದೆ ರಾಜಶೇಖರನ್ ಅವರನ್ನು ನಾನು ಕಾಣುತ್ತಿದ್ದೆ. ಆದರೆ ಕರುಬುತ್ತಿರಲಿಲ್ಲ. ಆಗ್ಗೆ ಇಬ್ಬರೂ ಹುರುಪಿನ ಯುವಕರು, ಖಾದಿಧಾರಿಗಳು, ಪಾಯಿಜಾಮ, ನೆಹರುಜುಬ್ಬ, ವೆಯಿಸ್ಟ್ ಕೋಟ್ ಧರಿಸಿ ಸುಳಿಯುವವರು, ಬಿರುಗಾಳಿಯಂತೆ ಸುತ್ತಾಡುವವರು. ಒಂದಲ್ಲ ಒಂದು ಪದನಿಮಿತ್ತ ವಿದ್ಯಾರ್ಥಿ ಸಂಘದ ವಾರ್ಷಿಕ ಚುನಾವಣೆಗಳಲ್ಲಿ ಸ್ಪರ್ಧಿಸಿ ಇವರೆಲ್ಲ ಮಾಡುತ್ತಿದ್ದ ಕೋಲಾಹಲ, ನಡಸುತ್ತಿದ್ದ ಹೋರಾಟ ನನ್ನ ಕಣ್ಣಿಗೆ ಕಟ್ಟಿದಂತಿದೆ. ಕಾಲೇಜು ಲೈಬ್ರರಿಯ ಹಿಂಬದಿಯಲ್ಲಿ ಇಕ್ಕಡೆಯ ಜಗಲಿಗಳ ಮೇಲೆ ನಿಂತು ದೇಶೀಯ ಧ್ವನಿವರ್ಧಕ ಬಳಸಿ

ಮತಯಾಚನೆ ಘೋಷಣೆಗಳನ್ನು ಮಾಡುವುದು, ಹ್ಯಾಂಡ್ ಬಿಲ್ ಹಂಚುವುದು ಹೀಗೆಲ್ಲ ಸಾಗರಕ್ಷೋಭೆ ನಡೆಸುತ್ತ ಇದ್ದ ಇವರೆಲ್ಲ ಅನಂತರದ ದಶಕಗಳಲ್ಲಿ ಸಕ್ರಿಯ ರಾಜಕಾರಣದಲ್ಲಿ ಮುಂಚೂಣಿಯ ಯೋಧರಾದರು. ಧುರೀಣರಾದುದು ಮಾತ್ರವಲ್ಲದೆ ಆಡಳಿತದ ಚುಕ್ಕಾಣಿ ಹಿಡಿದರು ಎನ್ನುವುದು ಅಭಿಮಾನಪಡಬೇಕಾದ ವಿಷಯ. ಇವರೆಲ್ಲ ಆಗ 'ಬೆಳೆಯುವ ಪೈರು'.

ಮಹಾರಾಜ ಕಾಲೇಜಿನಿಂದ ಹೊರಬಂದ ಮೇಲೆ ವಿಶಾಲವಾದ ಕಾರ್ಯಕ್ಷೇತ್ರಗಳನ್ನು ಅರಸುತ್ತ ಹಕ್ಕಿಗಳೆಲ್ಲ ಹಾರಿಹೋದುವು. ರಾಜಶೇಖರನ್ ದೆಹಲಿಯ ವಿಶ್ವವಿದ್ಯಾನಿಲಯದಲ್ಲಿ ಕಾನೂನು ವ್ಯಾಸಂಗಕ್ಕೆ ಹೋದರು. ನಾನು ಇದ್ದಲ್ಲಿಯೇ ಆನರ್ಸ್ ಮತ್ತು ಎಂ.ಎ. ಮುಗಿಸಿದೆ. ಅನಂತರದ ವರ್ಷಗಳಲ್ಲಿ ನಮ್ಮ ನಡುವೆ ಈ ಕಥನದ ಆರಂಭದಲ್ಲಿ ನಿರೂಪಿಸಿದ ಸಂದರ್ಭ ಹೊರತಾಗಿ ಯಾವುದೇ ಸಂಪರ್ಕ ಉಂಟಾಗಲಿಲ್ಲ.

ಅನಂತರ ಎಂ.ವಿ.ರಾಜಶೇಖರನ್ ಹೇಗೆ ಅಭ್ಯುದಯ ಪಥದಲ್ಲಿ ನಡೆದು ಬಂದ ದಾರಿಯ ಕಡೆಗೆ ಕಣ್ಣು ಹೊರಳಿಸದೆ ಸಾಗುತ್ತ ನಡೆದರೆನ್ನುವುದು ಲೋಕ ಗಮನಿಸಿರುವ ಸಂಗತಿ. ಆಗಾಗ ನನ್ನ ಗಮನಕ್ಕೆ ಅವರ ಚಟುವಟಿಕೆಗಳೂ ಸೋಲು-ಗೆಲುವುಗಳೂ ಸಾಧನೆ-ಸಾಹಸಗಳೂ ಅವರಿವರ ಮೂಲಕ ಅಷ್ಟಿಷ್ಟು ತಿಳಿಯುತ್ತಿದ್ದಿತು. ಮುಖ್ಯವಾಗಿ ಕೃಷಿಕರ ಸುಸ್ಥಿತಿಗೆ ಅವರು ತುಂಬ ಶ್ರಮಿಸುತ್ತಿದ್ದಾರೆ, ಲೋಕಸಭಾ ಸದಸ್ಯರಾಗಿದ್ದಾರೆ, ದೇಶವಿದೇಶಗಳಲ್ಲಿ ಅವರು ಸಂಚರಿಸುತ್ತಿರುತ್ತಾರೆ, ಹೀಗೆಲ್ಲ ಕೇಳುತ್ತಿದ್ದೆ. ಅವರು ರಣರಂಗದಂತೆ ಅಥವಾ ಕುರುಕ್ಷೇತ್ರದಂತೆ ಗೋಚರಿಸುವ ಇಂದಿನ ರಾಜಕೀಯದ ನೆಲೆ ನೆಲಸುಗಳಲ್ಲಿ ಹೆಚ್ಚಾಗಿ ಹಾರಾಡಿದ್ದು, ಕೂಗಾಡಿದ್ದು ನನಗೆ ಕಾಣಿಸಲಿಲ್ಲ. ಅಭಿವೃದ್ಧಿಶೀಲ ರಚನಾತ್ಮಕ ಕಾರ್ಯಗಳಲ್ಲೇ ತಮ್ಮನ್ನು ತೊಡಗಿಸಿಕೊಂಡಿರುವ ಕಾರಣವಾಗಿಯೋ ಪ್ರಮುಖ ಜನಾಕರ್ಷಣೆಯ ನೋಟಗಳಲ್ಲಿ, ಕೂಟಗಳಲ್ಲಿ ನಾನು ಅವರನ್ನು ಹೆಚ್ಚಾಗಿ ಕಂಡಿಲ್ಲ. ಆಶ್ಚರ್ಯವೆಂದರೆ, ದೂರದರ್ಶನದ ದೃಶ್ಯಾವಳಿಯಲ್ಲಿ ಸಹ ಅವರನ್ನು ಸರಿಯಾಗಿ ಕಾಣದೆ ನಿರಾಶೆಗೊಂಡಿದ್ದೇನೆ. ಮಾನ್ಯ ಎಸ್.ಎಂ.ಕೃಷ್ಣರ ಸರ್ಕಾರ ಅಸ್ತಿತ್ವಕ್ಕೆ ಬಂದ ಮೇಲೆ ಎಂ.ವಿ.ರಾಜಶೇಖರನ್ ಅವರು ಅವರ ಮಂತ್ರಿಮಂಡಲದಲ್ಲಿರುತ್ತಾರೆ ಎಂಬುದಾಗಿ ನಾನು ನಿರೀಕ್ಷಿಸಿದ್ದೆ. ರಾಜಕೀಯ ನನಗೆ ಅರ್ಥವಾಗುವ ವಿಷಯವಲ್ಲ; ಆದರೂ ನನ್ನ ನಿರೀಕ್ಷೆ ಅಸ್ವಾಭಾವಿಕವೆಂದು ನಾನು ಭಾವಿಸುವುದಿಲ್ಲ. ಈಗ ಅವರು ರಾಜ್ಯಸಭಾ ಸದಸ್ಯರಾಗಿದ್ದಾರೆ, ಮುಂದೆ ಖಂಡಿತವಾಗಿ ಮಂತ್ರಿಯಾಗುತ್ತಾರೆ ಎಂದು ನಂಬಿದ್ದೇನೆ. ಒಳ್ಳೆಯ ನಂಬಿಕೆಗಳು ಹುಸಿ ಹೋಗುವುದಿಲ್ಲ ಅಥವಾ ಅವರು ಅದಕ್ಕಿಂತ ಬೇರೆಯಾದ ಸೇವಾವಕಾಶಗಳನ್ನು ಸ್ಥಾನಮರ್ಯಾದೆಗಳನ್ನು ಅಪೇಕ್ಷಿಸುವರೇನೋ, ನನಗೆ ತಿಳಿಯದು. ಒಂದು ಕಾಲದ ರಾಜಕಾರಣದಲ್ಲಿ ಗಣ್ಯರಾಗಿದ್ದ, ನಮಗಿಬ್ಬರಿಗೂ ಗುರುಗಳಾಗಿದ್ದ, ಪೂಜ್ಯ ಎಸ್.ಕರಿಯಪ್ಪನವರು ಮಂತ್ರಿ ಪದವಿಗೆ ಆಸೆ ಪಡದೆ ಶೈಕ್ಷಣಿಕ ಕ್ಷೇತ್ರದ, ವಿಶೇಷವಾಗಿ ಗ್ರಾಮಾಂತರ ಪ್ರದೇಶದ ಶೈಕ್ಷಣಿಕ ವಲಯದ ಅಭಿವೃದ್ಧಿಗಾಗಿ ತಮ್ಮ ಜೀವನವನ್ನು ಮುಡುಪು ಮಾಡಿದವರು. ಅವರನ್ನು

ರಾಜಶೇಖರನ್ ತಮ್ಮ ಆದರ್ಶವಾಗಿ ಇಟ್ಟುಕೊಂಡಿರುವರೋ ನನಗೆ ತಿಳಿಯದು. ಅವರಿಗೆ ಯಶಸ್ಸು ಕೋರುವುದು ಔಪಚಾರಿಕ. ಅವರು ಈಗಾಗಲೇ ವರ್ಚಸ್ವಿಗಳು, ಯಶಸ್ವಿಗಳು.

ಒಬ್ಬ ಹಳೆಯ ಗೆಳೆಯನನ್ನು ನೆನೆಯುವುದಕ್ಕೆ ನಿಮಿತ್ತವಾದ ಈ ಶುಭ ಸಂದರ್ಭ, ಈ ಎಪ್ಪತ್ತೈದರ ಅಭಿನಂದನೆ, ಅವರಿಗೆ ಇನ್ನೂ ಒಳ್ಳೆಯದನ್ನು, ಮತ್ತೂ ಒಳ್ಳೆಯದನ್ನು ತರಲಿ. ನನ್ನಂಥವರು ಸಂತೋಷಿಸುವುದಕ್ಕೆ ಇಂತಹ ಸಂದರ್ಭಗಳು ಇನ್ನೂ ಮತ್ತೂ ಒದಗುತ್ತಿರಲಿ ಎಂಬುದಾಗಿ ಹಾರೈಸುತ್ತೇನೆ.

***

# ಉಜ್ವಲ ದೇಶಾಭಿಮಾನಿ

**ವೆಂಕಟಾಚಲಪತಿಶೆಟ್ಟಿ**

ಕನಕಪುರ ನನ್ನ ಹುಟ್ಟೂರು. ರಾಜಶೇಖರನ್‌ರವರ ಹುಟ್ಟೂರು ಕನಕಪುರದ ಮರಳವಾಡಿ. ನಾವಿಬ್ಬರೂ ಪ್ರೌಢಶಾಲೆಯಲ್ಲಿ ಸಹಪಾಠಿಗಳು. ಜನತಾ ಶಿಕ್ಷಣ ಸಂಸ್ಥೆಯ ಕರಿಯಪ್ಪನವರು ನಮ್ಮಿಬ್ಬರಿಗೂ ಪಾಠ ಹೇಳಿದ ಗುರುಗಳು. ಎಲ್.ಎಸ್. ನಾರಾಯಣರಾವ್, ಕೆ.ಎನ್.ಸುಬ್ರಮಣ್ಯಂ, ರಘೋತ್ತಮರಾವ್ ಮುಂತಾದ ಅಧ್ಯಾಪಕರಿದ್ದರು. ವಿಶೇಷವಾಗಿ ಕರಿಯಪ್ಪನವರು ಇಂಗ್ಲಿಷ್ ಗ್ರಾಮರ್ ಕಲಿಸಿಕೊಟ್ಟಿದ್ದಾರೆ. ೧೯೪೪ರಿಂದ ೧೯೪೭ರವರೆಗೆ ನಮ್ಮ ವಿದ್ಯಾಭ್ಯಾಸ ನಡೆಯಿತು. ಆಗ ರಾಜಶೇಖರನ್ ಅವರು ದೇಗುಲಮಠದಲ್ಲಿದ್ದರೆಂದು ಕಾಣುತ್ತದೆ. ಆಗ ಅವರು ಸೌಮ್ಯ ಸ್ವಭಾವದವರು. ತಾವಾಯಿತು, ತಮ್ಮ ಕೆಲಸವಾಯಿತು, ಚರ್ಚಾಸ್ಪರ್ಧೆ ಮೊದಲಾದ ಪಠ್ಯೇತರ ಚಟುವಟಿಕೆಗಳಲ್ಲೂ ಅವರು ಭಾಗವಹಿಸುತ್ತಿದ್ದರು. ವಿದ್ಯಾರ್ಥಿಗಳ ನಾಯಕರೂ ಕೂಡ ಅವರಾಗಿದ್ದರು.

ನಮ್ಮ ದೊಡ್ಡಪ್ಪ ವೆಂಕಟಾಚಲಪತಿ ಶೆಟ್ಟಿಯವರು. ನಮ್ಮ ತಂದೆ ಸೂರ್ಯನಾರಾಯಣ ಶೆಟ್ಟಿ. ತಲೆತಲಾಂತರದಿಂದ ನಮ್ಮ ಕುಟುಂಬ ಕನಕಪುರದಲ್ಲಿ ಆಭರಣಗಳ ವ್ಯಾಪಾರದಲ್ಲಿ ತೊಡಗಿದೆ. ನಮ್ಮ ದೊಡ್ಡಪ್ಪ ಸ್ವಾತಂತ್ರ್ಯ ಹೋರಾಟಗಾರರು. ಎರಡು ಸಾರಿ ಸ್ವಾತಂತ್ರ್ಯ ಹೋರಾಟದಲ್ಲಿ ಜೈಲಿಗೆ ಹೋಗಿದ್ದರು. ಡಿ.ರಾಮಯ್ಯ, ಮುದ್ದಪ್ಪ, ತಿಮ್ಮಪ್ಪರೆಡ್ಡಿ, ಸುಬ್ರಹ್ಮಣಿಯಂ ಅಯ್ಯರ್, ಎಸ್.ಕರಿಯಪ್ಪ ಮೊದಲಾದವರು ಸ್ವಾತಂತ್ರ್ಯ ಹೋರಾಟದಲ್ಲಿ ಅವರ ಜೊತೆಗಾರರು. ಜೈಲಿನಲ್ಲಿದ್ದಾಗಲೇ ಅವರಿಗೆ ಕೆ.ಸಿ.ರೆಡ್ಡಿ, ವಿ.ವೆಂಕಟಪ್ಪ, ಕೆಂಗಲ್ ಹನುಮಂತಯ್ಯ, ನಿಜಲಿಂಗಪ್ಪ ಮೊದಲಾದವರ ಪರಿಚಯ ಇತ್ತು. ಸ್ವಾತಂತ್ರ್ಯಾನಂತರ ಅವರು ಕನಕಪುರ ಪುರಸಭೆಯ ಅಧ್ಯಕ್ಷರಾಗಿದ್ದರು. ಒಮ್ಮೆ ಅವರು ೧೯೫೬-೫೭ರಲ್ಲಿ ಮುಖ್ಯಮಂತ್ರಿ ನಿಜಲಿಂಗಪ್ಪನವರನ್ನು ಕಂಡು ನಮ್ಮೂರಿಗೊಂದು ಪ್ರೌಢಶಾಲೆ ಕೊಡಿ ಎಂದು ಪ್ರಾರ್ಥಿಸಿದರು. ಹಳೆಯ ಪರಿಚಯ ಅಲ್ಲವೆ? 'ಅಯ್ಯೋ ಬಿಡಿ. ಹೈಸ್ಕೂಲ್ ಏನು ನಮ್ಮನೆ ಹೆಣ್ಣನ್ನು ನಿಮ್ಮೂರಿಗೆ ಕೊಡ್ತಿದ್ದೇವೆ',

ಎಂದರಂತೆ. ಅಷ್ಟೊತ್ತಿಗಾಗಲೇ ರಾಜಶೇಖರನ್ ಅವರ ಜೊತೆ ಗಿರಿಜಾ ಅವರ ವಿವಾಹದ ಬಗ್ಗೆ ಮಾತುಕತೆ ನಡೆದಿತ್ತು. ದೊಡ್ಡಪ್ಪ ಕೂಡ ರಾಜಶೇಖರನ್ ಅವರ ಮನೆತನದ ವಿಚಾರವನ್ನು ನಿಜಲಿಂಗಪ್ಪನವರಿಗೆ ಹೇಳಿದರು. ಚಿತ್ರದುರ್ಗದಲ್ಲಿ ಅದ್ದೂರಿಯಿಂದ ಮದುವೆ ನಡೆಯಿತು. ನಿಜಲಿಂಗಪ್ಪನವರ ಮನೆಯವರೆಲ್ಲಾ ಮರಳವಾಡಿಗೆ ಬಂದಿದ್ದರು. ಇಡೀ ಕನಕಪುರ ತಾಲ್ಲೂಕಿನಲ್ಲಿ ರಾಜಶೇಖರ್ ಅವರ ಬಗ್ಗೆ ಸದಭಿಪ್ರಾಯವಿತ್ತು. ಅವರ ತಾತ ವೆಂಕಟಾಚಲಪತಿ ಶೆಟ್ಟಿ ತುಂಬಾ ಶಿಸ್ತು ಹಾಗು ಧಾರ್ಮಿಕ ಶ್ರದ್ಧೆಯುಳ್ಳವರು. ಅವರ ತಂದೆ ಕೂಡ ಉತ್ತಮ ಶಿಕ್ಷಕರಾಗಿ ಹೆಸರು ಗಳಿಸಿದ್ದರು. ಶ್ರೀಮಂತ ಜಮೀನ್ದಾರ ಕುಟುಂಬ ಅವರದು. ರಾಜಶೇಖರನ್ ವಿದ್ಯಾರ್ಥಿ ದಿಸೆಯಿಂದಲೂ ಕಾಂಗ್ರೆಸ್ಸಿನ ಉದಾತ್ತ ಧ್ಯೇಯಗಳಿಗೆ ತಮ್ಮನ್ನು ತೆತ್ತುಕೊಂಡಿದ್ದರು. ಇಂತಹ ಆದರ್ಶ ಅವರಲ್ಲಿ ಮೂಡಲು ಮೂರು ಜನ ವ್ಯಕ್ತಿಗಳು ಕಾರಣರಾಗಿದ್ದಾರೆ. ದೇಗುಲಮಠದ ಪೂಜ್ಯ ಶ್ರೀ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಸ್ವಾತಂತ್ರ್ಯ ಹೋರಾಟಗಾರರಾದ ಕರಿಯಪ್ಪನವರು ಹಾಗು ತತ್ತ್ವನಿಷ್ಠರಾದ ನಿಜಲಿಂಗಪ್ಪನವರು. ನಿಜಲಿಂಗಪ್ಪನವರ ದೂರದೃಷ್ಟಿ ಎಂತಹದೆಂಬುದನ್ನು ಮತ್ತೆ ಮತ್ತೆ ವಿವರಿಸಿ ಹೇಳಬೇಕಾಗಿಲ್ಲ. ಇಂದು ಬೆಂಗಳೂರು ಅಂತಾರಾಷ್ಟ್ರೀಯ ಮಾನ್ಯತೆ ಪಡೆದ ರಾಜಧಾನಿಯಾಗಬೇಕಿದ್ದರೆ ಅದಕ್ಕೆ ನಿಜಲಿಂಗಪ್ಪನವರು ಮೂಲ ಕಾರಣಕರ್ತರು. ಬಿರ್ಲಾ, ಕಿರ್ಲೋಸ್ಕರ್, ಗೋಯಾಂಕಾ ಮೊದಲಾದವರು ಕರ್ನಾಟಕದಲ್ಲಿ ಉದ್ಯಮ ಸ್ಥಾಪಿಸಲು ಪ್ರೇರಣೆ ಕೊಟ್ಟವರೇ ಶ್ರೀ ನಿಜಲಿಂಗಪ್ಪನವರು. ಇಂತಹ ಸಮಗ್ರ ಅಭಿವೃದ್ಧಿಯ ಕಲ್ಪನೆ ನಿಜಲಿಂಗಪ್ಪನವರ ನಂತರ ರಾಜಶೇಖರನ್ ಅವರಲ್ಲಿ ಇತ್ತೆಂದರೆ, ಮಿತ್ರರನ್ನು ಹೊಗಳುತ್ತಿದ್ದಾನೆಂದು ಯಾರೂ ಭಾವಿಸಬಾರದು. ಅವರು ದೇಶ ವಿದೇಶಗಳಲ್ಲಿ ಸಂಚರಿಸಿ ಸಾಕಷ್ಟು ಅನುಭವ ಪಡೆದಿದ್ದಾರೆ. ಅದರ ಜೊತೆ ಕರ್ನಾಟಕದ ಹಳ್ಳಿಗಾಡಿನ ಸಮಸ್ಯೆಗಳನ್ನು ಚೆನ್ನಾಗಿ ಅರಿತಿದ್ದಾರೆ. ಎರಡನ್ನೂ ಸಮನ್ವಯಗೊಳಿಸಿ, ತಮ್ಮದೇ ಆದ ವಿಚಾರಗಳನ್ನು ಪ್ರತಿಪಾದಿಸುವ ಮೇಧಾವಿಗಳು ಅವರು. ೧೯೯೯ರ ಚುನಾವಣೆಯ ಸಂದರ್ಭದಲ್ಲಿ ಬಸವನಗುಡಿಯ ಗೋಖಲೆ ವಿಚಾರ ಸಂಸ್ಥೆಯಲ್ಲಿ ಕೆಲವು ಹಿರಿಯರು ಎಲ್ಲಾ ರಾಜಕೀಯ ಪಕ್ಷಗಳ ನಾಯಕರನ್ನು ಕರೆಸಿ, ಅವರ ವಿಚಾರಗಳನ್ನು ಜನರಿಗೆ ತಲುಪಿಸುವ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ಅದಕ್ಕೆ ನಾನೂ ಹೋಗಿದ್ದೆ. ಕಾಂಗ್ರೆಸ್ ಪರವಾಗಿ ಎಂ.ವಿ.ರಾಜಶೇಖರನ್ ಬಂದಿದ್ದರು. ಏಕೋ ಗೊತ್ತಿಲ್ಲ, ಅವರು ಅಂದು ತಡವಾಗಿ ಕಾರ್ಯಕ್ರಮಕ್ಕೆ ಬಂದರು. ಕಾಂಗ್ರೆಸ್‌ನ ಸಿದ್ಧಾಂತಗಳನ್ನು ಚೆನ್ನಾಗಿ ವಿವರಿಸಿದ ರಾಜಶೇಖರನ್‌ರವರು ಈ ರಾಷ್ಟ್ರವನ್ನು ಕಾಡುತ್ತಿರುವ ಭ್ರಷ್ಟಾಚಾರ ಹಾಗು ಜಾತೀಯ ಸಮಸ್ಯೆಗಳನ್ನು ಮನಮುಟ್ಟುವಂತೆ ವಿವರಿಸಿದರು. ನಾವೆಲ್ಲ ರಾಜಕೀಯದಿಂದ ದೂರ, ನಾವಾಯಿತು ನಮ್ಮ ವ್ಯವಹಾರವಾಯಿತು. ಆದರೆ ರಾಜಶೇಖರನ್ ಅವರ ವಿಶ್ಲೇಷಣೆ ಕಂಡಾಗ ನನಗೆ ಹೊಸ ಲೋಕದ ದರ್ಶನವಾಯಿತು. ಇವರೇ ನನ್ನ ಪ್ರೌಢಶಾಲೆಯ ಸಹಪಾಠಿ ಅನ್ನುವಷ್ಟು ಆಶ್ಚರ್ಯವಾಯಿತು. ಅಂದು ರಾಜಶೇಖರನ್ ಅವರು ಮಹಾದಾರ್ಶನಿಕರಂತೆ ಬೆಂಗಳೂರು ನಗರದ ಹಿರಿಯರ ಮುಂದೆ ದೇಶದ ಜ್ವಲಂತ

ಸಮಸ್ಯೆಗಳನ್ನು ಬಿಚ್ಚಿಟ್ಟರು. ಆಗ ಅವರ ಬಗ್ಗೆ ನನಗೆ ತುಂಬಾ ಗೌರವ ಮೂಡಿತು. ಲಾಲ್‌ಬಾಗ್‌ನಲ್ಲಿ ವಾಕಿಂಗ್ ಹೋಗಬೇಕಾದರೆ ನಾನೇ ಅವರನ್ನು ಮಾತನಾಡಿಸಿ ಅವರ ಭಾಷಣದ ಬಗ್ಗೆ ಅಭಿನಂದನೆ ಹೇಳಿದೆ. ಅವರು ಕಾಂಗ್ರೆಸ್ ಪಕ್ಷದ ಪರವಾಗಿ ಚುನಾವಣಾ ಪ್ರಚಾರದ ಭಾಷಣ ಪ್ರಾರಂಭಿಸಿದರು. ಅನಂತರ ನಿಷ್ಪಕ್ಷಪಾತ ದೇಶಾಭಿಮಾನಿಯಾಗಿ ಶ್ರೋತೃಗಳ ಮನದಲ್ಲಿ ಉಳಿದರು.

ರಾಜಶೇಖರನ್ ಅವರ ತಮ್ಮ ಕೀರ್ತಿಹಾಸನ್ ಕೂಡ ಆಗಾಗ್ಗೆ ನನಗೆ ಸಿಗುತ್ತಿರುತ್ತಾರೆ. ನಾನು ಆಗೆಲ್ಲಾ ಶ್ರೀ ರಾಜಶೇಖರನ್ ಆರೋಗ್ಯ ವಿಚಾರಿಸಿಕೊಳ್ಳುತ್ತಿರುತ್ತೇನೆ. ರಾಜಶೇಖರನ್ ಅವರಿಗೆ ದೂರವಾಣಿ ಮೂಲಕ ತೊಂದರೆ ಕೊಡಲು ಹೋಗುವುದಿಲ್ಲ. ಅವರು ಸದಾ ಜನರ ಹಿತಕ್ಕಾಗಿ ದುಡಿಯುವ ವ್ಯಕ್ತಿ ಎಂಬುದು ನನಗೆ ಗೊತ್ತು.

ವೈಯಕ್ತಿಕ ಶ್ರಮವನ್ನು ಲೆಕ್ಕಿಸದೇ ದೇಶ ವಿದೇಶಗಳನ್ನು ಸುತ್ತುತ್ತಾ ಇರುತ್ತಾರೆ. ಎಲ್ಲಾ ಕಡೆ ರೈತರನ್ನು ಕುರಿತು, ರೈತರ ಬಗ್ಗೆ ಅಭಿಮಾನದ ಮಾತುಗಳನ್ನು ಹೇಳುತ್ತಾರೆ. ಕನಕಪುರದ ಮರಳವಾಡಿಯಿಂದ ಬಂದ ಇವರು ತಮ್ಮ ಪ್ರತಿಭೆ ಮತ್ತು ಸ್ವಪ್ರಯತ್ನದಿಂದ ಎಲ್ಲಾ ಪ್ರಜ್ಞಾವಂತ ಜನರ ಮೆಚ್ಚುಗೆಗೆ ಹತ್ತಿರವಾಗಿರುವುದು ನನಗೆ ಹೆಮ್ಮೆಯ ವಿಚಾರ. ಇದು ನಮ್ಮ ತಾಲ್ಲೂಕಿನ ಜನ ಅಭಿಮಾನಪಡುವ ವಿಷಯ.

***

# ಕಳಂಕರಹಿತ ರಾಜಕಾರಣಿ

ಕೆ.ಕೆ. ಮೂರ್ತಿ

'ಯಾವ ದೇಶದಿಂದ ಬಂದಿರಿ'? ತಮಾಷೆಗಾಗಿ ಶ್ರೀ ರಾಜಶೇಖರನ್ ರವರನ್ನು ಅವರ ಮಿತ್ರರು ಕೇಳುವ ಪ್ರಶ್ನೆ.

ಎಪ್ಪತ್ತೈದು ವಸಂತಗಳನ್ನು ಕಂಡಿರುವ ಶ್ರೀ ರಾಜಶೇಖರನ್ ನೋಡದ ದೇಶವಿಲ್ಲ. ಸಂಪರ್ಕ ಮಾಡದ, ಗ್ರಾಮೀಣಾಭಿವೃದ್ಧಿ ಮತ್ತು ಕೃಷಿ ಸುಧಾರಣೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರದ ಸಂಸ್ಥೆಗಳಿಲ್ಲ. ಅವರು ಭಾಗವಹಿಸದ ಪ್ರಮುಖ ಅಂತರರಾಷ್ಟ್ರೀಯ ಸಭೆ, ಸಮ್ಮೇಳನಗಳಿಲ್ಲ.

ವಯಸ್ಸಿನ ಭಾರ ಅಥವಾ ದೇಹದ ದಣಿವನ್ನು ಲೆಕ್ಕಿಸದೆ ದೇಶ ವಿದೇಶಗಳ ಮೂಲೆ ಮೂಲೆಗಳನ್ನು ಶ್ರೀ ರಾಜಶೇಖರನ್ ಸಂದರ್ಶಿಸುತ್ತಿರುವುದು ಅವರ ಜೀವನ ಗುರಿಯ ಸಾಧನೆಗಾಗಿ. ಆ ಗುರಿ ಗ್ರಾಮೀಣ ಭಾರತದ ಜೀವನ ಹಸನಾಗಬೇಕು ಮತ್ತು ಸಂಮೃದ್ಧವಾಗಬೇಕು ಎನ್ನುವುದು. ಅವರ ಉತ್ಸಾಹ ಮತ್ತು ಅವರ ಬದ್ಧತೆ ಎಂತಹ ಯುವಕರನ್ನೂ ನಾಚಿಸುತ್ತದೆ.

ಹೊರದೇಶಗಳಲ್ಲಿ ಅದರಲ್ಲೂ ಏಷಿಯಾ ಖಂಡದ ನೆರೆ ರಾಷ್ಟ್ರಗಳಲ್ಲಿ ಶ್ರೀ ರಾಜಶೇಖರನ್ ಚಿರಪರಿಚಿತರಾಗಿರುವುದು ಅವರು ಸ್ಥಾಪಿಸಿರುವ ಏಷಿಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಮೂಲಕ. ದಶಕಗಳ ಹಿಂದೆ ದೇಶದ ಆಡಳಿತಗಾರರ ದೃಷ್ಟಿಯನ್ನು ಗ್ರಾಮೀಣಾಭಿವೃದ್ಧಿ ಕಡೆ ಸೆಳೆದ ಶ್ರೀ ರಾಜಶೇಖರನ್‌ರವರನ್ನು ಒಂದು ರೀತಿಯಲ್ಲಿ ಗ್ರಾಮೀಣಾಭಿವೃದ್ಧಿ ಆಂದೋಳನದ ಹರಿಕಾರ ಅಥವಾ ಪ್ರವರ್ತಕ ಎಂದರೆ ತಪ್ಪಾಗಲಾರದು.

ಶ್ರೀ ರಾಜಶೇಖರನ್‌ರವರ ಇನ್ನೊಂದು ಮುಖ ಅವರ ಕಳಂಕರಹಿತ ರಾಜಕೀಯ ಜೀವನ. ಇಂದಿನ ಕಲುಷಿತ ರಾಜಕೀಯ ವಾತಾವರಣದಲ್ಲಿ ಒಬ್ಬ ರಾಜಕಾರಣಿ ಸಮಾಜದ ಮತ್ತು ತನ್ನ ಸಹೋದ್ಯೋಗಿಗಳ ಮೆಚ್ಚಿಗೆ ಗಳಿಸುವುದು ದುಸ್ಸಾಧ್ಯ.

ಮರಳವಾಡಿಯಿಂದ ಮನಿಲಾವರೆಗೆ ತನ್ನ ಪ್ರತಿಭೆಯನ್ನು ಬೀರಿದ ಕನಕಪುರದ ಗ್ರಾಮೀಣ ಭಾಗದ ಒಬ್ಬ ಪೋರ, ರಾಜ್ಯ ಮತ್ತು ರಾಷ್ಟ್ರಮಟ್ಟದ

ರಾಜಕೀಯ ಕ್ಷೇತ್ರದಲ್ಲಿ 'ಅಜಾತಶತ್ರು'ವೂ ಆಗಿ ರೂಪುಗೊಂಡಿರುವುದು ರಾಜಶೇಖರನ್‌ರವರ ಹಿರಿಮೆ. ಶ್ರೀ ಬಸವಣ್ಣನವರು ಬೋಧಿಸಿದ ತತ್ತ್ವಗಳಿಂದ ಪ್ರಭಾವಿತರಷ್ಟೇ ಅಲ್ಲ ಅವನ್ನು ಜೀವನದಲ್ಲಿ ಅನುಸರಣೆಮಾಡುವ ಮೂಲಕ ರಾಜಶೇಖರನ್ ವಿಶಿಷ್ಟ ವ್ಯಕ್ತಿತ್ವ ರೂಪಿಸಿಕೊಂಡಿದ್ದಾರೆ, ಜನಾನುರಾಗಿಗಳಾಗಿದ್ದಾರೆ. ಅವರ ಸರಳತೆ, ಸೌಜನ್ಯತೆ ಮತ್ತು ಮೃದು ಮಾತುಗಳಿಗೆ ಮಾರುಹೋಗದವರೇ ಇಲ್ಲ.

ಶ್ರೀ ರಾಜಶೇಖರನ್‌ರವರು ಮಂತ್ರಿ ಪದವಿ ಅಲಂಕರಿಸದೆ ಇರಬಹುದು. ಆ ಪದವಿ ಪಡೆಯುವುದು ಅವರಿಗೆ ಕಷ್ಟವಾಗಿರಲಿಲ್ಲ. ಅವರು ಎಂದೂ ಅಧಿಕಾರ ಅರಸಿಹೋದವರಲ್ಲ. ಅಥವಾ ರಾಷ್ಟ್ರನಾಯಕ ದಿವಂಗತ ಸಿದ್ಧವನಹಳ್ಳಿ ನಿಜಲಿಂಗಪ್ಪನವರ ಅಳಿಯಂದಿರಾಗಿ ಅವರ ಮಾವನವರ ಹೆಸರಿನ ಏಣಿಯನ್ನು ಅವಲಂಬಿಸಿದವರಲ್ಲ ; ಅಥವಾ ಮಹಾನ್ ನಾಯಕರ ಸಾನ್ನಿಧ್ಯವಿದ್ದರೂ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಪ್ರಗತಿಗಾಗಿ ಎಂದೂ ಉಪಯೋಗಿಸಿದವರಲ್ಲ. ಎಂತಹ ಪರಿಸ್ಥಿತಿಯಲ್ಲೂ ಅವರ ಸಂಯಮ ಅವರನ್ನು ಕೈಬಿಟ್ಟಿಲ್ಲ.

ಕರ್ನಾಟಕದ ಉಭಯ ಸದನಗಳಲ್ಲೂ ಮತ್ತು ರಾಷ್ಟ್ರದ ಸಂಸತ್‌ನ ಎರಡೂ ಸದನಗಳಲ್ಲೂ ಸದಸ್ಯತ್ವ ಪಡೆದಿರುವ ಅತಿ ವಿರಳ. ರಾಜಕಾರಣಿಗಳ ಸಾಲಿನಲ್ಲಿ ಶ್ರೀ ರಾಜಶೇಖರನ್ ವಿಜೃಂಭಿಸುತ್ತಾರೆ. ಅವರು ಯಾವ ಸದನದ ಸದಸ್ಯರಾದರೂ ಅವರ ಬದ್ಧತೆ ಮತ್ತು ಅವರ ವಿಪುಲವಾದ ಜ್ಞಾನಭಂಡಾರ ಅವರ ಸದಸ್ಯತ್ವಕ್ಕೆ ಮೆರುಗನ್ನಿತ್ತಿವೆ.

ನಾನು ಶ್ರೀ ರಾಜಶೇಖರನ್‌ರವನ್ನು ಯುವ ರಾಜಕಾರಣಿಯಾಗಿ, ಕಾಂಗ್ರೆಸ್ ಸಂಸ್ಥೆಯ ಪದಾಧಿಕಾರಿಯಾಗಿ, ರೈತ ಸಂಘಟನೆಗಳು ಹಾಗೂ ಸಂಸ್ಥೆಗಳ ಮುಂಚೂಣಿಯ ನೇತಾರರಾಗಿ ಕಂಡಿದ್ದೇನೆ. ಅವರ ಕಾರ್ಯವೈಖರಿಗೆ, ಅವರ ಸೌಜನ್ಯಕ್ಕೆ ಮತ್ತು ಗಾಂಧೀಜಿಯಿಂದ ಪ್ರಭಾವಿತವಾದ ಅವರ ಆದರ್ಶಗಳಿಗೆ ಮಾರುಹೋಗಿದ್ದೇನೆ. ಅವರ ಹಿತೈಷಿಗಳು ಶ್ರೀ ರಾಜಶೇಖರನ್‌ರವರಿಗೆ ಎಪ್ಪತ್ತೈದು ವರ್ಷ ತುಂಬಿದ ಸಂದರ್ಭದಲ್ಲಿ ಏರ್ಪಡಿಸಿರುವ ಸಮಾರಂಭ ಯಶಸ್ವಿಯಾಗಿ ನಡೆಯಲಿ ಮತ್ತು ನಾಡಿಗೆ ಶ್ರೀ ರಾಜಶೇಖರನ್‌ರವರ ಸೇವೆ ಹಲವಾರು ವರ್ಷಗಳು ನಿರಂತರವಾಗಿ ಮುಂದುವರೆಯಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

***

# ಸಭ್ಯ ರಾಜಕಾರಣಿ

ಕೆ.ರಾಮಚಂದ್ರ

ಸಾವಿರದ ಒಂಬೈನೂರ ನಲವತ್ತೈದು ಇರಬಹುದು. ಶ್ರೀ ಎಂ.ವಿ.ರಾಜಶೇಖರನ್ ನಾನು ಇಂತಹ ಕಾಲೇಜಿನಲ್ಲಿ ವಿದ್ಯಾರ್ಥಿ ಎಂದು ನನ್ನನ್ನು ಪರಿಚಯಿಸಿಕೊಂಡರು. ಅಷ್ಟು ಹೊತ್ತಿಗಾಗಲೇ ನನಗವರ ಮನೆತನದ ಬಗೆಗೆ ಪರಿಚಯವಿದ್ದುದರಿಂದ ಹೆಚ್ಚೇನೂ ಹೇಳದೆ ಜೊತೆಯಾದೆವು. ೧೯೪೭ರಲ್ಲಿ ಭಾರತ ದೇಶಕ್ಕೆ ಜವಾಬ್ದಾರಿ ಸರ್ಕಾರ ಬಂದಿತು. ಮೈಸೂರು ಸಂಸ್ಥಾನವನ್ನೂ ಭಾರತದ ಒಕ್ಕೂಟ ವ್ಯವಸ್ಥೆಗೆ ಸೇರಿಸುವ ಪ್ರಯತ್ನದಲ್ಲಿ ನಾವಿದ್ದೆವು. ೧೯೪೨ರ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿ ಚಳವಳಿಯ ಕಷ್ಟ-ನಷ್ಟ ಅನುಭವಿಸಿದ್ದ ನನಗೆ ಮೈಸೂರಿನ ಈ ಚಳವಳಿಗಿಳಿಯುವುದು ಅಂತಹ ದೊಡ್ಡ ವಿಷಯವೇನೂ ಆಗಿರಲಿಲ್ಲ. ಆ ಸಂದರ್ಭದಲ್ಲಿ ಸಮಾನ ಮನಸ್ಕರಾದ ರಾಜಶೇಖರನ್ ಅವರು ಸಿಕ್ಕಿದ್ದು ಒಂದರ್ಥದಲ್ಲಿ ಸಮಮನಸ್ಕರ ಸಮಾಗಮವೆಂದೇ ಹೇಳಬೇಕು.

ಆಗಸ್ಟ್ ೧೫ ಸಾವಿರದ ಒಂಬೈನೂರ ನವಲತ್ತೇಳರಂದು ಭಾರತ ಸ್ವಾತಂತ್ರ್ಯವನ್ನೇನೋ ಪಡೆದುಕೊಂಡಿತು. ಆದರೆ ಮೈಸೂರು ಸಂಸ್ಥಾನ ಸ್ವತಂತ್ರವಾಗಿ ತನ್ನ ಅರಸೊತ್ತಿಗೆಯನ್ನು ಮುಂದುವರಿಸಿಕೊಂಡು ಹೋಗಲು ಗಂಭೀರವಾಗಿ ಚಿಂತಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಕನ್ನಡದ ಜನತೆ ಜಾಗ್ರತರಾಗಿ ಭಾರತದ ಒಕ್ಕೂಟದ ಜೊತೆಗೆ ತಮ್ಮನ್ನು ಗುರುತಿಸಿಕೊಳ್ಳಬೇಕು ಮತ್ತು ಜವಾಬ್ದಾರಿಯುತ ಪ್ರಜಾ ಸರ್ಕಾರ ನಮ್ಮ ಜನ್ಮಸಿದ್ಧ ಹಕ್ಕು ಎನ್ನುವ ಧೋರಣೆಯನ್ನು ತಾಳಿತ್ತು. ಈಗಿನ ಹಳೇ ಮೈಸೂರು ಭಾಗವೆಲ್ಲಾ ಈ ಚಳವಳಿಯಲ್ಲಿ ನೇರವಾಗಿ ಧೈರ್ಯದಿಂದ ಭಾಗವಹಿಸಿತು. ಅದೀಗ ಇತಿಹಾಸ. ಈ ಸಂದರ್ಭದಲ್ಲಿ ತರುಣ ಎಂ.ವಿ.ರಾಜಶೇಖರನ್ ವಿದ್ಯಾರ್ಥಿ ನಾಯಕರಾಗಿದ್ದರು. ೪೭ರ ಮೈಸೂರು ಚಲೋ ವಿದ್ಯಾರ್ಥಿರ್ಯಾಲಿಯಲ್ಲಿ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಯುವ ಶಕ್ತಿಯನ್ನೆಲ್ಲಾ ಒಗ್ಗೂಡಿಸಿ ರಾಜಸತ್ತೆಯನ್ನು ವಿರೋಧಿಸತೊಡಗಿದರು. ಅಷ್ಟು ಮಾತ್ರವೆನ್ನದೆ ಪ್ರತೀ ಹಳ್ಳಿ ಹಳ್ಳಿಯಲ್ಲೂ ಅರಸೊತ್ತಿಗೆಯ ವಿರುದ್ಧ ಜನರನ್ನು ಜಾಗ್ರತಗೊಳಿಸಿದರು.

ಪ್ರತಿ ಹಳ್ಳಿಯಿಂದಲೂ ಯುವಕರನ್ನು ಕರೆತಂದರು. ನಮ್ಮ ರ್‍ಯಾಲಿ ಮೈಸೂರಿನತ್ತ ಹೊರಡಲನುವಾಯಿತು. ೯೫ ಕಿ.ಮೀ.ಗಳ ಸುದೀರ್ಘವಾದ ಹಾದಿಯನ್ನು ಕಾಲ್ನಡಿಗೆಯಿಂದ ಕ್ರಮಿಸಬೇಕಾಗಿತ್ತು. ದಾರಿಯುದ್ದಕ್ಕೂ ಜಾಗೃತಿ ಕಾರ್ಯಕ್ರಮಗಳು, ಘೋಷಣೆಗಳು ಪುಂಖಾನುಪುಂಖವಾಗಿ ನಮ್ಮ ಜೊತೆಗಿನ ಹೋರಾಟಗಾರರಿಂದ ಬರುತ್ತಿದ್ದವು.

"ಆರ್ಕಾಟ್ - ಬಾಯ್ಕಾಟ್"

"ಮೈಸೂರು ಒಡೆಯರಿಗೆ ಧಿಕ್ಕಾರ"

"ತಂಬೂಚೆಟ್ಟಿ - ಚಟ್ಟ ಕಟ್ಟಿ"

ಹಳ್ಳಿ ಹಳ್ಳಿಗಳಲ್ಲೂ ಈ ಘೋಷಣೆಗಳು ಮಾರ್ದನಿಸಿದವು. ಶ್ರೀ ರಾಜಶೇಖರನ್ ಅವರ ಕೆಚ್ಚು, ಸಂಘಟನಾ ಶಕ್ತಿಗಳು ಮೇಳೈಸಿ ಇಂತಹ ಗಟ್ಟಿ ಘೋಷಣೆಗಳು ನೆರೆದ ಜನರ ಬಾಯಿಂದ ಸ್ಫೋಟಗೊಳ್ಳುತ್ತಿದ್ದವು. ಹೆಚ್.ಎಸ್.ದೊರೆಸ್ವಾಮಿಯವರ ಗರಡಿಯಲ್ಲಿ ಪಳಗಿದ್ದ ನನಗೆ ಸ್ವಾತಂತ್ರ್ಯ ಮತ್ತು ಸ್ವಾಭಿಮಾನ, ಭಾರತದ ಕೆಚ್ಚು ದಟ್ಟವಾಗಿ ಬೆಳೆದಿತ್ತು. ನನ್ನ ಅನುಭವವನ್ನು ಮತ್ತೆ ಮುಂದಿನ ಹೋರಾಟದ ಹಾದಿಯನ್ನು ಆಲೋಚಿಸುವಾಗ ನನ್ನೊಡನೆ ಅವರು ಸಮಾಲೋಚಿಸುತ್ತಿದ್ದರು. ಆಗಲೇ ನಾನು ಅಂದುಕೊಂಡಿದ್ದೆ, ಶ್ರೀ ಎಂ.ವಿ.ರಾಜಶೇಖರನ್ ಮುಂದೊಂದು ದಿನ ರಾಷ್ಟ್ರ ನಾಯಕರಾಗುತ್ತಾರೆಂದು. ಅವರೀಗ ರಾಷ್ಟ್ರಮಟ್ಟದಲ್ಲಿ ಬೆಳೆದಿದ್ದಾರೆ. ಅವರನ್ನು ಅಭಿನಂದಿಸುವುದು, ಅವರಿಗೆ ಎಪ್ಪತ್ತೈದು ವರ್ಷಗಳಾಗಿರುವುದು ನನಗೆ ತೃಪ್ತಿ ತಂದಿದೆ. ಪ್ರಕೃತ ನಾನೂ ಅವರನ್ನು ಮನದುಂಬಿ ಅಭಿನಂದಿಸುವೆ.

ಅವರ ಈ ಎಪ್ಪತ್ತೈದು ವರ್ಷಗಳಲ್ಲಿ ಸುಮಾರು ಐವತ್ತೈದು ವರ್ಷಗಳ ಕಾಲ ಸಾರ್ವಜನಿಕ ಜೀವನವನ್ನು ನಡೆಸಿದ್ದಾರೆ. ಹಲವು ರಾಜಕೀಯ ಏರಿಳಿತಗಳನ್ನು ಕಂಡಿದ್ದಾರೆ. ಕರ್ನಾಟಕ ಕಂಡ ಅತ್ಯಂತ ದೊಡ್ಡ ಪ್ರಭಾವಿ ವ್ಯಕ್ತಿಯ ಜೊತೆ ಸಂಬಂಧ ಬೆಳೆಸಿಕೊಂಡು ಸ್ವಾವಲಂಬನೆಯ ರಾಜಕೀಯ ನೆಲೆ ಕಂಡುಕೊಂಡಿದ್ದಾರೆ. ಆದರೂ ಕಿಂಚಿತ್ತೂ ಅವರಲ್ಲಿ ಸ್ವಾರ್ಥಸಾಧನೆ, ಸ್ವಜನಪಕ್ಷಪಾತ ಮುಂತಾದ ವಿಸಂಗತಿಗಳು ಹುಟ್ಟದಿರುವುದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ. ಆಗಾಗ್ಗೆ ಬಂದು ನನ್ನನ್ನು ವಿಚಾರಿಸಿಕೊಂಡು ಹೋಗುತ್ತಾರೆ. ಅವರು ಎದುರಿಸಿದ ಪ್ರತೀ ಚುನಾವಣೆಯಲ್ಲಿ ನಾನೂ ಅವರನ್ನು ಬೆಂಬಲಿಸಿರುವೆ. ಹಾಗೆಯೇ ಚುನಾವಣೆಗಳಲ್ಲಿ ಅವರ ಪರವಾಗಿ ಮತ ಯಾಚಿಸಿರುವೆ.

ಎಂ.ವಿ.ರಾಜಶೇಖರನ್ ಇವತ್ತಿನ ಸಂದರ್ಭದ ಒಬ್ಬ ಅತ್ಯಂತ ಸಭ್ಯ ರಾಜಕಾರಣಿ. ಜನಸೇವೆ ಮತ್ತು ಗ್ರಾಮಗಳ ಅಭಿವೃದ್ಧಿಯೇ ದೇಶದ ಪ್ರಗತಿ ಎಂಬುದನ್ನು ಮನಗಂಡು ನಿರಂತರ ಆ ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವರು ೧೯೬೭ರ ಲೋಕಸಭಾ ಸದಸ್ಯರಾದ ಸಂದರ್ಭದಲ್ಲಿ ಹತ್ತು ಹಲವು ಗ್ರಾಮೀಣಾಭಿವೃದ್ಧಿ ಕೆಲಸ ಕಾರ್ಯ

ನಿರ್ವಹಿಸಿರುವರು. ಬ್ಯಾಲಾಳಕೆರೆ, ಕನಕಪುರದ ಕೆರೆ, ಚಕ್ಕಗೊಂಡ ಕೆರೆ ಮುಂತಾದವುಗಳನ್ನು ಅಭಿವೃದ್ಧಿಪಡಿಸಿದರು. ಟಿ ಬೇಕುಪ್ಪಯಲ್ಲಿ ಏತನೀರಾವರಿ, ನಿಡುಗಲ್ಲು ಏತನೀರಾವರಿ ಅವರ ಸಂದರ್ಭದಲ್ಲೇ ಕಾಯಕಲ್ಪಗೊಂಡವ. ಅವರು ಅಭಿವೃದ್ಧಿ ಸಂಶೋಧನಾ ಸಂಸ್ಥೆಯ ವತಿಯಿಂದ ಗ್ರಾಮೀಣ ಭಾಗದಲ್ಲಿ ಹಲವಾರು ರೈತ ಪರವಾದ ಕಾರ್ಯಗಾರಗಳನ್ನೇರ್ಪಡಿಸಿ ಒಳ್ಳೆಯ ಕೆಲಸಗಳನ್ನು ಮಾಡಿರುವರು. ನಾವು ಯಾವುದೇ ಮನವಿ ಹಿಡಿದುಕೊಂಡು ಹೋದರೂ ಇಂದಿಗೂ ಅದು ಕಾನೂನುಸಮ್ಮತವಾಗಿದ್ದರೆ ಮಾತ್ರ ಅದನ್ನು ಸ್ವೀಕರಿಸಿ ಅದಕ್ಕೆ ಹೋರಾಟ ಮಾಡಿ ಕೆಲಸ ಮಾಡಿಸಿಕೊಡುವ ಮನೋಭಾವ ಅವರದ್ದು.

ಕ್ಷೇತ್ರದ ಹಿತದೃಷ್ಟಿಯಿಂದ ನಾನು ಅವರನ್ನು ಪ್ರಶ್ನಿಸಿದ್ದುಂಟು. 'ನೀವು ಮೈಚಳಿ ಬಿಟ್ಟ ಈ ಸಂದರ್ಭದ ರಾಜಕಾರಣಿಯಾಗಿರಿ' ಇಲ್ಲದಿದ್ದರೆ ನಡೆಯುವುದಿಲ್ಲವೆಂದು ಹೇಳಿರುವೆ. ಕ್ಷೇತ್ರಕ್ಕೆ ಇನ್ನೂ ಕೆಲಸವಾಗಬೇಕು ಎಂದು ಖಾರವಾಗಿ ಎರಡು ಮೂರು ಸಲ ಪ್ರಶ್ನಿಸಿರುವೆ. ಅದಕ್ಕವರು ಸೌಮ್ಯವಾಗಿಯೇ "ನಿಮಗೆ ಏನಾಗಬೇಕು ಹೇಳಿ, ಮಾರ್ಗದರ್ಶನ ಮಾಡಿ, ನೀವು ಈ ರೀತಿ ಕೋಪಿಸಿಕೊಂಡರೆ ಹೇಗೆ?" ಎಂದು ಹೇಳುತ್ತಿದ್ದರು. ನಾನು ಏನೇ ಹೇಳಿದರೂ ಆ ಕೆಲಸವನ್ನು ಮಾಡಿಸಿಕೊಡಲಿಕ್ಕೆ ಅವರು ಪ್ರಯತ್ನಿಸುತ್ತಿದ್ದುದುಂಟು ಮತ್ತು ಅದರಲ್ಲಿ ಯಶಸ್ವಿಯಾಗಿದ್ದುಂಟು. ಈಗವರು ರಾಷ್ಟ್ರದ ಮೇಲ್ಮನೆಯ ಸಂಸದರಾಗಿದ್ದಾರೆ. ನಮ್ಮ ಕ್ಷೇತ್ರದಲ್ಲಿ ಜವಳಿ ಕೈಗಾರಿಕೆ ಮತ್ತು ರೇಷ್ಮೆ ಕೃಷಿ ಮತ್ತು ಕೈಗಾರಿಕೆಗೆ ವಿಪುಲ ಅವಕಾಶಗಳಿವೆ. ಅದನ್ನು ಕ್ಷೇತ್ರದಲ್ಲಿ ಅಭಿವೃದ್ಧಿ ಪಡಿಸಲಿ ಎಂದು ಈ ಸಂದರ್ಭದಲ್ಲಿ ಕೇಳಿಕೊಳ್ಳುವೆ. ಆ ಮೂಲಕ ನಮ್ಮ ಜನತೆಯ ತಲಾದಾಯವನ್ನು ಹೆಚ್ಚಿಸಬೇಕೆಂದು ವಿನಂತಿಸಿಕೊಳ್ಳುತ್ತಿರುವೆ.

ಎಂ.ವಿ. ರಾಜಶೇಖರನ್ ವಾಸ್ತವವಾಗಿ ನನಗಿಂತಲೂ ಮೃದು ಮನಸ್ಸಿನವರು. ಇಂತಹ ಅಪರೂಪದ ರಾಜಕಾರಣಿ ಇನ್ನೂ ರಾಜಕೀಯದಲ್ಲಿರುವುದು ನನಗೆ ಆಶ್ಚರ್ಯ ತಂದಿದೆ. ಅವರ ಮೌಲ್ಯಗಳಿಗೆ, ಅವರ ಸರಳತನಕ್ಕೆ, ಅವರ ನಿಸ್ವಾರ್ಥ ಸೇವೆಗೆ ಇನ್ನೂ ಜನತೆ, ರಾಜಕಾರಣಿಗಳು ಬೆಲೆ ಕೊಡುತ್ತಿದ್ದಾರೆ. ಇಂತಹವರಿಂದಲೇ ದೇಶ ಈ ಸ್ಥಿತಿಯಲ್ಲಾದರೂ ಉಳಿದಿದೆ ಎಂಬುದೇ ನನ್ನ ಅಭಿಪ್ರಾಯ. ನಿಸ್ವಾರ್ಥ ಮತ್ತು ಸರಳವಾದ ಬದುಕನ್ನು ಆದರ್ಶವಾಗಿಟ್ಟುಕೊಂಡು ಸ್ವಯಂ ಪ್ರತಿಭೆಯಿಂದ ಆಕಾಶದೆತ್ತರಕ್ಕೆ ಹೆಜ್ಜೆ ಹಾಕುತ್ತಿರುವ ಅವರಿಗೆ ತುಂಬು ಮನಸ್ಸಿನಿಂದ ಹಾರೈಸುವೆ. ರಾಜಕಾರಣದಲ್ಲಿ ಬದ್ಧತೆ, ತಾತ್ವಿಕತೆ, ಶಿಸ್ತು, ದೇಶಪ್ರೇಮ ಮುಂತಾದ ಆದರ್ಶವನ್ನಿಟ್ಟುಕೊಂಡು ಬೆಳೆಯಲಿ, ಬಾಳಲಿ ಎಂಬುದಿಷ್ಟೇ ಸ್ವಾತಂತ್ರ್ಯ ಹೋರಾಟಗಾರನೊಬ್ಬನ ಈ ಸಂದರ್ಭದ ಹಾರೈಕೆ.

❊❊❊

# ವಿದ್ವಾಂಸ ರಾಜಕಾರಣಿ

● ಜಿ.ವಿ.ಕೆ. ಎಲ್. ರಾವ್

ಮಿತ್ರರಾದ ಎಂ.ವಿ.ರಾಜಶೇಖರನ್ ಅವರಿಗೆ ೭೫ ತುಂಬಿದ ಸಂದರ್ಭದಲ್ಲಿ ಅಭಿನಂದನ ಗ್ರಂಥ ತರುತ್ತಿರುವ ವಿಚಾರ ತಿಳಿದು ಸಂತೋಷವಾಯಿತು. ರಾಜಶೇಖರನ್ ಅವರ ಪರಿಚಯ ನನಗೆ ನಾಲ್ಕು ದಶಕಗಳಷ್ಟು ಹಳೆಯದು. ಅವರ ಸ್ನೇಹಶೀಲತೆ, ಜನರ ಬಗೆಗಿನ ಪ್ರೀತಿ, ಪ್ರಾಮಾಣಿಕ ನಡೆ-ನುಡಿಗಳು ನನ್ನನ್ನು ಆಕರ್ಷಿಸಿವೆ. ನಿಜಲಿಂಗಪ್ಪನವರ ಅಳಿಯಂದಿರೆಂದು ರಾಜಶೇಖರನ್‌ರವರನ್ನು ನೋಡಬೇಕಾಗಿಲ್ಲ. ರಾಜಶೇಖರನ್‌ರವರಿಗೆ ಪ್ರತ್ಯೇಕವಾದ ವ್ಯಕ್ತಿತ್ವವಿದೆ. ಅವರನ್ನು ನಾನು ಮೊದಲಿನಿಂದಲೂ ಮಿತ್ರರೆಂದೇ ಭಾವಿಸಿದ್ದೇನೆ. ಅವರೂ ಸಹ ನಮ್ಮ ಜಯನಗರದ ಕನಕಪುರ ರಸ್ತೆಯಲ್ಲಿರುವವರು. ನಮ್ಮ ಮತ್ತು ಅವರ ಮನೆಗೆ ೧೫ ನಿಮಿಷಗಳ ನಡಿಗೆ. ಪ್ರತಿನಿತ್ಯ ವಾಕಿಂಗ್ ಸಮಯದಲ್ಲಿ ಲಾಲ್‌ಬಾಗ್‌ನಲ್ಲಿ ಭೇಟಿಯಾಗುತ್ತೇವೆ. ಅವರು ನಮ್ಮ ಮನೆಗೆ ಅನೇಕ ಸಲ ಬಂದಿದ್ದಾರೆ. ನಮ್ಮ ಮನೆಯವರಿಗೆಲ್ಲಾ ಅವರನ್ನು ಕಂಡರೆ ತುಂಬಾ ಪ್ರೀತಿ. ಕೃತಕತೆಯಿಲ್ಲದ ಅವರ ನೇರ ನಡೆ-ನುಡಿ ಎಲ್ಲರಿಗೂ ಪ್ರಿಯವೆನಿಸುತ್ತವೆ.

ರಾಜಶೇಖರನ್‌ರವರು ರಾಜಕಾರಣಿಗಳಲ್ಲಿ ಅಪರೂಪವೆನ್ನಿಸುವಂತಹ ಗುಣ ಸ್ವಭಾವದವರು. ಅವರ ಅಧ್ಯಯನಶೀಲತೆ ಹಾಗೂ ಅಪಾರ ಪಾಂಡಿತ್ಯ ಬಹಳ ಜನಕ್ಕೆ ಗೊತ್ತಿಲ್ಲ. ಅವರ ಏಷಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗೆ ನಾನು ಮುಖ್ಯ ಕಾರ್ಯದರ್ಶಿಯಾಗಿದ್ದಾಗ ಒಂದಿಷ್ಟು ಅನುದಾನ ಕೊಟ್ಟಿರುವ ನೆನಪುಂಟು. ಇಡೀ ಭಾರತದಲ್ಲಿ ಇಂತಹ ಒಂದು ಸಂಸ್ಥೆ ಅಪರೂಪವೆಂದರೆ ತಪ್ಪಿಲ್ಲ. ಏಷಿಯಾದ ವಿವಿಧ ರಾಷ್ಟ್ರಗಳ ಸಮನ್ವಯತೆ ಹಾಗೂ ಪ್ರಗತಿ ಕುರಿತು ಮಹತ್ವದ ಕೆಲಸವನ್ನು ಈ ಸಂಸ್ಥೆ ಮಾಡುತ್ತಿದೆ. ನಾಗರಬಾವಿಯಲ್ಲಿರುವ ಭಾರತೀಯ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ (ಐಸಾಕ್) ಕಟ್ಟಿ ಬೆಳೆಸುವುದರಲ್ಲಿ ಕಿಂಚಿತ್ತು ಅನುಭವವುಳ್ಳ ನನಗೆ ಎಂ.ವಿ.ರಾಜಶೇಖರನ್ ಕಟ್ಟಿರುವ ಎ.ಐ.ಆರ್.ಡಿ. ಸಂಸ್ಥೆಯ ಮಹತ್ವ

ಚೆನ್ನಾಗಿ ತಿಳಿದಿದೆ. ಅನೇಕ ವಿದ್ವಾಂಸರ ಸಹಾಯ ಪಡೆದು ಪ್ರಚಲಿತ ಸಮಸ್ಯೆಗಳ ಬಗ್ಗೆ ಪರಿಹಾರ ಕಂಡುಕೊಳ್ಳುವ ದಿಸೆಯಲ್ಲಿ ಈ ಸಂಸ್ಥೆ ಗಣನೀಯ ಪ್ರಮಾಣದ ಕೆಲಸ ಮಾಡುತ್ತಿದೆ. ಇಂತಹ ರಾಷ್ಟ್ರಮಟ್ಟದ ಸಂಶೋಧನಾ ಸಂಸ್ಥೆಯನ್ನು ಕಟ್ಟಿ ಬೆಳೆಸಿದ ರಾಜಶೇಖರನ್‌ರವರನ್ನು ಮನಸಾರೆ ಅಭಿನಂದಿಸುವುದು ಎಲ್ಲಾ ಪ್ರಜ್ಞಾವಂತ ಜನರ ಕರ್ತವ್ಯವೂ ಹೌದು.

ಎಂ.ವಿ. ರಾಜಶೇಖರನ್ ಅವರಿಗೆ ಕೃಷಿ ತುಂಬಾ ಪ್ರಿಯವಾದ ವಿಚಾರ. ಬೆಂಗಳೂರು ನಗರದ ಹಡ್ಸನ್ ವೃತ್ತದಲ್ಲಿರುವ ಕೃಷಿಕ ಸಮಾಜದ ಕಟ್ಟಡದ ನಿರ್ಮಾಣವಾಗುವುದರ ಹಿಂದೆ ಯಾರಿದ್ದರೆಂಬುದು ಬಹುಮಟ್ಟಿನ ಜನಕ್ಕೆ ಗೊತ್ತಿಲ್ಲ. ಮೂಲತಃ ಆ ಜಾಗ ಪೋಲಿಸ್ ಇಲಾಖೆಗೆ ಸೇರಿತ್ತು. ಎಂ.ವಿ. ರಾಜಶೇಖರನ್‌ರವರು ಪ್ರಭಾವಶಾಲಿ ಸಚಿವರುಗಳ ವಿರುದ್ಧ ಹೋರಾಟಮಾಡಿ ಕೃಷಿಕರ ಏಳಿಗೆಗಾಗಿ ಆ ಜಾಗ ಪಡೆದುಕೊಂಡರು. ಇಂದು ಆ ಜಾಗಕ್ಕೆ ಕೋಟ್ಯಾಂತರ ರೂಪಾಯಿ ಬೆಲೆ ಇದೆ. ಆ ವಿಚಾರ ಬಿಡಿ, ಆದರೆ ರಾಜಶೇಖರನ್ ಅವರು ಅಲ್ಲಿ ಕಂಡ ಕನಸು ತುಂಬಾ ದೊಡ್ಡದು. ಅಲ್ಲಿ ಒಂದು ಬೃಹತ್ ಕೃಷಿಕ ಭವನ ನಿರ್ಮಿಸಿ ಕೃಷಿಕರೆಲ್ಲರಿಗೂ ಬೇಕಾದ ಸಂಶೋಧನಾ ಕೇಂದ್ರ ನಿರ್ಮಿಸುವ ಹಿರಿದಾದ ಆಸೆ ಅವರಲ್ಲಿತ್ತು. ಈಗ ಕೇವಲ ಕೃಷಿಕ ಸಮಾಜವೆಂಬ ಕಟ್ಟಡ ನಿರ್ಮಾಣವಾಗಿದೆ. ೧೯೬೭ರಲ್ಲಿ ರಾಜಶೇಖರನ್ ಲೋಕಸಭಾ ಸದಸ್ಯರಾದ ಮೇಲೆ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಅನಂತರ ಅದರ ಪ್ರಗತಿ ಸ್ಥಗಿತಗೊಂಡಿರಬಹುದು.

ರಾಜಶೇಖರನ್ ಅವರು ಅತ್ಯಂತ ಸರಳ ಜೀವಿ. ಶ್ರೀಮಂತರಾದರೂ ದುಂದು ವ್ಯಯವೆಂಬುದು ಅವರಿಗೆ ಗೊತ್ತಿಲ್ಲ. ಅಂತಹ ಸಹೃದಯತೆಯುಳ್ಳ ರಾಜಶೇಖರನ್ ದೇಶ ವಿದೇಶಗಳನ್ನು ಸುತ್ತಿದ್ದಾರೆ. ಅವರ ಅನುಭವವನ್ನು ಕರ್ನಾಟಕದ ಕೃಷಿ, ಗ್ರಾಮೀಣ ಅಭಿವೃದ್ಧಿ ಹಾಗೂ ಸಾರ್ವಜನಿಕ ಕ್ಷೇತ್ರಗಳು ಪಡೆದುಕೊಂಡರೆ ತುಂಬಾ ಅನುಕೂಲ. ರಾಜಕಾರಣದಲ್ಲಿದ್ದರೂ ನಿಜವಾದ ಅರ್ಥದಲ್ಲಿ ವಿದ್ವಾಂಸರಾಗಿರುವ ಶ್ರೀ ಎಂ.ವಿ.ರಾಜಶೇಖರನ್ ನೂರಾರು ಕಾಲ ಬಾಳಲೆಂದು ಆಶಿಸುತ್ತೇನೆ. ದೇವರು ಅವರಿಗೂ ಅವರ ಕುಟುಂಬಕ್ಕೂ ಸಕಲ ರೀತಿಯ ಶ್ರೇಯಸ್ಸು ಕೊಡಲಿ.

***



# ಜಂಟಲ್‌ಮನ್

● ಕೆ.ಟಿ. ಚನ್ನಬಸವೇಗೌಡ

ಶ್ರೀ ಎಂ.ವಿ. ರಾಜಶೇಖರನ್‌ರವರು ಮತ್ತು ನಾನು ಪ್ರೌಢಶಾಲೆಯಿಂದಲೂ ಸಹಪಾಠಿಗಳು. ಕನಕಪುರದ ರೂರಲ್ ಹೈಸ್ಕೂಲ್‌ನಲ್ಲಿ ನಮ್ಮ ಪ್ರೌಢಶಾಲಾ ವಿದ್ಯಾಭ್ಯಾಸ ನಡೆಯಿತು. ಅವರು ಆಗ ಶ್ರೀ ದೇಗುಲ ಮಠದಲ್ಲಿದ್ದರು. ನಮ್ಮೂರು ಸಾತನೂರು ಹತ್ತಿರವಿರುವ ತೋಟಳ್ಳಿ. ನಮಗಿಬ್ಬರಿಗೂ ಎಸ್.ಕರಿಯಪ್ಪನವರು ಅಧ್ಯಾಪಕರು ಹಾಗೂ ಮಾರ್ಗದರ್ಶಕರು. ನಮ್ಮ ಪ್ರೌಢಶಾಲಾ ವಿದ್ಯಾಭ್ಯಾಸದ ಅವಧಿಯಲ್ಲಿ ನಡೆದ ಅತ್ಯಂತ ಪ್ರಮುಖ ಘಟನೆ ಎಂದರೆ 'ಮೈಸೂರು ಚಲೋ' ಚಳವಳಿ. ಈ ಘಟನೆಯಿಂದ ನನ್ನ ಸಹಪಾಠಿಗಳೂ ಸೇರಿದಂತೆ ಅನೇಕ ಜನ ಸಾರ್ವಜನಿಕ ಕ್ಷೇತ್ರದಲ್ಲಿ ಬಹು ದೊಡ್ಡ ಹೆಸರು ಗಳಿಸುವಂತಾಯಿತು. ಕರಿಯಪ್ಪನವರು ಗಾಂಧೀ ವಿಚಾರಧಾರೆಯಲ್ಲಿ ಅಚಲವಾದ ನಂಬಿಕೆಯುಳ್ಳವರು ಹಾಗೂ ಸ್ವಾತಂತ್ರ್ಯ ಹೋರಾಟಗಾರರು. ಅವರ ನೇತೃತ್ವದ ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡಿದ ನಮಗೆ ಸಹಜವಾಗಿಯೇ ಸ್ವಾತಂತ್ರ್ಯ ಹೋರಾಟದ ಬಗ್ಗೆ ಅಪಾರ ಪ್ರೇಮ ಇತ್ತು. ೧೯೪೭ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದರೂ ನಮಗೆ ಅಂದರೆ ಮೈಸೂರು ಸಂಸ್ಥಾನಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿಯುತ ಸರ್ಕಾರ ಸ್ಥಾಪಿಸಲು ಅನೇಕ ನಾಯಕರು ಇನ್ನೂ ಹೋರಾಟದ ಕಣದಲ್ಲಿದ್ದರು. ಎಂ.ಎನ್.ಜೋಯಿಸ್, ಕೆಂಗಲ್ ಹನುಮಂತಯ್ಯ, ಟಿ. ಸಿದ್ಧಲಿಂಗಯ್ಯ, ಕೆ.ಸಿ. ರೆಡ್ಡಿ, ಎಸ್. ನಿಜಲಿಂಗಪ್ಪ, ಕೆ.ಟಿ. ಭಾಷ್ಯಂ ಮೊದಲಾದವರು ಮೈಸೂರು ಚಲೋ ಚಳವಳಿಗೆ ಕರೆ ಕೊಟ್ಟಿದ್ದರು. ನಿಗದಿತ ದಿನದಂದು ಅಂದರ ೧೯೪೭ ಸೆಪ್ಟೆಂಬರ್ ೭ ರಂದು ಮೈಸೂರು ಅರಮನೆಗೆ ಮುತ್ತಿಗೆ ಹಾಕಲು ಸಕಲ ಸಿದ್ಧತೆ ತೆರೆಮರೆಯಲ್ಲಿ ನಡೆದಿತ್ತು. ಊರೂರಿಂದ ಕಾಂಗ್ರೆಸ್ ಪಕ್ಷದ ಸ್ವಯಂಸೇವಕರು ಮೈಸೂರಿನತ್ತ ಪಯಣ ಬೆಳೆಸಿದ್ದರು. ಇಂತಹ ಸಂದರ್ಭದಲ್ಲಿ ಕನಕಪುರದಿಂದ ಹಿರಿಯರಾದ ಬ್ಯಾಟಪ್ಪನವರ ನೇತೃತ್ವದಲ್ಲಿ ಯುವಕರ ತಂಡವೊಂದು ಮೈಸೂರಿನತ್ತ ಪ್ರಯಾಣ ಬೆಳೆಸಿತ್ತು. ಆ ಯುವಕ ತಂಡಕ್ಕೆ ರಾಜಶೇಖರನ್‌ರವರೇ

ನಾಯಕರು. ಕನಕಪುರದಿಂದ ಹೊರಟ ನಮ್ಮ ತಂಡ ಮಳವಳ್ಳಿ ಮಾರ್ಗವಾಗಿ ಮೈಸೂರಿಗೆ ಹೋಗಲು ನಿರ್ಧರಿಸಿತ್ತು. ಪ್ರತಿಯೊಂದು ಹಳ್ಳಿಯ ಮೇಲೂ ನಮ್ಮ ತಂಡ ಯಾತ್ರೆ ಹೋಗುತ್ತಿದ್ದರೆ ಅಲ್ಲಿನ ಜನ ನಮ್ಮನ್ನು ಸ್ವಾಗತಿಸಿ ತಿಂಡಿ, ಎಳನೀರು, ಊಟಗಳನ್ನು ಕೊಟ್ಟು ನಮಗೆ ಅನನ್ಯ ರೀತಿಯ ಪ್ರೋತ್ಸಾಹ ನೀಡುತ್ತಿದ್ದರು. ಮಳವಳ್ಳಿಗೆ ಹೋದಾಗ ರಾತ್ರಿ ಆಗಿತ್ತು. ಅಲ್ಲಿನ ಕಾಂಗ್ರೆಸ್ ನಾಯಕರು ನಮ್ಮ ತಂಡವನ್ನು ಮೂರರಂತೆ ವಿಂಗಡಿಸಿ ನನ್ನನ್ನು ಮತ್ತು ರಾಜಶೇಖರನ್‌ರವರನ್ನು ಒಬ್ಬರ ಮನೆಗೆ ಕಳುಹಿಸಿದರು. ಅವರ ಹೆಸರು ನೆನಪಿಲ್ಲ. ರಾತ್ರಿ ನಮಗಾಗಿ ಮುದ್ದೆ, ಅನ್ನ, ಸೊಪ್ಪಿನ ಸಾರು ಮಾಡಿ ಗಡಿಗೆಯಲ್ಲಿದ್ದ ಹೊಸ ತುಪ್ಪವನ್ನು ಬಲವಂತದಿಂದ ಬಡಿಸಿ ಊಟಮಾಡಿಸಿದರು. ಬೆಳಗ್ಗೆ ನೋಡಿದರೆ ಅದು ಬೆಸ್ತರ ಕೇರಿಯಾಗಿತ್ತು. ಆ ಸ್ವಾತಂತ್ರ್ಯ ಹೋರಾಟವೇ ಹಾಗೆ. ಅದು ಎಲ್ಲಾ ಜಾತಿ ಮತಗಳನ್ನೂ ಒಟ್ಟುಗೂಡಿಸಿ, ಒಂದು ರಾಷ್ಟ್ರೀಯ ಭಾವೈಕ್ಯತೆಯ ಕಂಪನವನ್ನು ಸಿಂಪಡಿಸಿತ್ತು. ಆ ನಂತರ ಬನ್ನೂರಿಗೆ ಹೋದೆವು. ಈಗಿನಂತೆ ಮೈಸೂರಿಗೆ ಹೋಗಲು ಅಲ್ಲಿ ಸೇತುವೆ ಇರಲಿಲ್ಲ. ಅಲ್ಲಿನ ನಾಗರಿಕರೇ ದೋಣಿಯಲ್ಲಿ ಕೂರಿಸಿಕೊಂಡು ನಮ್ಮನ್ನು ಆಚೆ ದಡ ಮುಟ್ಟಿಸಿದರು. ನಮ್ಮ ಗುಂಪನ್ನು ಮೈಸೂರಿಗೆ ಬರದಂತೆ ತಡೆಯಲು ಪೋಲಿಸರು ಶತ ಪ್ರಯತ್ನ ಮಾಡಿದರು. ನಾವು ಹೇಗೋ ನುಸುಳಿಕೊಂಡು ನಜರಬಾದ್‌ನಲ್ಲಿದ್ದ ಸಾಹುಕಾರ ಚನ್ನಯ್ಯನವರ ಮನೆಗೆ ಹೋದೆವು. ಅಲ್ಲಿ ಆಗಲೇ ಕಾಂಗ್ರೆಸ್‌ನವರ ಬಹು ದೊಡ್ಡ ಗುಂಪು ಜಮಾಯಿಸಿತ್ತು. ನಮ್ಮನ್ನು ಕಂಡ ಸಾಹುಕಾರ ಚನ್ನಯ್ಯನವರು ಊಟದ ವ್ಯವಸ್ಥೆ ಮಾಡಿ ಎಲ್ಲೋ ಹೊರಟರು. ನಾವು ಅಲ್ಲಿ ಕುಳಿತುಕೊಂಡಿದ್ದಾಗ ಪೋಲಿಸರ ದೊಡ್ಡ ಗುಂಪು ನಮ್ಮ ಹತ್ತಿರ ಬಂತು. ನಾವು ವಿದ್ಯಾರ್ಥಿಗಳೆಲ್ಲಾ ಹೆದರಿ ಪಕ್ಕದಲ್ಲಿದ್ದ ಸಾರ್ವಜನಿಕ ವಿದ್ಯಾರ್ಥಿನಿಲಯಕ್ಕೆ ಹೋಗಿ ಆಶ್ರಯ ಪಡೆದೆವು. ಪೋಲಿಸರು ಅಲ್ಲಿಗೂ ಬಂದು ನಮ್ಮನ್ನು ಹುಡುಕಿ ಮೈಮೇಲೆ ಬಾಸುಂಡೆ ಬರುವಂತೆ ಏಟು ಕೊಟ್ಟರು. ನಮ್ಮ ಸಹಪಾಠಿ ತಿಮ್ಮಯ್ಯನವರಿಗೆ ಹಣೆಗೆ ಏಟು ಬಿದ್ದು ರಕ್ತ ಸುರಿಯತೊಡಗಿತು. ಆಗ ವಿದ್ಯಾರ್ಥಿನಿಲಯದಲ್ಲಿದ್ದ ವಿದ್ಯಾರ್ಥಿಗಳು ಪೋಲಿಸರ ವಿರುದ್ಧ ಘೋಷಣೆ ಕೂಗಿದರು. 'ತಾವು ಹೇಗೆ ನಮ್ಮ ವಿದ್ಯಾರ್ಥಿ ನಿಲಯಕ್ಕೆ ಬಂದಿರಿ' ಅಂತ ಅವರನ್ನು ದಬಾಯಿಸಿದರು. ನಾವು ವಿದ್ಯಾರ್ಥಿ ನಿಲಯದಿಂದ ಅರಮನೆಯ ಹತ್ತಿರ ಹೋದೆವು. ಒಳಗೆ ನುಗ್ಗಲು ಹೋದಾಗ ನಮ್ಮ ತಂಡವನ್ನು ಅರೆಸ್ಟ್ ಮಾಡಿ ಶಿವರಾಂಪೇಟೆ ಹತ್ತಿರ ಇದ್ದ ಪೋಲಿಸ್ ಠಾಣೆಗೆ ಕರೆದುಕೊಂಡು ಹೋದರು. ಅಲ್ಲಿ ಆಗಲೇ ಅಸಂಖ್ಯ ಜನ ಸೇರಿದ್ದರು. ಹಿರಿಯ ನಾಯಕರಾದ ನಿಜಲಿಂಗಪ್ಪನವರು ಕೂಡ ಅರೆಸ್ಟ್ ಆಗಿ ಅಲ್ಲಿ ಕುಳಿತುಕೊಂಡಿದ್ದರು. ನಮ್ಮನ್ನು ನೋಡಿ, ಈ ಹೋರಾಟವನ್ನು ಗಾಂಧೀಜಿ ಹೇಳುವಂತೆ ಅಹಿಂಸಾತ್ಮಕ ರೀತಿಯಲ್ಲಿ ಮುಂದುವರೆಸಬೇಕು. ಯಾರೂ ಘರ್ಷಣೆ ಮಾಡಿಕೊಳ್ಳಬಾರದೆಂದು ನಮಗೆಲ್ಲಾ ತಿಳಿ ಹೇಳಿದರು. ಬೇರೆ ಬೇರೆ ಕಡೆಯಿಂದ ತಂಡಗಳು ಮೈಸೂರಿಗೆ ಬರಲಾರಂಭಿಸಿದ ಮೇಲೆ ಸುಮಾರು ರಾತ್ರಿ ೧೨.೦೦ ಗಂಟೆಯಷ್ಟೊತ್ತಿಗೆ ನಮ್ಮ ಕನಕಪುರ ತಂಡವನ್ನು ಪೊಲಿಸ್ ವ್ಯಾನ್‌ನಲ್ಲಿ ತುಂಬಿಕೊಂಡು ಹೊರಟರು. ಸುಮಾರು ಮಧ್ಯ ರಾತ್ರಿ ೨ ಗಂಟೆಗೆ

ಒಂದು ಕಾಡಿನಲ್ಲಿ ನಮ್ಮನ್ನು ಬಿಟ್ಟರು. ಬೆಳಗ್ಗೆ ತನಕ ಮರದ ಪೊಟರೆಯಲ್ಲಿ ಕುಳಿತುಕೊಂಡಿದ್ದೆವು. ಬೆಳಕಾದ ಮೇಲೆ ಒಬ್ಬ ಮುದುಕ ನಮ್ಮನ್ನು ನೋಡಿ, "ಓ ನೀವು ಕಾಂಗ್ರೆಸ್ಸಿನವರೇ, ನೀವು ಚುಂಚನಕಟ್ಟೆ ಹತ್ತಿರ ಬಂದಿದ್ದೀರಿ, ಈ ಕಾವೇರಿ ನದಿ ದಾಟಿ ಹೋಗಿ ಅಲ್ಲಿ ಸಾಲಿಗ್ರಾಮ ಅಂತ ಊರಿದೆ. ಅಲ್ಲಿನ ಕಾಂಗ್ರೆಸ್‌ನವರಾದ ಎಸ್.ಹೆಚ್. ತಮ್ಮಯ್ಯನವರು ನಿಮ್ಮನ್ನು ನೋಡಿಕೊಳ್ಳುತ್ತಾರೆ" ಎಂದರು. ಆತ ಹೇಳಿದಂತೆ ಸಾಲಿಗ್ರಾಮಕ್ಕೆ ಬಂದೆವು. ಎಸ್.ಹೆಚ್.ತಮ್ಮಯ್ಯನವರು ಪುರಸಭೆಯ ಅಧ್ಯಕ್ಷರಾಗಿದ್ದರ ಜೊತೆ ಹಿರಿಯ ಕಾಂಗ್ರೆಸ್ಸಿಗರಾಗಿದ್ದರು. ನಮಗೆಲ್ಲಾ ಊಟ ವಸತಿ ಕೊಟ್ಟು ಮಿರ್ಲೆಗೆ ಕಳುಹಿಸಿದರು. ಅಲ್ಲಿ ರಾಮೇಗೌಡ ಅಂತ ಕಾಂಗ್ರೆಸ್ಸಿನ ಹಿರಿಯ ನಾಯಕರು ನಮಗೆ ಸೌಕರ್ಯಗಳನ್ನು ಒದಗಿಸಿ ಕೊಟ್ಟು ಕೆ.ಆರ್.ನಗರಕ್ಕೆ ನಮ್ಮನ್ನು ಕಳುಹಿಸಿಕೊಟ್ಟರು. ಮತ್ತೆ ಅಲ್ಲಿಂದ ಮೈಸೂರಿಗೆ ಹೋಗಿ ಅರಮನೆಗೆ ಮುತ್ತಿಗೆ ಹಾಕುವುದು ನಮ್ಮ ಉದ್ದೇಶವಾಗಿತ್ತು. ಅಷ್ಟು ಹೊತ್ತಿಗೆ ಅಂದರೆ ಅಕ್ಟೋಬರ್ ೨೪ರ ಹೊತ್ತಿಗೆ ಮೈಸೂರು ಮಹಾರಾಜರು ಮೈಸೂರು ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರಿಸಲು ಸಮ್ಮತಿ ವ್ಯಕ್ತಪಡಿಸಿ ಘೋಷಣೆ ಹೊರಡಿಸಿದರು. ಕೆ.ಆರ್. ನಗರದಿಂದ ನಾವು ಜಯಘೋಷ ಮಾಡುತ್ತಾ ಕನಕಪುರಕ್ಕೆ ಮರಳಿದೆವು. ಚೆಡ್ಡಿ, ಶರ್ಟು, ಟವಲು ಹಾಗೂ ಖಾದಿ ಟೋಪಿಯ ನಮ್ಮಗಳ ವೇಷ ಕಂಡರೆ ಸಾಕು ಎಲ್ಲೆಲ್ಲೂ ಗೌರವ. ರಸ್ತೆಯಲ್ಲಿ ಸಂಚರಿಸುತ್ತಿದ್ದ ಬಸ್ಸುಗಳು ನಮ್ಮನ್ನು ನೋಡಿ, ನಿಲ್ಲಿಸಿ ಹತ್ತಿಸಿಕೊಂಡು ಹೋಗುತ್ತಿದ್ದವು. ಹಳ್ಳಿಯವರು ನಾವು ಹೋದ ತಕ್ಷಣ ಎಳನೀರು, ಪಾನಕ ಕೊಟ್ಟು ವೀರೋಚಿತ ಸ್ವಾಗತ ನೀಡುತ್ತಿದ್ದರು. ಕಾಂಗ್ರೆಸ್‌ನವರು, ಸೇವಾದಳದವರು ಎಂದರೆ ಮುಗಿದುಹೋಯಿತು. ಅವರು ಮಹಾತ್ಯಾಗಿಗಳು, ಅಪ್ರತಿಮ ದೇಶಭಕ್ತರು ಎಂದು ಜನ ಭಾವಿಸಿದ್ದರು.

ಇಂತಹ ಪರಂಪರೆಯಲ್ಲಿ ಬೆಳೆದ ಎಂ.ವಿ.ರಾಜಶೇಖರನ್‌ರವರು ಇಂದಿಗೂ ಆ ಮೌಲ್ಯಗಳನ್ನು ಉಳಿಸಿಕೊಂಡು ಬಂದಿರುವುದು ಅವರ ಸಹಪಾಠಿ ಆದ ನನಗೆ ಹೆಮ್ಮೆ ಎನಿಸಿದೆ. ಆ ನಂತರ ಅವರು ದೆಹಲಿಯಲ್ಲಿ ಕಾನೂನು ವ್ಯಾಸಂಗ ಮಾಡಿ, ನಿಜಲಿಂಗಪ್ಪನವರ ಅಳಿಯಂದಿರಾದರು. ಯಶೋಧರಮ್ಮ ದಾಸಪ್ಪ, ಎಂ.ವಿ.ಕೃಷ್ಣಪ್ಪನವರ ಸ್ನೇಹ ಅವರಿಗೆ ದೊರೆಯಿತು. ಇವೆಲ್ಲದರ ಫಲವಾಗಿ ೧೯೬೭ರಲ್ಲಿ ಅವರಿಗೆ ಕನಕಪುರ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಲು ಕಾಂಗ್ರೆಸ್ ಟಿಕೇಟು ದೊರಕಿ ಅವರು ಲೋಕಸಭಾ ಸದಸ್ಯರೂ ಆದರು. ಆದರೆ ಯಾವುದೇ ಅಧಿಕಾರ ದೊರಕಿದರೂ ರಾಜಶೇಖರನ್ ಅಧಿಕಾರದ ಗತ್ತನ್ನು ತಲೆಗೆ ಏರಿಸಿಕೊಳ್ಳಲಿಲ್ಲ. ಮೈಸೂರು ಚಲೋ ಚಳವಳಿಯಲ್ಲಿದ್ದ ಮೂಲ ಆಶಯವನ್ನು ಅವರು ಎಂದೂ ಮರೆತಿಲ್ಲ. ಮಹಾತ್ಮ ಗಾಂಧೀಯವರ ಸರ್ವೋದಯ ತತ್ವ ಹಾಗೂ ಭಾರತ ಸೇವಾದಳದ ಸೇವಾದರ್ಶಗಳು ಅವರ ಜೀವಿತದ ಗುರಿಯಾಗಿದೆ. ರಾಜಶೇಖರನ್‌ರವರು ಅನುಷ್ಠಾನ ಮಾಡಿದ ಮಂಚನಬೆಲೆ ನೀರಾವರಿ ಯೋಜನೆ ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕಾಮಧೇನು ಆಗಿದೆ. ಮಾಗಡಿ, ರಾಮನಗರ,

ಚನ್ನಪಟ್ಟಣ, ಕನಕಪುರ ತಾಲ್ಲೂಕುಗಳಿಗೆ ಅಪಾರ ಪ್ರಯೋಜನವಾಗಿದೆ. ಲೋಕಸಭಾ ಸದಸ್ಯರೊಬ್ಬರು ಹೀಗೆ ಒಂದು ನೀರಾವರಿ ಯೋಜನೆಯನ್ನು ಕಲ್ಪಿಸಿಕೊಂಡು ಅನುಷ್ಠಾನ ಮಾಡಿರುವುದು ನನ್ನ ದೃಷ್ಟಿಯಲ್ಲಿ ಇದೇ ಪ್ರಥಮ ಎಂದು ನಾನು ತಿಳಿದಿದ್ದೇನೆ. ಗ್ರಾಮೀಣ ಅಭಿವೃದ್ಧಿ ಹಾಗೂ ಕೃಷಿ ಕ್ಷೇತ್ರದ ಬಗ್ಗೆ ಅವರಿಗೆ ಇರುವ ಆಳವಾದ ಜ್ಞಾನವನ್ನು ಅನೇಕ ರಾಷ್ಟ್ರಗಳು ಸದ್ಬಳಕೆ ಮಾಡಿಕೊಂಡಿವೆ. ತತ್ತ್ವಾಧಾರಿತ ರಾಜಕೀಯದಲ್ಲಿ ನಂಬಿಕೆಯಿರುವ ರಾಜಶೇಖರನ್‌ರವರು ಎಂದೂ ಕ್ಷುಲ್ಲಕ ರಾಜಕೀಯ ಮಾಡಿದವರಲ್ಲ ಅಥವಾ ಸ್ವಾರ್ಥಕ್ಕಾಗಿ ಸಮುದಾಯದ ಹಿತ ಕೆಡಿಸಿದವರಲ್ಲ. ಭ್ರಷ್ಟಾಚಾರದಿಂದ ಒಂದು ರೂಪಾಯಿಯನ್ನು ಕೂಡ ಸಂಪಾದನೆ ಮಾಡಿದವರಲ್ಲ. ಅವರ ವೈಯಕ್ತಿಕ ಬದುಕು ಮಹಾತ್ಮ ಗಾಂಧಿಯವರು ಬೋಧಿಸಿದ ತತ್ತ್ವಗಳ ಆಧಾರದ ಮೇಲೆ ಅವಲಂಬಿತವಾಗಿವೆ. ಸರಳತೆ, ನಿಸ್ಪೃಹತೆ, ಪ್ರಾಮಾಣಿಕತೆ ಹಾಗೂ ಸೇವೆ ಅವರ ಜೀವನದಲ್ಲಿ ಕಾಣುವ ಪ್ರಮುಖ ಅಂಶವಾಗಿವೆ. ನಿಜವಾದ ಅರ್ಥದಲ್ಲಿ ಅವರು GENTLEMAN POLITICIAN.

***

# ಸಾಮಾಜಿಕ ಚಿಂತಕರು

ಮಲ್ಲಾರಿಗೌಡ ಎಸ್.ಪಾಟೀಲ

ಶ್ರೀ ಎಂ.ವಿ. ರಾಜಶೇಖರನ್ ಇವರ ೭೫ನೇ ವರ್ಷದ ಸೇವೆಯ ಹಿನ್ನೆಲೆಯಲ್ಲಿ ಸತ್ಕಾರ ಮಾಡುತ್ತಿರುವುದು ಸಂತೋಷದ ಸಂಗತಿ. ಸನ್ಮಾನ್ಯರು ಕರ್ನಾಟಕ ರಾಜ್ಯದ ಅಪ್ಪಟ ಗಾಂಧಿವಾದಿಗಳು ಹಾಗೂ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ ಮಾನ್ಯ ನಿಜಲಿಂಗಪ್ಪನವರ ಅಳಿಯಂದಿರು.

ಸೆಪ್ಟೆಂಬರ್ ೧೨, ೧೯೨೮ರಂದು ಜನಿಸಿದ ಮಾನ್ಯರು ಸ್ವಾತಂತ್ರ್ಯ ಪೂರ್ವದ ಹೋರಾಟ ಹಾಗೂ ಹಳ್ಳಿಯ ಜೀವನ ನೋಡಿ ರೈತರು ಮತ್ತು ಬಡತನದಲ್ಲಿ ಬಳಲುವ ನಮ್ಮ ಹಳ್ಳಿಗಳ ಅಭಿವೃದ್ಧಿಗೋಸ್ಕರ ಚಿಂತನೆ ಮಾಡುವವರು. ಸ್ವಾತಂತ್ರ್ಯ ಹೋರಾಟದಲ್ಲಿ ಅಂದಿನ ಹಿರಿಯ ಮುಂದಾಳತ್ವದಲ್ಲಿ ಇವರೂ ಕೂಡ ಒಬ್ಬ ಹೋರಾಟಗಾರರಾಗಿದ್ದವರು. ಭೂದಾನ ಯಜ್ಞದ ರೂವಾರಿಯಾಗಿದ್ದ ಮಾನ್ಯ ವಿನೋಬಾಜಿಯವರ ಕಾರ್ಯದಲ್ಲಿ ಹಾಗೂ ಹಲವಾರು ಸಂಘ-ಸಂಸ್ಥೆಗಳಲ್ಲಿ ಪಾಲುಗೊಂಡರು. ೧೯೭೮ರಲ್ಲಿ ನಾನು ಸಂಕೇಶ್ವರ ಕ್ಷೇತ್ರದಿಂದ ಆರಿಸಿ ಬಂದಾಗ ಇವರೂ ಕೂಡ ಉತ್ತರಹಳ್ಳಿ ಕ್ಷೇತ್ರದಿಂದ ಆರಿಸಿಬಂದವರು. ಇವರ ದಿಟ್ಟತನ, ಸಾಮಾಜಿಕ ಚಿಂತನೆ ಮತ್ತು ಸದನದಲ್ಲಿ ಪ್ರಸ್ತಾಪಿಸುವ ವಿಷಯಗಳ ಅಭ್ಯಾಸ ಮೆಚ್ಚುವಂತಹದ್ದು. ೧೯೯೯ರಲ್ಲಿ ಇವರು ಮತ್ತೊಂದು ಸಲ ವಿಧಾನ ಪರಿಷತ್ತಿಗೆ ಬಂದರು. ತದನಂತರ ಕರ್ನಾಟಕ ರಾಜ್ಯದಿಂದ ೨೦೦೨ರಲ್ಲಿ ರಾಜ್ಯಸಭೆಯ ಸದಸ್ಯರಾದರು.

ಮಾನ್ಯ ಶ್ರೀ ಎಂ.ವಿ.ರಾಜಶೇಖರನ್ ಅವರು ರಾಜ್ಯಸಭೆಯ ಸದಸ್ಯರಾಗಿ ಅಲ್ಲಿಯೂ ಕೂಡ ತಮ್ಮ ಅನುಭವ, ಮುಖ್ಯವಾಗಿ ಹಳ್ಳಿಯ ಅಭಿವೃದ್ಧಿಯ ಬಗೆಗಿನ ತಮ್ಮ ಚಿಂತನೆಯನ್ನು ಹಂಚಿಕೊಳ್ಳುತ್ತಿದ್ದಾರೆ. ಪಂಚಾಯತಿಯಿಂದ ರಾಜ್ಯಸಭಾ ಸದಸ್ಯರಾಗುವವರೆಗೆ ಕುಸಿದು ಹೋಗಿರುವ ಇವತ್ತಿನ ರಾಜಕೀಯ ನೈತಿಕ ಮಟ್ಟದ ಬಗೆಗೆ ನಾವೆಲ್ಲರೂ ಅವರಂತೆ ಚಿಂತಿಸಬೇಕಾಗಿದೆ.

ಅಲ್ಪಸ್ವಲ್ಪ ಹಾಗೂ ಬಡನತದಲ್ಲಿರುವ ಪ್ರಾಮಾಣಿಕರಿಗೆ ನಾವು ಯಾವುದೇ ಸದಸ್ಯತ್ವವನ್ನು ನೀಡುವದು ಇವತ್ತು ಸಾಧ್ಯವಾಗಲಿಕ್ಕಿಲ್ಲ. ವಿಧಾನಸಭೆಯ ಚುನಾವಣೆಗೆ ಲಕ್ಷಗಟ್ಟಲೆ ಖರ್ಚುಮಾಡಲು, ಸಂಸದ

ಸದಸ್ಯರಾದಲ್ಲಿ ೨೫ ಲಕ್ಷಗಟ್ಟಲೆ ಖರ್ಚುಮಾಡುವ ಕಾನೂನುಗಳು ದೇಶದ ಒಳ್ಳೆಯ ರಾಜಕಾರಣಿಗಳನ್ನು ಕೊಡಲು ಒಂದೊಂದು ಕೊಡಲಿ ಪೆಟ್ಟಾಗಬಹುದು. ರಾಜಕೀಯದಲ್ಲಿ ದುಡ್ಡಿನ ಪ್ರಭಾವ, ಅಧಿಕಾರದ ವ್ಯಾಮೋಹ ಇವೆಲ್ಲವುಗಳನ್ನು ಬದಿಗಿಟ್ಟು, ಮಹಾತ್ಮ ಗಾಂಧೀಜಿಯವರ ತತ್ತ್ವನಿಷ್ಠೆಯ ಒಬ್ಬ ಅನುಭವಿ ರಾಜಕಾರಣಿಯು ೭೫ ವರ್ಷಗಳ ಜೀವನ ಮುಂದಿನ ಜನಾಂಗಕ್ಕೆ ಮಾದರಿಯಾಗಿದೆ. ಶ್ರೀ ಎಂ.ವಿ. ರಾಜಶೇಖರನ್ ಇವರಿಗೆ ನನ್ನ ವೈಯಕ್ತಿಕವಾದ ವಂದನೆಗಳನ್ನು ಸಲ್ಲಿಸುತ್ತಾ ಅವರಿಗೆ ಎಲ್ಲ ರೀತಿಯ ಯಶಸ್ಸನ್ನು ಅವರಿಗೆ ಹಾರೈಸುತ್ತೇನೆ.

***

# ಗಾಂಧೀಜಿ ದೃಷ್ಟಿಯಲ್ಲಿ ವಿಕೇಂದ್ರೀಕರಣದ ಮಹತ್ವ

ಹೆಚ್.ಎಸ್. ದೊರೆಸ್ವಾಮಿ

ವಿಕೇಂದ್ರೀಕರಣ ಎಂಬುದು ಸೃಷ್ಟಿ ನಿಯಮ. ಭಗವಂತ ಅಥವಾ ಯಾವುದೋ ಒಂದು ಅದ್ಭುತಶಕ್ತಿ ಈ ಬ್ರಹ್ಮಾಂಡವನ್ನು ನಿಯಂತ್ರಿಸುತ್ತದೆ. ಈ ಅದ್ಭುತ ಶಕ್ತಿ ವಿಕೇಂದ್ರಿತ ವ್ಯವಸ್ಥೆಯನ್ನು ತನ್ನದಾಗಿಸಿಕೊಂಡಿದೆ. ಈ ಅದ್ಭುತಶಕ್ತಿ ತಾನೇ ತಾನಾಗಿ ಎಲ್ಲವನ್ನೂ ಆಗ ಮಾಡಲು ಹೋಗುವುದಿಲ್ಲ. ವಿಕೇಂದ್ರಿತ ಪದ್ಧತಿಯಲ್ಲಿ ಎಲ್ಲವೂ ನಿಯಮಾನುಸಾರ ಕೈಗೂಡುವಂತೆ ಒಂದು ವ್ಯವಸ್ಥೆ ಕೆಲಸ ಮಾಡುತ್ತದೆ. ಉದಾಹರಣೆಗೆ ಸೂರ್ಯ ಬೆಳಕನ್ನು ಕೊಡುತ್ತಾನೆ. ಜಗಚ್ಚಕ್ರವಾಗಿ ಕೆಲಸ ಮಾಡುತ್ತಾನೆ. ನೀರನ್ನು ಮೋಡವಾಗಿ ಪರಿವರ್ತಿಸುತ್ತಾನೆ. ಋತುಮಾನಗಳು, ಆಯಾ ಋತುವಿನಲ್ಲಿ ಗಾಳಿ ಬೀಸುವಂತೆಯೋ, ಮಳೆ ಬರುವಂತೆಯೋ, ಚಳಿ ಹೆಚ್ಚುವಂತೆಯೋ, ಉಷ್ಣತೆ ಹೆಚ್ಚುವಂತೆಯೋ ಮಾಡುತ್ತದೆ.

ಹಾಗೆಯೇ ಮಾನವ ಸೃಷ್ಟಿಯೂ ಆಗಿದೆ. ಪ್ರತಿಮಾನವನಿಗೂ ಒಂದು ತಲೆಯನ್ನು, ಒಂದು ಹೃದಯವನ್ನು ಜೋಡಿಸಲಾಗಿದೆ. ತಲೆ ಇರುವುದು ಕೆಟ್ಟದು ಯಾವುದು, ಒಳ್ಳೆಯದು ಯಾವುದು ಎಂದು ನೀವೇ ಯೋಚನೆ ಮಾಡಿ, ಕೆಟ್ಟುದನ್ನು ಚರ್ಚಿಸಿ, ಒಳ್ಳೆಯದನ್ನು ಮಾಡುವುದಕ್ಕಾಗಿ. ಹೃದಯವಿರುವುದು ಪ್ರೀತಿ, ಕರುಣೆ ತೋರಲಿಕ್ಕಾಗಿ. ಮನುಷ್ಯ ತಲೆ, ಹೃದಯಗಳನ್ನು ದುರುಪಯೋಗ ಮಾಡಿಕೊಂಡರೆ, ಅದರ ದುಷ್ಫಲ ಅನುಭವಿಸುವವನೂ ಅವನೇ. ದೇವರನ್ನು ಅಥವಾ ಆಪರಾತ್ಪರ ವಸ್ತುವನ್ನು ಅದಕ್ಕಾಗಿ ದೂಷಿಸಲಾಗದು. ಎಲ್ಲವನ್ನೂ ವಿಕೇಂದ್ರೀಕರಣಗೊಳಿಸಿರುವುದಾಗಿ ಆಪರಾತ್ಪರ ವಸ್ತು ಮಾನವನ ಎಲ್ಲ ಒಳ್ಳೆಯ ಕೆಲಸವನ್ನೂ, ದುರ್ಮಾರ್ಗದ ಕೆಲಸಗಳನ್ನೂ ಸಾಕ್ಷೀಭೂತನಾಗಿ ನೋಡುತ್ತಿರುತ್ತಾನೆ. ಒಳ್ಳೆಯದನ್ನೋ, ಕೆಟ್ಟದ್ದನ್ನೋ ಮಾಡಿದ ಮನುಷ್ಯ ತನ್ನ ಕರ್ಮಕ್ಕನುಸಾರ ಉತ್ತಮ ಫಲವನ್ನೋ, ಕೆಟ್ಟ ಫಲವನ್ನೋ ಅನುಭವಿಸುತ್ತಾನೆ. ಇದು ಸೃಷ್ಟಿ ನಿಯಮ.

ಮಾನವ ಸಮಾಜವೂ ಇದೇ ರೀತಿ ಅಧಿಕಾರ ವಿಕೇಂದ್ರೀಕರಣ ಮಾಡಿಕೊಂಡು ಬಾಳಿದರೆ, ಇಡೀ ಸಮಾಜಕ್ಕೆ ಒಂದು ಬದ್ಧತೆ ಬರುತ್ತದೆ.

ಸ್ವರಾಜ್ಯ ಎಂಬುದರ ಅರ್ಥವೂ ಇದೆ. ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಯನ್ನು ಅರಿತು ನಡೆಯುವುದೇ ಸ್ವರಾಜ್ಯ. ಸ್ವರಾಜ್ಯದಲ್ಲಿ ದುಡಿಯುವವನು-ದುಡಿಸಿಕೊಳ್ಳುವವನು, ಆಳುವವನು-ಆಳಿಸಿಕೊಳ್ಳುವವನು, ಉಳ್ಳವನು-ಬಡವ, ಜ್ಞಾನಿ-ಅಜ್ಞಾನಿ ಎಂಬ ಭೇದಾಸುರರ ಸುಳಿವೇ ಇರಬಾರದು.

ಇಂದು ಭಾರತದಲ್ಲಿ ಜಾರಿಯಲ್ಲಿರುವುದು ಪ್ರಜಾಪ್ರತಿನಿಧಿ ಪ್ರಭುತ್ವ, ಪ್ರಜಾಪ್ರಭುತ್ವ ಅಲ್ಲ. ಪ್ರಜಾಪ್ರಭುತ್ವದಲ್ಲಿ ದೇಶದ ಆಗು-ಹೋಗುಗಳ ಎಲ್ಲಾ ಜವಾಬ್ದಾರಿ ಪ್ರಜೆಯದೇ ಆಗಿರಬೇಕು. ಅದಾಗಬೇಕಾದರೆ ಹೆಚ್ಚು ಹೆಚ್ಚು ಜನ ಈ ದೇಶದ ಆಗು-ಹೋಗುಗಳಲ್ಲಿ ಭಾಗವಹಿಸುವ ಹಾಗೆ ಆಗಬೇಕು. ಅದು ಅಧಿಕಾರ ವಿಕೇಂದ್ರೀಕರಣದಿಂದ ಮಾತ್ರ ಸಾಧ್ಯ.

ಗಾಂಧೀಜಿ ಗ್ರಾಮಸ್ವರಾಜ್ಯದ ರೂಪು-ರೇಷೆಗಳನ್ನು ಕುರಿತು ಚಿಂತನೆ ಮಾಡಿದ್ದಾರೆ. ಗ್ರಾಮ ಸ್ವರಾಜ್ಯ ಅಧಿಕಾರ ವಿಕೇಂದ್ರೀಕರಣದ ಪ್ರಕಟರೂಪ. ಅಧಿಕಾರ ಕೇಂದ್ರ ಸರ್ಕಾರದಲ್ಲಿ, ರಾಜ್ಯ ಸರ್ಕಾರಗಳಲ್ಲಿ ಹೆಪ್ಪುಗಟ್ಟಿ ಕೂರಬಾರದು. ಹಿಡಿಮಂದಿ ಈ ದೇಶದ ಭವಿಷ್ಯವನ್ನು ರೂಪಿಸುವ ಗುತ್ತಿಗೆ ಪದ್ಧತಿ ಸರಿಯಲ್ಲ. Participatory Democracy ನಮ್ಮ ಗುರಿಯಾದರೆ, ಗ್ರಾಮ ಪ್ರಧಾನವಾದ ದೇಶ ಭಾರತವಾದ್ದರಿಂದ ಆಡಳಿತಾಧಿಕಾರ ಎಲ್ಲ ಗ್ರಾಮಗಳಿಗೂ ಹಂಚಿಹೋಗಬೇಕು. ಆಯಾ ಗ್ರಾಮದ ಆಗು-ಹೋಗುಗಳಿಗೆಲ್ಲ ಆಯಾ ಗ್ರಾಮದವರೇ ಹೊಣೆಗಾರರಾಗಬೇಕು. ಈ ದೃಷ್ಟಿಯಿಂದ ಪ್ರತಿಯೊಂದು ಗ್ರಾಮವೂ ಒಂದೊಂದು ಗಣರಾಜ್ಯ ಆಗಬೇಕು ಎಂದರು ಗಾಂಧೀಜಿ.

ಕೇಂದ್ರೀಕೃತ ವ್ಯವಸ್ಥೆಯಲ್ಲಿರುವ ದೋಷವನ್ನು ಕುರಿತು ಅವರು ಹಾಗೆ ಹೇಳುತ್ತಾರೆ. ದೆಹಲಿಯಿಂದ ಭಾರತಾದ್ಯಂತ ಕೊಳಾಯಿ ಮೂಲಕ ನೀರನ್ನು ಸರಬರಾಜು ಮಾಡುವ ಒಂದು ವ್ಯವಸ್ಥೆಯನ್ನು ಕೇಂದ್ರ ಸರ್ಕಾರ ಜಾರಿಗೆ ಕೊಡುವುದೆಂದು ಭಾವಿಸೋಣ. ಅಕಸ್ಮಾತ್ ದೆಹಲಿಯ ರಿಸರ್ವಾಯರ್‌ನಲ್ಲಿ ಕಾಲಾರಾ ರೋಗಾಣುಗಳು ಕಾಣಿಸಿಕೊಂಡಿತು ಎಂದರೆ ಆಗ ಕಾಲರಾ ರೋಗಕ್ಕೆ ದೆಹಲಿಯ ಜನ ಮಾತ್ರವಲ್ಲದೆ ಆ ನೀರನ್ನು ಕುಡಿದ ಇಡೀ ದೇಶದ ಜನ ತುತ್ತಾಗಬೇಕಾಗುತ್ತದೆ. ಅದರಂತೆಯೇ ದೆಹಲಿಯಲ್ಲಿ ಮಾಡಿದ ಒಂದು ಕೆಟ್ಟ ಕಾನೂನಿನಿಂದ ಇಡೀ ದೇಶದ ಜನ ತೊಂದರೆ ಅನುಭವಿಸಬೇಕಾಗುತ್ತದೆ. ರಿಜರ್ವಾಯರ್ ಆಯಾ ಊರಿನಲ್ಲಿ ಮಾಡಿಕೊಂಡರೆ ಏನಾದರೂ ಅನಾಹುತ ಸಂಭವಿಸಿದರೆ ಅದು ಆ ಊರಿಗೆ ಮಾತ್ರ ಸೀಮಿತವಾಗುವುದು. ಈ ದೃಷ್ಟಿಯಿಂದ ವಿಕೇಂದ್ರಿತ ಆಡಳಿತ ಪದ್ಧತಿಯ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡು ನಮ್ಮ ದೇಶದಲ್ಲಿ ಅನಿವಾರ್ಯವಾಗಿ ಜಾರಿಗೆ ಕೊಡಬೇಕಾದೀತು ಎಂದಿದ್ದಾರೆ.

ಗ್ರಾಮ ಸ್ವರಾಜ್ಯವನ್ನು ನಾವು ಜಾರಿಗೆ ಕೊಡುವುದೇ ಆದರೆ ಅಧಿಕಾರ ವಿಕೇಂದ್ರೀಕರಣ, ಆರ್ಥಿಕ ವಿಕೇಂದ್ರೀಕರಣ ಆಗಲೇಬೇಕು. ಪ್ರತಿಯೊಂದು ಗ್ರಾಮವೂ ಸ್ವಪರಿಪೂರ್ಣವಾಗಬೇಕು. ಆಹಾರ, ಶಿಕ್ಷಣ, ಆರೋಗ್ಯ, ಕೈಗಾರಿಕೆ ಮತ್ತು ಅಭಿವೃದ್ಧಿ, ನ್ಯಾಯ ವಿತರಣೆ, ಊರಿನ

ರಕ್ಷಣೆ, ಇವೆಲ್ಲ ಬಾಬುಗಳ ಪೂರ್ಣ ಜವಾಬ್ದಾರಿ ಆಯಾ ಗ್ರಾಮದ್ದೇ ಆಗಬೇಕು. ಗ್ರಾಮ ತಾನು ಬಿಟ್ಟುಕೊಟ್ಟ ಜವಾಬ್ದಾರಿಗಳನ್ನು (Residuary Power) ಮಾತ್ರ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಂಚಿಕೊಳ್ಳಬೇಕು. ಟಂಕಸಾಲೆ ನಡೆಸುವುದು, ಸಮಗ್ರ ದೇಶದ ಭದ್ರತೆಗಾಗಿ ಸೈನ್ಯ ಇಟ್ಟುಕೊಳ್ಳುವದು, ಅಂತರರಾಷ್ಟ್ರೀಯ ವ್ಯವಹಾರಗಳನ್ನು ನಡೆಸುವುದು, ಇಡೀ ದೇಶಕ್ಕೆ ಸಂಬಂಧಪಟ್ಟಂತೆ ರಾಷ್ಟ್ರನೀತಿ ನಿರೂಪಣೆ ಮಾಡುವುದು, ರಾಜ್ಯಾಂಗದಲ್ಲಿ ಬರೆದಿರುವಂತೆ ಕಾನೂನು ಕಟ್ಟಳೆಗಳು ಜಾರಿಗೊಳಿಸಲಾಗುತ್ತಿದೆಯೋ ಎಂಬುದನ್ನು ನೋಡಿಕೊಳ್ಳುವುದು, State Policy ಯ ನಿರ್ದೇಶನದ ನೀತಿಯನ್ನು ಅನುಷ್ಠಾನಗೊಳಿಸುವುದು, ಅಂತರರಾಜ್ಯ ರಸ್ತೆ, ರೈಲು ಮಾರ್ಗನಿರ್ಮಾಣ ಮಾಡುವುದು ಮುಂತಾದ ಹೊಣೆಗಾರಿಕೆ ಕೇಂದ್ರ ಸರ್ಕಾರದ್ದು.

ರಾಜ್ಯದ ನೀರಾವರಿ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುವುದು, ಗೃಹೋದ್ಯೋಗ, ಗ್ರಾಮೋದ್ಯೋಗಗಳಿಗೆ ಧಕ್ಕೆ ಬರದಂತೆ ಕೈಗಾರಿಕಾ ನೀತಿಯನ್ನು ರೂಪಿಸುವುದು ಹಾಗೂ ಕಾರ್ಖಾನೆಗಳನ್ನು ಸ್ಥಾಪಿಸುವುದು, ಅಂತರರಾಜ್ಯ ರಸ್ತೆ ನಿರ್ಮಾಣ, ರೈಲು ಮಾರ್ಗ ನಿರ್ಮಾಣ ಮಾಡುವುದು, ಅಂತರರಾಜ್ಯ ನದಿ ನೀರಿನ ಹಂಚಿಕೆಯ ಬಗೆಗೆ ಒಪ್ಪಂದ ಮಾಡಿಕೊಳ್ಳುವುದು ಮುಂತಾದ ಜವಾಬ್ದಾರಿ ರಾಜ್ಯ ಸರ್ಕಾರಗಳದು.

ಅಧಿಕಾರ ವಿಕೇಂದ್ರೀಕರಣ ಆದಲ್ಲಿ ಭ್ರಷ್ಟಾಚಾರ ಕೇಂದ್ರ ಸರ್ಕಾರದಲ್ಲಿ, ರಾಜ್ಯ ಸರ್ಕಾರಗಳಲ್ಲಿ ಬಹುಮಟ್ಟಿಗೆ ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ಕಾರಣವೆಂದರೆ ಭ್ರಷ್ಟಾಚಾರಕ್ಕೆ ಎಡೆ ಮಾಡುವ ಎಲ್ಲ ಜೀವನಾವಶ್ಯಕ ಬಾಬುಗಳೂ ವಿಕೇಂದ್ರಿತಗೊಂಡಿರುವುದು - ಹಳ್ಳಿ ಹಳ್ಳಿಗೆ ಹಂಚಿಹೋಗಿರುವುದು. ಹಳ್ಳಿಹಳ್ಳಿಗೂ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಅಧಿಕಾರ ದೊರೆತ ಮೇಲೆ, ಹಳ್ಳಿಯ ಸಮಗ್ರ ಅಭಿವೃದ್ಧಿ ಮಾಡುವ ಕರ್ತವ್ಯ ಹಳ್ಳಿಯವರದೇ ಆಗುತ್ತದೆ. ಸಮಗ್ರ ಅಭಿವೃದ್ಧಿ ಎಂದರೆ ಸರ್ವತೋಮುಖ ಅಭಿವೃದ್ಧಿ, ಸಮತೋಲನದ ಅಭಿವೃದ್ಧಿ, ಹಳ್ಳಿಯ ಕೊನೆಯ ವ್ಯಕ್ತಿಗೂ ನ್ಯಾಯ ದೊರಕಿಸುವುದು, ಊಟ ಉದ್ಯೋಗದ ಹಕ್ಕನ್ನು ದೊರಕಿಸಿಕೊಡುವುದು, ಹಳ್ಳಿಯಲ್ಲಿ ಮನೆಮಾಡಿರುವ ಎಲ್ಲ ದುರ್ವ್ಯಸನಗಳನ್ನೂ - ಜೂಜು ಲಾಟರಿ, ಕುಡಿತ, ವ್ಯಭಿಚಾರ, ಬೀಡಿ ಸಿಗರೇಟು ಸೇವನೆ ಎಲ್ಲವನ್ನೂ ನಿರ್ಮೂಲನಗೊಳಿಸುವುದು ವಿಕೇಂದ್ರಿಕೃತ ವ್ಯವಸ್ಥೆಯ ಮುಖ್ಯಗುರಿ.

ಹಳ್ಳಿಯ ಆಡಳಿತವನ್ನು ಹಳ್ಳಿಯವರೇ ನಿಭಾಯಿಸುವುದಾದರೆ, ನಮ್ಮ ಹಳ್ಳಿಗಳು ಸಾಮಾಜಿಕವಾಗಿ ಬದಲಾವಣೆ ಹೊಂದಲೇಬೇಕು. ಇಂದಿನ ಸಮಾಜದಲ್ಲಿ ಅಸಮಾನತೆ ತಾಂಡವವಾಡುತ್ತದೆ. ನಮ್ಮ ಸಮಾಜ ಒಂದು Human Jungle ಎನ್ನುತ್ತಾರೆ ನಾಯಕ ಜಯಪ್ರಕಾಶ ನಾರಾಯಣ್ - ಹುಲಿ ಹುಲ್ಲೆ ಕಾಡಿನಲ್ಲಿ ಒಟ್ಟಿಗೇ ಇರುವಂತೆ ಸಮಾಜದಲ್ಲಿ ಬಲಿಷ್ಠ-ದುರ್ಬಲ, ಶ್ರೀಮಂತ-ಬಡವ, ಶೋಷಕ-ಶೋಷಿತ, ಆಳುವವನು-ಆಳಿಸಿಕೊಳ್ಳುವವನು ಬಾಳ್ವೆ ಮಾಡುತ್ತಿದ್ದಾರೆ. ಇಂತಹ ಸಮಾಜ ಹೋಗಿ, ನಾನು ಎಲ್ಲರಿಗಾಗಿ, ಎಲ್ಲರೂ ನನಗಾಗಿ ಎನ್ನುವ ಸಮಾಜ ಸೃಷ್ಟಿಯಾಗಬೇಕಾಗಿದೆ. ಇಂದಿನ ಸಮಾಜ ಮರಳುದಿಬ್ಬ ಇದ್ದಂತೆ.

ಒಂದು ಬಿರುಗಾಳಿ ಬಂದರೆ ಮರಳಿನ ಕಣಗಳು ಬಿಡಿಬಿಡಿಯಾಗಿ ಬೇರೆಬೇರೆ ದಿಕ್ಕಿಗೆ ಚದರಿ ಹೋಗುತ್ತವೆ. ಅಂದರೆ ಸಮಾಜದಲ್ಲಿ ಐಕ್ಯತೆ ಇಲ್ಲ, ನಾವೆಲ್ಲ ಒಂದು ಎನ್ನುವ ಭಾವನೆ ಇಲ್ಲ. ಒಬ್ಬರ ಹಿತ ಇನ್ನೊಬ್ಬರ ಹಿತಕ್ಕೆ ಮಾರಕ. ಈ ಪರಿಸ್ಥಿತಿ ತೊಲಗಿ ಸಮಾಜ ಜೇಡಿಮಣ್ಣಿನಂತೆ ಜಿಗುಟಾಗಬೇಕೆಂಬುದು ವಿಕೇಂದ್ರೀಕರಣದ ಉದ್ದೇಶ. ಜೇಡಿಮಣ್ಣಿನ ಕಣಕಣವೂ ಒಂದನ್ನು ಬಿಟ್ಟು ಒಂದು ಇರದು. ಎಂಥ ಜಂಝಾವಾತ ಬೀಸಿದರೂ ಹೇಗೆ ಜೇಡಿಮಣ್ಣಿನ ಮುದ್ದೆ ಒಂದುಗೂಡಿಯೇ ಇರುತ್ತದೆಯೋ ಹಾಗಿರಬೇಕು ನಮ್ಮ ಸಮಾಜ. ಸಮಾನತೆ, ಅನ್ಯೋನ್ಯತೆ, ಹಂಚಿಕೊಂಡು ಬಾಳುವ ಮನೋಭಾವ, ಸಮಾಜಕ್ಕಾಗಿ ದುಡಿಯುವ ಸರ್ವ ಸಮರ್ಪಣ ಭಾವನೆ ಇವು ಜನತೆಯಲ್ಲಿ ಮೂಡಿದರೆ ಮಾತ್ರ ಸಮಾಜದ ಎಲ್ಲರಿಗೂ ಸುಖ-ಸಂತೋಷ ಲಭಿಸುವುದು. ಒಟ್ಟಿನಲ್ಲಿ ಶೋಷಣರಹಿತ, ಶಾಸನಮುಕ್ತ, ದಂಡನಿರಪೇಕ್ಷ, ಅಹಿಂಸಾತ್ಮಕ ಸಮಾಜ ರಚನೆಯೇ ಅಧಿಕಾರ ವಿಕೇಂದ್ರೀಕರಣದ - ಅರ್ಥಾತ್ ಗ್ರಾಮ ಸ್ವರಾಜ್ಯ ಸ್ಥಾಪನೆಯ ಅಂತಿಮ ಗುರಿ.

***

# ದಿಲ್ಲಿಗೆ ಹಬ್ಬಿದ ಹಳ್ಳಿಯ ಬಳ್ಳಿ



**ಗೊ.ರು. ಚನ್ನಬಸಪ್ಪ**

**"ಹೊಯಿದವರೆನ್ನ ಹೊರೆದವರೆಂಬೆ, ಬಯಿದವರೆನ್ನ ಬಂಧುಗಳೆಂಬೆ, ನಿಂದಿಸಿದವರೆನ್ನ ತಂದೆ-ತಾಯಿಗಳೆಂಬೆ, ಆಳಿಗೊಂಡವರೆನ್ನ ಆಳ್ದರೆಂಬೆ, ಜರಿದವರೆನ್ನ ಜನ್ಮಬಂಧುಗಳೆಂಬೆ, ಹೊಗಳಿದವರೆನ್ನ ಹೊನ್ನಶೂಲದಲ್ಲಿಕ್ಕಿದರೆಂಬೆ ಕೂಡಲಸಂಗಮದೇವಾ"**

ಲೋಕದಾರ್ಶನಿಕ ಬಸವಣ್ಣನವರ ಈ ನುಡಿಗಳಂತೆ ನಡೆದ, ನಡೆಯುತ್ತಿರುವ ವಿರಳ ವ್ಯಕ್ತಿ ಮರಳವಾಡಿ ವೀರಶೆಟ್ಟಯ್ಯ ರಾಜಶೇಖರನ್. ಮಾನವೀಯ ಮೌಲ್ಯಗಳನ್ನೇ ಮಡಿಲಲ್ಲಿ ಕಟ್ಟಿಕೊಂಡಿದ್ದ ತಂದೆ-ತಾಯಿಗಳಿಂದ ಬಂದ ಸಂಸ್ಕಾರ, ಬದುಕಿನುದ್ದಕ್ಕೂ ಆ ಸಂಸ್ಕಾರದ ಸಾತ್ವಿಕತೆಯನ್ನು ಉಳಿಸಿಕೊಂಡು ಬಂದ ಜೀವನ ಸಭ್ಯತೆ, ಸಮಕಾಲೀನ ಸನ್ನಿವೇಶದಲ್ಲಿ ಕಾಣಸಿಗುವ ಅಪರೂಪದ ಶರಣ ಜೀವನ, ನಿಯಮ-ನಿಯತಿಗಳಿಗೆ, ನಿಗರ್ವ-ನಿಷ್ಕಪಟಗಳಿಗೆ ಒಂದು ನಿಚ್ಚಳ ನಿದರ್ಶನ, ರಾಜಶೇಖರನ್ ಅವರನ್ನು ಕುರಿತ ಈ ಮಾತುಗಳು ಉತ್ಪ್ರೇಕ್ಷೆಯಲ್ಲ; ಸಹಜ ಸತ್ಯ.

ಎಂ.ವಿ.ರಾಜಶೇಖರನ್ ಅವರ ಪರಿಚಯ ನನಗಾದದ್ದು ಮೂರೂವರೆ ದಶಕಗಳ ಹಿಂದೆ. ನಾನು ಆಗ (೧೯೬೬) ರಾಜ್ಯ ಸರ್ಕಾರದ ವಾರ್ತಾ ಇಲಾಖೆಯಲ್ಲಿದ್ದೆ. ಸಮುದಾಯ ಅಭಿವೃದ್ಧಿ ಇಲಾಖೆಯ ಪರವಾಗಿ ವಾರ್ತಾ ಇಲಾಖೆ ಪ್ರಕಟಿಸುತ್ತಿದ್ದ 'ಪಂಚಾಯತಿ ರಾಜ್ಯ' ಪತ್ರಿಕೆಯ ಉಪ ಸಂಪಾದಕನಾಗಿದ್ದೆ. ರಾಜಶೇಖರನ್ ಅವರು ಆಗ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಯುವಕ ರೈತ ಸಮಾಜದ ಅಧ್ಯಕ್ಷರಾಗಿದ್ದರು. ಕೃಷಿಕ ಸಮಾಜಕ್ಕೆ ತನ್ನದೇ ಆದ ಮುದ್ರಣಾಲಯ ಇರಬೇಕೆಂಬ ಉದ್ದೇಶದಿಂದ ಸಮಾಜದ ಆವರಣದಲ್ಲೇ ಹೊಸ ಮುದ್ರಣಾಲಯವನ್ನು ಅವರು ಸ್ಥಾಪಿಸಿದ್ದರು. ಕೃಷಿ ಮತ್ತು ಯುವಜನತೆಗೆ ಸಂಬಂಧಿಸಿದ ಎರಡು ಮಾಸಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರು.

ಕೃಷಿಕ ಸಮಾಜದ ಮುದ್ರಣಾಲಯ ಸ್ವಾವಲಂಬಿಯಾಗಿರಬೇಕೆಂದು ವಿಚಾರಮಾಡಿ, ರಾಜಶೇಖರನ್ ಅವರು ಸರ್ಕಾರದ 'ಪಂಚಾಯತ್

ರಾಜ್ಯ' ಪತ್ರಿಕೆಯ ಮುದ್ರಣವೂ ಅಲ್ಲೇ ನಡೆಯುವಂತೆ ವ್ಯವಸ್ಥೆ ಮಾಡಿದ್ದರು. ಆ ಪತ್ರಿಕೆಯ ಮುದ್ರಣ ಸಂಬಂಧ ನನಗೆ ಕೃಷಿಕ ಸಮಾಜದ ಸಂಪರ್ಕವುಂಟಾಯಿತು. ಆಗ ಸಹಜವಾಗಿ ರಾಜಶೇಖರನ್ ಅವರ ಪರಿಚಯವಾಯಿತು. ಆ ಪರಿಚಯ ಗಾಢವಾದಂತೆಲ್ಲ ಕೃಷಿಕ ಸಮಾಜದ ಪ್ರಕಟಣೆಗಳು ಮತ್ತಿತರ ಕಾರ್ಯಚಟುವಟಿಕೆಗಳಲ್ಲಿ ನಾನೂ ಪಾಲ್ಗೊಳ್ಳು ವಂತಾಯಿತು.

ರಾಜಶೇಖರನ್ ಅವರೊಡನೆ ನನ್ನ ಸಂಬಂಧ ನಿಕಟವಾಗಲು ಕಾರಣವಾದದ್ದು ಯುವಕ ರೈತ ಸಮಾಜ. ನಾಡಿನ ಯುವಜನರನ್ನು ಸಂಘಟಿಸಲು ಅವರು ನಾನಾ ರೂಪದ ಕಾರ್ಯಕ್ರಮಗಳನ್ನು ಯೋಜಿಸುತ್ತಿದ್ದರು. ಗ್ರಾಮ ಭಾರತದ ಸಾಂಸ್ಕೃತಿಕ ವೈಭವವನ್ನು ನಗರದ ನಾಗರಿಕರಿಗೆ ತೋರಿಸಬೇಕೆಂದು ಅವರು ರಾಜ್ಯ ಕ್ರೀಡಾ ಮಂಡಳಿಯ ನೆರವು ಪಡೆದು ಬೆಂಗಳೂರು ನಗರದಲ್ಲಿ ಬೃಹತ್ ಪ್ರಮಾಣದ ಜನಪದ ಕಲಾಪ್ರದರ್ಶನವೊಂದನ್ನು ಏರ್ಪಡಿಸಿದ್ದರು. ಆಗ ನಮ್ಮ ನಾಡಿನ ಶಿಕ್ಷಣ ತಜ್ಞರೂ, ಸಮರ್ಥ ಆಡಳಿತಗಾರರೂ ಆಗಿದ್ದ ಜೆ.ಬಿ.ಮಲ್ಲಾರಾಧ್ಯ ಅವರು ಕ್ರೀಡಾ ಮಂಡಳಿ ಅಧ್ಯಕ್ಷರಾಗಿದ್ದರು. ಅವರಿಗೆ ರಾಜಶೇಖರನ್ ಅವರ ಕ್ರಿಯಾಶೀಲತೆಯ ಬಗೆಗೆ ತುಂಬ ಅಭಿಮಾನ. ಅಂತೇ ಕ್ರೀಡಾ ಮಂಡಳಿಯ ಪೂರ್ಣ ನೆರವು ಒದಗಿಸಿದ್ದರು. ಜಾನಪದ ನನ್ನ ಆಸಕ್ತಿಯ ಕ್ಷೇತ್ರವೂ ಆದ ಕಾರಣ ನಾನೂ ಪೂರ್ಣವಾಗಿ ಆ ಕಲಾಮೇಳದ ಸಂಘಟನೆಯಲ್ಲಿ ತೊಡಗಿಕೊಂಡೆ. ನಾಡಿನ ನಾನಾ ಭಾಗದಿಂದ ಬಂದಿದ್ದ ಯುವರೈತ ಜನಪದ ಕಲಾವಿದರ ಆ ಮೇಳ ಅತ್ಯಂತ ಯಶಸ್ವಿಯಾಗಿ ನಡೆಯಿತು. ಆ ಕಲಾಮೇಳದಲ್ಲಿ ನಾನು ನಿರ್ವಹಿಸಿದ ಕಾರ್ಯಭಾರ ರಾಜಶೇಖರನ್ ಅವರು ನನ್ನ ಬಗೆಗೆ ಹೆಚ್ಚಿನ ವಿಶ್ವಾಸ ತಾಳಲು ಕಾರಣವಾಯಿತೆಂದು ಹೇಳಬಹುದು. ಅದೇ ವಿಶ್ವಾಸ ನಮ್ಮಿಬ್ಬರ ಮಧ್ಯೆ ಇಂದಿಗೂ ಕುಂದದಂತೆ ಉಳಿದಿದೆ, ಎಂದಿಗೂ ಉಳಿಯುತ್ತದೆ - ಒಂದು ರೀತಿಯ ಕರುಳ ಸಂಬಂಧದಂತೆ.

ರಾಜಶೇಖರನ್ ಅವರ ಮಾವಂದಿರಾದ ಸಿದ್ಧವನಹಳ್ಳಿ ನಿಜಲಿಂಗಪ್ಪನವರಿಗೆ ನಮ್ಮೂರು ಗೊಂಡೇದಹಳ್ಳಿಯ ಬಗೆಗೆ ತುಂಬ ಪ್ರೀತಿ. ನಿಜಲಿಂಗಪ್ಪನವರು ಬದುಕಿರುವವರೆಗೂ ನಾನು ಅವರನ್ನು ಭೇಟಿಯಾದಾಗಲೆಲ್ಲ, ಹೆಚ್ಚೇನು, ಅವರ ಅಂತಿಮ ದಿನಗಳಲ್ಲಿ ಬೌರಿಂಗ್ ಆಸ್ಪತ್ರೆಯಲ್ಲಿ ಅವರನ್ನು ಭೇಟಿಯಾದಾಗಲೂ ಸಹ, ನಮ್ಮ ಊರಿನ ಜನರ ಕ್ಷೇಮ ಸಮಾಚಾರ ವಿಚಾರಿಸುತ್ತಿದ್ದರು. ಅವರು ನಮ್ಮ ಊರನ್ನು ಎಷ್ಟು ಪ್ರೀತಿಸುತ್ತಿದ್ದರೆಂದರೆ, ಆ ಮಾರ್ಗದಲ್ಲಿ ಪ್ರಯಾಣಮಾಡುವಾಗ ರಸ್ತೆಯ ಪಕ್ಕದಲ್ಲಿ 'ಗೊಂಡೇದಹಳ್ಳಿ' ನಾಮಫಲಕ ಕಣ್ಣಿಗೆ ಬಿದ್ದರೆ ಸಾಕು, ಊರೊಳಗೆ ಬಂದು ಹಳ್ಳಿಗರನ್ನು ಮಾತನಾಡಿಸಿ ಹೋಗುವಷ್ಟು. ನಿಜಲಿಂಗಪ್ಪನವರು ನನಗೆ ಅಷ್ಟು ನಿಕಟವಾಗಿದ್ದರೂ ಅವರ ಅಳಿಯ ರಾಜಶೇಖರನ್ ಎಂದು ನನಗೆ ತಿಳಿದದ್ದು ಅವರ ಪರಿಚಯವಾದ ಎಷ್ಟೋ ದಿನಗಳ ನಂತರ. ನಾನು ವಾರ್ತಾ ಇಲಾಖೆಯಲ್ಲಿದ್ದಾಗ ನಿಜಲಿಂಗಪ್ಪನವರೇ ಮುಖ್ಯಮಂತ್ರಿಗಳಾಗಿದ್ದರು. ಆದರೂ ರಾಜಶೇಖರನ್ ನನಗೆ ತಿಳಿದಂತೆ

ಒಮ್ಮೆಯೂ ತಾವು ಮುಖ್ಯಮಂತ್ರಿಗಳ ಅಳಿಯ ಎಂದು ಹೇಳಿಕೊಳ್ಳುವ ಹೆಮ್ಮೆಗೆ ಹೋದವರಲ್ಲ. ರಾಜಶೇಖರನ್ ದೊಡ್ಡವರ ಹೆಸರು ಹೇಳಿಕೊಂಡು ದೊಡ್ಡವರಾದವರಲ್ಲ, ಶ್ರದ್ಧೆಯ ಸೇವೆಯಿಂದ ದೊಡ್ಡವರಾದವರು.

ರಾಜಶೇಖರನ್ ಅವರು ರಾಜಕಾರಣಿಗಳೇನೋ ನಿಜ. ಆದರೆ ಇಂದು ಎಲ್ಲ ಕಡೆ ವಿಜೃಂಭಿಸುತ್ತಿರುವ ಕೆಲವು ರಾಜಕಾರಣಿಗಳ ಒಂದು 'ಲಕ್ಷಣ'ವೂ ಅವರಲ್ಲಿ ಇಲ್ಲ! ನಾನು ಅವರನ್ನು ಒಬ್ಬ ರಾಜಕಾರಣಿಯಾಗಿ ಎಂದೂ ನೋಡಿಲ್ಲ. ನನ್ನನ್ನು ಅವರೊಡನೆ ಬೆಸೆದಿರುವ ಬೆಸುಗೆಯೆಂದರೆ ಅವರ ಗ್ರಾಮೀಣ ಕಳಕಳಿ. ನಿರಂತರವಾದ ಜನಸಂಪರ್ಕ, ಅವಿರತವಾದ ಸಮಷ್ಟಿ ಚಿಂತನ, ವೈಯಕ್ತಿಕ ಸಭ್ಯತೆ, ಪ್ರಾಮಾಣಿಕ ನುಡಿ-ನಡೆ ಮತ್ತು ರಾಷ್ಟ್ರೀಯ ದೃಷ್ಟಿ-ವಿಶಿಷ್ಟ ಗುಣಗಳು.

ರಾಜಶೇಖರನ್ ಅವರು ಲೋಕಸಭಾ ಸದಸ್ಯರಾಗಿದ್ದಾಗ, ಸಂಸತ್ತಿನಲ್ಲಿ ಅವರು ಮಾಡಿದ ಭಾಷಣದ ಪ್ರತಿಗಳನ್ನು ಆಗಿಂದಾಗಲೇ ನನಗೆ ಕಳುಹಿಸುತ್ತಿದ್ದರು. ನಾನು ಆ ಭಾಷಣಗಳನ್ನು ಕನ್ನಡಕ್ಕೆ ಅನುವಾದಿಸಿ, ಅವರ ಕನಕಪುರ ಲೋಕಸಭಾ ಕ್ಷೇತ್ರದ ಎಲ್ಲ ಗ್ರಾಮ ಪಂಚಾಯತಿ, ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಜಿಲ್ಲಾ ಮಂಡಲಿಗಳ ಸದಸ್ಯರಿಗೂ ಕಳುಹಿಸುತ್ತಿದ್ದೆ. ಇದರಿಂದಾಗಿ ಅವರ ಕ್ಷೇತ್ರದ ಮತದಾರರಿಗೆ ತಮ್ಮ ಪ್ರತಿನಿಧಿಯ ನೀತಿ-ನಿಲುವುಗಳನ್ನು ಗಮನಿಸಲು ಅವಕಾಶವಾಗುತ್ತಿತ್ತು. ರಾಜಶೇಖರನ್ ಅವರು ಲೋಕಸಭೆಯಲ್ಲಿ ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ಮತ್ತು ಗ್ರಾಮೀಣ ಕೃಷಿಕರು ಹಾಗೂ ಕೃಷಿ ಕಾರ್ಮಿಕರ ಹಿತಕ್ಕೆ ಸಂಬಂಧಿಸಿದ ವಿಚಾರಗಳನ್ನು ಪ್ರಸ್ತಾಪಿಸಿದಾಗ ಸಹಜವಾಗಿ ಮತದಾರರು ಅಭಿಮಾನ ಪಡುತ್ತಿದ್ದರು. ತಮ್ಮನ್ನು ಆಯ್ಕೆಮಾಡಿದ ಮತದಾರರೊಡನೆ ರಾಜಶೇಖರನ್ ಅವರಂತೆ ಜಾಗೃತ ಸಂಪರ್ಕವಿಟ್ಟುಕೊಳ್ಳುವ ಜನಪ್ರತಿನಿಧಿಗಳು ನಿಜಕ್ಕೂ ವಿರಳ.

ತಮ್ಮ ಕ್ಷೇತ್ರದ ಮಂಚನಬೆಲೆ ನೀರಾವರಿ ಯೋಜನೆಯಿರಲಿ, (ವಾಸ್ತವವಾಗಿ ಮಂಚನಬೆಲೆ ಯೋಜನೆಗಾಗಿ ಅವರು ನಡೆಸಿರುವ ಪತ್ರ ವ್ಯವಹಾರ ಮತ್ತು ಪ್ರಯತ್ನಗಳೇ ಒಂದು ದಾಖಲೆಯ ಗ್ರಂಥವಾಗುತ್ತವೆ). ಅಭಾವ ಪರಿಸ್ಥಿತಿಯ ಸಂದರ್ಭಗಳಲ್ಲಿ ಗ್ರಾಮಾಂತರ ರೈತರ ಕಷ್ಟ ಸ್ಥಿತಿ ವಿಚಾರಿಸಿ ಅವರಿಗೆ ಪರಿಹಾರ ದೊರಕಿಸುವುದಿರಲಿ, ಸಣ್ಣ ರೈತರ ಅಭಿವೃದ್ಧಿ ಯೋಜನೆ, ಗ್ರಾಮಾಂತರ ಪ್ರದೇಶದ ರಸ್ತೆ-ನೀರಾವರಿ ಸೌಲಭ್ಯ ವಿಸ್ತರಣೆ, ಕೃಷಿ ಉಪಕರಣ ಮತ್ತು ಸಾಧನ ಸಲಕರಣೆಗಳ ಮೇಲಿನ ತೆರಿಗೆ ವಿನಾಯಿತಿ, ರೇಷ್ಮೆ ಬೆಳೆಗಾರರ ಕಷ್ಟ ನಿವಾರಣೆ, ಗ್ರಾಮೀಣ ಯುವಜನ, ಮಹಿಳೆಯರು ಮತ್ತು ದೀನ ದಲಿತರ ಕ್ಷೇಮಾಭ್ಯುದಯ-ಹೀಗೆ ಯಾವುದೇ ವಿಷಯವಿರಲಿ, ಅಂತಾರಾಷ್ಟ್ರೀಯ ಸಂಬಂಧವಿರಲಿ, ಜನಜಾಗೃತಿಯ ಚಟುವಟಿಕೆಗಳೇ ಇರಲಿ, ರಾಜಶೇಖರನ್ ಅವರದು ಪ್ರಾಮಾಣಿಕ ಪಾತ್ರ, ಸಕ್ರಿಯ ಮತ್ತು ಪರಿಣಾಮಕಾರಿ ಪಾತ್ರ.

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಅಗಾಧ ಅನುಭವ ಮತ್ತು ತಜ್ಞತೆಯನ್ನು ಪಡೆದಿರುವ ರಾಜಶೇಖರನ್ ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ನಡೆಯುವ ಗ್ರಾಮೀಣ ಅಭಿವೃದ್ಧಿ ಕಾರ್ಯಗಳನ್ನು ಅಧ್ಯಯನ ಮಾಡಿದ್ದಾರೆ. ಅನೇಕ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ತುಂಬ ವಿಚಾರಪೂರ್ಣ ಮತ್ತು ಕಾರ್ಯಶೀಲ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮತ್ತು ಪತ್ರಿಕೋದ್ಯಮಗಳಲ್ಲಿ ಪದವೀಧರರಾದ ರಾಜಶೇಖರನ್ ಅಮೇರಿಕಾದ ಕಾನ್ಸಾಸ್ ವಿಶ್ವವಿದ್ಯಾಲಯದಲ್ಲಿ ಕೃಷಿ ಮತ್ತು ವಿಸ್ತರಣಾ ಸೇವೆಗಳಲ್ಲಿ ತಾಂತ್ರಿಕ ತರಬೇತಿ ಪಡೆದಿದ್ದಾರೆ. ಮಿಸ್ಸೌರಿ ವಿಶ್ವವಿದ್ಯಾಲಯದಲ್ಲಿ ಸಮತೋಲನ ಬೇಸಾಯ, ಕೃಷಿ ವಿಸ್ತರಣೆ, ಸಹಕಾರ, ಮಾರುಕಟ್ಟೆ ಇತ್ಯಾದಿ ವಿಷಯಗಳಲ್ಲಿ ತರಬೇತಿ ಹೊಂದಿದ್ದಾರೆ.

ಹುಟ್ಟಿ ಬಂದ ಗ್ರಾಮೀಣ ಪರಿಸರ, ಪಡೆದ ಶಿಕ್ಷಣ ಮತ್ತು ತರಬೇತಿ, ನಡೆಸಿದ ವ್ಯಾಪಕ ವಿದೇಶಿ ಪ್ರವಾಸ - ಇವೆಲ್ಲವೂ ರಾಜಶೇಖರನ್ ಅವರ ಕಾರ್ಯದಕ್ಷತೆಗೆ ಹಿನ್ನೆಲೆಯಾಗಿವೆ. ಬಹುಶಃ ಸರ್ಕಾರೇತರ ಸ್ವಯಂಸೇವಾ ಸಂಘಟನೆಗಳ ಪರವಾಗಿ ರಾಜಶೇಖರನ್ ಅವರಷ್ಟು ವಿಶ್ವಪರ್ಯಟನ ಮಾಡಿರುವವರನ್ನು ನಾನು ಕಂಡಿಲ್ಲ. ಗ್ರಾಮೀಣ ಅಭಿವೃದ್ಧಿಯಿಂದ ಮಾತ್ರ ಹಿಂದುಳಿದ ರಾಷ್ಟ್ರಗಳು ಮುಂದೆ ಬರಲು ಸಾಧ್ಯ ಎಂಬುದು ರಾಜಶೇಖರನ್ ಅವರ ದೃಢವಾದ ನಿಲುವು. ಆ ದೃಷ್ಟಿಯಿಂದಲೇ ಅವರು ಸ್ಥಾಪಿಸಿರುವ 'ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ' ಗ್ರಾಮೀಣ ಮಹಿಳೆಯರು, ಯುವಜನ ಮತ್ತು ಪರಿಸರ ಸಂರಕ್ಷಣೆ ಸೇರಿದಂತೆ ಬಡಜನತೆಯನ್ನು ಕೇಂದ್ರ ಗಮನದಲ್ಲಿಟ್ಟುಕೊಂಡು ಸಂಶೋಧನೆ, ತರಬೇತಿ ಮತ್ತು ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿರುವ ಒಂದು ಮಹತ್ವದ ಸೇವಾ ಸಂಸ್ಥೆಯಾಗಿರುವುದು ಕರ್ನಾಟಕಕ್ಕೆ ಹೆಮ್ಮೆಯುಂಟುಮಾಡಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆಯುತ್ತಿದ್ದಾಗಲೇ 'ಮಿತ್ರಮೇಳ' ಎಂಬ ಸಾಂಸ್ಕೃತಿಕ ಸಂಘಟನೆಯ ಅಧ್ಯಕ್ಷರಾಗಿದ್ದ ರಾಜಶೇಖರನ್ ಅವರಿಗೆ ಸ್ವಯಂಸೇವಾ ಸಂಸ್ಥೆಗಳನ್ನು ಕಟ್ಟಿ ಬೆಳೆಸುವಲ್ಲಿ ಅತೀವ ಆಸಕ್ತಿ. ಸ್ವತಂತ್ರ ಭಾರತವು ವಿಶ್ವದಲ್ಲಿ ಒಂದು ಸ್ವಾಭಿಮಾನಿ, ಸ್ವಾವಲಂಬಿ ಮತ್ತು ಸಶಕ್ತ ರಾಷ್ಟ್ರವಾಗಿ ರೂಪುಗೊಳ್ಳಲು ಸರ್ಕಾರಿ ಸಂಸ್ಥೆಗಳಿಗಿಂತ ಸ್ವಯಂ ಸೇವಾ ಸಂಸ್ಥೆಗಳೇ ಪರಿಣಾಮಕಾರಿ ಪಾತ್ರ ವಹಿಸುವಂತಾಗಬೇಕು ಎಂದು ರಾಜಶೇಖರನ್ ಅವರು ಯಾವಾಗಲೂ ಹೇಳುತ್ತಾರೆ. ಹಾಗೆಯೇ, ಭಾರತ ಸ್ವಾತಂತ್ರ್ಯಾನಂತರ ನಮ್ಮ ಸ್ವಯಂಸೇವಾ ಚಳವಳಿ ನಿರೀಕ್ಷಿತ ದಿಸೆಯಲ್ಲಿ ಸಾಗದೆ ಕೇವಲ ಸಹಾಯಧನ ಬಳಕೆಯ ಚಳವಳಿಯಾಗಿರುವುದಕ್ಕೆ ತುಂಬ ನೊಂದುಕೊಳ್ಳುತ್ತಾರೆ.

ರಾಜಶೇಖರನ್ ಅವರು ಜಾಗತಿಕ ಮಟ್ಟದ ಅನೇಕ ಸಂಸ್ಥೆಗಳು ಮತ್ತು ಮಂಡಳಿಗಳಲ್ಲಿ ತಜ್ಞ ಸಮಾಲೋಚಕರಾಗಿ, ಸಲಹೆಗಾರರಾಗಿ, ಅಧ್ಯಕ್ಷರಾಗಿ ಮತ್ತು ಸದಸ್ಯರಾಗಿ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ವಿಶ್ವದ ಅನೇಕ ಕ್ಷೇತ್ರತಜ್ಞರ ನಿಕಟ ಪರಿಚಯ ಅವರಿಗಿದೆ. ದೇಶ-ವಿದೇಶಗಳನ್ನು ನೋಡಿದ್ದಾರೆ. ಕೋಶವನ್ನು ಓದಿದ್ದಾರೆ. ನಾನು ಮೊದಲೇ ಹೇಳಿದಂತೆ

ಅವರು ನನ್ನ ದೃಷ್ಟಿಯಲ್ಲಿ ಕೇವಲ ರಾಜಕಾರಣಿಯಲ್ಲ, ಅವರೊಬ್ಬ ರಾಷ್ಟ್ರೀಯ ದೃಷ್ಟಿಯ ಸುಸಂಸ್ಕೃತ ಸಮಾಜ ನಿರ್ಮಾಣದ ಆಶಾವಾದಿ. ಅವರಿಗೆ ನಮ್ಮ ದೇಶದ ಇತಿಹಾಸ, ಪರಂಪರೆ, ಸಂಸ್ಕೃತಿ ಮತ್ತು ಸಂಪನ್ಮೂಲಗಳ ಬಗೆಗೆ ಅನನ್ಯ ಅಭಿಮಾನವಿದೆ. ಆದರೆ ಅವುಗಳು ದುರುಪಯೋಗವಾಗುತ್ತಿರುವ ಬಗೆಗೆ ಅಷ್ಟೇ ಆತಂಕವಿದೆ. ರಾಜಕೀಯ ಕ್ಷೇತ್ರದಲ್ಲಿ ಕುಸಿದು ಹೋಗಿರುವ, ಕಳಂಕಗೊಂಡಿರುವ ಮೌಲ್ಯಗಳ ಬಗೆಗಂತೂ ಮಮ್ಮಲ ಮರುಗುತ್ತಾರೆ. ಬದುಕುವ ಹಕ್ಕಿಯನ್ನು ಬೆಂಕಿಗೆ ಹಾಕಿ ನಲಿಯುವ ಇಂದಿನ ಸನ್ನಿವೇಶದಿಂದ ಅವರು ತುಂಬ ದುಃಖಿತರಾಗಿದ್ದಾರೆ. ಸಾರ್ವಜನಿಕ ಬದುಕಿನಲ್ಲಿ ಸಭ್ಯತೆ ಮಾಯವಾಗುತ್ತಿರುವುದನ್ನು ಕಂಡು ಕರಗಿದ್ದಾರೆ.

ಈ ವಿಷಮ ಪರಿಸ್ಥಿತಿಯ ಸುಧಾರಣೆಗೆ ವಿಚಾರವಂತರೆಲ್ಲ ಮನಮಾಡಬೇಕೆಂದು ರಾಜಶೇಖರನ್ ಹಂಬಲಿಸುತ್ತಾರೆ. ಹನ್ನೆರಡನೆಯ ಶತಮಾನದ ಬಸವಣ್ಣನವರ ಸಿದ್ಧಾಂತ ಎಲ್ಲ ಕಡೆಯೂ ಅನುಷ್ಠಾನಕ್ಕೆ ಬರಬೇಕೆಂದು ಆಶಿಸುತ್ತಾರೆ. "ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ" ಎಂದಿದ್ದರು ಬಸವಣ್ಣನವರು. ಇದನ್ನು ಅಧಿಕಾರದಲ್ಲಿರುವ ಇಂದಿನ ಮಂದಿಯಿಂದ ನಿರೀಕ್ಷಿಸಲು ಸಾಧ್ಯವೆಂದು ನಾನು ತಿಳಿದಿಲ್ಲ.

ಏನೇ ಇರಲಿ, ರಾಜಶೇಖರನ್ ಅವರಂತಹ ಸಾತ್ವಿಕ, ಪ್ರಾಮಾಣಿಕ ಮತ್ತು ಸೇವಾನಿಷ್ಠೆಯ ಜನಪ್ರತಿನಿಧಿಯೊಬ್ಬರು ನಮ್ಮ ಮಧ್ಯೆ ಇದ್ದಾರೆ ಎನ್ನುವುದೇ ಒಂದು ಸಮಾಧಾನದ ಸಂಗತಿ. ರಾಜಶೇಖರನ್ ಹಳ್ಳಿಯಿಂದ ದಿಲ್ಲಿಯವರೆಗೆ ಹಬ್ಬಿರುವ ಬಳ್ಳಿ. ಲೋಕಸಭೆ-ರಾಜ್ಯಸಭೆಗಳ ಸದಸ್ಯರಾಗಿ, ರಾಜ್ಯ ವಿಧಾನಸಭೆ - ವಿಧಾನ ಪರಿಷತ್ತುಗಳ ಸದಸ್ಯರಾಗಿ, ತಾವಿರುವ ರಾಜಕೀಯ ಪಕ್ಷದ ಹೊಣೆಗಾರಿಕೆಯ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿದವರಾಗಿ, ಸುದೀರ್ಘ ಸಾರ್ವಜನಿಕ ಜೀವನಾನುಭವ ಪಡೆದವರಾಗಿ, ಅಂತಾರಾಷ್ಟ್ರೀಯ ಸಂಬಂಧವುಳ್ಳವರಾಗಿ, ಸಮರ್ಥ ಆಡಳಿತ ನಡೆಸಬಲ್ಲವರಾಗಿ - ಹೀಗೆ ಬಹುಮುಖ ಅರ್ಹತೆಗಳಿದ್ದರೂ ರಾಜ್ಯದಲ್ಲಾಗಲೀ, ಕೇಂದ್ರದಲ್ಲಾಗಲೀ ಅವರು ಸಚಿವಸಂಪುಟದಲ್ಲಿರಲು ಅವಕಾಶವಾಗದಿದ್ದುದು ಇಂದಿನ ರಾಜಕೀಯ ವ್ಯವಸ್ಥೆಯ ವಿಪರ್ಯಾಸಕ್ಕೆ ಹಿಡಿದ ಕನ್ನಡಿ.

***

# ನಾವಿಬ್ಬರು ಜೋಡಿಗಳು

ತುಲಸೀದಾಸ ದಾಸಪ್ಪ

ಎಂ.ವಿ.ರಾಜಶೇಖರನ್ ಮತ್ತು ನನ್ನ ಸ್ನೇಹ ಬೆಳೆದು ಐವತ್ತು ವರ್ಷಗಳ ಮೇಲಾಯಿತು. ಮಹಾರಾಜ ಕಾಲೇಜಿನಲ್ಲಿ ನಾವು ಜೊತೆಯಲ್ಲಿ ವ್ಯಾಸಂಗ ಮಾಡಿದುದು ೧೯೫೦ರ ಸುಮಾರಿನಲ್ಲಿ. ನೇರ ಪರಿಚಯ ನಿಕಟವರ್ತಿಗಳಾದೆವು. ನಮ್ಮಲ್ಲಿ ಕೆಲವು ಸಮಾನ ಅಭಿರುಚಿಗಳಿದ್ದರೂ ನನ್ನದು ಚರ್ಚಾಕೂಟ ಕ್ರೀಡೆಗಳಲ್ಲಿ ಹೆಚ್ಚು ಆಸಕ್ತಿ. ಅವರದು ಕಲೆ ಮತ್ತು ಸ್ನೇಹಪರತೆಗೆ ಪ್ರಾಶಸ್ತ್ಯ.

ಅವರು ಮಿತ್ರಮೇಳದ ನೇತಾರರಾದರೆ ನಾನು ಅಲ್ಲಿ ಸಂಗೀತದಲ್ಲಿ ಪಾಲುದಾರ. ಅವರು ಕಾರ್ಯಯೋಜನೆಗಳನ್ನು ರೂಪಿಸಿದರೆ ನಾನು ವ್ಯವಸ್ಥಾಪಕ. ಹೀಗೆ ಪರಸ್ಪರ ಪೂರಕವಾದ ಜೋಡಿ ಎನಿಸಿಕೊಂಡಿದ್ದೆವು. ನನ್ನ ತಾಯಿ-ತಂದೆಯರಿಗೂ ರಾಜಶೇಖರನ್ ಒಬ್ಬ ಮಗನಂತೆ ತೋರುತ್ತಿದ್ದರು.

ನಾವು ಬಿ.ಎ. ಉತ್ತೀರ್ಣರಾದ ಬಳಿಕ ನಾನು ವ್ಯವಸಾಯಕ್ಕೆ ಇಳಿದಿದ್ದೆ. ರಾಜಶೇಖರನ್ ನನ್ನ ತಾಯಿ-ತಂದೆಯವರಿಗೆ ಡೆಲ್ಲಿಯಲ್ಲಿ 'ಲಾ' ವ್ಯಾಸಂಗ ಜೊತೆಯಲ್ಲಿ ಮಾಡಬಹುದೆಂಬ ಸೂಚನೆ ಕೊಟ್ಟು ಕಾರ್ಲೆ ಗ್ರಾಮದಲ್ಲಿದ್ದ ನನಗೆ ವಿಷಯ ಮುಟ್ಟಿಸಿದರು. ದೂರ ಪ್ರದೇಶಕ್ಕೆ ಹೋಗುವ ಕೌತುಕ ನನ್ನ ನಿರ್ಧಾರವನ್ನು ಬದಲಿಸಿತು.

ಡೆಲ್ಲಿಗೆ ತೆರಳುವ ಮುನ್ನ ಶ್ರೀ ರಾಜಶೇಖರನ್ ತಂದೆ-ವಿಧಿಯೇ ನುಡಿಸಿದಂತೆ - ಮಗನನ್ನು ನಿಮಗೊಪ್ಪಿಸಿದ್ದೇನೆಂದು ನನ್ನ ತಾಯಿ-ತಂದೆಯವರಿಗೆ ತಿಳಿಸಿದರು. ಡೆಲ್ಲಿಗೆ ಹೋದ ಕೆಲಕಾಲದಲ್ಲಿ ಅವರು ದೈವಾಧೀನರಾದರು. ಶ್ರೀ ರಾಜಶೇಖರನ್‌ಗೆ ಮನೆಯ ಜವಾಬ್ದಾರಿ ಹೊರುವ ಅನಿರೀಕ್ಷಿತ ಬೆಳವಣಿಗೆ ಜೀವನದಲ್ಲಿ ಆಯಿತು. ಆದರೂ ನಮ್ಮ ಸಂಪರ್ಕ ಯಾವ ರೀತಿಯಲ್ಲೂ ಕುಂದಲಿಲ್ಲ.

ಬೆಂಗಳೂರಿನಲ್ಲಿ ನಮ್ಮ ತಾತನ ಮನೆಯಲ್ಲಿದ್ದ ನನ್ನ ಚಿಕ್ಕಮ್ಮಂದಿರ ಸೋದರರೂ ಇವರನ್ನು ಪ್ರೀತಿಯಿಂದ ಕಾಣುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

## ನಿಜಬಿಂಬ

ಶ್ರೀ ನಿಜಲಿಂಗಪ್ಪನವರಿಗೆ ನಮ್ಮೊಡನೆ ಸದಾ ಕಾಣುತ್ತಿದ್ದ ಪ್ರತಿಭಾವಂತ ರಾಜಶೇಖರನ್ ಬಗ್ಗೆ ವಾತ್ಸಲ್ಯವೇ ಮೂಡಿತು. ಅವರ ನಾಲ್ಕನೇ ಮಗಳು ಕು. ಗಿರಿಜಾರೊಡನೆ ಇವರ ಮದುವೆ ಚಿತ್ರದುರ್ಗದಲ್ಲಿ ಆಯಿತು. ಇದರಲ್ಲಿ ನನ್ನ ತಾಯಿ-ತಂದೆಯವರ ಪಾತ್ರ ಪ್ರಮುಖವಾಗಿಯೇ ಇತ್ತು.

ನಮ್ಮಿಬ್ಬರ ಸಕ್ರಿಯ ರಾಜಕಾರಣ ೧೯೬೭ರಲ್ಲಿ ಲೋಕಸಭೆಗೆ ಚುನಾಯಿತರಾಗುವುದರಲ್ಲಿ ಪ್ರಾರಂಭವಾಯಿತು. ಪುನಃ ಡೆಲ್ಲಿಯಲ್ಲಿ ನಮ್ಮ ಸ್ನೇಹ ಬೆಳೆಯಿತು. ೧೯೬೯ರ ಕಾಂಗ್ರೆಸ್ ಇಬ್ಭಾಗ ನಮ್ಮನ್ನು ರಾಜಕೀಯವಾಗಿ ಬೇರ್ಪಡಿಸಿತಾದರೂ ಸ್ನೇಹಕ್ಕೆ ಚ್ಯುತಿ ಬರಲಿಲ್ಲ.

ಯುವಜನ ಸಂಘ-ಸಂಸ್ಥೆಗಳಲ್ಲಿ, ಕರ್ನಾಟಕ ಯುವಜನ ಕೃಷಿಕ ಸಮಾಜ, ನಂತರ ಕೃಷಿಕ ಸಮಾಜದ ಜವಾಬ್ದಾರಿ - ಹೀಗೆ ಹಲವು ರೀತಿಯಲ್ಲಿ ನಾವು ಪರಸ್ಪರ ಸಹಯೋಗಿಗಳಾಗೇ ನಡೆದೆವು.

ರಾಜಕಾರಣದಲ್ಲಿ ಶ್ರೀ ರಾಜಶೇಖರನ್ ಮುಂದುವರೆದರು. ನಾನು ಹಿಂದೆಗೆದೆ. ಸುಮಾರು ಹದಿನೆಂಟು ವರ್ಷಗಳಾದವು, ನಾನು ಸಕ್ರಿಯ ರಾಜಕಾರಣದಿಂದ ದೂರ ಸರಿದು. ಆದರೂ ನಮ್ಮ ರಾಜಕೀಯ ನೋಟ, ನಿಲುವು ವ್ಯತ್ಯಾಸವಾಗಿಲ್ಲ. ಗ್ರಾಮಾಂತರ ಜನರ ಜೀವನ ಸುಧಾರಿಸಬೇಕೆನ್ನುವ ನಮ್ಮ ಹಂಬಲ ಒಂದೇ ರೀತಿಯದು. ಪರಿಸರದ ಬಗ್ಗೆ, ಗ್ರಾಮೋದ್ಯೋಗದ ಬಗ್ಗೆ, ಸಾಮಾಜಿಕ ನ್ಯಾಯಕ್ಕಾಗಿ ನಡೆಯಬೇಕಾದ ಹೋರಾಟದ ಬಗ್ಗೆ ನಾವು ಸಮಾನ ಮನಸ್ಕರು. ಆದುದರಿಂದಲೇ ನಮ್ಮ ಸೌಹಾರ್ದಮಯ ಸ್ನೇಹ ವರ್ಷಗಳುರುಳಿದಂತೆ ಗಾಢವಾಗುತ್ತಿದೆ.

ಮೌಲ್ಯಾಧಾರಿತ ರಾಜಕಾರಣಕ್ಕೆ ಬದ್ಧರಾದವರು ದಿಢೀರ್ ಸ್ಥಾನಮಾನಗಳನ್ನು ಪಡೆಯುವುದು ಕಷ್ಟಕರ. ನಿಧಾನವಾಗಿಯಾದರೂ ಸತತ ಜನಸಂಪರ್ಕವನ್ನಿಟ್ಟುಕೊಂಡು ಅವಿರತ ಹೋರಾಡಿದರೆ ಸಾಧ್ಯವಾದೀತು. ಶ್ರೀ ರಾಜಶೇಖರನ್ ಪ್ರಾಮಾಣಿಕ ಪರಿಶ್ರಮ ಮತ್ತು ಸ್ನೇಹಪರತೆಯಿಂದ ಇಂದೂ ಸಕ್ರಿಯವಾಗಿ ರಾಜಕೀಯದಲ್ಲಿ ಪ್ರತಿಷ್ಠಿತರಾಗಿದ್ದಾರೆ. ಪ್ರಸನ್ನತೆ, ಪ್ರಯತ್ನಶೀಲತೆಗಳಿಂದ ಇವರು ನಮ್ಮೆಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಶ್ರೀ ರಾಜಶೇಖರನ್ ಒಬ್ಬ ಉತ್ತಮ ಸಂಸಾರಿ. ಪತ್ನಿ, ಪುತ್ರ-ಪುತ್ರಿಯರು, ಮೊಮ್ಮಕ್ಕಳು ಎಲ್ಲರೂ ಇವರನ್ನು ಗೌರವ ಮತ್ತು ಅನುರಾಗದಿಂದ ಕಾಣುವುದೇ ಇದಕ್ಕೆ ಸಾಕ್ಷಿ. ಇವರ ಮಾವಂದಿರೂ ಆದರ್ಶ ರಾಜಕಾರಣಿಗಳೂ ಆಗಿದ್ದ ಶ್ರೀ ನಿಜಲಿಂಗಪ್ಪನವರ ಪ್ರಭಾವ ಇವರ ಮೇಲೆ ಪೂರ್ಣವಾಗಿದ್ದುದೂ ಇದಕ್ಕೆ ಕಾರಣ. ಇದರಿಂದ ವೈಯಕ್ತಿಕವಾಗಿ ಇವರಿಗೆ ಕೆಲವು ಸಂದರ್ಭಗಳಲ್ಲಿ ಅನಾನುಕೂಲವಾಗಿದ್ದರೂ ಲೆಕ್ಕಿಸದೆ, ತಮ್ಮ ನೀತಿಯನ್ನು ಕೈಬಿಡದೆ ಸಮಯೋಚಿತ ನಿಲುವುಗಳನ್ನು ತೆಗೆದುಕೊಂಡು ಬಹುಮಟ್ಟಿಗೆ ಯಶಸ್ವಿಯಾಗಿದ್ದಾರೆ. ಮುಂದೆಯೂ ಈ ನೀತಿಯನ್ನು ಪಾಲಿಸಿಕೊಂಡು ದೇಶ ಸೇವೆಯನ್ನು ಪರಿಣಾಮಕಾರಿಯಾಗಿ ಮಾಡಲಿ ಎಂಬುದು ನನ್ನ ಹಾರೈಕೆ.

❊❊❊

# ಗ್ರಾಮಾಭಿವೃದ್ಧಿಯ ನೇತಾರ

ಪ್ರೊ. ಬಿ.ಎಲ್. ರಾಮನಾಥನ್

ಭಾರತ ಸ್ವಾತಂತ್ರ್ಯದಲ್ಲಿ ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರು "ನಾಡು ರಾಜಕೀಯವಾಗಿ ಸ್ವತಂತ್ರವಾದರೆ ಸಾಲದು, ನಾವು ಗ್ರಾಮ ಸ್ವರಾಜ್ಯವನ್ನೂ ಸ್ಥಾಪಿಸಬೇಕು" ಎಂಬ ತಮ್ಮ ಸ್ಪಷ್ಟ ನಿಲುವನ್ನು ದೇಶದ ಮುಂದಿಟ್ಟರು. ಅವರ ನಿಧನದ ನಂತರ ಅವರ ಅನುಯಾಯಿಯಾಗಿದ್ದ ವಿನೋಬಾಜಿಯವರು ಗಾಂಧೀಜಿಯವರ ಆ ಧ್ಯೇಯ ಸಾಧನೆಗೆ ಭೂದಾನ ಮತ್ತು ಗ್ರಾಮದಾನ ಯಜ್ಞವನ್ನು ಪ್ರಾರಂಭಿಸಿದರು.

ಕನಕಪುರ ತಾಲ್ಲೂಕಿನ ಮರಳವಾಡಿ ಗ್ರಾಮಕ್ಕೆ ಸೇರಿದ ರಾಜಶೇಖರನ್ ರವರಿಗೆ ಚಿಕ್ಕಂದಿನಿಂದಲೂ ಗಾಂಧೀಜಿ ಮತ್ತು ವಿನೋಬಾಜಿಯವರ ಮೇಲ್ತಿಳಿಸಿದ ಧ್ಯೇಯಗಳತ್ತ ಒಲವು ಮೂಡಿತು. ಗ್ರಾಮಸೇವೆ ಮತ್ತು ಅಭಿವೃದ್ಧಿ ಅವರಿಗೆ ಪ್ರಿಯವಾದ ವಿಷಯವಾಯಿತು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ಯುವಕರಲ್ಲಿ ರಾಷ್ಟ್ರಪ್ರೇಮ ಮೂಡಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ಸರ್ವತ್ಯಾಗಕ್ಕೂ ಅವರನ್ನು ಸಿದ್ಧರಾಗುವಂತೆ ಮಾಡಿತು. ಆಗ ಇನ್ನೂ ತರುಣ ವಿದ್ಯಾರ್ಥಿಯಾಗಿದ್ದ ರಾಜಶೇಖರನ್ ಆ ಪ್ರಭಾವದಿಂದ ಹೊರಗುಳಿಯಲು ಸಾಧ್ಯವಾಗಲಿಲ್ಲ. ೧೯೪೭ರಲ್ಲಿ ಮೈಸೂರು ಚಲೋ ಚಳುವಳಿಯಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡರು. ೧೯೪೭ರಿಂದ ೧೯೪೯ರವರೆಗೆ ಕನಕಪುರ ತಾಲ್ಲೂಕು ವಿದ್ಯಾರ್ಥಿ ಕಾಂಗ್ರೆಸ್ ಸಂಸ್ಥೆಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದರು.

ಅವರ ಕ್ರಿಯಾಶೀಲತೆ ೧೯೫೦-೫೧ರಲ್ಲಿ ಮೈಸೂರು ಮಹಾರಾಜ ಕಾಲೇಜಿನ ಪತ್ರಿಕೋದ್ಯಮ ವಿದ್ಯಾರ್ಥಿಯಾಗಿ ಸೇರಿದಾಗ ಹಿಂದಿ ಅಸೋಸಿಯೇಷನ್ ಕಾರ್ಯದರ್ಶಿಯಾಗಿಯೂ ಹಾಗೂ ಕಾಲೇಜಿನ ವಿದ್ಯಾರ್ಥಿಗಳ ಸಾಂಸ್ಕೃತಿಕ ಚಟುವಟಿಕೆಗಳ ವೇದಿಕೆಯಾಗಿದ್ದ 'ಮಿತ್ರಮೇಳ'ಕ್ಕೆ ಛೇರ್‌ಮನ್‌ರಾಗಿಯೂ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅಧ್ಯಾಪಕರುಗಳು ಮತ್ತು ವಿದ್ಯಾರ್ಥಿಗಳ ಮೆಚ್ಚುಗೆಗೆ ಪಾತ್ರರಾಗುವಂತೆ ಮಾಡಿತು. ಅದೇ ಕಾಲದಲ್ಲಿ ೧೯೪೨ರ ಕ್ವಿಟ್ ಇಂಡಿಯ ಚಳುವಳಿ

ಹಾಗೂ ೧೯೪೭ರ ಮೈಸೂರು ಚಲೋ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗವಹಿಸಿ ಎರಡು ಬಾರಿಯೂ ತುರುಂಗವಾಸ ಅನುಭವಿಸಿದ್ದ ನಾನು ಪತ್ರಿಕೋದ್ಯಮ ವಿದ್ಯಾರ್ಥಿಯಾಗಿ ಮಹಾರಾಜ ಕಾಲೇಜಿನಲ್ಲಿ ಬಿ.ಎ. ತರಗತಿಗೆ ಸೇರಿ ಶ್ರೀ ರಾಜಶೇಖರನ್ ಅವರ ಸಹಪಾಠಿಯಾದೆ. ನಾನು ಪತ್ರಿಕೋದ್ಯಮ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾದೆ. ರಾಜಶೇಖರನ್ ನನ್ನ ಚಟುವಟಿಕೆಗಳಲ್ಲಿಯೂ ನೆರವು ನೀಡುತ್ತಿದ್ದರು. ಕನ್ನಡ ಪತ್ರಿಕೋದ್ಯಮ ಪಿತಾಮಹರೆನಿಸಿದದ ದಿ. ವೆಂಕಟಕೃಷ್ಣಯ್ಯನವರ ಹೆಸರಿನ ಪಾರಿತೋಷಕ ಪ್ರಥಮ ರ್‍ಯಾಂಕ್ ಗಳಿಸಿದ ನನಗೆ ದೊರೆಯಿತು. ನಾವಿಬ್ಬರೂ ಪದವೀಧರರಾಗಿ ಕಾಲೇಜಿನಿಂದ ಹೊರಬಿದ್ದವು. ನಾನು ಬೆಂಗಳೂರಿನಲ್ಲಿ ಕಾನೂನು ವ್ಯಾಸಂಗ ಮಾಡಿ ಅಡ್ವೋಕೇಟ್ ಆಗಿ ವಕೀಲಿ ವೃತ್ತಿಯಲ್ಲಿ ತೊಡಗಿದೆ.

ಶ್ರೀ ರಾಜಶೇಖರನ್ ಅವರು ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಕಾನೂನು ವಿದ್ಯಾರ್ಥಿಯಾಗಿ ಸೇರ್ಪಡೆಯಾಗಿದ್ದು ನಂತರ ಅವರ ತಂದೆಯ ನಿಧನದಿಂದಾಗಿ ವಿದ್ಯಾಭ್ಯಾಸ ಮೊಟಕು ಮಾಡಿ ಮರಳವಾಡಿಗೆ ಹಿಂತಿರುಗಬೇಕಾಯಿತು. ರಾಜಶೇಖರನ್ ಇದರಿಂದ ಧೃತಿಗೆಡದೆ ರಾಷ್ಟ್ರಸೇವೆ ಹಾಗೂ ತಮ್ಮ ಗ್ರಾಮದ ಜನರ ಏಳ್ಗೆಗಾಗಿ ಶ್ರಮಿಸತೊಡಗಿದರು.

೧೯೫೪-೫೫ರಲ್ಲಿ ವಿನೋಬಾಜಿಯವರ ಭೂದಾನ ಚಳುವಳಿಯಲ್ಲಿ ಸಕ್ರಿಯ ಕಾರ್ಯಕರ್ತರಾಗಿ ಕಾರ್ಯೋನ್ಮುಖರಾದರು. ಅದೇ ಕಾಲದಲ್ಲಿ ರಾಷ್ಟ್ರಮಟ್ಟದಲ್ಲಿ ರಾಜಕೀಯ ಹಾಗೂ ರಾಜಕೀಯೇತರ ಸಂಘಗಳು ಐಕ್ಯರಂಗವಾದ ಇಂಡಿಯನ್ ಅಸೆಂಬ್ಲಿ ಆಫ್ ಯೂತ್ ಸಂಘಟನೆಯ ಛೇರ್‌ಮನ್ ಆದರು. ಇವರ ಸೇವಾಕ್ಷೇತ್ರ ವಿಸ್ತಾರವಾಗುತ್ತಾ ಹೋಯಿತು. ಗ್ರಾಮಾಂತರ ಜನರ ಸೇವೆಗಾಗಿ ಸರ್ವೋದಯ ಸಂಘ ಸ್ಥಾಪಿಸಿದರು. ಅದೇ ಕಾಲಕ್ಕೆ ತಾಲ್ಲೂಕಿನ ಅಭಿವೃದ್ಧಿ ಮಂಡಲಿ ಮತ್ತು ಬೆಂಗಳೂರು ಜಿಲ್ಲಾ ಬೋರ್ಡ್ ಸದಸ್ಯರೂ ಆದುದರಿಂದ ತಾಲ್ಲೂಕು ಮತ್ತು ಜಿಲ್ಲೆಯ ಅಭಿವೃದ್ಧಿಯ ಕಡೆಗೂ ಗಮನಹರಿಸಬೇಕಾಯಿತು.

**ವಿವಾಹ :** ಇಷ್ಟರಲ್ಲಿ ಅಖಿಲ ಭಾರತ ಕಾಂಗ್ರೆಸ್ಸಿನ ಹಿರಿಯ ನಾಯಕರಲ್ಲೊಬ್ಬರೂ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಮಾಜಿ ಅಧ್ಯಕ್ಷರೂ, ಕರ್ನಾಟಕ ಏಕೀಕರಣದ ಶಿಲ್ಪಿ ಎನಿಸಿಕೊಂಡಿದ್ದ ಧೀಮಂತ ಮತ್ತು ಶಿಸ್ತಿನ ನಾಯಕರೂ ಆಗಿದ್ದ ರಾಜಕೀಯ ಮುತ್ಸದ್ಧಿ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರ ನಾಲ್ಕನೇ ಪುತ್ರಿ ಕುಮಾರಿ ಗಿರಿಜಾರವರೊಡನೆ ರಾಜಶೇಖರನ್ ರವರಿಗೆ ೧೯೫೮ರಲ್ಲಿ ವಿವಾಹವಾಯಿತು. ಈ ವಿವಾಹ ರಾಜಶೇಖರನ್‌ರವರಿಗೆ ಅವರ ಚಟುವಟಿಕೆಗಳಲ್ಲಿ ಮತ್ತಷ್ಟು ಸ್ಫೂರ್ತಿ ಮತ್ತು ಪ್ರೋತ್ಸಾಹ ಕೊಟ್ಟಿತು.

**ಲೋಕಸಭೆಗೆ ಆಯ್ಕೆ**

೧೯೬೭ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಲೋಕಸಭೆಗೆ ನಡೆದ ಮಹಾ ಚುನಾವಣೆಗೆ ಅನೇಕ ಶ್ರದ್ಧಾವಂತ ಉತ್ಸಾಹಿ ಯುವಕರುಗಳನ್ನು ಉಮೇದುವಾರರಾಗಿ ನಿಲ್ಲಿಸಿ

ಜಯಭೇರಿ ಹೊಡೆದರು. ರಾಜಶೇಖರನ್‌ರವರ ವ್ಯಕ್ತಿತ್ವ ಶ್ರೀಮತಿ ಇಂದಿರಾಗಾಂಧಿಯವರ ಕಣ್ಣಿಗೆ ಬೀಳದೆ ಇರಲು ಸಾಧ್ಯವೇ ಇರಲಿಲ್ಲ. ಶ್ರೀಯುತರು ಕನಕಪುರ ಲೋಕಸಭಾ ಕ್ಷೇತ್ರದಿಂದ ವಿಜಯ ಸಾಧಿಸಿದರು. ಲೋಕಸಭೆಯಲ್ಲಿಯೂ ಕೃಷಿಕರ, ಅದರಲ್ಲೂ ರಾಜ್ಯದ ಕೃಷಿಕರ ಹಿತರಕ್ಷಣೆಗಾಗಿ ಹೋರಾಡಿದರು. ೧೯೭೮ರಲ್ಲಿ ಉತ್ತರಹಳ್ಳಿ ಶಾಸನಸಭಾ ಕ್ಷೇತ್ರದಿಂದ ರಾಜ್ಯದ ಶಾಸನಸಭೆಗೆ ಆಯ್ಕೆಯಾದರು. ಕರ್ನಾಟಕದಲ್ಲಿ ಬಲಯುತ ಮತ್ತು ಸುಭದ್ರ ಕೃಷಿಕ ಸಮಾಜ ಕಟ್ಟಲು ರಾಜಶೇಖರನ್‌ರವರ ಪರಿಶ್ರಮದಿಂದಲೇ ಸಾಧ್ಯವಾಯಿತೆಂದರೆ ಉತ್ಪ್ರೇಕ್ಷೆಯಾಗಲಾರದು. ಅದರಂತೆಯೇ ಅವರ ಪರಿಶ್ರಮದಿಂದಲೇ ರಾಜ್ಯ ಸರ್ಕಾರದಲ್ಲಿ ಯುವಜನ ಸೇವಾ ಇಲಾಖೆ ರೂಪುಗೊಂಡಿತು. ೧೯೯೯ರಲ್ಲಿ ಲೆಜಿಸ್ಲೆಟಿವ್ ಕೌನ್ಸಿಲ್ ಸದಸ್ಯರಾದರು. ಕೃಷಿ ಮತ್ತು ಗ್ರಾಮಾಭಿವೃದ್ಧಿಯಲ್ಲಿರುವ ಪರಿಶ್ರಮ ಮತ್ತು ಆಸಕ್ತಿಯಿಂದಾಗಿ ಇವರು ವಿಶ್ವದ ನಾನಾ ರಾಷ್ಟ್ರಗಳಿಗೆ ಭೇಟಿ ಕೊಡುವಂತಾಯಿತು. ಆಸ್ಟ್ರೇಲಿಯಾ ಹೊರತಾಗಿ ಐದು ಪ್ರಮುಖ ಖಂಡಗಳ ಸುಮಾರು ಮೂವತ್ತು ದೇಶಗಳಿಗೆ ಭೇಟಿಯಿತ್ತ ಇವರು ಅನೇಕ ಅಂತಾರಾಷ್ಟ್ರೀಯ ಸಂಕೀರ್ಣಗಳು ಮತ್ತು ಸಮ್ಮೇಳನಗಳಲ್ಲಿ ಭಾಗವಹಿಸಿ ಕೃಷಿ, ಗ್ರಾಮಾಭ್ಯುದಯ, ಯುವಕರ ವಿದ್ಯಾಭ್ಯಾಸ, ನೀರಾವರಿ, ಮಾನವಸಂಪನ್ಮೂಲದ ಕ್ರೋಢೀಕರಣ ಮತ್ತು ಅದರ ಬಳಕೆ ಮತ್ತು ಪರಿಸರ ಮುಂತಾದ ಗಹನವಾದ ವಿಷಯಗಳ ಮೇಲೆ ಪ್ರಬಂಧಗಳನ್ನು, ವಿಚಾರಪೂರಿತ ಲೇಖನಗಳನ್ನೂ ಮಂಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದಾರೆ.

**ಏಷ್ಯಾ ಇನ್‌ಸ್ಟಿಟ್ಯೂಟ್ ಫಾರ್ ರೂರಲ್ ಡೆವಲಪ್‌ಮೆಂಟ್**

ರಾಜಶೇಖರನ್ ಅವರು ತಮ್ಮ ನಾನಾ ಮುಖವಾದ ಚಟುವಟಿಕೆಗಳು ಮತ್ತು ಸೇವೆಯಿಂದ ಪಡೆದ ಅಪಾರವಾದ ಅನುಭವ ಮತ್ತು ವಿಪುಲವಾದ ಜ್ಞಾನಸಂಚಯದಿಂದಾಗಿ ಈಗ್ಗೆ ಇಪ್ಪತ್ತೈದು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಮೇಲ್ತಿಳಿಸಿದ ಏಷ್ಯನ್ ಇನ್‌ಸ್ಟಿಟ್ಯೂಟ್‌ನ್ನು ಸ್ಥಾಪಿಸಿ ನಡೆಸಿಕೊಂಡು ಬರುತ್ತಿದ್ದಾರೆ. ಈ ಸಂಸ್ಥೆ ದಕ್ಷಿಣ - ದಕ್ಷಿಣ ದೇಶಗಳ ವಿನಿಮಯ, ಲೀಡರ್‌ಷಿಪ್ ತರಬೇತಿ ಮತ್ತು ಬೆಳವಣಿಗೆಗಾಗಿ ಪರಸ್ಪರ ಸಹಕಾರ ವೃದ್ಧಿ ಮಾಡುತ್ತಿರುವುದಲ್ಲದೆ, ಏಷ್ಯಾ ಮತ್ತು ಆಫ್ರಿಕಾ ಖಂಡಗಳ ಎಲ್ಲಾ ದೇಶಗಳ ಯುವ ಪ್ರತಿನಿಧಿಗಳಿಗೆ ವಿದ್ಯಾಭ್ಯಾಸ ಮತ್ತು ಅಂತಾರಾಷ್ಟ್ರೀಯ ತರಬೇತಿ ಪಡೆಯಲು ಅನುವು ಮಾಡಿಕೊಡುತ್ತಿದೆ. ಈ ಸಂಸ್ಥೆಯ ಕಾರ್ಯನಿರ್ವಹಣೆ ರಾಜಶೇಖರನ್ ರವರ ಕಾರ್ಯತತ್ಪರತೆ, ದಕ್ಷತೆ ಮತ್ತು ನಾಯಕತ್ವದ ದ್ಯೋತಕವಾಗಿದೆ.

**ರಾಜ್ಯಸಭೆಗೆ ಆಯ್ಕೆ**

ರಾಜಶೇಖರನ್‌ರವರು ಕರ್ನಾಟಕ ರಾಜ್ಯಕ್ಕೆ ಕಳೆದ ೫೦ ವರ್ಷಗಳಿಂದ ಸತತವಾಗಿ ಅಪೂರ್ವ ಮತ್ತು ಅಪಾರವಾದ ಸೇವೆ ಸಲ್ಲಿಸುತ್ತಾ ಬಂದಿರುವುದನ್ನು ಗಮನಿಸಿ ೨೦೦೨ರಲ್ಲಿ

ರಾಷ್ಟ್ರದ ಮೇಲ್ಮನೆಗೆ (ರಾಜ್ಯಸಭೆಗೆ) ಅವರನ್ನು ಆಯ್ಕೆಮಾಡಿರುವುದು ತೃಪ್ತಿಕರ ಮತ್ತು ಸಮಾಧಾನದ ಸಂಗತಿಯಾಗಿದೆ.

ರಾಜಶೇಖರನ್‌ರವರು ನಿರಾಡಂಬರ, ನಿಷ್ಠಾವಂತ, ನಿಷ್ಕಳಂಕ ಹಾಗೂ ಕ್ರಿಯಾಶೀಲ ವ್ಯಕ್ತಿತ್ವದವರು. ಅವರನ್ನು ಕಾಣಲು ಹೋಗುವ ಯಾರನ್ನೇ ಆಗಲಿ ಗೌರವ, ವಿಶ್ವಾಸ ಮತ್ತು ಆತ್ಮೀಯತೆಯಿಂದ ಕಾಣುವ ಸ್ವಭಾವದವರು. ಪರಿಹಾರ ಕೋರಿ ಬಂದವರ ಸಮಸ್ಯೆಯನ್ನು ಸಾವಧಾನವಾಗಿ ಆಲಿಸಿ ಪರಿಹಾರದ ಮಾರ್ಗೋಪಾಯ ತಮ್ಮ ವ್ಯಾಪ್ತಿಯಲ್ಲಿದ್ದರೆ ಪರಿಹರಿಸಿ ಕಳುಹಿಸುತ್ತಾರೆ. ಅರ್ಹರಾದವರಿಗೆ ಪರಿಹಾರ ದೊರೆಯದಿದ್ದರೆ ಅವರ ಮನಸ್ಸಿಗೆ ಸಮಾಧಾನವೇ ಇಲ್ಲ. ಸಜ್ಜನಿಕೆಯೇ ಮೂರ್ತಿವೆತ್ತಂತೆ ಇರುವ ಅವರು ಮಗುವಿನಂತೆ ಮುಗ್ಧ ಮನಸ್ಸಿನವರು. ಕಪಟವನ್ನೇ ಅರಿಯದವರು. ನಾನು ಅರ್ಧಶತಮಾನದ ಹಿಂದೆ ವಿದ್ಯಾರ್ಥಿ ದೆಸೆಯಲ್ಲಿ ನೋಡಿದಾಗ ತೊಡುತ್ತಿದ್ದ ಖಾದಿ ಉಡಿಗೆ ತೊಡಿಗೆಗಳನ್ನೇ ಇಂದೂ ಧರಿಸುವುದು ಅವರು ನಿಷ್ಠಾವಂತ ಗಾಂಧಿವಾದಿ ಎಂಬುದನ್ನು ಎತ್ತಿ ತೋರಿಸುತ್ತದೆ.

ಈ ದಕ್ಷಜೀವಿಯ ನಿಸ್ವಾರ್ಥಸೇವೆ ನಾಡಿಗೆ, ನಾಡಿನ ಜನತೆಗೆ ನಿರಂತರವಾಗಿ ದೊರಕುತ್ತಿರಲೆಂದು ಅವರ ೭೫ನೇ ವರ್ಷದ ಹುಟ್ಟುಹಬ್ಬದಂದು ಹಾರೈಸೋಣ.

***

# ಕೃತ್ರಿಮರಹಿತ ಜೀವಿ

◆ ಮಹಮ್ಮದ್ ಜಿಯಾವುಲ್

ಇದು 'ರಂಜಾನ್' ಮಾಸ. ಇಸ್ಲಾಂ ಧರ್ಮೀಯರಿಗೆ ರಂಜಾನ್ ಶ್ರೇಷ್ಠವಾದ ತಿಂಗಳು. ಉಪವಾಸದ ಮೂಲಕ ದೇಹ ಹಾಗೂ ಮನಸ್ಸನ್ನು ಪರಿಶುದ್ಧ ಮಾಡಿಕೊಳ್ಳುವ ಮಹತ್ವದ ತಿಂಗಳಿದು. ಇಂತಹ ಸಂದರ್ಭದಲ್ಲಿ ರಾಜಶೇಖರನ್ ಅವರನ್ನು ನೆನಸಿಕೊಳ್ಳುವುದೆಂದರೆ ಆಗುವ ಆನಂದ ವರ್ಣಿಸಲಸಾಧ್ಯ.

೧೯೭೦ರ ಮಧ್ಯಂತರ ಚುನಾವಣೆಯಾದ ಮೇಲೆ ಕನಕಪುರ ಲೋಕಸಭಾ ಕ್ಷೇತ್ರದಿಂದ ಜಾಫರ್ ಷರೀಫ್ ಅವರು ಆಯ್ಕೆಯಾಗಿದ್ದರು. ಆಗ ನಾನಿನ್ನೂ ರಾಜಕೀಯದ ಬಗ್ಗೆ ಅಷ್ಟಾಗಿ ತಲೆಕೆಡಿಸಿಕೊಂಡವನಲ್ಲ. ಮನೆಯಲ್ಲಿ ಹಿರಿಯರು, ಜೊತೆಗೆ ಸಾರ್ವಜನಿಕ ಸ್ಥಳಗಳಲ್ಲಿ ನಮ್ಮವರು ಅನೇಕ ಸಾರಿ ಮಾತನಾಡಿಕೊಳ್ಳುತ್ತಿದ್ದುದ್ದು ಹೀಗೆ "ಹಿಂದಿನ ನಮ್ಮ ಎಂ.ಪಿ.ಯವರು ಎಷ್ಟೋ ಉತ್ತಮ. ಅವರು ಲೋಕಸಭೆಯಲ್ಲಿ ಮಾತನಾಡಿದ್ದನ್ನೆಲ್ಲ ಆಗಾಗ್ಗೆ ಕಿರುಹೊತ್ತಿಗೆ ಮಾಡಿ ನಮಗೆಲ್ಲಾ ಕಳುಹಿಸುತ್ತಿದ್ದರು. ಯಾವುದೇ ಹಬ್ಬ ಅಥವಾ ಇನ್ನೇನಾದರೂ ಹೆಚ್ಚು ಘಟನೆ ನಡೆದರೆ ಪತ್ರ ಬರೆಯುತ್ತಿದ್ದರು. ಈಗ ಯಾವುದೂ ಇಲ್ಲ." ಇಂಥ ಮಾತುಗಳನ್ನು ಕೇಳಿಸಿಕೊಂಡಾಗ ನನಗೆ ಆಶ್ಚರ್ಯ ಆಗುತ್ತಿತ್ತು. ಈ ರಾಜಶೇಖರನ್ ಯಾರು ಅಂತ ನಾನು ಚಿಂತನೆ ಮಾಡತೊಡಗಿದೆ. ಅವರನ್ನು ಹೇಗಾದರೂ ಪರಿಚಯಿಸಿಕೊಳ್ಳಬೇಕೆಂದು ದೃಢ ನಿರ್ಧಾರಮಾಡಿ ಆಗ ನಮ್ಮೂರಲ್ಲಿ 'ಕನ್ನಡ ಪ್ರಭ' ಪತ್ರಿಕೆಯು ವರದಿಗಾರರಾಗಿದ್ದ ವಿ.ಎಸ್.ರೆಡ್ಡಿಯವರನ್ನು ಪರಿಚಯಿಸಿಕೊಂಡೆ. ಅವರನ್ನು ಒತ್ತಾಯಿಸಿ, ಎಂ.ವಿ.ರಾಜಶೇಖರನ್ ಅವರ ಕಡೆ ಹೋದೆ. ಬೆಂಗಳೂರಿನಲ್ಲಿ ಅವರ ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ ಹೋದೆ. ಮೊದಲ ನೋಟದಲ್ಲೇ ನಮಗೆ ರಾಜಶೇಖರನ್ ಅವರು ತುಂಬಾ ಪ್ರಿಯವಾದ ವ್ಯಕ್ತಿಯಾದರು. ನಾನವರ ಲೋಕಸಭಾ ಕ್ಷೇತ್ರವಾದ ರಾಮನಗರದಿಂದ ಬಂದವನೆಂದು ತಿಳಿದ ಮೇಲೆ ಅವರಿಗೆ ಇನ್ನಷ್ಟು ಅಕ್ಕರೆ ಹೆಚ್ಚಾಯಿತು. ಅವರಾಗ ಚುನಾವಣೆಯಲ್ಲಿ ಸೋತಿದ್ದರು. ನಾನು ಬೇರೆ

ರಾಜಕೀಯ ಕ್ಷೇತ್ರದಲ್ಲಿದ್ದರೂ ಅವರ ಜೊತೆ ಒಡನಾಟ ಇಟ್ಟುಕೊಳ್ಳಲು ಮುಂದಾದೆ. ಇದಕ್ಕೆ ಮುಖ್ಯ ಕಾರಣ ರಾಜಶೇಖರನ್ ಅವರ ವ್ಯಕ್ತಿತ್ವವೇ ಎನ್ನಬೇಕು.

ಮೂರು ದಶಕಗಳಿಂದ ನಾನು ರಾಜಶೇಖರನ್ ಅವರನ್ನು ನೋಡುತ್ತಾ ಬಂದಿದ್ದೇನೆ. ಅವರಲ್ಲಿ ಕೃತ್ರಿಮತೆಯೆನ್ನುವುದು ಒಂದು ಚೂರೂ ಇಲ್ಲ. ಮನುಷ್ಯರನ್ನು ಮನುಷ್ಯರಾಗಿ ಪ್ರೀತಿಸಬೇಕೆಂಬುದೇ ಅವರ ಧ್ಯೇಯವಾಗಿದೆ. ರಾಮನಗರಕ್ಕೆ ಬಂದಾಗಲೆಲ್ಲ ನಮ್ಮ ಮನೆಗೆ ಬಂದಿದ್ದಾರೆ. ನಮ್ಮ ಕುಟುಂಬದವರ ಜೊತೆ ಬೆರೆತಿದ್ದಾರೆ. ಅವರು ನಮ್ಮ ಮನೆಯಲ್ಲಿ ಇದ್ದಾಗಲೆಲ್ಲಾ ನಮ್ಮ ಜೊತೆಯಲ್ಲಿದ್ದಾರೇನೋ ಎಂಬಂತಹ ಅನುಭವ ನಮ್ಮ ಮನೆಯವರದ್ದಾಗಿದೆ. ಈಗಲೂ ಪ್ರತಿವರ್ಷ ಮಾವಿನಹಣ್ಣಿನ ಕಾಲದಲ್ಲಿ ಮೊದಲು ಅವುಗಳನ್ನು ತೆಗೆದುಕೊಂಡು ಹೋಗಿ ಕೊಡುವುದೇ ರಾಜಶೇಖರನ್ ಅವರ ಮನೆಗೆ. ಅವರನ್ನು ನೋಡಿದಾಗಲೆಲ್ಲಾ ನಮ್ಮ ಹಿರಿಯರನ್ನು ಕಂಡಂತಾಗುತ್ತದೆ.

ರಾಜಶೇಖರನ್ ಅವರದ್ದು ಉದಾರ ವ್ಯಕ್ತಿತ್ವ. ಅಲ್ಲಿ ಸಣ್ಣತನ ಅಥವಾ ಸೇಡು ಎಂಬುದಕ್ಕೆ ಸ್ಥಳವೇ ಇಲ್ಲ. ೧೯೭೭ರಲ್ಲಿ ಅವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಕೇವಲ ೪೦೦೦ ಮತಗಳ ಅಂತರದಿಂದ ಸೋತರು. ಆ ಸೋಲು ನೈಜ ಪ್ರಜಾಪ್ರಭುತ್ವಕ್ಕೆ ಕೊಟ್ಟ ಭಾರಿ ಹೊಡೆತವೇ ಆಗಿತ್ತು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ನಡೆದ ಈ ಚುನಾವಣೆಯಲ್ಲಿ ಕೇಂದ್ರದಲ್ಲಿ ಜನತಾಪಕ್ಷ ಅಧಿಕಾರಕ್ಕೆ ಬರುತ್ತಿದೆ, ರಾಜಶೇಖರನ್ ಲೋಕಸಭಾ ಸದಸ್ಯರಾದರೆ ಅವರು ಕೇಂದ್ರ ಮಂತ್ರಿಯಾಗುವುದು ಸೂರ್ಯ ಉದಯದಷ್ಟೇ ಸತ್ಯವೆಂಬುದು ಕೆಲವು ಹಿರಿಯ ನಾಯಕರುಗಳಿಗೆ ಗೊತ್ತಾಗಿತ್ತು. ಏನಾದರೂ ಮಾಡಿ ರಾಜಶೇಖರನ್ ಅವರನ್ನು ಸೋಲಿಸಬೇಕೆಂದು ಅವರ ಪಕ್ಷದಲ್ಲಿದ್ದವರೇ ದೃಢನಿರ್ಧಾರ ಮಾಡಿದರು. ರಾಜಶೇಖರನ್ ನಿಜಲಿಂಗಪ್ಪನವರ ಅಳಿಯ ಅನ್ನುವುದನ್ನೇ ದೋಷ ಎಂಬಂತೆ ತೋರಿಸತೊಡಗಿದರು. ಅವರು ಗೆದ್ದುಬಿಟ್ಟರೆ ನಮಗೆ ಯಾರಿಗೂ ಭವಿಷ್ಯ ಇಲ್ಲ ಎಂದು ಹೇಳಿ ಒಂದು ಜಾತಿಯ ಜನಮನದಲ್ಲಿ ಭಯ ಹುಟ್ಟಿಸಿದರು. ಆಗೆಲ್ಲ ರಾಜಶೇಖರ್ ಅವರು ತುಂಬಾ ನಿರ್ಲಿಪ್ತರಾಗಿದ್ದರು. ನಾಯಕರ ಕಿತಾಪತಿ ಗೊತ್ತಾಗಿದ್ದರೂ ಅವರು ಅದನ್ನು ವಿರೋಧಿಸಲಿಕ್ಕೆ ಹೋಗಲಿಲ್ಲ. ಅಷ್ಟೇ ಅಲ್ಲ, ಜಗಳ ಕಾದು ತಮ್ಮ ಜಾತಿಯ ಜನಸಮಾನ್ಯರಲ್ಲಿ ಇದನ್ನು ಸುದ್ದಿ ಮಾಡಲಿಕ್ಕೇ ಹೋಗಲಿಲ್ಲ. ಯಾರೋ ಬಿತ್ತಿದ್ದ ವಿಷಬೀಜ ಇವರ ಗೆಲುವಿಗೆ ಕಂಟಕವಾಯಿತೇ ಹೊರತು ಇವರು ಅವರಂತೆ ವಿಷಬೀಜ ಬಿತ್ತುವ ಪ್ರಯತ್ನ ಮಾಡಲಿಲ್ಲ. ರಾಜಕೀಯ, ಚುನಾವಣೆ ಹಾಗೂ ಅಲ್ಲಿ ಏನಾದರೂ ಮಾಡಿ ಗೆಲ್ಲಬೇಕು ಎನ್ನುವವರು ಇಂತಹ ಸಣ್ಣ ಕೆಲಸ ಮಾಡುತ್ತಾರೆ. ಆದರೆ ರಾಜಶೇಖರನ್ ಒಂದು ಸತ್ಸಂಪ್ರದಾಯದಲ್ಲಿ ಬೆಳೆದವರು. ಅಂತಹ ಸಂಪ್ರದಾಯವನ್ನು ಅವರು ಉಳಿಸಿಕೊಂಡು ಬಂದರು. ಅವರು ಆ ಚುನಾವಣೆಯಲ್ಲಿ ಸೋಲುಂಡ ನಂತರ ನಡೆದುಕೊಂಡ ರೀತಿ ನಿಜಕ್ಕೂ ಅಭಿಮಾನ ತರುವಂತಹದ್ದು.

ರಾಮನಗರದಲ್ಲಿ ೧೯೯೫ರಲ್ಲಿ ಉಪಚುನಾವಣೆ ನಡೆಯಿತಷ್ಟೇ. ಮುಖ್ಯಮಂತ್ರಿಯಾಗಿದ್ದ ದೇವೇಗೌಡರು ಪ್ರಧಾನಿಯಾದ ನಂತರ ರಾಮನಗರ ವಿಧಾನಸಭೆಗೆ ಒಂದು ಉಪಚುನಾವಣೆ ನಡೆಯಿತು. ಆಗ ರಾಜಶೇಖರನ್ ಅವರು ಕಾಂಗ್ರೆಸ್ ಅಭ್ಯರ್ಥಿ ಸಿ.ಎಂ.ಲಿಂಗಪ್ಪನವರ ಪರ ಪ್ರಚಾರಕ್ಕೆ ಬಂದಿದ್ದು, ಅವರ ಜೊತೆ ಪುಟ್ಟಸ್ವಾಮಿಗೌಡರು, ಕೆ.ಎಚ್.ರಂಗನಾಥ್ ಮೊದಲಾದ ನಾಯಕರೂ ಕೂಡ ಬಂದಿದ್ದರು. ಆಗ ರಾಜಶೇಖರನ್ ಜಾತಿಯನ್ನು ಮುಖ್ಯ ಮಾಡಲಿಕ್ಕೆ ಹೋಗಬೇಡಿ, ಪಕ್ಷ ಮತ್ತು ಸಿದ್ಧಾಂತದ ಮೇಲೆ ಮತದಾರರನ್ನು ಜಾಗೃತರನ್ನಾಗಿ ಮಾಡಿ ಎಂದು ನಮಗೆ ಹೇಳಿದರು. ಸಾಮಾನ್ಯವಾಗಿ ರಾಜಕೀಯದಲ್ಲಿ ನಡೆಯುವ ಸೈದ್ಧಾಂತಿಕ ವಿಚಾರಗಳನ್ನು ಹೇಳುವ ಸಕ್ರಿಯ ರಾಜಕಾರಣಿ ಯಾರಿದ್ದಾರೆ ? ಅಂತಹ ತಾತ್ವಿಕ ಬದ್ಧತೆಯ ರಾಜಶೇಖರನ್ ಅವರು ನಮ್ಮ ಸಮಕಾಲೀನ ರಾಜಕೀಯದಲ್ಲಿರುವುದು ಒಂದು ಪುಣ್ಯವೇ ಸರಿ.

ರಾಜಶೇಖರನ್ ಅವರ ಹಾಗೂ ನನ್ನ ಸಂಬಂಧ ತುಂಬಾ ಹಳೆಯದು. ಒಮ್ಮೆ ಮಾತನಾಡುತ್ತಿರುವಾಗ "ಸಾಹೇಬ್ರೆ ಒಮ್ಮೆ ನಮ್ಮ ಜಮೀನಿಗೆ ಬನ್ನಿ. ಮರಳವಾಡಿ ಹತ್ತಿರ ಇದೆ" ಎಂದಿದ್ದರು. ಅವರು ಬೆಂಗಳೂರಿನಿಂದ ಮರಳವಾಡಿಗೆ ಬಂದರೆ ನಾನು ರಾಮನಗರದಿಂದ ಅಲ್ಲಿಗೆ ಹೋದೆ. ಲೋಕಸಭಾ ಸದಸ್ಯರಾಗಿದ್ದವರು ಒಮ್ಮೆ ರಾಜ್ಯ ವಿಧಾನಸಭೆಯಲ್ಲಿದ್ದವರು ಅಂದಮೇಲೆ ಅವರ ಫಾರಂ ತುಂಬಾ ವೈಭವಪೂರ್ಣವಾಗಿರುತ್ತದೆಂದು ನನ್ನ ಕಲ್ಪನೆ. ನಾನು ಅಲ್ಲಿಗೆ ಹೋದರೆ, ಅವರು ಹಳ್ಳಿಯ ಹಳೆಯ ಪಟೇಲರ ತರಹ ಬಿಸಿಲಿಗೆ ಒಂದು ಛತ್ರಿ ಹಿಡಿದುಕೊಂಡು ನಿಂತಿದ್ದರು. ನಾನು ಹೋದ ತಕ್ಷಣ ಪ್ರೀತಿಯಿಂದ ಮಾತನಾಡಿಸಿ ನನ್ನನ್ನು ತಮ್ಮ ನೆರಳಿಗೆ ಎಳೆದುಕೊಂಡರು.

ಒಂದು ಕಡೆ ಸ್ವಲ್ಪ ರಾಗಿ ಹಾಕಿದ್ದಾರೆ. ಅವರೇಗಿಡ ಹಾಗೆಯೇ ಇದೆ. ತೋಟ ಕೂಡಾ ಹೇಳಿಕೊಳ್ಳುವಂತದ್ದಲ್ಲ. ಅಲ್ಲಲ್ಲೇ ಹಳೇ ಮರಗಳು ಬಿದ್ದಿವೆ. ಅದೊಂದು ಹಳೆಯ ಕಾಲದ ಯಜಮಾನರ ಭೂಮಿಯಾಗಿತ್ತು. ಯಾವುದೇ ಕಪ್ಪುಹಣವನ್ನು ತೊಡಗಿಸಿರಲಿಲ್ಲ. ಅದು ಫಾರಂ ಹೌಸ್ ಅನ್ನೋದಕ್ಕಿಂತ ಹಳೇ ಪಟೇಲರ ಜಮೀನು ತರ ಇತ್ತು. ರಾಜಶೇಖರನ್ ಅವರ ಸ್ವಭಾವವೇ ಹಾಗೆ. ಅವರ ಚಿಂತನೆಗಳಲ್ಲಿ ಆಧುನಿಕತೆಯಿದೆ; ಆದರೆ ಐಹಿಕ ಸೌಕರ್ಯಗಳಲ್ಲಿ ಆಧುನಿಕತೆಯನ್ನು ಬಯಸುವುದಿಲ್ಲ. ಬಹಳ ಜನಕ್ಕೆ ಗೊತ್ತಿಲ್ಲದ ಒಂದು ವಿಚಾರವುಂಟು. ರಾಮಕೃಷ್ಣ ಹೆಗಡೆಯವರ ಸಚಿವ ಸಂಪುಟದಲ್ಲಿ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಸಚಿವರಾಗಿದ್ದ ಅಬ್ದುಲ್ ನಜೀರ್ ಸಾಬ್ ಕರ್ನಾಟಕದಲ್ಲಿ 'ನೀರು ಸಾಬ್' ಎಂದೇ ಖ್ಯಾತರಾಗಿದ್ದಾರೆ ಅಲ್ಲವೆ! ಈ ಖ್ಯಾತಿಗೆ ರಾಜಶೇಖರನ್ ಅವರೇ ಕಾರಣವೆಂಬುದು ನನ್ನಂತಹ ಕೆಲವರಿಗೆ ಮಾತ್ರ ಗೊತ್ತಿರುವ ವಿಚಾರ. ಗ್ರಾಮೀಣ ಪ್ರದೇಶದಲ್ಲಿರುವ ಜಲಮೂಲವನ್ನು ಸಮರ್ಪಕವಾಗಿ ಬಳಸಿಕೊಂಡು ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಬೇಕೆಂದು ರಾಜಶೇಖರನ್ ಆ ಹಿಂದಿನ ಮುಖ್ಯಮಂತ್ರಿ ಆರ್.ಗುಂಡೂರಾವ್

ಅವರಿಗೆ ಸಲಹೆ ಸೂಚನೆ ಕೊಟ್ಟಿದ್ದರು. ಈ ಸಂಬಂಧವಾಗಿ ವಿಸ್ತಾರವಾದ ವರದಿ ಕೂಡಾ ತಯಾರಿಸಿ ಅವರಿಗೆ ಕೊಟ್ಟಿದ್ದರು. ಆದರೆ ಆ ಸರ್ಕಾರ ಕೇವಲ ಬೋರ್‌ವೆಲ್ ಮಿಷನ್‌ಗಳನ್ನು ಮಾತ್ರ ತರಿಸಿಟ್ಟುಕೊಂಡಿತ್ತು. ರಾಮಕೃಷ್ಣ ಹೆಗಡೆಯವರ ಸರ್ಕಾರ ಬಂದ ಮೇಲೆ ರಾಜಶೇಖರನ್ ಅವರು ನಜೀರ್ ಸಾಬ್ ಅವರನ್ನು ಸಂದರ್ಶಿಸಿ ಈ ಹಿಂದಿನ ತಮ್ಮ ಯೋಜನಾ ವರದಿಯನ್ನು ಅವರಿಗೆ ಕೊಟ್ಟರು. ಆ ವರದಿಯನ್ನು ನಜೀರ್ ಸಾಬ್ ಅವರಿಗೆ ಕೊಡುವ ಸಂದರ್ಭದಲ್ಲಿ ನಾನು ಅಲ್ಲಿದ್ದೆ. ವರದಿಯನ್ನು ಬಳಸಿಕೊಂಡು ನಜೀರ್ ಸಾಬ್ 'ನೀರು ಸಾಬ್' ಎಂದು ಖ್ಯಾತರಾದರು. ಜನತಾಪಕ್ಷ ಸರ್ಕಾರ ೧೯೮೫ರ ಚುನಾವಣೆಯಲ್ಲಿ ಅದ್ಭುತ ವಿಜಯ ಗಳಿಸಿತು. ರಾಜಶೇಖರನ್ ಅವರು ನಿಷ್ಠಾವಂತ ಕಾಂಗ್ರೆಸ್‌ನವರಾಗಿದ್ದರು. ಎಂದೂ ಸಂಕುಚಿತ ದೃಷ್ಟಿಯಿಂದ ಯೋಚನೆ ಮಾಡಿದವರಲ್ಲ. ತಮ್ಮ ಆಲೋಚನೆಗಳನ್ನು ಪಕ್ಷವೊಂದಕ್ಕೆ ಸೀಮಿತಗೊಳಿಸಲಿಲ್ಲ. ಜನಹಿತಕ್ಕಾಗಿ ಅದನ್ನು ಯಾರು ಬೇಕಾದರೂ ಬಳಸಬೇಕೆಂದು ಅವರು ಅಪೇಕ್ಷಿಪಟ್ಟಿದ್ದರು. ಹಾಗೆಯೇ ಅವರು ನಡೆದುಕೊಂಡಿದ್ದಾರೆ.

ರಾಜಶೇಖರನ್ ಪ್ರಚಾರಕ್ಕಾಗಿ ಎಂದೂ ಕೆಲಸ ಮಾಡಿವದರಲ್ಲ. ಅವರ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಮಾಡಿರುವ ಕೆಲಸ ತುಂಬಾ ಮಹತ್ವದ್ದು. ಏಷ್ಯಾ ಗ್ರಾಮೀಣ ಅಭಿವೃದ್ಧಿಯಲ್ಲಿ ಅದು ದಿಟ್ಟ ಹೆಜ್ಜೆಗಳನ್ನಿಟ್ಟಿದೆ. ಅದರ ಜೀವನಾಡಿ ರಾಜಶೇಖರನ್ ಅವರಾಗಿದ್ದಾರೆ. ಅದರ ವತಿಯಿಂದ ರಾಮನಗರ ಮೊದಲಾದ ಕಡೆ ವಿಚಾರ ಸಂಕಿರಣ ಏರ್ಪಡಿಸಿದ್ದಾರೆ. ನಮ್ಮ ರೈತರಿಗೆ ತಾಂತ್ರಿಕ ವಿಚಾರಗಳ ಬಗೆಗೆ ಮಾರ್ಗದರ್ಶನ ನೀಡಿದ್ದಾರೆ. ಒಂದು ಸನ್ನಿವೇಶವನ್ನು ಈ ಸಂದರ್ಭದದಲ್ಲಿ ಹೇಳುವುದು ಉಚಿತವೆನ್ನಿಸುತ್ತದೆ. ರಾಮನಗರ ಇಡೀ ರಾಷ್ಟ್ರದಲ್ಲಿ ರೇಷ್ಮೆ ನೂಲು ತೆಗೆಯುವುದಕ್ಕೆ ಪ್ರಖ್ಯಾತವಾದ ಸ್ಥಳ. ಈ ಉದ್ಯಮದಲ್ಲಿ ತೊಡಗಿರುವವರು ಅತೀ ಬಡವರು. ಅವರು ವಾಸಿಸುವ ಸ್ಥಳವೂ ಹಾಗೂ ಉದ್ಯಮದ ಸ್ಥಳವೂ ಒಂದೇ ಆಗಿದ್ದು ಅನೇಕ ರೋಗ ರುಜಿನಗಳ ತಾಣವಾಗಿತ್ತು. ಇದನ್ನು ಅಧ್ಯಯನ ಮಾಡಿದ ರಾಜಶೇಖರನ್ ಕೇಂದ್ರ ವಿಜ್ಞಾನ ಪ್ರಚಾರ ಸಂಸ್ಥೆ ವತಿಯಿಂದ ಇಲ್ಲಿನ ರೇಷ್ಮೆ ನೂಲು ತೆಗೆಯುವವರಿಗೆ ವಿಶಿಷ್ಟ ಮಾದರಿಯ ಮನೆಗಳನ್ನು ಒಂದು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಿಸಿಕೊಟ್ಟರು. ಅಲ್ಲಿ ರೇಷ್ಮೆ ನೂಲು ತೆಗೆಯಲು ಮತ್ತು ಒಂದು ಕುಟುಂಬ ವಾಸ ಮಾಡಲು ಅವಕಾಶವಿರುತ್ತದೆ. ಈಗ ಅಂತಹ ೬೦ ಮನೆಗಳು ನಮ್ಮೂರಿನಲ್ಲಿ ಬಂದಿವೆ. ರೇಷ್ಮೆ ಉದ್ಯಮದಲ್ಲಿರುವ ಎಲ್ಲರಿಗೂ ವಿಶಿಷ್ಟವಾದ ಯೋಜನೆ ಎನ್ನಿಸಿದೆ. ನನ್ನಂತಹ ಒಂದಿಬ್ಬರಿಗೆ ಬಿಟ್ಟರೆ ಯಾರಿಗೂ ಇದು ರಾಜಶೇಖರ್ ಅವರ ಕಲ್ಪನೆಯ ಕೂಸೆಂಬುದು ಗೊತ್ತಿಲ್ಲ. ಅವರಿಗೆ ಕೆಲಸಮಾಡಿ ರೂಢಿಯೇ ಹೊರತು ಪ್ರಚಾರ ಮಾಡಿಕೊಳ್ಳುವುದಕ್ಕೆ ಯಾವ ಪರೀಕ್ಷೆಯೂ ಇಲ್ಲ. ಇತ್ತೀಚಿನ ಒಂದು ಘಟನೆಯನ್ನು ಹೇಳಿದರೆ ರಾಜಶೇಖರನ್ ಅವರ ವ್ಯಕ್ತಿತ್ವ ಸಮರ್ಪಕವಾಗಿ ತಿಳಿಯುತ್ತದೆ. ಒಮ್ಮೆ ರಾಜಶೇಖರನ್ ಜಪಾನ್ ದೇಶದ ಕಾರ್ಮಿಕ ನಾಯಕರನ್ನು ನಮ್ಮಲ್ಲಿಗೆ ಕರೆತಂದಿದ್ದರು. ಅವರಿಗೆ ಬೀಡಿ ಕಾರ್ಮಿಕರ ಸ್ಥಿತಿಗತಿಯನ್ನು ಪರಿಚಯ

ಮಾಡಿಸುವುದು ಅವರ ಉದ್ದೇಶವಾಗಿತ್ತು. ಜಪಾನ್ ನಾಯಕರಿಗೆ ರಾಮನಗರದ ಕಾರ್ಮಿಕರ ಸ್ಥಿತಿಯನ್ನು ನಾವಿಬ್ಬರೂ ಚೆನ್ನಾಗಿ ಅರ್ಥೈಸಿದೆವು. ಆಗ ಅವರಲ್ಲಿ ನಾನು ಪ್ರಾರ್ಥಿಸಿಕೊಂಡೆ:

'ಸ್ವಾಮಿ, ನಿಮ್ಮ ರಾಜ್ಯಸಭಾ ಫಂಡ್‌ನಿಂದ ಐದು ಲಕ್ಷ ಕೊಡಿ, ಇವರಿಗೊಂದು ಕಲಿಕಾ ಕೇಂದ್ರ ಕಟ್ಟಿಸ್ತೀನಿ' ಎಂದೆ. ಆರೇಳು ತಿಂಗಳಾದ ಮೇಲೆ ನಾನೊಮ್ಮೆ ಬೆಂಗಳೂರಿಗೆ ಹೋದಾಗ ಅವರು ಜೈಶಂಕರ್ ಅವರನ್ನು ಕರೆದು 'ಈ ಸಾಹೇಬ್ರ ವಿಚಾರ ಏನಾಯ್ತು?' ಎಂದರು. ನಾನೂ ಅವರಿಬ್ಬರೂ ಕಕ್ಕಾಬಿಕ್ಕಿಯಾದೆವು. ಆಮೇಲೆ ರಾಜಶೇಖರನ್ ಅವರು ಹೇಳಿದರು 'ಅದೇನಪ್ಪ, ಬೀಡಿ ಕಾರ್ಮಿಕರಿಗೆ ಐದು ಲಕ್ಷ ಕೊಡೋದು' ಎಂದರು. ತಕ್ಷಣ ನನಗೆ ಯಾರೋ ನಿನ್ನ ಕರ್ತವ್ಯ ನೀನು ಸರಿಯಾಗಿ ಮಾಡಿಲ್ಲ ಎಂದು ಹೇಳಿದಂತಾಯ್ತು. ಆಮೇಲೆ ಜೈಶಂಕರ್‌ಗೆ ಹೇಳಿದೆ 'ಸಾಹೇಬ್ರಿಗೆ ಹೇಳ್ಬೇಡ. ನಾನೇ ಹಣ ಕೇಳಿ ತಮಗೆ ಪತ್ರ ಕೊಟ್ಟಿಲ್ಲ' ಎಂದೆ. ಹೀಗೆ ರಾಜಶೇಖರ್ ಅವರು. ಒಂದು ಸಲ ಅವರ ಮನಸ್ನಲ್ಲಿ ಒಂದು ವಿಚಾರ ಮೂಡಿಬಿಟ್ಟರೆ ಅದು ಬೆಳೆದು ಸಮಾಜೋಪಯೋಗಿಯಾಗಿ ಆಗಿಯೇ ತೀರುತ್ತದೆ. ಅಂತಹ ಪರಿಪಕ್ವ ಚಿಂತನೆ ಅವರ ವ್ಯಕ್ತಿತ್ವದ ಮುಖ್ಯ ಭಾಗ. ಇಂತಹ ಅಪರೂಪದ ವ್ಯಕ್ತಿ ನಮ್ಮವರಾಗಿ ಇರುವುದು ತುಂಬಾ ಹೆಮ್ಮೆ. ಯೌವ್ವನದಲ್ಲಿ ಹುಡುಕಿಕೊಂಡು ಹೋಗಿ ಪರಿಚಯಿಸಿಕೊಂಡ ನನಗೆ ಅವರಿಂದ ಇನ್ನೂ ಕಲಿಯುತ್ತಲೇ ಇದ್ದೇನೆ. ಅವರ ಈ ವಿಶಾಲವಾದ ಮನಸ್ಸು ನಾಡಿನ ಜನಕ್ಕೆ ಶ್ರೇಯಸ್ಸನ್ನು ನೀಡಲೆಂದು ಪ್ರಾರ್ಥಿಸುತ್ತೇನೆ.

❊❊❊



# ಸದ್ವರ್ತನೆಯ ಸಹೃದಯಿ

ಎ. ಗುಂಡಣ್ಣ

ಚನ್ನಪಟ್ಟಣ ತಾಲ್ಲೂಕಿನ ಅಕ್ಕೂರು ನನ್ನ ಹುಟ್ಟೂರು. ೮೩ ವರ್ಷದ ನನಗೆ ಶ್ರೀ ಎಂ.ವಿ.ರಾಜಶೇಖರನ್ ಕುರಿತು ಏನು ಹೇಳಬೇಕೆಂಬುದೇ ಗೊತ್ತಾಗುತ್ತಿಲ್ಲ. ಸುಮಾರು ೪೦ ವರ್ಷಗಳಿಂದ ನಾನು ಅವರನ್ನು ನೋಡುತ್ತಾ ಬಂದಿದ್ದೇನೆ. ಅವರದ್ದು ಏಕಪ್ರಕಾರವಾದ ಪ್ರೀತಿ, ವಿಶ್ವಾಸ. ಸಹಕಾರ ಇಲಾಖೆಯಲ್ಲಿ ಆಡಿಟರ್ ಆಗಿದ್ದ ನಾನು ಸರ್ಕಾರಿ ಚಾಕರಿ ತೊರೆದು ಅಕ್ಕೂರಿಗೆ ಬಂದು ನೆಲಸಿ ಸಾರ್ವಜನಿಕ ಕ್ಷೇತ್ರ ಪ್ರವೇಶಿಸಿದೆನು. ದಿ. ಬಿ.ಜೆ. ಲಿಂಗೇಗೌಡರು ನನ್ನ ನಾಯಕರಾಗಿದ್ದರು. ಅವರು ಎಂತಹ ನಾಯಕರೆಂದರೆ ನಾವೆಲ್ಲ, ಅಂದ್ರೆ ಅವರ ಆತ್ಮೀಯರು, ಚರ್ಚಿಸಿ ಯಾವುದಾದರೂ ಒಂದು ವಿಚಾರದ ಮೇಲೆ ತೀರ್ಮಾನ ತೆಗೆದುಕೊಂಡು ಬಿಟ್ಟರೆ ಮುಗಿದುಹೋಯಿತು. ಅವರ ಮನಸ್ಸಿಗೆ ಕಸಿವಿಸಿಯಾಗಿದ್ದರೂ ಅವರು ನಮ್ಮ ತೀರ್ಮಾನದಂತೆಯೇ ನಡೆಯುತ್ತಿದ್ದರು. ನಾಯಕ ಹಾಗೂ ಅನುಯಾಯಿಗಳ ಸಂಬಂಧ ಅಷ್ಟೊಂದು ಸುಮಧುರವಾಗಿದ್ದ ಕಾಲವದು.

ಚನ್ನಪಟ್ಟಣ ವಿಧಾನಸಭಾ ಕ್ಷೇತ್ರದ ಶಾಸಕರು ಬಿ.ಜೆ. ಲಿಂಗೇಗೌಡರು ಲೋಕಸಭಾ ಸದಸ್ಯರು ಎಂ.ವಿ. ರಾಜಶೇಖರನ್. ೧೯೬೭ರ ಚುನಾವಣೆಯ ನಂತರ ನಮ್ಮ ಮತ್ತು ರಾಜಶೇಖರನ್ ಅವರ ನಡುವಿನ ಬಾಂಧವ್ಯ ಹೆಚ್ಚಾಗುತ್ತಾ ಹೋಯಿತು. ಆ ಕಾಲದ ರಾಜಕೀಯ ವಾತಾವರಣವನ್ನು ಕೆಲವೇ ಮಾತುಗಳಲ್ಲಿ ಹೇಳಬಯಸುತ್ತೇನೆ. ಅಂದು ರಾಜಕೀಯದಲ್ಲಿ ಸ್ಥಾನಮಾನ ಪಡೆಯಲು ಜಾತಿ ಪ್ರಮುಖ ಅರ್ಹತೆಯಾಗಿರಲಿಲ್ಲ. ಪಕ್ಷದ ಬಗೆಗಿನ ಬದ್ಧತೆ ಹಾಗೂ ಜನಹಿತ ಕಾಯಲು ಯಾರು ಸಮರ್ಥರೋ ಅವರಿಗೆ ಅಧಿಕಾರ ಸ್ಥಾನ ದೊರೆಯುತ್ತಿತ್ತು. ಇಡೀ ಚನ್ನಪಟ್ಟಣ ತಾಲೂಕಿನಲ್ಲಿ ಬ್ರಾಹ್ಮಣ ಸಮುದಾಯ ಅಂದಿಗೂ ಮತ್ತು ಇಂದಿಗೂ ಅಲ್ಪಸಂಖ್ಯಾತ ಸಮುದಾಯವೇ ಆಗಿದೆ. ಆ ಸಮುದಾಯದಿಂದ ಬಂದ ನನಗೆ ಅಧಿಕಾರ ಪಡೆಯುವಾಗ ಜಾತಿ ಅಡ್ಡ ಬರಲಿಲ್ಲ. ಯಾರೂ ನನ್ನನ್ನು ಜಾತಿಯಿಂದ ಗುರುತಿಸಿಲ್ಲ. ಕಾಂಗ್ರೆಸ್ ಪಕ್ಷದವನೆಂಬುದೇ ನನ್ನ

ಅರ್ಹತೆಯಾಗಿತ್ತು. 'ಭೂ ಪ್ರಾಥಮಿಕ ಅಭಿವೃದ್ಧಿ ಬ್ಯಾಂಕ್'ನ ಚುನಾಯಿತ ನಿರ್ದೇಶಕನಾದೆ. ಅನಂತರ ಅದರ ಅಧ್ಯಕ್ಷನೂ ಆದವನು. ತಾಲೂಕು ಅಭಿವೃದ್ಧಿ ಮಂಡಳಿಯ ಸದಸ್ಯನಾಗಿ, ಸ್ವಲ್ಪಕಾಲ ಅಧ್ಯಕ್ಷನಾಗಿದ್ದೆ. ಇನ್ನೂ ಒಂದು ಆಶ್ಚರ್ಯದ ಸಂಗತಿಯೆಂದರೆ ಚನ್ನಪಟ್ಟಣ ತಾಲೂಕಿನ ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿ ನಿಲಯದ ಅಧ್ಯಕ್ಷನಾಗಿದ್ದುದು. ಆಗ ಬಿ.ಜೆ. ಲಿಂಗೇಗೌಡರು ಕಾರ್ಯದರ್ಶಿಯಾಗಿದ್ದರು. ಈಗಿನ ಸಂದರ್ಭದಲ್ಲಿ ಇಂತಹ ಸನ್ನಿವೇಶವನ್ನು ಊಹಿಸಿಕೊಳ್ಳಲೂ ಸಹ ಸಾಧ್ಯವಿಲ್ಲ. ಆ ಕಾಲದಲ್ಲಿ ಒಂದು ಹಳ್ಳಿಗೆ ನಾವು ಚುನಾವಣಾ ಪ್ರಚಾರಕ್ಕೆ ಹೋಗುತ್ತಿದ್ದೆವು ಎಂದು ಇಟ್ಟುಕೊಳ್ಳೋಣ. ನಾವು ಅಲ್ಲಿಂದ ಜಾಗ ಖಾಲಿ ಮಾಡಿದ ತಕ್ಷಣವೇ ನಮ್ಮ ವಿರೋಧಿ ಬಣದವರು ಅಲ್ಲಿಗೆ ಹೋಗುತ್ತಿದ್ದರು. ವಿರೋಧಿ ಬಣದವರು ಹೋದ ಹಳ್ಳಿಗೆ ನಾವು ಹೋಗುತ್ತಿದ್ದೆವು. ರಸ್ತೆಯಲ್ಲಿ ಸಿಕ್ಕಿದರೆ ಒಬ್ಬರನ್ನೊಬ್ಬರು ಆತ್ಮೀಯವಾಗಿ ಮಾತನಾಡಿಸುತ್ತಿದ್ದೆವು. ಮತ ಎಣಿಕೆಯ ಕೇಂದ್ರದಲ್ಲಂತೂ ಒಟ್ಟೊಟ್ಟಿಗೆ ಕುಳಿತುಕೊಳ್ಳುತ್ತಿದ್ದೆವು. ೧೯೭೭ರ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಎಂ.ವಿ.ರಾಜಶೇಖರನ್ ಕನಕಪುರ ಲೋಕಸಭಾ ಕ್ಷೇತ್ರದಿಂದ ಜನತಾಪಕ್ಷದ ವತಿಯಿಂದ ಸ್ಪರ್ಧಿಸಿದ್ದರಷ್ಟೆ. ಆಗ ನಾವೆಲ್ಲ ಜನತಾ ಪಕ್ಷಕ್ಕೆ ದುಡಿದವರು. ರಾಜಶೇಖರನ್ ಆಗ ಕೇವಲ ೩೦೦೦ ಮತಗಳ ಅಂತರದಲ್ಲಿ ಸೋತಿದ್ದರು. ಮತ ಎಣಿಕಾ ಕೇಂದ್ರದಲ್ಲಿದ್ದ ನಾವು ೩೦೦೦ ಮತಗಳ ಮುನ್ನಡೆಯನ್ನು ಎಂ.ವಿ.ಚಂದ್ರಶೇಖರಮೂರ್ತಿ ಗಳಿಸಿದಾಗ ಸಹಜವಾಗಿ ಆತಂಕಕ್ಕೆ ಒಳಗಾಗಿದ್ದೆವು. ಆದರೆ ಎಂ.ವಿ. ರಾ. ದಿಢೀರನೆ ಎದ್ದು ಚಂದ್ರಶೇಖರ್‌ಮೂರ್ತಿಯವರನ್ನು ಅಭಿನಂದಿಸಿ ಜಿಲ್ಲಾಧಿಕಾರಿ ಬಸವಯ್ಯ ಅವರಿಗೆ 'ಆಡಳಿತ ಕಾಂಗ್ರೆಸ್‌ನ ಶ್ರೀ ಚಂದ್ರಶೇಖರಮೂರ್ತಿ ಇಲ್ಲಿಂದ ಚುನಾಯಿತರಾಗಿದ್ದಾರೆಂದು ಘೋಷಿಸಿ' ಎಂದು ಸೂಚಿಸಿದರು. ಸುಮಾರು ೧೬೦೦೦ದಷ್ಟು ಮತಗಳು ಕುಲಗೆಟ್ಟಿದ್ದು ಆ ಬದಿಯಲ್ಲಿತ್ತು. ನಾವುಗಳು ಪುನರ್ ಎಣಿಕೆಗೆ ಒತ್ತಾಯ ಮಾಡಿದ್ದರೆ ಇವರಿಗೆ ೨೦೦೦ ಮತಗಳು ಹೆಚ್ಚಿಗೆ ಬರುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಅಷ್ಟು ಹೊತ್ತಿಗೆ ಕೇಂದ್ರದಲ್ಲಿ ಜನತಾಪಕ್ಷ ಅಧಿಕಾರ ಪಡೆಯುತ್ತಿದ್ದುದರ ಸೂಚನೆಯೂ ದೊರಕಿತ್ತು. ಆದರೆ ಎಂ.ವಿ. ರಾಜಶೇಖರನ್ ಅವರ ನಡೆ-ನುಡಿಗಳೇ ವಿಭಿನ್ನವಾದವು. ನಮ್ಮಂತಹವರು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವಂತಹದು. ಉದಾರತೆ ಅವರ ವ್ಯಕ್ತಿತ್ವದ ಹೆಗ್ಗುರುತು. ಚನ್ನಪಟ್ಟಣ ತಾಲೂಕಿನಲ್ಲಿ ರಾಜಶೇಖರನ್ ಹಾಗೂ ಬಿ.ಜೆ. ಲಿಂಗೇಗೌಡರು ಹಾಕಿಕೊಟ್ಟ ರಾಜಕೀಯ ಸತ್ಪರಂಪರೆ ಇಂದಿಗೂ ಅಚ್ಚಳಿಯದೆ ನಿಂತಿದೆ. ಜಾತಿ, ಪಕ್ಷ ಅಥವಾ ಶ್ರೀಮಂತಿಕೆ ಇಲ್ಲಿನ ಮತದಾರರನ್ನು ಆಕರ್ಷಿಸುವುದಿಲ್ಲ.

ಪ್ರಾಮಾಣಿಕವಾಗಿ ಯಾರು ಜನರ ಕೆಲಸ ಮಾಡುತ್ತಾರೋ ಅವರಿಗೆ ಜನ ಒಲಿಯುತ್ತಾರೆ. ಈ ಪರಂಪರೆಯನ್ನು ರೂಪಿಸಿದವರು ರಾಜಶೇಖರನ್ ಅವರೇ. ಇತ್ತೀಚೆಗೆ ಒಂದು ಘಟನೆ ನಡೆಯಿತು. ನಮ್ಮೂರಿನ ಪಕ್ಕದ ಇಗ್ಗಲೂರಿನಲ್ಲಿ ಜಿಲ್ಲಾ ಪಂಚಾಯ್ತಿಗೆ ಬಸವರಾಜ್ ಎಂಬುವರು ನಿಂತಿದ್ದರು. ಅವರು ಬೆಂಗಳೂರಿಗೆ ಹೋದಾಗ ಕಾಂಗ್ರೆಸ್‌ನ ಹಿರಿಯ ನಾಯಕರಾದ ಎಂ.ರಾಜಶೇಖರಮೂರ್ತಿಯನ್ನು ಕಂಡು ಜಿಲ್ಲಾ ಪಂಚಾಯ್ತಿ ಸ್ಥಾನಕ್ಕೆ ಸ್ಪರ್ಧಿಸುವ ವಿಚಾರ

ಹೇಳಿದರು. ಅದನ್ನು ಕೇಳಿದ ರಾಜಶೇಖರಮೂರ್ತಿಯವರು ನಿಮ್ಮ ಜಿಲ್ಲಾ ಪಂಚಾಯಿತಿ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಲಿಂಗಾಯಿತರ ಮನೆಗಳು ಎಷ್ಟಿವೆ ಎಂದು ಪ್ರಶ್ನಿಸಿದರು. ಆಗ ಬಸವರಾಜು ಒಂದು ಏಳೆಂಟು ಇರಬಹುದು ಎಂದರು. ಹಾಗಾದರೆ ಈ ಚುನಾವಣೆಯಲ್ಲಿ ಹೇಗೆ ಗೆಲ್ತೀರಾ ಎಂಬುದು ರಾಜಶೇಖರಮೂರ್ತಿ ಅವರ ಪ್ರಶ್ನೆ. ಬಸವರಾಜ್ ಜಿಲ್ಲಾ ಪರಿಷತ್ತಿನ ಸದಸ್ಯರಾಗಿದ್ದುದಲ್ಲದೆ ಸ್ವಲ್ಪ ಕಾಲ ಜಿಲ್ಲಾ ಪಂಚಾಯಿತ್‌ನ ಅಧ್ಯಕ್ಷರು ಕೂಡಾ ಆಗಿದ್ದರು. ಹೀಗೆ ತಾಲ್ಲೂಕಿನಲ್ಲಿ ಆದರ್ಶಪ್ರಾಯವಾದ ಪರಂಪರೆಯಿರುವುದನ್ನು ಗಮನಿಸಬಹುದು. ಇಂತಹ ಪರಂಪರೆಯನ್ನು ರೂಪಿಸುವುದು ಅಷ್ಟು ಸುಲಭದ ವಿಚಾರವೂ ಅಲ್ಲ. ಇದಕ್ಕೆ ವಿಶಾಲವಾಗಿ ಯೋಚಿಸುವ ನಾಯಕರುಗಳು ಬೇಕು. ಅಂತಹ ನಾಯಕರಿಗೆ ಎಲ್ಲ ಸಮುದಾಯಗಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವ ಗುಣವಿರಬೇಕು. ರಾಜಶೇಖರನ್ ಅವರಲ್ಲಿ ಅಂತಹ ಗುಣವಿದ್ದ ಕಾರಣದಿಂದಲೇ ಅವರು ತಮ್ಮ ಲೋಕಸಭಾ ಕ್ಷೇತ್ರದಲ್ಲಿ ಎಲ್ಲ ವರ್ಗದವರ ನಾಯಕರೆನ್ನಿಕೊಂಡಿದ್ದಾರೆ.

ಮನುಷ್ಯ ಮನುಷ್ಯರ ನಡುವೆ ಸಂಬಂಧ ಕಾಯ್ದುಕೊಳ್ಳುವಲ್ಲಿ ರಾಜಶೇಖರನ್ ಅವರು ಅಪ್ರತಿಮರು. ಒಮ್ಮೆ ಅವರ ಸಂಪರ್ಕಕ್ಕೆ ಯಾರಾದರೂ ಬಂದರೆ ಅವರು ಕೊನೆಯವರೆಗೆ ರಾಜಶೇಖರನ್ ಅವರನ್ನು ಬಿಟ್ಟುಹೋಗುವುದು ಸಾಧ್ಯವಿರಲಿಲ್ಲ. ಅನೇಕ ನಾಯಕರುಗಳು ನಮ್ಮ ತಾಲ್ಲೂಕು ಹಾಗೂ ಗ್ರಾಮಗಳಿಗೆ ಬಂದು ನಮ್ಮ ಆತಿಥ್ಯ ಸ್ವೀಕರಿಸಿ 'ಬೆಂಗಳೂರಿಗೆ ಬಂದಾಗ ಮನೆಗೆ ಬನ್ನಿ' ಎದು ಹೇಳಿ ಹೋಗುತ್ತಾರೆ. ಅವರ ಮಾತು ನಿಜವೆಂದು ತಿಳಿದು ಮನೆಗೆ ಹೋದರೆ ಪರಿಚಯವಿಲ್ಲದವರಂತೆ ನಟಿಸುತ್ತಾರೆ. ಈ ಅನುಭವ ಬಹುಮಟ್ಟಿನ ಗ್ರಾಮಾಂತರ ಪ್ರದೇಶದವರದ್ದಾಗಿರುತ್ತದೆ. ಆದರೆ ರಾಜಶೇಖರನ್ ಅವರ ವಿಚಾರ ಹಾಗಲ್ಲ. ಅವರು ಯಾವುದೇ ಸ್ಥಾನದಲ್ಲಿರಲಿ ಅಥವಾ ಬಿಡಲಿ ವಿಶ್ವಾಸದ್ರೋಹ ಬಗೆದವರಲ್ಲ. ಚನ್ನಪಟ್ಟಣದಲ್ಲಿ ಮುಖ್ಯಮಂತ್ರಿಗಳು ಎರಡು ತಿಂಗಳ ಹಿಂದೆ ಮಹತ್ವದ ರೈತರ ಸಮಾವೇಶವನ್ನು ಉದ್ಘಾಟಿಸಿದರು. ನಾನೂ ಆ ಸಮಾರಂಭಕ್ಕೆ ಹೋಗಿದ್ದೆ. ರಾಜಶೇಖರನ್ ಹಿರಿಯ ನಾಯಕರ ಜೊತೆ ವೇದಿಕೆಗೆ ಬಂದರು. ಮುಂದಿನ ಸಾಲಿನಲ್ಲಿ ಕುಳಿತಿದ್ದ ನನ್ನನ್ನೂ ಕಂಡು ವೇದಿಕೆಯ ಮೇಲಿಂದ ಕೆಳಗಿಳಿದು ಬಂದು ನನ್ನ ಪಕ್ಕದಲ್ಲಿಯೇ ಕುಳಿತು ಆತ್ಮೀಯವಾಗಿ ಮಾತನಾಡಿಸಿದರು. ಅವರ ನಡೆ-ನುಡಿಗಳಲ್ಲಿ ಕೃತ್ರಿಮತೆಯಿಲ್ಲ. ಆತ್ಮೀಯತೆ ಅವರ ಸಹಜ ಕ್ರಿಯೆಯಾಗಿದೆ.

ಬೆಂಗಳೂರಿನಲ್ಲಿರುವ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗೆ ಹತ್ತಾರು ಸಲ ಹೋಗಿದ್ದೇನೆ. ಅಲ್ಲಿ ನಡೆಯುತ್ತಿರುವ ಕೆಲಸ ಕಾರ್ಯಗಳು ಎಂಥವರನ್ನಾದರೂ ಬೆರಗುಗೊಳಿಸುವಂತಹದ್ದು. ನಾನು ಅಲ್ಲಿಗೆ ಹೋದಾಗಲೆಲ್ಲಾ ರಾಜಶೇಖರನ್ ರೈತರ ಬಗೆಗೆ ಹಾಗೂ ಗ್ರಾಮೀಣ ಅಭಿವೃದ್ಧಿಯ ಬಗೆಗೆ ತಾವು ಕೈಗೊಂಡ ಕ್ರಮಗಳನ್ನು ವಿವರಿಸುತ್ತಾರೆ. ರೈತರ ಉತ್ಪನ್ನಗಳಿಗೆ ಸಮರ್ಪಕವಾದ ಬೆಲೆ ದೊರೆಯಬೇಕೆಂಬುದು ಅವರ ಕಳಕಳಿ. ಈ ವಿಚಾರದಲ್ಲಿ ತಾವು ಮಾಡುತ್ತಿರುವ ಹೋರಾಟವನ್ನು ನಮಗೆ ಅನೇಕ ಸಾರಿ ಹೇಳಿದ್ದಾರೆ.

ರಾಜಶೇಖರನ್ ಬಹಳ ಕಾಲ ವಿದೇಶಗಳನ್ನು ಸುತ್ತುತ್ತಿರುತ್ತಾರೆ. ಶ್ರೀಲಂಕಾ, ಬೆಲ್ಜಿಯಂ, ಅಮೆರಿಕಾ, ಕೆನಡಾ, ಜರ್ಮನಿ, ಚೀನಾ ಮೊದಲಾದ ದೇಶಗಳು ರಾಜಶೇಖರನ್ ಅವರಿಗೆ ಪ್ರಯಾಣ ಭತ್ಯೆ ಕೊಟ್ಟು ಕರೆಸಿಕೊಂಡು ಅವರ ಮಾತುಗಳನ್ನು ಕೇಳುತ್ತವೆ. ಅದರಲ್ಲೂ ಕುಡಿಯುವ ನೀರು, ಬರಡುಭೂಮಿ ಅಭಿವೃದ್ಧಿ, ಕೃಷಿಯಲ್ಲಿ ತಾಂತ್ರಿಕತೆಯ ಬಳಕೆ-ಮೊದಲಾದ ವಿಚಾರಗಳಲ್ಲಿ ರಾಜಶೇಖರನ್ ಅಧಿಕಾರಯುತ್ತವಾಗಿ ಮಾತನಾಡಬಲ್ಲರು. ಅವರ ಸಲಹೆ ಸೂಚನೆಗಳು ಬೇರೆ ಬೇರೆ ದೇಶದವರಿಗೆ ಉಪಯುಕ್ತವಾಗಬಹುದೇನೋ ನಮ್ಮವರಿಗೆ ಅದು 'ಹಿತ್ತಲಗಿಡ ಮದ್ದಲ್ಲ'. ಹಾಗಾಗಿ ರಾಜಶೇಖರನ್ ಇನ್ನೂ ನಮಗೆ ಅಪರಿಚಿತರೇ.

ರಾಜಶೇಖರನ್ ಅವರಿಗೆ ಪ್ರಗತಿ ಕುರಿತು ನಿಶ್ಚಿತ ಧೋರಣೆಯಿದೆ. ಈ ಊರಿಗೆ ಇಂತಿಂಥ ಕೆಲಸವಾಗಬೇಕೆಂದು ಮೊದಲೇ ಯೋಚಿಸುತ್ತಾರೆ. ೩೦-೩೫ ವರ್ಷಗಳ ಹಿಂದೆ ನಮ್ಮ ಗ್ರಾಮಗಳ ಪರಿಸ್ಥಿತಿಯನ್ನು ಹೇಳುವಂತಿರಲಿಲ್ಲ. ಒಂದು ರಸ್ತೆಯೋ ಅಥವಾ ಕಿರು ಪ್ರಮಾಣದ ಸೇತುವೆಯೇನಾದರೂ ಆದರೆ ಅದರ ಮೂಲಕ ಹತ್ತಾರು ಜನ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಹೋಗಿ ಅಕ್ಷರ ಕಲಿಯುತ್ತಾರೆ. ಇಂತಹ ನೂರಾರು ಅಭಿವೃದ್ಧಿ ಕೆಲಸಗಳು ಅವರಿಂದಾಗಿವೆ. ಈ ಭಾಗದ ಪ್ರಮುಖ ನೀರಾವರಿ ಯೋಜನೆಯಾದ ಇಗ್ಗಲೂರು ಏತ ನೀರಾವರಿ ಯೋಜನೆಗೆ ಇವರೇ ಕಾರಣಪುರುಷರು. ರಾಮನಗರ ತಾಲ್ಲೂಕಿನಲ್ಲಿ ಬರುವ ಮಂಚನಬೆಲೆ ನೀರಾವರಿ ಯೋಜನೆಯ ಅನುಷ್ಠಾನಕ್ಕೆ ಇವರು ಹಠ ಹಿಡಿಯದಿದ್ದರೆ ಅದು ಆಗುತ್ತಲೇ ಇರಲಿಲ್ಲ. ಅಂದಿನ ಕೇಂದ್ರ ನೀರಾವರಿ ಸಚಿವರಾಗಿದ್ದ ಡಾ. ಕೆ.ಎಲ್.ರಾವ್ ಅವರನ್ನು ಬಲವಂತವಾಗಿ ಮಂಚನಬೆಲೆ ಪ್ರದೇಶಕ್ಕೆ ಕರೆದುಕೊಂಡು ಬಂದು ಅಲ್ಲಿನ ರೈತರ ಪರಿಸ್ಥಿತಿಯನ್ನು ವಿವರಿಸಿ ಅದಕ್ಕೆ ಮಂಜೂರಾತಿ ದೊರಕಿಸಿಕೊಟ್ಟವರು ನಮ್ಮ ಲೋಕಸಭಾ ಸದಸ್ಯರಾಗಿದ್ದ ಎಂ.ವಿ.ರಾಜಶೇಖರನ್ ಎಂಬುದನ್ನು ಆ ಕಾಲದ ಹಿರಿಯರೆಲ್ಲರೂ ಹೇಳುತ್ತಾರೆ.

ಗ್ರಾಮೀಣ ಪ್ರದೇಶದ ಜನರ ವಿಚಾರದಲ್ಲಿ ಅಪಾರ ಪ್ರೀತಿಯಿರುವ, ರೈತಾಪಿ ಜನರ ಕಷ್ಟಸುಖಗಳನ್ನು ಚೆನ್ನಾಗಿ ಬಲ್ಲ ಎಂ.ವಿ.ರಾಜಶೇಖರನ್ ಅವರಿಗೆ ಉತ್ತಮ ಅಧಿಕಾರ ದೊರೆಯದಿರುವುದು ಈ ನಾಡಿನ ದೌರ್ಭಾಗ್ಯ. ಅವರು ಕೃಷಿ ಸಚಿವರಾಗಿಯೋ, ಗ್ರಾಮೀಣಾಭಿವೃದ್ಧಿ ಸಚಿವರಾಗಿಯೋ ಈ ರಾಜ್ಯಕ್ಕೆ ಸೇವೆ ಸಲ್ಲಿಸುವ ಅವಕಾಶ ದೊರಕಿದ್ದರೆ ಈ ಕ್ಷೇತ್ರದಲ್ಲಿ ಖಂಡಿತಾ ಕ್ರಾಂತಿಕಾರಕ ಬದಲಾವಣೆಯಾಗುತ್ತಿತ್ತು. ಚಿಂತೆಯಿಲ್ಲ ದೇವರ ಮನಸ್ಸಿನಲ್ಲಿ ಏನಿದೆಯೋ ಅದಾಗಿದೆ. ರಾಜಶೇಖರನ್ ಅವರ ಸಂಪೂರ್ಣ ಸಾಮರ್ಥ್ಯದ ಬಳಕೆಗೆ ಇನ್ನೂ ಅವಕಾಶವಿದೆ. ಅಂತಹ ಅವಕಾಶವನ್ನು ದೇವರು ಅವರಿಗೆ ಕೊಡಲೆಂದು ಪ್ರಾರ್ಥಿಸುತ್ತೇನೆ.

***

# ಬಾಲ್ಯದ ಗೆಳೆಯ

ರಾಮ್‌ರಾವ್ ಹಿತಾಪೆ

ನನ್ನ ಬಾಲ್ಯದ ಗೆಳೆಯ ಎಪ್ಪತ್ತೈದು ವಸಂತಗಳನ್ನು ಪೂರೈಸಿ ರಾಷ್ಟ್ರಕ್ಕೆ ಅನನ್ಯ ಸೇವೆ ಸಲ್ಲಿಸಿದ್ದಾನೆ ಎಂದರೆ ಯಾರಿಗೆ ತಾನೆ ಅಭಿಮಾನ ಉಕ್ಕಿ ಹರಿಯುವುದಿಲ್ಲ. ಈ ಸಂದರ್ಭದಲ್ಲಿ ಗೆಳೆಯರೆಲ್ಲರೂ ಕೂಡಿ ಅಭಿನಂದನೆ ಕಾರ್ಯಕ್ರಮಕ್ಕಾಗಿ ಹತ್ತು ಹಲವು ಯೋಜನೆ ರೂಪಿಸಿದ್ದಾರೆ ಎಂದಾಗ ನನಗೆ ಅತೀವ ಸಂತಸವಾಯಿತು. ಈ ಸಂತಸವನ್ನು ಹಂಚಿಕೊಳ್ಳಲು ನಾನೇ ಖುದ್ದಾಗಿ ಅವರನ್ನು ಕಂಡು ಮಾತನಾಡಲೆಂದು ಎಣಿಕೆ ಹಾಕಿದೆ. ಆದರೆ ಗೆಳೆಯ ಸದಾ ಕ್ರಿಯಾಶೀಲ. ಹೇಳಿ ಕೇಳಿ ಮೇಲ್ಮನೆಯ ಸಂಸದ. ನೂರೆಂಟು ಕಾರ್ಯಭಾರದ ಒತ್ತಡದಲ್ಲಿ ಅವನಿರುತ್ತಾನೆ. ಅವನಿಗೇಕೆ ತೊಂದರೆ ಕೊಡುವುದು ಎಂದು ಸುಮ್ಮನಿದ್ದ ಸಂದರ್ಭದಲ್ಲಿಯೇ ನನ್ನ ಗೆಳೆಯರಾದ ಶ್ರೀ ಸದಾಶಿವಯ್ಯನವರನ್ನು ಕನಕಪುರದ ಶ್ರೀ ಬಿ.ಎಸ್.ದೊಡ್ಡವೀರಯ್ಯನವರ ಮನೆಯಲ್ಲಿ ಭೇಟಿಯಾಗುವ ಪ್ರಸಂಗ ಬಂದಿತು. ಇಂತಹ ಕೆಲ ನನ್ನ ಅಭಿಪ್ರಾಯಗಳನ್ನು ನಮ್ಮ ಹಿರಿಯರಾದ ಮತ್ತು ಸ್ವಾತಂತ್ರ್ಯ ಚಳವಳಿಯಲ್ಲಿ ಉತ್ಸಾಹದಿಂದ ಭಾಗವಹಿಸಿದ್ದ ಶ್ರೀ ಕೆ.ರಾಮಚಂದ್ರ ಅವರ ಸಮ್ಮುಖದಲ್ಲಿ ವ್ಯಕ್ತಪಡಿಸಿದೆ. ಅವರು ಇದೇ ಅಭಿಪ್ರಾಯಗಳನ್ನು ಬರಹ ರೂಪದಲ್ಲಿ ತರುತ್ತೇನೆ ಎಂದಾಗ ನನಗೆ ಅತ್ಯಂತ ಖುಷಿಯಾಯಿತು. ತುಂಬಾ ಪ್ರೀತಿಯಿಂದ ಒಪ್ಪಿಕೊಂಡೆ. ನನ್ನ ಮನದಿಂಗಿತ ಇದರೊಡನೆ ಈಡೇರಿತು ಎಂದು ಸಮಾಧಾನಪಟ್ಟುಕೊಂಡೆ.

ಸುಮಾರು ೧೯೩೭ರಿಂದ ೧೯೪೧ ರವರೆಗೆ ನಾನು ಮತ್ತು ಶ್ರೀ ರಾಜಶೇಖರನ್ ತರಗತಿಯಲ್ಲಿ ಸಹಪಾಠಿಗಳು. ಅವನು ಆಗ ಸ್ಫುರದ್ರೂಪಿ ಹುಡುಗನಾಗಿದ್ದ. ಸದಾ ಲವಲವಿಕೆ, ಬಾಲ್ಯಸಹಜವಾದ ತುಂಟಾಟ ಕೀಟಲೆಗಳಿಗೇನು ಅವನಲ್ಲಿ ಕಡಿಮೆಯಿರಲಿಲ್ಲ. ಓದುವುದರಲ್ಲಂತೂ ಅವನು ಮುಂದು. ತುಂಬಾ ಸಂಸ್ಕಾರವಂತ. ಆ ಸಂದರ್ಭದಲ್ಲಿ ಮರಳವಾಡಿಯ ಸುತ್ತ ಆರೆಂಟು ಕಿ.ಮೀ. ವ್ಯಾಪ್ತಿಯಲ್ಲಿ ಇನ್ನಿಲ್ಲವೆಂಬಂತೆ ಕದ್ದು ಸುತ್ತುತ್ತಿದ್ದೆವು. ನಮಗೆ ಅವರ ತಾತನವರನ್ನು ಕಂಡರೆ ಭಯ. ನಾವು ಎಲ್ಲರೂ ಸೇರಿ

ಎಲ್ಲಾದರೂ ಹೋಗುತ್ತಿರುವಾಗ ಅವರ ತಾತನವರು ಎದುರಾದರೆ ಅಡಗಿ ಕುಳಿತುಕೊಳ್ಳುತ್ತಿದ್ದೆವು ಅಥವಾ ಬೇರೆ ದಾರಿ ಹಿಡಿದು ಓಡಿಹೋಗುತ್ತಿದ್ದೆವು. ಕಬ್ಬಡಿ ಆಟ ನಮ್ಮ ಪ್ರೀತಿಯ ಆಟವಾಗಿತ್ತು. ಇದೆಲ್ಲಕ್ಕಿಂತ ನಮಗೆ ಖುಷಿ ಕೊಟ್ಟಂತಹ ಕ್ಷಣಗಳೆಂದರೆ ನಮ್ಮೂರಿನ ಸುತ್ತಮುತ್ತ ಇರುವ ಕೆರೆ-ಬಾವಿಗಳಲ್ಲಿ ಗಂಟೆಗಟ್ಟಲೆ ಈಜುವುದು. ಮುಳುಗೇಳುವುದು. ಮನೆಯವರು ನಮ್ಮನ್ನು ಈಜಲು ಹೋಗಲು ಬಿಡುತ್ತಿರಲಿಲ್ಲ. ಕದ್ದು ಹೋಗಬೇಕು. ಇಲ್ಲವೇ ನಮ್ಮ ಜೊತೆಗೆ ದೊಡ್ಡವರಿದ್ದಾರೆಂದು ಹೇಳಿ ಹೋಗಬೇಕಾಗಿತ್ತು. ನಾನು ರಾಜಶೇಖರನ್ ಅವರಿಗಿಂತ ಚೆನ್ನಾಗಿ ಈಜುತ್ತಿದ್ದೆ. ಜಾಸ್ತಿ ಹೊತ್ತು ಮುಳುಗುತ್ತಿದ್ದೆ. ಕೆರೆಯ ಅಥವಾ ಬಾವಿಯ ತಲಸ್ಪರ್ಶ ಮಾಡಿ, ಮಾಡಿದ್ದುದಕ್ಕೆ ಸಾಕ್ಷಿಯಾಗಿ ಅಲ್ಲಿಂದ ಕಲ್ಲುಮಣ್ಣು ಎತ್ತಿ ತಂದು ತೋರಿಸಬೇಕು. ಆಗಲೇ ಇವನು ಮುಳುಗಿ ತಳದವರೆಗೆ ಹೋಗಿ ಬಂದಿರುವನೆಂದು ಖಾತ್ರಿಯಾಗುತ್ತಿತ್ತು. ನಮ್ಮದೊಂದು ಈಜುವ ಗುಂಪೇ ಇತ್ತು. ನಾನು, ರಾಜಶೇಖರನ್ ಹೆಚ್ಚು ಸಲ ನೇತೃತ್ವ ವಹಿಸುತ್ತಿದ್ದೆವು. ದೌಲತರಾವ್, ಈಶ್ವರಾಚಾರ್ ಮುಂತಾದವರು ಸದಾ ನಮ್ಮ ಜೊತೆಗಿರುತ್ತಿದ್ದ ಗೆಳೆಯರು.

ಶ್ರೀ ರಾಜಶೇಖರನ್ ಅವರ ಮನೆಯಲ್ಲಿ ತುಂಬಾ ಶಿಸ್ತು. ಅಷ್ಟೇ ಕಟ್ಟುನಿಟ್ಟು. ಅನಗತ್ಯವಾಗಿ ಅವರು ಮನೆಯಿಂದ ಹೊರಗೆ ಹೆಚ್ಚು ತಿರುಗಾಡುವಂತಿರಲಿಲ್ಲ. ಅವರ ತಾತ ಅದಕ್ಕೆ ಹೆಚ್ಚು ಅವಕಾಶ ಕೊಡುತ್ತಿರಲಿಲ್ಲ. ಅವರ ತಾತ ನಮ್ಮನ್ನು ನೋಡಿದರೆ ಬಯ್ಯಬಹುದೆಂಬ ಹೆದರಿಕೆಯಿಂದ ನಾವು ಅವರ ಮನೆಯ ಕಡೆಗೆ ಹೆಚ್ಚು ಹೋಗುತ್ತಿರಲಿಲ್ಲ. ರಾಜಶೇಖರನ್ ಅತ್ಯಂತ ಸ್ನೇಹಜೀವಿ. ನಾವು ಅವರ ಮನೆಯ ಹೊರಗೆ ಕಾಯುತ್ತಿರುವುದು ಗೊತ್ತಾಗುತ್ತಲೇ ಯಾವುದೋ ಮಾತಿನಿಂದ ಹೊರಗೆ ಬಂದುಬಿಡುತ್ತಿದ್ದ. ಮನೆಯ ಹೊರಗೆ ಬರುವ ತನಕ ಸುಮ್ಮನಿರುತ್ತಿದ್ದ. ಸ್ವಲ್ಪ ದೂರ ಬಂದಾಗಲೇ ನಮ್ಮೊಡನೆ ಬೆರೆತು ಜೋರಾಗಿ ಮಾತನಾಡುತ್ತಿದ್ದ. ಅಲ್ಲಿಂದ ನಾವು ಕುಳಿತು ಇಂದು ಈಜುವುದಕ್ಕೆ 'ಹಾರುವನ ಕೆರೆಗೋ, ಚಕ್ಕರೆಗೋ ಶಿವಪ್ಪನ ಬಾವಿಗೋ' ಹೋಗಬೇಕೆಂದು ನಿರ್ಧರಿಸುತ್ತಿದ್ದೆವು. ಅಲ್ಲಿಂದ ಹೊರಟರೆ ಎರಡು-ಮೂರು ತಾಸು ಚೆನ್ನಾಗಿ ಈಜಿ ಸುಸ್ತಾದ ಮೇಲೆ ಮನೆಗೆ ಬರುತ್ತಿದ್ದೆವು.

ಶ್ರೀ ರಾಜಶೇಖರನ್ ಅವರ ತಾಯಿ, ದೇವತೆಯಂಥವರು. ನಮ್ಮನ್ನೆಲ್ಲಾ ತುಂಬಾ ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಮಾತ್ರವಲ್ಲ, ವಿಶೇಷ ಅಡಿಗೆ ತಯಾರಾದಾಗಲೆಲ್ಲಾ ರಾಜಶೇಖರನ್ ಅವರ ಮೂಲಕ ನಿರಾಯಾಸವಾಗಿ ನಮಗೆ ತಲುಪಿಸುತ್ತಿದ್ದರು. ಅವರೊಬ್ಬ ಸಾಧ್ವಿಮಣಿ. ಬಡವರ ಬಗೆಗೆ, ದುರ್ಬಲರ ಬಗೆಗೆ ಅತೀವ ಅನುಕಂಪ ಅವರಿಗೆ. ಅವರ ದಾನಗುಣ, ಅಕ್ಕರೆ, ಮಮಕಾರಗಳನ್ನು ಕಂಡಾಗ ನಮಗೆಲ್ಲ ಅವರ ಬಗೆಗೆ ಭಕ್ತಿಯ ಗೌರವ ಹುಟ್ಟುತ್ತಿತ್ತು. ಅವರನ್ನು ನೆನಪಿಸಿಕೊಂಡರೆ ಇಂದಿಗೂ ನನಗೆ ಅವರ ವ್ಯಕ್ತಿತ್ವ ಕಣ್ಣ ಮುಂದೆ ಚಿತ್ರಿತವಾಗುತ್ತಿದೆ.

ರಾಜಶೇಖರನ್ ದೊಡ್ಡವನಾದ. ಅವನು ಬೆಳೆಯುತ್ತಾ ಹೋದಂತೆ ಅವನಲ್ಲಿ ನಾನು

ಭಾರಿ ಬದಲಾವಣೆಗಳನ್ನು ಗಮನಿಸಿರುವೆ. ನನ್ನ ಗೆಳೆಯ ದೊಡ್ಡವನಾಗಿ ದೆಹಲಿ ಮಟ್ಟದಲ್ಲಿ ರಾಜಕಾರಣ ಮಾಡುತ್ತಿದ್ದಾಗ ಅಭಿಮಾನ ಪಟ್ಟೆ, ಹೆಮ್ಮೆ ಪಟ್ಟೆ. ಆಗಾಗ ಸಿಕ್ಕಾಗ ನಾನು ಮಾಸ್ತರರಾಗಿದ್ದುದರಿಂದ "ನಮಸ್ಕಾರ ಸಾರ್! ಹೇಗಿದ್ದೀರಿ!" ಎಂದು ಉದ್ಗಾರ ತೆಗೆಯತೊಡಗಿದ. ನಾನೂ ಕೂಡಾ 'ಸಾರ್' ಅನ್ನಲು ಹಾಗೆಯೇ, ಬಹುವಚನದ ಬಳಕೆ ಮಾಡತೊಡಗಿದೆ. ಆರಾಮವಾಗಿ ಸಿಕ್ಕಾಗ ಇಂತಹ ವಿಷಯಗಳನ್ನು ಕುರಿತು ಹರಟೆ ಹೊಡೆದದ್ದುಂಟು. ಕನಕಪುರದ ಟೆಂಟಲ್ಲಿ ಒಟ್ಟಿಗೆ ಕುಳಿತು ಸಿನಿಮಾ ನೋಡಿದ್ದನ್ನು, ಅದರ ಕಥೆಯನ್ನು ಆದಷ್ಟು ಕಂಡ ಕಂಡವರ ಮುಂದೆ ಹೇಳಿದ ರೀತಿಯನ್ನು ನೆನಸಿಕೊಂಡಿದ್ದೇನೆ. ಎಪ್ಪತ್ತರ ದಶಕದಲ್ಲಿರುವ ನಮಗೆ ಬಾಲ್ಯವೆಂದರೆ 'ಅದು ಹೀಗಿತ್ತು' ಎನ್ನುವುದೇ ಉದ್ಗಾರವಲ್ಲವೇ!

ಅವರು 'ಮಂಚನಬೆಲೆ' ಯೋಜನೆ ಮುಗಿದಾಗ ಇನ್ನೇನು ಅದರ ಉದ್ಘಾಟನೆಯಾಗುತ್ತಿದೆ ಎನ್ನುವ ಸಂದರ್ಭದಲ್ಲಿ ನನಗೆ ಒಮ್ಮೆ ರಾಜಶೇಖರನ್ ಸಿಕ್ಕಿದ್ದರು. ನಾನು ಅವನನ್ನು ಕಣ್ತುಂಬ ನೋಡಿದೆ. "ಎಂತಹ ಸಾಧನೆ ಮಾಡಿರುವೆ ರಾಜಶೇಖರನ್!" ಎಂದು ಆಶ್ಚರ್ಯದಿಂದ ನೋಡಿದೆ. ಆಗವನು ಇಡೀ ರಾಮನಗರ, ಕನಕಪುರ ರೈತರ, ಆ ಮೂಲಕ ಭಾರತದ ಕೃಷಿಕರ ಮಿತ್ರನಾಗಿ ಪರಿವರ್ತಿತನಾಗಿದ್ದ. ಅದರ ಉದ್ಘಾಟನೆಯ ದಿನ ಅಲ್ಲಿಗೆ ಹೋಗಿದ್ದ ನನಗೆ ರಾಜಶೇಖರನ್ ಅವರ ಜೀವನ ಸಾರ್ಥಕವಾಯಿತೆಂದುಕೊಂಡೆ. ಅದಕ್ಕಾಗಿ ಅವನನ್ನು ಅಭಿನಂದಿಸಿದೆ. ನಿಜಕ್ಕೂ 'ಅವನ ಸಾಧನೆ' ನಾನು ಮಾಡಿರುವ ಸಾಧನೆಯಂತೆ ಮನದಲ್ಲಿಯೇ ಶ್ಲಾಘಿಸಿದೆ. ಇಂತಹ ಅರ್ಥಪೂರ್ಣ ಕೆಲಸಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಅವನು ವಿರಾಟ್ ಸ್ವರೂಪಿಯಾಗಿ ಬೆಳೆದಿದ್ದಾನೆ. ಅವನನ್ನು ನಾನು ಮನದುಂಬಿ ಅಭಿನಂದಿಸುವೆ. ಉತ್ತರೋತ್ತರ ನನ್ನ ಗೆಳೆಯ ಈ ದೇಶದ ಅತ್ಯುಚ್ಚ ಸ್ಥಾನವನ್ನಲಂಕರಿಸಲಿ.

***

# ನಿಷ್ಕಾಮ ಕರ್ಮಯೋಗಿ

ಡಿ. ರೇವಣ್ಣ

ನನಗೆ ೭೨ ವರ್ಷ ವಯಸ್ಸು. ನಮ್ಮ ತಂದೆ ವೀರಭದ್ರಯ್ಯ, ತಾಯಿ ಗಂಗಮ್ಮ. ನಾನು ಮಗುವಾಗಿದ್ದಾಗ ನಮ್ಮ ತಂದೆ ತೀರಿಕೊಂಡರು. ಕನಕಪುರದ ಶ್ರೀ ದೇಗುಲ ಮಠದಲ್ಲಿ ನನ್ನ ವಿದ್ಯಾಭ್ಯಾಸ. ೧೯೬೦ರಿಂದಲೂ ನಮ್ಮ ಗ್ರಾಮ ಸೇರಿದಂತೆ ಒಂಬತ್ತು ಹಳ್ಳಿಗಳ ಪಂಚಾಯತಿ ಆಗಿರುವ ಹಂಚಿಕುಪ್ಪೆ ಗ್ರಾಮ ಪಂಚಾಯಿತಿ ಅಧ್ಯಕ್ಷನಾಗಿ ೧೫ ವರ್ಷ ದುಡಿದಿದ್ದೇನೆ. ತಾಲ್ಲೂಕು ಬೋರ್ಡ್ ಸದಸ್ಯನಾಗಿ ೯ ವರ್ಷ, ಪಿ.ಎಲ್.ಡಿ. ಬ್ಯಾಂಕಿನ ಸದಸ್ಯನಾಗಿ ೨೨ ವರ್ಷ ಹಾಗೂ ಜಿಲ್ಲಾ ಪಂಚಾಯತಿಯ ಸದಸ್ಯನಾಗಿ ೫ ವರ್ಷ ಸೇವೆ ಸಲ್ಲಿಸಿದ್ದೇನೆ. ಕೋ-ಆಪರೇಟಿವ್ ಯೂನಿಯನ್‌ನ ಬೆಂಗಳೂರು ಗ್ರಾಮಾಂತರ ಘಟಕದ ಅಧ್ಯಕ್ಷನಾಗಿದ್ದೆ. ಹೀಗೆ ಸಾರ್ವಜನಿಕ ಕ್ಷೇತ್ರದಲ್ಲಿ ಮೊದಲಿನಿಂದಲೂ ತೊಡಗಿಸಿಕೊಂಡಿದ್ದ ನನಗೆ ಎಂ.ವಿ.ರಾಜಶೇಖರನ್‌ರವರು ಚಿರಪರಿಚಿತರು. ನಮ್ಮ ಕನಕಪುರದ ದೇಗುಲ ಮಠದ ಆಶ್ರಯದಲ್ಲಿ ಅವರು ಪ್ರೌಢ ಶಾಲಾ ವಿದ್ಯಾಭ್ಯಾಸವನ್ನು ಮುಗಿಸಿದರು. ಅವರ ಸಹಪಾಠಿ ನನ್ನ ಸಹೋದರ ಶಿವಣ್ಣನವರು. ಅವರು ಒರಿಸ್ಸಾದಲ್ಲಿ ಸೂಪರಿಂಟೆಂಡೆಂಟ್ ಇಂಜನಿಯರ್ ಆಗಿ ಸೇವೆ ಸಲ್ಲಿಸಿ ದೆಹಲಿಯಲ್ಲಿ ನಿವೃತ್ತ ಜೀವನ ನಡೆಸುತ್ತಿದ್ದಾರೆ.

ಕನಕಪುರದ ದೇಗುಲಮಠಕ್ಕೆ ಹಿರಿದಾದ ಪರಂಪರೆ ಇದೆ. ವಿದ್ಯಾ ಪ್ರಸಾರ ಹಾಗೂ ವಿದ್ಯಾರ್ಥಿಗಳ ಪೋಷಣೆ ಆ ಸಂಸ್ಥೆಯ ಗುರಿ. ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಹಾಗೂ ಮಹಾಲಿಂಗ ಸ್ವಾಮಿಗಳು ಈ ಮಠವನ್ನು ನಡೆಸಿಕೊಂಡು ಬಂದ ಪರಂಪರೆ ನಿಜಕ್ಕೂ ಮೆಚ್ಚುವಂಥಾದ್ದು. ಕರ್ನಾಟಕದ ಯಾವುದೇ ಮಠ ಈ ಮಠದಷ್ಟು ಕೃಷಿ ಚಟುವಟಿಕೆಯಲ್ಲಿ ತನ್ನನ್ನು ತೊಡಗಿಸಿಕೊಂಡಿಲ್ಲ. ಸಾವಿರ ಕ್ವಿಂಟಾಲ್‌ಗಿಂತ ಹೆಚ್ಚಿನ ದವಸಧಾನ್ಯಗಳನ್ನು ಈ ಮಠದ ಆಶ್ರಯದಲ್ಲಿರುವ ಜಮೀನುಗಳಿಂದ ಬೆಳೆಯಲಾಗುತ್ತಿದೆ. ಪಶುಸಂಗೋಪನೆ ಕೂಡ ಅದೇ ರೀತಿ ಇದೆ. ಪೂಜ್ಯ ಶ್ರೀಗಳು ತಾವೇ ಸ್ವತಃ ನಿಂತು ಕೃಷಿ ಚಟುವಟಿಕೆಯನ್ನೂ ಕೈಗೊಂಡವರು. ೧೯೫೮-೫೯ರಲ್ಲಿ

ಭೂಮಿಯ ಇನಾಮತಿ ಜಮೀನಿನ ಬಗ್ಗೆ ಸರ್ಕಾರ ದೃಢ ನಿಲುವು ಕೈಗೊಂಡಾಗ ಇದಕ್ಕೆ ಸೇರಿದ ಜಮೀನು ಕೈಬಿಟ್ಟುಹೋಯಿತು. ಈ ಜಮೀನಿಗೆ ಸಂಬಂಧಪಟ್ಟ ಒಂದು ವಿವಾದ ರಾಮನಗರ ಸಬ್ ಡಿವಿಷನ್‌ನಲ್ಲಿ ನಡೆಯುತ್ತಿತ್ತು. ಕಿರಿಯ ಸ್ವಾಮಿಗಳಾದ ಮಹಾಲಿಂಗ ಸ್ವಾಮಿಗಳು ಅದಕ್ಕೆ ಸಾಕ್ಷ್ಯ ಹೇಳಬೇಕಾಗಿತ್ತು. ಆಗ, ಹಿರಿಯ ಸ್ವಾಮಿಗಳಾದ ಇಮ್ಮಡಿ ನಿರ್ವಾಣ ಸ್ವಾಮಿಗಳು 'ನೋಡಿ, ನಮ್ಮ ಜಮೀನನ್ನು ರೈತರು ಮಾಡುತ್ತಿಲ್ಲ ಅಂತ ಸುಳ್ಳು ಹೇಳಬೇಡಿ. ನಿಜ ಹೇಳಿ ಏನಾಗುತ್ತೋ ನೋಡೋಣ' ಎಂದಿದ್ದರು. ಇಂತಹ ಪರಂಪರೆಯಲ್ಲಿ ಬೆಳೆದ ರಾಜಶೇಖರನ್‌ರವರಿಗೆ ಸತ್ಯ ನುಡಿಯುವುದು ಬಾಲ್ಯದಿಂದಲೂ ಕರಗತವಾಗಿ ಬಂದ ವಿಚಾರ. ಅದೇ ರೀತಿ ಕೃಷಿ ಚಟುವಟಿಕೆಗಳಲ್ಲೂ ಅವರಿಗೆ ಅಪಾರವಾದ ಆಸಕ್ತಿ. ಸ್ವಾಮಿಗಳು ಸ್ವತಃ ನಿಂತು 'ಆರಂಭ' ಮಾಡಿಸುತ್ತಿದ್ದ ಕಾರಣ ಆಗಿನ ಎಲ್ಲಾ ಮಠದ ವಿದ್ಯಾರ್ಥಿಗಳಿಗೂ ಕೃಷಿ ಬಗ್ಗೆ ಪ್ರಾಯೋಗಿಕ ಅನುಭವ ಇತ್ತು. ಈ ಸ್ವಾಮಿಗಳ ಮನಸ್ಸನ್ನು ಎಷ್ಟರಮಟ್ಟಿಗೆ ರಾಜಶೇಖರನ್‌ರವರು ಗೆದ್ದುಕೊಂಡಿದ್ದರು ಎಂದರೆ, ಕಳೆದ ನಲವತ್ತು ವರ್ಷಗಳ ಹಿಂದೆ ಅವರು ಕೈಲಾಸಿವಾಸಿಗಳಾಗುವ ಮುನ್ನ ಸಹ ಕೇವಲ ರಾಜಶೇಖರನ್ ಎಂದು ಇವರನ್ನು ಸಂಬೋಧಿಸುತ್ತಿರಲಿಲ್ಲ. 'ನಮ್ಮ ರಾಜಶೇಖರನ್' ಎಂಬುದೇ ಅವರ ಅಭಿಮಾನದ ನುಡಿಯಾಗಿತ್ತು. ಸನ್ಯಾಸಿಗಳ ಮನಸ್ಸನ್ನು ಗೆದ್ದ ರಾಜಶೇಖರನ್ ವ್ಯಕ್ತಿತ್ವ ಎಂಥಾದ್ದು ಎಂದು ಊಹಿಸಬಹುದು.

ರಾಜಶೇಖರನ್‌ರವರು ಕನಕಪುರ ಲೋಕಸಭಾ ಕ್ಷೇತ್ರದ ಸದಸ್ಯರಾಗಿದ್ದಾಗ ಅವರನ್ನು ಬಹಳ ಹತ್ತಿರದಿಂದ ನೋಡಿದ್ದೇನೆ. ಅವರಷ್ಟು ಜನರ ಕೆಲಸಗಳನ್ನು ಹಂಚಿಕೊಂಡು ದುಡಿದವರು ತುಂಬಾ ಕಡಿಮೆ. ಅವರು ಸದಾ ಬಡವರ ಹಾಗೂ ಅಸಹಾಯಕರ ಬಗ್ಗೆ ಚಿಂತನೆ ಮಾಡುತ್ತಾರೆ. ತುಂಬ ವಿರೋಧಗಳ ನಡುವೆ ಸಹ ಅವರು ಮಂಚನಬೆಲೆ ನೀರಾವರಿ ಯೋಜನೆಯನ್ನು ಅನುಷ್ಠಾನ ಮಾಡಿಸಿದರು. ಈ ಮಂಚನಬೆಲೆ ನೀರಾವರಿ ಅನುಷ್ಠಾನಗೊಂಡ ಕಾರಣದಿಂದ ಇಂದು ರಾಮನಗರ, ಚನ್ನಪಟ್ಟಣಗಳಿಗೆ ಆರ್ಥಿಕ ಸಬಲತೆ ದೊರಕಿದೆ. ಮಾಗಡಿ ಪಟ್ಟಣಕ್ಕೆ ಇಂದು ಮಂಚನಬೆಲೆಯಿಂದ ಕುಡಿಯುವ ನೀರನ್ನು ಸರಬರಾಜು ಮಾಡಲಾಗುತ್ತಿದೆ. ಇಂದು ಕುಡಿಯುವ ನೀರು ಮಾಗಡಿಗೆ ದೊರಕಿದ್ದರೆ ಅದು ರಾಜಶೇಖರನ್‌ರವರ ದೂರದೃಷ್ಟಿಯ ಫಲ ಎಂದು ಹೇಳಿದರೆ ತಪ್ಪಿಲ್ಲ. ರಾಜಶೇಖರನ್‌ರವರು ತಮ್ಮನ್ನು ಆರಿಸಿದ ಮತದಾರರಿಗೆ ತಾವು ಹೇಗೆ ಕೃತಜ್ಞರಾಗಿರಬೇಕು ಎನ್ನುವುದನ್ನು ತಮ್ಮ ನಡತೆಯಲ್ಲಿ ತೋರಿಸಿದವರು. ಅವರು ಲೋಕಸಭೆಯಲ್ಲಿ ಮಾತನಾಡಿದ ಪ್ರತಿಯೊಂದು ವಿಚಾರಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ ಅದನ್ನು ನಮ್ಮ ಹಳ್ಳಿಗಳಿಗೆ ಕಳುಹಿಸುತ್ತಿದ್ದರು. ಯಾವುದೇ ಮತದಾರ ಒಂದು ಅರ್ಜಿ ಬರೆದರೆ ಅದನ್ನು ಸಂಬಂಧಪಟ್ಟ ಮಂತ್ರಿಗಳಿಗೆ ಕಳುಹಿಸಿ ಆ ಕೆಲಸ ಆಯಿತೋ ಇಲ್ಲವೋ ಎಂಬುದನ್ನು ಆನಂತರ ಅರ್ಜಿದಾರರಿಗೆ ತಿಳಿಸುತ್ತಿದ್ದರು. ಹೀಗೆ ವ್ಯವಹರಿಸಿದ ನೂರಾರು ಪತ್ರಗಳು ಕನಕಪುರ ಲೋಕಸಭಾ ಕ್ಷೇತ್ರದ ಎಲ್ಲಾ ಹಳ್ಳಿಗಳಲ್ಲೂ ದೊರೆಯುತ್ತದೆ.

ತಮಗೆ ಮತ ಹಾಕಿದ ಮತದಾರರಿಗೆ ತಾವು ಜವಾಬ್ದಾರರಾಗಿರಬೇಕು ಎಂಬ ಅಪೂರ್ವ ನಡೆ-ನುಡಿ ಅವರದಾಗಿತ್ತು.

ರಾಜಶೇಖರನ್‌ರವರಲ್ಲಿ ತಾಳ್ಮೆ ದೊಡ್ಡ ಗುಣ. ಚುನಾವಣೆಗಳಲ್ಲಿ ಅವರು ಸೋತಾಗ ಅವರ ಅನುಯಾಯಿಗಳಾಗಿದ್ದ ನಾವು ತುಂಬಾ ನೊಂದುಕೊಂಡು ವೈರಾಗ್ಯ ತಾಳಿದ್ದೇವೆ. ಆದರೆ ಅವರು ಅದನ್ನು ಹಚ್ಚಿಕೊಳ್ಳದೆ ಜನಪರ ಕೆಲಸ ಮಾಡಿದ್ದಾರೆ. ೧೯೭೭ರಲ್ಲಿ ಅವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಸೋತ ನಂತರ ಕೇಂದ್ರದಲ್ಲಿ ಜನತಾ ಸರ್ಕಾರ ಅಸ್ತಿತ್ವಕ್ಕೆ ಬಂದಿತಷ್ಟೆ. ಮೊರಾರ್ಜಿಯವರಿಗೆ ಹೇಳಿ ಇವರಿಗೆ ಏನಾದರೂ ಮಾಡಿಸಬೇಕು ಎಂದು ನಿಜಲಿಂಗಪ್ಪನವರನ್ನು ಬಿನ್ನವಿಸಿಕೊಳ್ಳಲು ನಾನು ಚಿತ್ರದುರ್ಗಕ್ಕೆ ನಿಯೋಗ ಒಂದನ್ನು ತೆಗೆದುಕೊಂಡು ಹೋಗಲು ಸಿದ್ಧನಾಗಿದ್ದೆ. ಇದನ್ನು ತಿಳಿದ ರಾಜಶೇಖರನ್‌ರವರು ನನಗೆ ಕಟು ಮಾತುಗಳಲ್ಲಿ ಅದನ್ನು ಕೈಬಿಡುವಂತೆ ಸೂಚಿಸಿದರು. ತಮ್ಮ ಮಾವ ನಿಜಲಿಂಗಪ್ಪನವರಾಗಲಿ ಅಥವಾ ಬೇರೆ ಯಾರಿಂದಲಾಗಲಿ ಅವರು ಸಹಾಯ ಪಡೆಯಲು ಇಚ್ಛಿಸುತ್ತಿರಲಿಲ್ಲ. ಇಂತಹ ಸ್ವಾಭಿಮಾನದಿಂದಾಗಿ ರಾಜಶೇಖರನ್‌ರವರಿಗೆ ಅವಕಾಶಗಳು ದೊರೆಯದೇ ಹೋಗಿವೆ. ನಮಗೆ ಈ ಬಗ್ಗೆ ನಿರಾಶೆ ಇದ್ದರೂ, ಅವರು ಮಾತ್ರ ಸದಾ ಗ್ರಾಮೀಣ ಜನರ ಬದುಕನ್ನು ಶ್ರೀಮಂತಗೊಳಿಸಬೇಕೆಂದು ದುಡಿಯುತ್ತಿದ್ದಾರೆ. ಇಂತಹ ನಿಷ್ಕಾಮ ಕರ್ಮಯೋಗಿ ನಮ್ಮ ಜೊತೆ ಇರುವುದೇ ನಮ್ಮ ಭಾಗ್ಯ. ಅವರ ಅನುಯಾಯಿಯಾಗಿ ದುಡಿದ ನನಗೆ ಯಾವಾಗಲೂ ಹೆಮ್ಮೆ ಎನಿಸುತ್ತದೆ.

***

# ಮುತ್ಸದ್ದಿ ರಾಜಕಾರಣಿ

ಬಿ.ಎಸ್. ದೊಡ್ಡವೀರಯ್ಯ

ಶ್ರೀ ಎಂ.ವಿ. ರಾಜಶೇಖರನ್ ಅವರ ಬಗೆಗೆ ನಾನು ಎಷ್ಟು ಬರೆದರೂ ಕಡಿಮೆಯೇ. ಆದುದರಿಂದ ಯಾವ ವಿಷಯವನ್ನು ಹೆಚ್ಚು ಬಿಂಬಿಸಿ ಬರೆಯಬೇಕೆಂಬುದು ತಿಳಿಯುತ್ತಿಲ್ಲ. ಈಗವರು ನನ್ನ ಗೆಳೆಯರು ಮಾತ್ರ ಅಲ್ಲ; ರಾಷ್ಟ್ರನಾಯಕರೂ ಆಗಿದ್ದಾರೆ. ಸಾವಿರಾರು ಜನರಿಗೆ ಒಳ್ಳೆಯದನ್ನು ಮಾಡುತ್ತಿದ್ದಾರೆ. ನಾನೂ ಅವರು ಬಾಲ್ಯದಲ್ಲಿ ಕೂಡಿ ಬೆಳೆದವರು. ನಾನು ಅವರ ಸನಿಹದಲ್ಲಿ ಹೆಚ್ಚು ಓಡಾಡುತ್ತಿದ್ದವನು. ಅವರ ತಮ್ಮನವರಾದ ಕೀರ್ತಿಹಾಸನ್ ಅವರು ಪ್ರಾಥಮಿಕ ಶಿಕ್ಷಣವನ್ನು ಮರಳವಾಡಿಯಲ್ಲಿ ಓದುತ್ತಿದ್ದ ಸಂದರ್ಭದಲ್ಲಿ ಅವರಿಗೆ ಶಿಕ್ಷಕನಾಗಿದ್ದೆ. ಒಂದೆರಡು ವರ್ಷ ಅವರ ಮನೆಯಲ್ಲೇ ತಂಗಿದ್ದೆ. ಮನೆಪಾಠವನ್ನು ಅವರಿಗೆ ಹೇಳಿಕೊಡುತ್ತಿದ್ದೆ. ಆಗ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅವರು ಬೆಂಗಳೂರು, ಮೈಸೂರು ಎಂದು ಹೋಗಿ ಬರುತ್ತಿದ್ದುದು ಮಾತ್ರ ನನಗೆ ಗೊತ್ತು. ಕನಕಪುರದ ದೇಗುಲಮಠದಲ್ಲಿ ತುಂಬಾ ಉತ್ಸಾಹದಿಂದ ವ್ಯಾಸಂಗ ಮಾಡುತ್ತಿದ್ದರು. ಅವರ ನಡತೆ, ತುಂಬಿದ ವ್ಯಕ್ತಿತ್ವಗಳು ಅವರ ವರ್ಚಸ್ಸನ್ನು ಆಗಲೇ ಹೇಳುತ್ತಿದ್ದವು.

ಶ್ರೀ ಎಂ.ವಿ. ರಾಜಶೇಖರನ್ ಅವರದ್ದು ತುಂಬಾ ಸಂಪ್ರದಾಯಸ್ಥವಾದ ಹಾಗೂ ಗೌರವಸ್ಥವಾದ ಮನೆತನ. ಅವರ ಮನೆಯಲ್ಲಿಯ ನಡತೆ ಮತ್ತು ಶಿಸ್ತುಗಳು ಸಮಾಜದಲ್ಲಿ ಅನುಕರಣೀಯವಾಗಿರುತ್ತಿದ್ದುವು. ಅವರ ಪೂರ್ವಿಕರು ಗಳಿಸಿಕೊಂಡು ಮುಂದುವರಿಸಿಕೊಂಡು ಬಂದಿದ್ದ ಆಸ್ತಿಗಳಲ್ಲಿ ನಿತ್ಯ ದಾಸೋಹ ಮತ್ತು ದಾನ ಗುಣಪದ್ಧತಿಯೂ ಒಂದಾಗಿತ್ತು. ಊರಿನ ಜನರೆಲ್ಲಾ ಅವರಿಗೆ ಅವರ ಕುಟುಂಬದ ಹಿರಿಯರಿಗೆ ಗೌರವ ಕೊಡುತ್ತಿದ್ದರು. ಊರಿನ ಜನತೆಗೆ ಇವರ ಮೇಲಿನ ಪ್ರೀತಿ-ವಿಶ್ವಾಸಗಳಂತೂ ಹೇಳತೀರದು. ಎಂ.ವಿ. ರಾಜಶೇಖರನ್ ಅವರ ತಂದೆಯವರಂತೂ ತುಂಬಾ ಶಿಸ್ತಿನ ಮನುಷ್ಯ ರಾಗಿದ್ದರು. ಶ್ರೀ ವೀರಶೆಟ್ಟಯ್ಯ ಮಾಸ್ತರರೆಂದರೆ ಎಲ್ಲರಿಗೂ ಗೌರವ ಮಾನ್ಯರಾಗಿದ್ದರು. ಅವರ ಶಿಸ್ತು ಮತ್ತು ಪಾಠ ಮಾಡುವ ವಿಧಾನವಂತೂ ನಮ್ಮೆಲ್ಲರ ಮೇಲೆ ವಿಶೇಷ ಪ್ರಭಾವ ಬೀರಿತ್ತು.

ಅವರ ತಾಯಿ ಶ್ರೀಮತಿ ಬಸಮ್ಮನವರ ಬಗೆಗೆ ಇಲ್ಲಿ ಹೇಳಲೇಬೇಕು. ಅವರದ್ದು ಒಂದು ಪೌರಾಣಿಕವಾದಂತಹ ವ್ಯಕ್ತಿತ್ವ. ಅವರ ಕುರಿತು ಬರೆದರೆ ಇಂದು ಯಾರಾದರೂ ನಂಬುತ್ತಾರೋ ಇಲ್ಲವೋ ಗೊತ್ತಿಲ್ಲ. ನಾನು ಅಕ್ಕಮಹಾದೇವಿಯರ ಅನುಭಾವದ ಮತ್ತು ಉದಾತ್ತತೆಯ ಕುರಿತು ಚೂರುಪಾರು ತಿಳಿದುಕೊಂಡಿರುವೆ. ಶಿವಶರಣೆ ಹೇಮರೆಡ್ಡಿ ಮಲ್ಲಮ್ಮನವರ ಕಥೆ ಕೇಳಿ ರಂಗದ ಮೇಲೆ ಆ ಕಥೆಯನ್ನು ನೋಡಿರುವೆ. ಅವೆರಡೂ ವ್ಯಕ್ತಿತ್ವ ಮೇಳೈಸಿದಂತೆ ಏಕರೂಪವಾಗಿ ಶ್ರೀಮತಿ ಬಸಮ್ಮನವರಲ್ಲಿ ವ್ಯಕ್ತಿತ್ವ ಪ್ರಕಟಗೊಳ್ಳುತ್ತಿತ್ತು. ಸದಾ ಹಸನ್ಮುಖಿಯಾದ ಮುಖಭಾವ, ಮುಖದಲ್ಲಿ ಪೂರ್ಣಚಂದ್ರನ ತೇಜಸ್ಸು, ಥಾಳವಾಗಿ ವಿಜೃಂಭಿಸುವ ವಿಭೂತಿ ಅವರ ಹಣೆಯ ಮೇಲಿರುತ್ತಿತ್ತು. ದಾನಗುಣ, ಉದಾತ್ತತೆ, ಭಕ್ತಿ ಭಾವನೆ, ಕಾಯಕದಲ್ಲಿ ತಲ್ಲೀನರಾದಾಗ ಅವರ ಶ್ರದ್ಧೆ ಮುಂತಾದ ಗುಣಗಳು ಅವರನ್ನು ತುಂಬಿಕೊಂಡಿದ್ದವು. ಅವರ ಕೈಗೆ ದಾನವು ಭೂಷಣಪ್ರಾಯವಾಗಿತ್ತು. ಅವರ ವ್ಯಕ್ತಿತ್ವ ಮಮಕಾರ, ಅಕ್ಕರೆ, ವಿನಯ, ಸಜ್ಜನಿಕೆಗಳ ತವರುಮನೆಯಾಗಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇವುಗಳು ಮಾತ್ರವಲ್ಲ. ಅವರ ಮಾನವೀಯ ಗುಣಗಳನ್ನು ನಾನು ಒಂದು ನಿಜಜೀವನದಲ್ಲಿ ನಡೆದ ದೃಷ್ಟಾಂತವೊಂದರ ಮೂಲಕ ಹೇಳಿದರೆ ಹೆಚ್ಚು ಔಚಿತ್ಯಪೂರ್ಣವೆನ್ನಿಸುವುದು.

ಬಡವರು, ದುರ್ಬಲರ ಬಗೆಗೆ ಆ ತಾಯಿಯ ಕನಿಕರದ ಮನೋಭಾವ ಸದಾ ಸ್ಮರಣೀಯ. ಮನೆ ಎಂದ ಮೇಲೆ ಹಿರಿಯರಿಗೆ ಅಂಜಿ ಭಯ ಭಕ್ತಿಯಿಂದ ನಡೆಯಬೇಕಾದದ್ದು ಗೃಹಿಣಿಯ ಕರ್ತವ್ಯ. ನಿತ್ಯವೂ ಬಡವರಿಗೆ ದುರ್ಬಲರಿಗೆ, ಅಡುಗೆ ಬೇಯಿಸಿ ಹಾಕಬೇಕೆಂದರೆ ಯಾವ ಹಿರಿಯರಿಗೆ ತಾನೆ ಸಿಟ್ಟು ಬರುವುದಿಲ್ಲ. ಶ್ರೀಮತಿ ಬಸಮ್ಮನವರದ್ದು ಸದಾ ದಾನಗುಣ. ಅವರ ದಾನಗುಣಕ್ಕೆ ಅವರ ಮನೆಯ ಹಿರಿಯರು ರೋಸಿ ಹೋಗಿದ್ದರು. ಆದರೆ ಇವರಿಗೆ ದಾನ ಮಾಡಬೇಕು ಎಂಬುದು ಸದಾ ಮನದಲ್ಲಿ ಸಹಜ ಸಿದ್ಧವಾದ ಸ್ವಭಾವವೇ ಆಗಿತ್ತು. ಬಿಂದಿಗೆಯಲ್ಲಿ ರಾಗಿ ಮುದ್ದೆಯನ್ನು ಹಾಕಿಕೊಂಡು ನೀರು ತರಲು ಹೋದಾಗ ಅವುಗಳನ್ನು ಹಂಚಿ ಬರುತ್ತಿದ್ದರು. ಒಮ್ಮೆ ಬಿಸಿ ಮುದ್ದೆಯನ್ನು ಸೀರೆಯ ಮುಸುಕಿನಲ್ಲಿ ಬಚ್ಚಿಟ್ಟುಕೊಂಡು ತನ್ನ ಮೈಯನ್ನೇ ಸುಟ್ಟುಕೊಂಡು ಅದನ್ನು ದಾನ ಮಾಡಿ ಬಂದರು. ಆ ಬಿಸಿಗೆ ಸುಟ್ಟ ಅವರ ಮೈಯಲ್ಲಿ ಬೊಬ್ಬೆ ಬಂದಿತ್ತು. ಅವರ ಮನೆಯ ಹಿರಿಯರು ವಿಚಾರಿಸಲಾಗಿ ನಡೆದ ಸಂಗತಿಯನ್ನೆಲ್ಲಾ ಶ್ರೀಮತಿ ಬಸಮ್ಮನವರು ಹೇಳಿಬಿಟ್ಟರು. ಅಂದಿನಿಂದ ಶ್ರೀಮತಿ ಬಸಮ್ಮನವರ ದಾನಗುಣಕ್ಕೆ ಯಾರೂ ಅಡ್ಡಿ ಮಾಡಲಿಲ್ಲ. ಅವರಿಗೆ ಇಷ್ಟ ಬಂದಷ್ಟು ಅಡುಗೆ ಮಾಡಿ ದಾಸೋಹ ಮಾಡಲೆಂದು ಮನೆಯ ಹಿರಿಯರೆಲ್ಲರೂ ಅಣಿ ಮಾಡಿಕೊಟ್ಟಿದ್ದು ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ. ಇಂತಹ ಒಂದು ದಾಸೋಹ ಪರಂಪರೆಯನ್ನು ಶ್ರೀಮತಿ ಬಸಮ್ಮನವರು ಆ ಸಂಪ್ರದಾಯಸ್ಥ ಕುಟುಂಬದಲ್ಲಿ ಪುನರುತ್ಥಾನಗೊಳಿಸಿದರು. ಇಂತಹ ಸಾಧ್ವಿಮಣಿಯ ಪುಣ್ಯದ ಫಲದಿಂದಲೇ ಅವರಿಗೆ ಇಬ್ಬರು ಪುತ್ರರತ್ನರು ಜನಿಸಿರುವುದು. ಅವರ ಪವಿತ್ರ ಸಂಕಲ್ಪಗಳೇ ಅವರ ಪುತ್ರರನ್ನು ಇಂದು ಸುಖವಾಗಿರಿಸಿದೆ, ಕೀರ್ತಿವಂತ

ರನ್ನಾಗಿಸಿದೆ. ಮುಂದೆಯೂ ಅವರ ಪುಣ್ಯದ ಫಲದಿಂದ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಈ ದೇಶದ ಚುಕ್ಕಾಣಿಯನ್ನು ಸಾಂಗವಾಗಿ ನೆರವೇರಿಸಿಕೊಂಡು ಹೋಗುತ್ತಾರೆಂಬ ಭರವಸೆ ನನಗಿದೆ.

ನಾನು ಅವರ ಮನೆಯಲ್ಲೇ ಒಂದೆರಡು ವರ್ಷ ಇದ್ದವನು. ನಾನು ಅಲ್ಲಿದ್ದಷ್ಟು ದಿನ ನನ್ನನ್ನು ಮನೆಯ ಮಗನಂತೆ ನೋಡಿಕೊಂಡರು. ಇಂದಿಗೂ ರಾಷ್ಟ್ರೀಯ - ಅಂತರರಾಷ್ಟ್ರೀಯ ಮಟ್ಟದಲ್ಲಿ ಓಡಾಡಿ ಬಂದವರಾಗಿರುವ ರಾಜಶೇಖರನ್ ಅವರದ್ದು ತುಂಬಾ ಸೌಮ್ಯ ಸ್ವಭಾವ. ಶ್ರೀಮಂತ್ರಿಕೆಯ, ಬುದ್ಧಿವಂತಿಕೆಯ ಬೀಗು ಅವರಲಿಲ್ಲ. ಪ್ರೀತಿಯಿಂದ ನನ್ನನ್ನು ಮಾತನಾಡಿಸುತ್ತಾರೆ. ಮನೆಯ ಒಬ್ಬ ಸದಸ್ಯನ ಹಾಗೆ ನನ್ನ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಾರೆ. ನಾನೀಗ ನಿವೃತ್ತನಾಗಿ ಕನಕಪುರದಲ್ಲಿ ನೆಲೆಸಿರುವೆ. ಅವರು ದೇಗುಲಮಠಕ್ಕೆ ಬಂದಾಗ ಅಕಸ್ಮಾತ್ ಸಿಕ್ಕಾಗ ನನ್ನನ್ನು ಮಾತನಾಡಿಸುವ ಪರಿಯಂತೂ 'ನಾನು ಅಷ್ಟು ದೊಡ್ಡವನೇ?' ಎನ್ನಿಸಿಬಿಡುತ್ತದೆ. ಇಂತಹ ನೈಜ ಗಾಂಧೀ ಸ್ವಭಾವದ ರಾಜಶೇಖರನ್ ನಮ್ಮ ನಡುವಿನ ನಾಯಕ, ರಾಜಕೀಯ ಪಟು, ಮುತ್ಸದ್ದಿ ರಾಜಕಾರಣಿ, ಅವರ ಒಳ್ಳೆಯತನದಿಂದಲೇ ಇನ್ನೂ ಮೇಲೇರಬಲ್ಲ ಧೀಮಂತ. ಅವರ ಸಮರ್ಥ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಅಗ್ಗಳಿಕೆಯ ಎಪ್ಪತ್ತೈದು ವಸಂತಗಳು ಸಂತಸ ತಂದಿವೆ. ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪನವರ ಮಗಳನ್ನು ಮದುವೆಯಾಗಿದ್ದರೂ ಕಿಂಚಿತ್ತೂ ಅದರ ದುರ್ಲಾಭ ಪಡೆದುಕೊಳ್ಳದೆ ಸ್ವಯಂ ಪ್ರತಿಭೆಯಿಂದ ಮೇಲೆದ್ದು ಬಂದವರು ಅವರಾಗಿದ್ದಾರೆ.

ಅವರ ಗ್ರಾಮೀಣಾಭಿವೃದ್ಧಿ ಕೆಲಸಗಳಂತೂ ನನಗೆ ಅಚ್ಚುಮೆಚ್ಚು. ರೇಷ್ಮೆ ಕೃಷಿ, ಕೃಷಿ ಉಪಕರಣಗಳ ತಯಾರಿಕೆ, ಕುರಿಸಾಕಣೆ, ಹೈನುಗಾರಿಕೆಯನ್ನು ಗ್ರಾಮೀಣ ಪ್ರದೇಶದಲ್ಲಿ ಆಧುನಿಕ ತಂತ್ರಜ್ಞಾನಗಳ ಮೂಲಕ ಅಭಿವೃದ್ಧಿಪಡಿಸಬೇಕೆಂಬ ಉದ್ದೇಶದಿಂದ ಏರ್ಪಡಿಸಿದ ಕಾರ್ಯಾಗಾರಗಳು ನಮ್ಮ ಭಾಗದಲ್ಲಿ ಹೆಚ್ಚು ಫಲಪ್ರದವಾಗಿದೆ. ಅಂತಹ ಕಾರ್ಯಕ್ರಮಗಳನ್ನು ದೇಶಾದ್ಯಂತ ಹಮ್ಮಿಕೊಳ್ಳಲಿ, ತನ್ಮೂಲಕ ಇಡೀ ರಾಷ್ಟ್ರ ಅಭಿವೃದ್ಧಿ ಪಥದಲ್ಲಿ ಸಾಗಲಿ ಎಂಬ ಸಂಕಲ್ಪದಿಂದ ನಾನು ಅವರ ಬಗೆಗಿನ ಈ ಲೇಖನವನ್ನು ಮುಗಿಸುವೆ. ಉತ್ತರೋತ್ತರ ದೇವರು ಅವರ ಸಕಲ ಅಭೀಷ್ಟಗಳು ನೆರವೇರುವಂತೆ ಮಾಡಲಿ ಎಂದು ಸದಾಶಿವನಲ್ಲಿ ಬೇಡಿಕೊಳ್ಳುವೆ.

***

# ಶ್ರಮವರಿಯದ ದುಡಿಮೆಗಾರ

● ಎಸ್.ಸಿ. ರೇವಣ್ಣ

ನನಗೆ ಈಗ ೮೩ ವರ್ಷ. ೧೯೫೯ರಿಂದ ಎರಡು ಸಾರಿ ನಾನು ತಾಲ್ಲೂಕು ಬೋರ್ಡ್‌ಗೆ ಆಯ್ಕೆಯಾಗಿದ್ದೆ. ರಾಜಶೇಖರನ್ ಲೋಕಸಭಾ ಸದಸ್ಯರಾಗಿದ್ದ ಸಂದರ್ಭದಲ್ಲಿ ನಾನು ರಾಮನಗರ ತಾಲ್ಲೂಕು ಬೋರ್ಡ್‌ನ ಉಪಾಧ್ಯಕ್ಷ. ಬೈರಮಂಗಲದ ವೀರಸಂಜೀವೇಗೌಡ ಅಧ್ಯಕ್ಷರಾಗಿದ್ದರು. ಬಿ. ಪುಟ್ಟಸ್ವಾಮಯ್ಯನವರು ಶಾಸಕರಾಗಿದ್ದರು. ೧೯೬೨ರಲ್ಲಿ ಕೆಂಗಲ್ ಹನುಮಂತಯ್ಯನವರು ಈ ಭಾಗದಲ್ಲಿ ಲೋಕಸಭಾ ಸದಸ್ಯರಾಗಿದ್ದರು. ೧೯೬೭ರಲ್ಲಿ ರಾಜಶೇಖರನ್‌ರವರು ಕನಕಪುರ ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿದ್ದರು. ಅದರ ವ್ಯಾಪ್ತಿಗೆ ರಾಮನಗರ ಕೂಡ ಬರುತ್ತಿದೆ.

ರಾಜಶೇಖರನ್‌ರವರು ನಮ್ಮ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಮಾಡಿದ ಸೇವೆಯನ್ನು ಹೇಳುತ್ತಾ ಹೋದರೆ ಅದು ಒಂದು ದೊಡ್ಡ ಹೊತ್ತಿಗೆಯಾಗುತ್ತದೆ. ಒಂದರೆಡು ವಿಚಾರಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ. ೧೯೫೭ರಲ್ಲಿ ಅಧಿಕಾರಕ್ಕೆ ಬಂದ ಜತ್ತಿ ಸರಕಾರ ಹಳ್ಳಿಮಾಳ ನೀರಾವರಿ ಯೋಜನೆಯನ್ನು ಕೈಗೆತ್ತಿಕೊಂಡಿತ್ತು. ಈ ಯೋಜನೆ ಅನುಷ್ಠಾನಗೊಂಡಿದ್ದರೆ ೩೦ ಹಳ್ಳಿಗಳು ಮುಳುಗಡೆಯಾಗುತ್ತಿದ್ದವು. ಹರಿಸಂದ್ರ, ಬೊಮ್ಮೇಹಳ್ಳಿ, ಹಾಗಲಹಳ್ಳಿ, ಮಂಚನಬೆಲೆ ಗ್ರಾಮಾಂತರ ಪಂಚಾಯಿತಿಯ ಹತ್ತಾರು ಹಳ್ಳಿಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದ್ದವು. ಇದರ ಬಗ್ಗೆ ರೈತರ ಪ್ರತಿಭಟನೆ ನಡೆಯುತ್ತಲೇ ಇತ್ತು. ೧೯೬೨ರಲ್ಲಿ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾದ ಮೇಲೆ ನಾವೆಲ್ಲ ರಾಜಶೇಖರನ್ ನೇತೃತ್ವದಲ್ಲಿ ಅವರನ್ನು ಕಂಡೆವು. "ನೋಡೋಣ, ನಿಮಗೆ ಸಹಾಯ ಮಾಡುವುದಕ್ಕೆ ಕೈಲಾದ ಪ್ರಯತ್ನವನ್ನೆಲ್ಲಾ ಮಾಡುತ್ತೇನೆ, ನಿಮ್ಮ ಲೋಕಸಭಾ ಸದಸ್ಯರಾದ ಕೆಂಗಲ್ ಹನುಮಂತಯ್ಯನವರನ್ನು ಈ ಬಗ್ಗೆ ಕೇಳಿ" ಎಂದರು. ನಾವುಗಳು ಹಠ ಹಿಡಿದು ಲೋಕಸಭಾ ಸದಸ್ಯರಾದ ಕೆಂಗಲ್ ಹನುಮಂತಯ್ಯ ಹಾಗು ಮುಖ್ಯಮಂತ್ರಿ ನಿಜಲಿಂಗಪ್ಪನವರನ್ನು ನಮ್ಮೂರಿನ ಒಂದೇ ವೇದಿಕೆಯ ಮೇಲೆ ಸೇರಿಸಿ ಇದಕ್ಕೆ ಪರಿಹಾರ ಕೊಡಿ ಎಂದೆವು. ಕೆಂಗಲ್

ಹನುಮಂತಯ್ಯನವರು "ಮುಖ್ಯಮಂತ್ರಿ ನಿಜಲಿಂಗಪ್ಪನವರು ತೆಗೆದುಕೊಳ್ಳುವ ಎಲ್ಲಾ ನಿರ್ಣಯಕ್ಕೆ ನನ್ನ ಬೆಂಬಲವಿದೆ. ಕೇಂದ್ರದಿಂದ ಕೂಡ ಇದಕ್ಕೆ ಹಣಕಾಸು ಸಹಾಯ ಮಾಡಿಸುತ್ತೇನೆ" ಎಂದರು. ನಿಜಲಿಂಗಪ್ಪನವರು ಹಳ್ಳಿಮಾಳ ಯೋಜನೆಯನ್ನು ಪುನರ್ ಪರಿಶೀಲನೆ ಮಾಡುತ್ತೇನೆ ಎಂದು ನುಡಿದರು. ಆ ನಂತರ ಸರ್ಕಾರ ಈ ಯೋಜನೆಯನ್ನು ಕೈಬಿಟ್ಟಿತು. ಇಂದಿಗೂ ಆ ೩೦ ಹಳ್ಳಿಗಳು ಹಾಗೇ ಉಳಿದುಕೊಂಡಿವೆ. ಕೆಂಗಲ್ ಹನುಮಂತಯ್ಯ ಮತ್ತು ನಿಜಲಿಂಗಪ್ಪನವರಿಗೆ ತೀವ್ರವಾದ ರಾಜಕೀಯ ಭಿನ್ನಾಭಿಪ್ರಾಯಗಳಿದ್ದವು. ಆದರೆ ಜನರ ಸಮಸ್ಯೆಗಳು ಬಂದಾಗ ಅವುಗಳನ್ನು ಮರೆಯುತ್ತಿದ್ದರು. ಒಟ್ಟಾಗಿ ಕುಳಿತು ಪರ್ಯಾಲೋಚಿಸಿ ಆ ಸಮಸ್ಯೆಗೆ ಪರಿಹಾರ ಕೊಡುತ್ತಿದ್ದರು. ನಿಜಲಿಂಗಪ್ಪ ಮತ್ತು ಕೆಂಗಲ್ ಹನುಮಂತಯ್ಯನವರನ್ನು ಒಂದೇ ವೇದಿಕೆಗೆ ತಂದು ಅದಕ್ಕೆ ಪರಿಹಾರ ಕೊಡಿಸಿದವರು ಕಾಂಗ್ರೆಸ್ಸಿನ ಅಂದಿನ ತರುಣ ನಾಯಕರಾಗಿದ್ದ ಎಂ.ವಿ.ರಾಜಶೇಖರನ್‌ರವರು. ಅವರು ತೆರೆಯಮರೆಯಲ್ಲಿ ಅಂದು ಮಾಡಿದ ಸೇವೆಯಿಂದಾಗಿ ಆ ೩೦ ಹಳ್ಳಿಗಳೂ ಉಳಿದುಕೊಂಡಿವೆ.

ರಾಜಶೇಖರನ್‌ರವರು ನಮ್ಮ ಜಿಲ್ಲೆಗೆ ಕೊಟ್ಟ ಕಾಣಿಕೆ ಎಂದರೆ ಅರ್ಕಾವತಿ ನದಿ ಬಳಸಿಕೊಂಡು ಅನುಷ್ಠಾನ ಮಾಡಿದ ಮೂರು ನೀರಾವರಿ ಯೋಜನೆಗಳೆಂದರೆ ತಪ್ಪಿಲ್ಲ. ರಾಮನಗರ ತಾಲ್ಲೂಕಿನಲ್ಲಿರುವ ಮಂಚನಬೆಲೆ, ಚನ್ನಪಟ್ಟಣ ತಾಲ್ಲೂಕಿನಲ್ಲಿರುವ ಇಗ್ಗಲೂರು ಹಾಗು ಕನಕಪುರ ತಾಲ್ಲೂಕಿನಲ್ಲಿರುವ ಹಾರೋಬೆಲೆ ಯೋಜನೆಗಳು - ಇಂದು ಅವುಗಳು ಅನುಷ್ಠಾನಗೊಂಡಿದ್ದರೆ ಅದಕ್ಕೆ ಮೂಲತಃ ರಾಜಶೇಖರನ್ ಕಾರಣಕರ್ತರಾಗಿದ್ದಾರೆ.

ಮಂಚನಬೆಲೆ ನೀರಾವರಿ ಯೋಜನೆ ಮೊದಲು ತಿಪ್ಪಗೊಂಡನಹಳ್ಳಿ ಪ್ರದೇಶದಲ್ಲಿ ಅನುಷ್ಠಾನಗೊಳ್ಳುವುದು ಅಸಾಧ್ಯವೆಂದು ತಿಳಿದ ಕಾರಣ ರಾಜಶೇಖರನ್ ಅದನ್ನು ರಾಮನಗರದ ಮಂಚನಬೆಲೆ ಪ್ರದೇಶಕ್ಕೆ ಕರೆದುಕೊಂಡು ಬಂದರು. ಮೊದಲು ಅದು ನಾಲ್ಕು ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಯೋಜನೆ ತಯಾರಾಗಿತ್ತು. ಅನಂತರ ೩೦ ಕೋಟಿ ರೂ.ಗಳನ್ನು ಖರ್ಚು ಮಾಡಿ ಆ ಯೋಜನೆಯನ್ನು ಪೂರ್ಣಗೊಳಿಸಲಾಗಿದೆ. ಇದರಿಂದ ೭೦೦೦ ಎಕರೆ ಜಮೀನಿಗೆ ನೀರಾವರಿ ಸೌಲಭ್ಯ ಕೊಡಲಾಗಿದೆ. ಈ ಯೋಜನೆ ಅನುಷ್ಠಾನ ಕಾಲದಲ್ಲಿ ವೀರೇಂದ್ರ ಪಾಟೀಲರು ಲೋಕೋಪಯೋಗಿ ಸಚಿವರು. ಕೇಂದ್ರ ನೀರಾವರಿ ಸಚಿವರಾದ ಡಾ. ಕೆ.ಎಲ್.ರಾವ್ ಕೂಡ ಯೋಜನಾ ಸ್ಥಳಕ್ಕೆ ಭೇಟಿ ಕೊಟ್ಟಿದ್ದರು. ಎಂ.ವಿ.ರಾಜಶೇಖರನ್ ಸ್ವತಃ ಆಸಕ್ತಿಯನ್ನು ಈ ಯೋಜನೆ ಬಗ್ಗೆ ತಾಳದಿದ್ದರೆ ಅದು ಅನುಷ್ಠಾನವೇ ಆಗುತ್ತಿರಲಿಲ್ಲ.

ಎಂ.ವಿ. ರಾಜಶೇಖರನ್‌ರವರು ನಮ್ಮ ಲೋಕಸಭಾ ಸದಸ್ಯರಾದ ಮೇಲೆ ಗ್ರಾಮ ಪಂಚಾಯತಿ ಸದಸ್ಯರಿಂದ ಹಿಡಿದು ಜಿಲ್ಲಾ ಬೋರ್ಡ್ ಸದಸ್ಯರ ತನಕ ನೇರವಾದ ಸಂಪರ್ಕ ಇಟ್ಟುಕೊಂಡಿದ್ದರು. ಅವರುಗಳಿಗೆ ಪತ್ರ ಬರೆದು ನಿಮ್ಮೂರಿನಲ್ಲಿ ಯಾವ ಕೆಲಸ ಆಗಬೇಕು ಎಂದು ವಿಚಾರಿಸಿಕೊಳ್ಳುತ್ತಿದ್ದರು. ಜನಪ್ರತಿನಿಧಿಗಳು ಯಾವುದಾದರೂ ಕೆಲಸ ಹೇಳಿದರೆ

ಅದನ್ನು ಸರಕಾರದ ಮಟ್ಟದಲ್ಲಿ ಮಾಡಿಸಿ ಅವರಿಗೆ ಪತ್ರ ಬರೆಯುತ್ತಿದ್ದರು. ಕೆಲಸ ಮಾಡಿಸಲು ಸಾಧ್ಯವಾಗದಿದ್ದರೂ ಆ ವಿಚಾರವನ್ನು ತಿಳಿಸುತ್ತಿದ್ದರು. ಆಮೇಲೆ ವಿಶೇಷ ಸಂದರ್ಭಗಳಲ್ಲಿ ಪತ್ರ ಬರೆದು ಜನಪ್ರತಿನಿಧಿಗಳ ವೈಯಕ್ತಿಕ ಕಷ್ಟ-ಸುಖಗಳನ್ನು ವಿಚಾರಿಸಿಕೊಳ್ಳುತ್ತಿದ್ದರು. ಹೀಗೆ ಪತ್ರ ವ್ಯವಹಾರದ ಮೂಲಕ ಸಂಪರ್ಕವಿಟ್ಟುಕೊಂಡ ಜನನಾಯಕರು ಅತ್ಯಂತ ವಿರಳವೆಂದರೆ ತಪ್ಪಿಲ್ಲ. ಅಧಿಕಾರ ತೊರೆದ ನಂತರ ಕೂಡ ರಾಜಶೇಖರನ್‌ರವರ ಸ್ವಭಾವ ಬದಲಾಗಿಲ್ಲ.

ರಾಜಶೇಖರನ್‌ರವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೊಸ ಪರಂಪರೆಯನ್ನು ಹುಟ್ಟು ಹಾಕಿದ್ದಾರೆ. ಇಂದಿಗೂ ಇಲ್ಲಿನ ಜನ ಅವರ ನಡೆ-ನುಡಿಗಳನ್ನು ಜ್ಞಾಪಿಸಿಕೊಳ್ಳುತ್ತಾರೆ. ಅವರು ಆ ಕಾಲದಲ್ಲಿ ಬರೆದ ಪತ್ರಗಳನ್ನು ನನ್ನಂತಹ ಅನೇಕ ವಯೋವೃದ್ಧರು ಜೋಪಾನವಾಗಿರಿಸಿಕೊಂಡಿದ್ದಾರೆ. ಕೇವಲ ಒಂದು ಅವಧಿಗಿಂತ ಕಡಿಮೆ ಕಾಲದಲ್ಲಿ ರಾಜಶೇಖರನ್ ಜನರ ಮನಸ್ಸಿನಲ್ಲಿ ಇಷ್ಟೊಂದು ಪ್ರಭಾವ ಬೀರಲು ಹೇಗೆ ಸಾಧ್ಯವಾಯಿತೆಂಬುದು ನನಗೆ ಇಂದಿಗೂ ಅಚ್ಚರಿಯಾಗಿದೆ. ಅವರ ಈ ಯಶಸ್ಸಿಗೆ ಅವರ ಪ್ರಾಮಾಣಿಕ ವ್ಯಕ್ತಿತ್ವ ಮತ್ತು ಶ್ರಮವರಿಯದ ದುಡಿಮೆ ಕಾರಣವೆಂದು ನನ್ನ ಭಾವನೆ. ಅದು ಎಲ್ಲಾ ರಾಜಕಾರಣಿಗಳಿಗೂ ಸ್ಫೂರ್ತಿಯಾದರೆ ನಿಜಕ್ಕೂ ಸಮಾಜದಲ್ಲಿ ಅತ್ಯದ್ಭುತ ಬದಲಾವಣೆಯಾಗುತ್ತದೆ.

***

# ಪಾವಿತ್ರ್ಯ-ಪ್ರಬುದ್ಧತೆಗಳ ಸಂಗಮ

ಮಲ್ಲಾಜಮ್ಮ

ನಮ್ಮ ಸಂದರ್ಭದ ರಾಜಕಾರಣ ಸಂಕೀರ್ಣ ಘಟ್ಟವನ್ನು ಮುಟ್ಟಿದೆ. ತಾತ್ವಿಕ ಬದ್ಧತೆ ಮತ್ತು ರಾಜಕಾರಣಿಗಿರಬೇಕಾದ ದೂರ ಸಂವೇದನೆಯ ದೃಷ್ಟಿಕೋನಗಳ ಕೊರತೆಯಿರುವ ಈ ಸಂದರ್ಭದಲ್ಲಿ ನಾವು ಆದರ್ಶಗಳನ್ನು ಹುಡುಕಿಕೊಂಡು ಹೋಗಬೇಕಾಗಿದೆ. ರಾಜಕೀಯ ಎಂಬ ಪದವೇ ವಿಚಿತ್ರ ಸ್ವರೂಪವನ್ನು ಪಡೆದುಕೊಂಡಿದೆ. ಅದಕ್ಕೆ ಹಿಂದೆ ಇದ್ದ ಪವಿತ್ರ ಸಂಬಂಧಗಳ ಕೊಂಡಿ ಕಳಚಿಕೊಂಡಿದೆಯೇನೋ ಅನ್ನಿಸುತ್ತದೆ. ಆದರೆ ಎಂ.ವಿ. ರಾಜಶೇಖರನ್ ಅವರನ್ನು, ಅವರ ವ್ಯಕ್ತಿತ್ವವನ್ನು ಕಂಡಾಗ 'ರಾಜಕಾರಣ' ಪದದ ಜೊತೆಗಿನ 'ಪಾವಿತ್ರ್ಯ'ದ ಸಂಬಂಧಗಳು ದಟ್ಟಗೊಳ್ಳುತ್ತವೆ. ಎಂ.ವಿ.ರಾಜಶೇಖರನ್ ಅವರು ಹಿರಿಯರು, ಅನುಭವಿಗಳು. ಸಮಾಜ ಸೇವಾಕಾಂಕ್ಷಿಗಳು; ಅರ್ಪಣಾ ಮನೋಭಾವದಿಂದ ಸಮಾಜಸೇವೆಗೆ ನಿಂತವರು. ಅವರ ಬಗೆಗೆ ಸಂಕ್ಷಿಪ್ತವಾಗಿ ಬರೆಯಲಾಗುವುದೇ ಇಲ್ಲ. ಅವರಿಗೆ ಅಭಿನಂದನ ಗ್ರಂಥವೊಂದನ್ನು ಅರ್ಪಿಸುತ್ತಿರುವ ಸಂಗತಿ ನನಗೆ ನಿಜವಾಗಿಯೂ ಸಂತೋಷ ತಂದಿದೆ.

ನನಗೆ ರಾಜಶೇಖರನ್ ಅವರ ಪರಿಚಯ ಹೊಸತಲ್ಲವಾದರೂ ನಾನು ಮಳವಳ್ಳಿ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾದಾಗಿನಿಂದ ಹೆಚ್ಚು ಅವರ ಒಡನಾಟದಲ್ಲಿರಬೇಕಾಯಿತು. ರಾಜಕಾರಣ ಅದೆಷ್ಟು ಮಹತ್ವದ್ದು ಅನ್ನುವುದು ಅವರ ದೈನಂದಿನ ಬದುಕನ್ನು ಗ್ರಹಿಸಿದ ನನಗೆ ಹೆಚ್ಚು ಅರ್ಥವಾಗತೊಡಗಿತು. ಅವರ ಮಾತಿನಲ್ಲಿ ಮೆದುತನ, ಸೌಮ್ಯ ವ್ಯಕ್ತಿತ್ವ, ಕರ್ತವ್ಯನಿಷ್ಠೆ, ಪ್ರಾಮಾಣಿಕ ಕಾಳಜಿಗಳು ನಮ್ಮ ನಡುವಿನ ಅತ್ಯಂತ ಸಭ್ಯ ರಾಜಕಾರಣಿ ಎಂದೇ ಹೇಳುತ್ತಿದ್ದವು. ಪರಿಚಯವಿರದಿದ್ದರೂ ಎಂತಹ ಸಂದಿಗ್ಧ ಸಮಸ್ಯೆಯೇ ಇರಲಿ ಬಂದವರನ್ನು ಗೌರವಿಸಿ ಅವರ ಕೆಲಸವನ್ನು ಸೂಕ್ಷ್ಮವಾಗಿ ಗಮನಿಸಿ ಪ್ರಾಮಾಣಿಕ ಕಾಳಜಿ ವಹಿಸುತ್ತಿದ್ದುದು ಅವರ ಮತ್ತೊಂದು ಗುಣಾದರ್ಶ. ಕೇವಲ ಪತ್ರ ಬರೆದರೂ ಸಾಕು ಅದನ್ನು ಪರಿಶೀಲಿಸಿ ಕೆಲಸ ಮಾಡಿಕೊಡಲು ಅಣಿಯಾಗುತ್ತಿದ್ದರು. ಮಾನ್ಯರಾದ ಎಸ್. ನಿಜಲಿಂಗಪ್ಪ ಅವರ

ಅಳಿಯಂದಿರೆಂದು ಅವರನ್ನು ರಾಜಕೀಯ ಕ್ಷೇತ್ರ ಗುರುತಿಸಲಿಲ್ಲ. ಅವರ ಅಧ್ಯಯನ ಶೀಲತೆ, ರೈತಪರ ಕಾಳಜಿ, ಗ್ರಾಮೀಣ ಬದುಕನ್ನು ಸುಧಾರಿಸಲು ಅವರಿಟ್ಟ ಸಂಕಲ್ಪಗಳು, ಸ್ತ್ರೀ ಸಮುದಾಯವನ್ನು ಸಶಕ್ತಗೊಳಿಸುವ ಅವರ ಆಲೋಚನೆಗಳೇ ಅವರ ರಾಜಕೀಯ ಭವಿಷ್ಯವನ್ನು ನಿರ್ಧರಿಸಿದವು. ಅದರ ಜೊತೆಗೆ ಎಸ್.ನಿಜಲಿಂಗಪ್ಪನವರ ಅಳಿಯಂದಿರಾದದ್ದು ಅವರ ವ್ಯಕ್ತಿತ್ವಕ್ಕೆ ಮತ್ತಷ್ಟು ಜವಾಬ್ದಾರಿಯನ್ನು ಮತ್ತು ಉತ್ಸಾಹವನ್ನು ತಂದಿತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಸಾಮಾನ್ಯವಾಗಿ ರಾಜಕಾರಣಿಗಳೆಂದ ಮೇಲೆ ಶ್ರೀಮಂತರಿಗೆ, ಸಮುದಾಯಗಳ ನಾಯಕರಿಗೆ ಓಲೈಸಿ ಮಣೆಹಾಕುವುದು ರಾಜಕೀಯದಲ್ಲಿ ಅನಿವಾರ್ಯ ಸಂಗತಿ. ಆದರೆ ರಾಜಶೇಖರನ್ ಇದಕ್ಕೆ ಸಂಪೂರ್ಣ ಅಪವಾದವಾಗಿ ನಿಲ್ಲುತ್ತಾರೆ. ಜನಸಾಮಾನ್ಯರನ್ನು, ರೈತರನ್ನು ಅತ್ಯಂತ ಪ್ರೀತಿಯಿಂದ ಮಾತನಾಡಿಸಿ ಅವರ ಕಷ್ಟಸುಖಗಳನ್ನು ವಿಚಾರಿಸುವುದು ಅವರ ವ್ಯಕ್ತಿತ್ವದ ಹಿರಿಮೆ ಮತ್ತು ಪ್ರಬುದ್ಧತೆಯನ್ನು ಹೇಳುತ್ತದೆ. ಜೀವನದಲ್ಲಿ ಅವರು ಆಯ್ದುಕೊಂಡ ಕ್ಷೇತ್ರವಾದರೂ ಅಂತಹದ್ದೇ. 'ಗ್ರಾಮೀಣ ಅಭಿವೃದ್ಧಿ' ಅವರ ನಿಜವಾದ ಕಾರ್ಯಕ್ಷೇತ್ರ. ಭಾರತದ ಗ್ರಾಮ ಸಾಮ್ರಾಜ್ಯವನ್ನು ಉದ್ಧರಿಸಲು ಅವರು ಮಾಡಿದ ಪ್ರಯತ್ನ ಮತ್ತು ಪ್ರಯೋಗಗಳು ಶ್ಲಾಘನೀಯವಾದವುಗಳಾಗಿವೆ. ಅದಕ್ಕಾಗಿ ಅವರು 'ಏಷಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ'ಯೆಂಬ ಅಧ್ಯಯನ ಸಂಸ್ಥೆಯನ್ನು ಕಟ್ಟಿದ್ದಾರೆ. ನಿತ್ಯವೂ ಅಧ್ಯಯನಶೀಲರು. ಅದಕ್ಕಾಗಿ ವಿಶ್ವದ ಹತ್ತಾರು ಪ್ರಮುಖ ರಾಷ್ಟ್ರಗಳನ್ನು ಸುತ್ತಿದ್ದಾರೆ. ಅವರ ಶ್ರಮ ಸಾರ್ಥಕವಾಗಬೇಕಾದರೆ ಅವರ ಯೋಜನೆ ಮತ್ತು ಕನಸುಗಳನ್ನು ಅನುಷ್ಠಾನಕ್ಕೆ ತರಬೇಕಾಗಿದೆ. ವಿಶ್ವದ ಪ್ರಮುಖ ರಾಷ್ಟ್ರಗಳು ಗ್ರಾಮೀಣ ಅಭಿವೃದ್ಧಿಯ ನೀತಿಗಳನ್ನು ಗುರುತಿಸುವಾಗ ಶ್ರೀ ಎಂ.ವಿ. ರಾಜಶೇಖರನ್ ಅವರ ಅಭಿಪ್ರಾಯಗಳನ್ನು ಕೇಳುತ್ತಿರುವುದು ಅವರ ಸಂಶೋಧನೆ ಮತ್ತು ಅಧ್ಯಯನಶೀಲತೆಗೆ ಹಿಡಿದ ಕನ್ನಡಿಯಾಗಿದೆ. ಸ್ತ್ರೀ ಸಮುದಾಯದ ಬಗೆಗೆ ಅವರ ನೀತಿಗಳು ಪ್ರಪಂಚದ ಹಲವು ದೇಶಗಳ ಸರ್ಕಾರಗಳಿಗೆ ನಿರ್ದೇಶಕ ಸೂತ್ರಗಳಾಗಿವೆ. ಅಂತೆಯೇ ಶ್ರೀಲಂಕಾ ಸರ್ಕಾರ ಅವರಿಗೆ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಎಂ.ವಿ. ರಾಜಶೇಖರನ್ ಅವರದ್ದು ಆಡಂಬರ ರಹಿತ ಬದುಕು. ಸದ್ದುಗದ್ದಲವಿಲ್ಲದೇ ಬೆಳೆದಿದ್ದಾರೆ. ಅಂತಾರಾಷ್ಟ್ರೀಯ ಸಮುದಾಯ ಗಮನಿಸುವಂತಹ ವ್ಯಕ್ತಿತ್ವವಾಗಿ ಬೆಳೆದಿದ್ದಾರೆ. ಇಷ್ಟಾದರೂ ಕರ್ನಾಟಕದ ಜನಸಾಮಾನ್ಯರಿಗೆ ಅವರು ಅಪರಿಚಿತರಾಗಿದ್ದಾರೆ. ನಮ್ಮಂತಹ ತೀರಾ ಹತ್ತಿರದವರಿಗೆ ಬಿಟ್ಟರೆ ಅವರು ಬಹಳಷ್ಟು ಜನಗಳಿಗೆ ಪರಿಚಿತರಲ್ಲ. ಕನಕಪುರ ಕ್ಷೇತ್ರ ದೇಶದ ಅತ್ಯಂತ ದೊಡ್ಡ ಲೋಕಸಭಾ ಕ್ಷೇತ್ರಗಳಲ್ಲೊಂದು. ಅದರ ವ್ಯಾಪ್ತಿಯಲ್ಲಿ ಬರುವ ಎಲ್ಲಾ ವಿಧಾನಸಭೆ ಕ್ಷೇತ್ರಗಳ ಪ್ರತಿ ಹಳ್ಳಿಗಳನ್ನೂ ಸಂದರ್ಶಿಸಿ ಜನರ ಕಷ್ಟ ಸುಖಗಳನ್ನು ವಿಚಾರಿಸಿಕೊಂಡು ಹೋಗಿದ್ದುಂಟು. ಬೇರೆ ರಾಜಕಾರಣಿಗಳು ಓಟುಗಳಿಗಾಗಿ ಗ್ರಾಮೀಣ ಪ್ರದೇಶದಲ್ಲಿ ಸಂದರ್ಶನ ನೀಡಿದರೆ ಇವರು ಜನತೆಯ ಕಲ್ಯಾಣಕ್ಕಾಗಿ ಸಂದರ್ಶನ ನೀಡಿದವರು.

ಅವರು ಕ್ಷೇತ್ರಕ್ಕೆ ಮಾಡಿದ ಕೆಲಸ ಕಾರ್ಯಗಳಾದರೂ ಕಡಿಮೆಯಿಲ್ಲ. ಲೋಕಸಭೆಯಲ್ಲಿ ಕ್ಷೇತ್ರದ ಸಮಸ್ಯೆಗಳ ಬಗೆಗೆ ಚರ್ಚೆ ನಡೆಸುತ್ತಿದ್ದರು. ಆ ಚರ್ಚೆಯ ವಿಚಾರಗಳಲ್ಲೂ ಆ ಕ್ಷೇತ್ರದ ಪಂಚಾಯ್ತಿ ಸದಸ್ಯರಿಗೂ ಮೊದಲು ಮಾಡಿ ಅದರ ಪ್ರತಿಯನ್ನು ಒದಗಿಸುತ್ತಿದ್ದರು. ಪತ್ರಗಳನ್ನು ಬರೆಯುವುದು ಮತ್ತು ಪತ್ರಗಳಿಗೆ ಪ್ರತಿಕ್ರಿಯಿಸುವುದು ಅವರ ಮತ್ತೊಂದು ಸದ್ಗುಣ. ಇದರಿಂದಾಗಿ ಯಾವಾಗಲೂ ಸಾರ್ವಜನಿಕ ಸಂಪರ್ಕದಲ್ಲಿದ್ದುಕೊಂಡು ಬರವಣಿಗೆಯ ಮೂಲಕವೇ ಕೆಲಸ ಮಾಡಿಕೊಡುತ್ತಿದ್ದವರು ಅವರಾಗಿದ್ದಾರೆ. ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿದ್ದಾಗ ಅವರು ವಿವಿಧ ಸಮಿತಿಗಳಲ್ಲಿ ಕೆಲಸ ಮಾಡಿದ್ದರು. ಅವರು ಸದನದಲ್ಲಿ ಕೇಳುತ್ತಿದ್ದ ಪ್ರಶ್ನೆಗಳಾದರೂ ಅಖಂಡ ಕರ್ನಾಟಕಕ್ಕೇ ನೀತಿ ರೂಪಿತವಾಗಬೇಕೆಂಬ ಉದ್ದೇಶವನ್ನು ಹೊಂದಿರುತ್ತಿದ್ದವು. ಕೂಲಂಕಷ ವಿಚಾರಣೆ, ಸ್ಪಷ್ಟ ಮಾತುಗಾರಿಕೆ, ನಿಷ್ಕಲ್ಮಶ ಮನಸ್ಸು ಅವರದ್ದು. ರಾಜಕೀಯ ಸಹಜ ಸೇಡು ಪ್ರತೀಕಾರಗಳಿಗೆ ಅವರಲ್ಲಿ ಅವಕಾಶವೇ ಇರುತ್ತಿರಲಿಲ್ಲ. ಆ ಕಾರಣದಿಂದಾಗಿಯೇ ನಮ್ಮ ಸಂದರ್ಭದ ಸಭ್ಯ ಮತ್ತು ಪ್ರಾಮಾಣಿಕ ರಾಜಕಾರಣಿಯೆಂದು ನಾವಿಂದು ಅವರನ್ನು ಗುರುತಿಸುತ್ತೇವೆ. ರಾಜಕೀಯದಲ್ಲಿದ್ದರೂ ಅವರೆಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. ಯಾವ ಜವಾಬ್ದಾರಿಗಳನ್ನು ವಹಿಸಿದರೂ ನಿರ್ವಹಿಸುವಂತಹ ಸೌಜನ್ಯಯುತವಾದ ಮನಸ್ಸು ಅವರದ್ದು.

ಮಹಾತ್ಮ ಗಾಂಧಿಯವರು ಹೇಳಿದ ಸಪ್ತಪಾತಕಗಳಲ್ಲಿ ತತ್ವರಹಿತ ರಾಜಕಾರಣವೂ ಒಂದು. ಈ ಮಾತನ್ನು ಅವರು ಚನ್ನಾಗಿ ಅರಿತುಕೊಂಡಿದ್ದಾರೆ ಮಾತ್ರವಲ್ಲ, ತಾತ್ವಿಕ ಬದ್ಧತೆಯಿರುವ ಪ್ರಬುದ್ಧ ರಾಜಕಾರಣಿಯಾಗಿ ನಮ್ಮ ನಡುವೆ ಅದನ್ನು ತೋರಿಸಿಕೊಡುತ್ತಿದ್ದಾರೆ. ನಿಜಕ್ಕೂ ಅವರು ಬರುವ ಪೀಳಿಗೆಯವರಿಗೆ ಜೀವಂತ ಮಾದರಿಯಾಗಿದ್ದಾರೆ. ಅವರಿಂದ ಕಲಿಯಬೇಕಾದದ್ದು ಬಹಳಷ್ಟಿದೆ. ನಮ್ಮ ಪಕ್ಷದಲ್ಲಿ ಇಂತಹ ರಾಜಕಾರಣಿಗಳಿರುವುದು ಹೆಮ್ಮೆಯ ಸಂಗತಿ. ಅವರ ಇರುವಿಕೆ ನಮ್ಮ ಪಕ್ಷಕ್ಕೂ ಭೂಷಣಪ್ರಾಯವಾದದ್ದೆಂದೇ ನನ್ನ ಅನಿಸಿಕೆ. ಅವರು ನನ್ನನ್ನು ಕಂಡಾಗ ಸಾಕಷ್ಟು ಮಾರ್ಗದರ್ಶನ ಮಾಡಿದ್ದಾರೆ. ಹತ್ತಾರು ನಿರ್ದೇಶನಗಳನ್ನು ನೀಡಿದ್ದಾರೆ. ಎಲ್ಲರ ಅಭಿಪ್ರಾಯಗಳನ್ನು ಗೌರವಿಸಿ ಅತ್ಯಂತ ಸೌಜನ್ಯಯುತವಾದ ನಡವಳಿಕೆಯ ಮೂಲಕ ನಮ್ಮನ್ನೆಲ್ಲಾ ಸಮಾಜಸೇವೆಗೆ ಹುರಿದುಂಬಿಸುವುದು ನಿಜಕ್ಕೂ ಅವರ ಸದ್ಗುಣವೆಂದೇ ಹೇಳಬೇಕು. ಜೀವನದಲ್ಲಾದ ಯಾವುದೇ ಏರು-ಪೇರುಗಳಿಗೆ ತಲೆಕೆಡಿಸಿಕೊಳ್ಳದೆ ದೃಢವಾದ ಮನಸ್ಸಿನಿಂದ ಮತ್ತು ನಿಷ್ಕಾಮ ಜನಸೇವೆಯಿಂದ ನಮ್ಮ ಅಸ್ತಿತ್ವವನ್ನು ರೂಪಿಸಿಕೊಳ್ಳಬೇಕು ಎಂದು ಅವರು ಹೇಳುವುದು ಪವಿತ್ರ ರಾಜಕಾರಣದ ಮಂತ್ರವಾಗಿದೆ.

ನಾನು ಕಂಡಂತೆ ಎಂ.ವಿ. ರಾಜಶೇಖರನ್ ಅವರು ಎಂದೂ ಆಶ್ವಾಸನೆ ನೀಡುವ ರಾಜಕಾರಣಿಯಲ್ಲ. ಯಾವುದೇ ವಿಷಯದಲ್ಲಾಗಲಿ ಅದು ಅವರ ಗಮನಕ್ಕೆ ಬಂದರೆ ಸಾಕು ಆ ಕೆಲಸವನ್ನು ಅಚ್ಚುಕಟ್ಟಾಗಿ ತಕ್ಷಣವೇ ಜಾರಿಗೆ ತಂದುಬಿಡುತ್ತಿದ್ದರು. ಅವರ ಕೆಲಸ ಮಾಡುವ ರೀತಿ ಹಲವರನ್ನು ಬೆರಗುಗೊಳಿಸಿರುವುದಂತೂ ನಿಜ. ಸದ್ದುಗದ್ದಲವಿಲ್ಲದೆ ಎತ್ತರಕ್ಕೆ ಬೆಳೆದಿದ್ದಾರೆ.

ಅಪಾರ ಗೌರವವನ್ನೂ ಸಂಪಾದಿಸಿದ್ದಾರೆ. ಕೆಲಸ ಮಾಡಿಕೊಟ್ಟಾದ ಮೇಲಾದರೂ ಅದನ್ನು 'ನಾನು ಮಾಡಿಸಿಕೊಟ್ಟಿರುವೆ'ನೆಂದು ಎಂದೂ ಹೇಳಿದವರಲ್ಲ. ಈ ಎಲ್ಲಾ ಸದ್ಗುಣಗಳಿಂದ ಅವರು ನಮ್ಮೆಲ್ಲರ ಆದರ, ಗೌರವಕ್ಕೆ ಪಾತ್ರರು. ಅವರು ಎಪ್ಪತ್ತೈದು ವಸಂತಗಳನ್ನು ಕಾಣುತ್ತಿರುವ ಈ ಸಂದರ್ಭದಲ್ಲಿ ಅವರನ್ನು ಅಭಿನಂದಿಸುವೆ. ಉತ್ತರೋತ್ತರ ಅವರ ಸಕಲ ಅಭೀಷ್ಟಗಳನ್ನು ಈಡೇರಿಸಲಿ ಎಂದು ದೇವರಲ್ಲಿ ಸಂಕಲ್ಪಿಸಿಕೊಳ್ಳುವೆ.

***

# ಮಾರ್ಗದರ್ಶಕರು

ಡಾ. ಬಿ.ಎಲ್. ಜಯರಾಮ್

ಹಿರಿಯರಾದ ಪೂಜ್ಯ ಎಂ.ವಿ.ರಾಜಶೇಖರನ್ ಅವರಿಗೆ ಅವರ ೭೫ರ ಹುಟ್ಟುಹಬ್ಬದ ಸಂದರ್ಭದಲ್ಲಿ ಡಾ। ದೇ.ಜವರೇಗೌಡರು ಹಾಗೂ ಗೊ.ರು.ಚನ್ನಬಸಪ್ಪ ಅವರ ನೇತೃತ್ವದಲ್ಲಿ ಅಭಿನಂದನ ಗ್ರಂಥ ತರುತ್ತಿರುವ ವಿಚಾರ ತಿಳಿದು ಸಂತೋಷವಾಯಿತು. ಶ್ರೀ ರಾಜಶೇಖರನ್ ಅವರನ್ನು ನಾನು ಬಾಲ್ಯದಿಂದಲೂ ನೋಡುತ್ತಾ ಬಂದಿದ್ದೇನೆ. ನನ್ನ ತಂದೆ ದಿ. ಬಿ.ಜೆ. ಲಿಂಗೇಗೌಡ ಅವರು ಪ್ರತಿನಿತ್ಯ ಮನೆಯಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಇವರ ಬಗೆಗೆ ಪ್ರಸ್ತಾಪಿಸುತ್ತಿದ್ದರು. ರಾಜಶೇಖರನ್ ಅವರು ರಾಷ್ಟ್ರದ ಆದರ್ಶ ಪುರುಷರಾದ ಎಸ್.ನಿಜಲಿಂಗಪ್ಪನವರ ಅಳಿಯಂದಿರೆಂಬುದು ನನ್ನ ತಂದೆಗೆ ಸಂತೋಷ ಕೊಟ್ಟ ವಿಷಯವಾಗಿತ್ತು. ನಿಜಲಿಂಗಪ್ಪನವರಿಗೆ ಇಷ್ಟವಿಲ್ಲದಿದ್ದರೂ ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಅವರು ೧೯೬೭ರಲ್ಲಿ ಎಂ.ವಿ.ರಾಜಶೇಖರನ್ ಅವರನ್ನು ಕನಕಪುರ ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸುವಂತೆ ಮಾಡಿದ್ದರಂತೆ. ಅವರ ಒತ್ತಾಯಕ್ಕೆ ಅಂದು ಶಾಸಕರಾಗಿದ್ದ ನಮ್ಮ ತಂದೆಯವರಂತೆ ಹತ್ತಾರು ನಾಯಕರ ಒತ್ತಾಯ ಕೂಡಾ ಕಾರಣವಾಗಿತ್ತು. ಚನ್ನಪಟ್ಟಣ ವಿಧಾನಸಭಾ ಕ್ಷೇತ್ರದ ಒಳಗೂ ಹೊರಗೂ ಚೆನ್ನಾಗಿ ಗೊತ್ತಿತ್ತು. ಜೊತೆಗೆ ಗ್ರಾಮೀಣ ಪ್ರದೇಶದ ಜನರ ಮನಸ್ಥಿತಿ ಚೆನ್ನಾಗಿ ಅರ್ಥವಾಗಿತ್ತು. ಕಾಂಗ್ರೆಸ್‌ನ ಆ ಕಾಲದ ಹಿರಿಯ ನಾಯಕರೆಲ್ಲಾ ನಮ್ಮ ತಂದೆಯವರ ಆತ್ಮೀಯ ಬಳಗದಲ್ಲಿದ್ದರು.

ಎಪ್ಪತ್ತರ ದಶಕದಲ್ಲಿ ನಮ್ಮ ತಂದೆ ಮುಖ್ಯಮಂತ್ರಿ ವೀರೇಂದ್ರ ಪಾಟೀಲ, ಹಣಕಾಸು ಸಚಿವರಾದ ರಾಮಕೃಷ್ಣ ಹೆಗಡೆ ಹಾಗೂ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದ ಎಸ್.ನಿಜಲಿಂಗಪ್ಪನವರು ಒಂದೇ ಚಿಂತನ ಲಹರಿಯಲ್ಲಿದ್ದವರು. ಈ ವ್ಯಕ್ತಿಗಳು ಬೇರೆ ಬೇರೆಯಾಗಿ ಕಾಣಬಹುದಾಗಿದ್ದರೂ ಅವರ ಆಲೋಚನಾ ಧಾಟಿ ಒಂದೇ ನಮೂನೆಯಲ್ಲಿತ್ತು. ಆ ನಮೂನೆ ಸರ್ವ ಜನರ ಹಿತವನ್ನು ಬಯಸುವಂತಿತ್ತು. ಹೊಸ ಹೊಸ ನಾಯಕರನ್ನು ಹುಡುಕಿ ಅವರಿಗೆ ಅವಕಾಶ ಕೊಡುವುದು ಕಾಂಗ್ರೆಸ್ ಪಕ್ಷದ ನೀತಿಯಾಗಿತ್ತು. ೧೯೬೭ರಲ್ಲಿ ರಾಜಶೇಖರನ್ ಅವರಿಗೆ ಕನಕಪುರ ಲೋಕಸಭಾ ಸೀಟು

ದೊರೆಯಬೇಕಾದರೆ ಆ ತನಕ ಅವರು ಮಾಡಿದ ಸೇವೆ ಕಾರಣವಾಗಿತ್ತೆಂದೇ ಹೇಳಬಹುದು. ಕೃಷಿಕ ಸಮಾಜದ ಮೂಲಕ ಅವರು ರೈತರ ಹಿತವನ್ನು ರಕ್ಷಿಸಿದ್ದರು. ಯುವ ಜನಾಂಗಕ್ಕೆ ಅವರು ಸಲ್ಲಿಸಿದ ಸೇವೆಯ ಬಗ್ಗೆ ಕಾಂಗ್ರೆಸ್ ನಾಯಕರಲ್ಲಿ ಮೆಚ್ಚುಗೆಯಿತ್ತು. ಈ ಕಾರಣಗಳಿಗಾಗಿ ಅವರಿಗೆ ಲೋಕಸಭಾ ಸ್ಥಾನಕ್ಕೆ ಸ್ಪರ್ಧಿಸಲು ಅವಕಾಶ ದೊರೆಯಿತೆಂದು ನಮ್ಮ ತಂದೆ ಯಾವಾಗಲೂ ಹೇಳುತ್ತಿದ್ದರು.

ರಾಜಶೇಖರನ್ ಅವರು ಕನಕಪುರ ಕ್ಷೇತ್ರದಿಂದ ಲೋಕಸಭಾ ಸದಸ್ಯರಾದ ಮೇಲೆ ಅವರು ನಿರ್ವಹಿಸಿದ ಕರ್ತವ್ಯದ ರೀತಿ ಇಂದಿಗೂ ಈ ಕ್ಷೇತ್ರದ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿದೆ. ಆಡಳಿತ ಪಕ್ಷದ ಸಂಸದರಾಗಿದ್ದ ರಾಜಶೇಖರನ್ ಕ್ರಿಯಾಶೀಲರಾದಷ್ಟು ಬೇರಾವ ಸದಸ್ಯರೂ ಕ್ರಿಯಾಶೀಲರಾಗಿರಲಿಲ್ಲ. ಪ್ರತಿಯೊಂದು ಅಧಿವೇಶನದ ಸಂದರ್ಭದಲ್ಲೂ ಅವರು ತಮ್ಮ ಲೋಕಸಭಾ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಹಾಗೂ ರಾಜ್ಯಕ್ಕೆ ಸಂಬಂಧಿಸಿದಂತೆ ಹತ್ತಾರು ವಿಚಾರಗಳನ್ನು ಪ್ರಸ್ತಾಪಿಸುತ್ತಿದ್ದರು. ಅವುಗಳಿಗೆ ಸರ್ಕಾರದಿಂದ ಸಮರ್ಪಕ ಉತ್ತರ ಪಡೆಯುತ್ತಿದ್ದರು. ಅಧಿವೇಶನ ಮುಗಿದ ಮೇಲೆ ಹೀಗೆ ಪ್ರಸ್ತಾಪಿಸಿದ ವಿಚಾರಗಳನ್ನು ಕನ್ನಡಕ್ಕೆ ಅನುವಾದಿಸಿ ತಮ್ಮ ಲೋಕಸಭಾ ಕ್ಷೇತ್ರದ ಪ್ರತಿಯೊಂದು ಗ್ರಾಮ ಮುಖಂಡರಿಗೂ ಹತ್ತಾರು ಪ್ರತಿಗಳನ್ನು ಕಳಿಸುತ್ತಿದ್ದರು. ಅವರು ಈ ಪ್ರತಿಗಳನ್ನು ಗ್ರಾಮದ ಮತದಾರರಿಗೆ ಹಂಚಬೇಕಾಗಿತ್ತು. ಮತದಾರರಿಗೆ ತಮ್ಮ ಪ್ರತಿನಿಧಿ ದೆಹಲಿಯಲ್ಲಿ ಏನು ಮಾಡುತ್ತಿದ್ದಾರೆಂಬುದು ತಿಳಿಯುತ್ತಿತ್ತು. ಕೆಲವೊಮ್ಮೆ ಮತದಾರರೇ ಲೋಕಸಭಾ ಸದಸ್ಯರಿಗೆ ಬೇಕಾದ ಮಾಹಿತಿಯನ್ನು ಒದಗಿಸುತ್ತಿದ್ದರು. ಜನಪ್ರತಿನಿಧಿಗಳು ಮತದಾರರೊಡನೆ ಹೇಗೆ ಸಂಪರ್ಕವಿಟ್ಟುಕೊಳ್ಳಬಹುದೆಂಬುದಕ್ಕೆ ರಾಜಶೇಖರನ್ ಅವರು ಇಂದಿಗೂ ಮಾರ್ಗದರ್ಶಕರಾಗಿದ್ದಾರೆಂಬುದು ಈ ಭಾಗದ ಹಿರಿಯರೆಲ್ಲರ ಅಭಿಪ್ರಾಯವಾಗಿದೆ.

೩೦-೩೫ ವರ್ಷಗಳ ಹಿಂದೆ ಸಂಪರ್ಕದ ಕೊರತೆ ಎಷ್ಟಿತ್ತೆಂಬುದನ್ನು ಹೇಳಲು ಕೂಡಾ ಸಾಧ್ಯವಿಲ್ಲ. ಎಷ್ಟೋ ಹಳ್ಳಿಗೆ ಬಸ್ಸು ಸಂಪರ್ಕವಿರಲಿಲ್ಲ. ಇನ್ನೂ ವಿದ್ಯುಚ್ಛಕ್ತಿ ಕನಸಿನ ಮಾತು. ದಿನಪತ್ರಿಕೆಗಳು ತಾಲ್ಲೂಕು ಹಾಗೂ ಹೋಬಳಿ ಕೇಂದ್ರವನ್ನು ಮುಟ್ಟಿದ್ದರೆ ಅದೇ ದೊಡ್ಡ ವಿಚಾರ. ಅಂತಹ ಸಂದರ್ಭದಲ್ಲಿ ತಮ್ಮ ಲೋಕಸಭಾ ಕ್ಷೇತ್ರದ ಕುಗ್ರಾಮಕ್ಕೆ ತಮ್ಮ ಕೆಲಸ ಕಾರ್ಯಗಳ ಬಗೆಗೆ ಮಾಹಿತಿ ಕೊಡಬೇಕೆಂಬ ರಾಜಶೇಖರನ್ ಅವರ ಆಲೋಚನೆಯೇ ಒಂದು ರೋಮಾಂಚಕಾರಿಯಾದ ವಿಚಾರ. ಜನಸಾಮಾನ್ಯರ ಬಗ್ಗೆ ಚಿಂತಿಸಬಲ್ಲ ವಿಶಾಲ ದೃಷ್ಟಿಯ ನಾಯಕರು ಮಾತ್ರ ಇಂತಹ ಮಹತ್ಕಾರ್ಯಗಳನ್ನು ಮಾಡುತ್ತಾರೆ. ನಮ್ಮ ತಾಲ್ಲೂಕಿನ ಜನ ಇಂದು ರಾಜಶೇಖರನ್ ಅವರನ್ನು ಜ್ಞಾಪಿಸಿಕೊಳ್ಳುವುದು ಈ ತಾಲ್ಲೂಕಿಗೆ ಅವರು ಒದಗಿಸಿಕೊಟ್ಟ 'ಇಗ್ಗಲೂರು ಏತ ನೀರಾವರಿ' ಯೋಜನೆಯಿಂದಾಗಿ ಎನ್ನಬಹುದು. ಈ ಯೋಜನೆ ಅನುಷ್ಠಾನಗೊಳಿಸುವಾಗ ರಾಜಶೇಖರನ್ ಅನುಭವಿಸಿದ ಕಷ್ಟ ಕೋಟಲೆಗಳ ವಿಚಾರ ನಮ್ಮ ತಲೆಮಾರಿನವರಿಗೆ ತಿಳಿದಿಲ್ಲ. ೭೦೦೦ ಎಕರೆ ಭೂ ಪ್ರದೇಶಕ್ಕೆ ನೀರುಣಿಸುವ ಯೋಜನೆಯ ಅನುಷ್ಠಾನಕ್ಕೆ ರಾಜಶೇಖರನ್ ಹಠ ಹಿಡಿಯದಿದ್ದರೆ ನಮ್ಮ ತಾಲ್ಲೂಕು ಆರ್ಥಿಕವಾಗಿ ತುಂಬಾ ಹಿಂದುಳಿದ ಪ್ರದೇಶವಾಗುತ್ತಿತ್ತು.

ಕೇವಲ ಒಂದು ಅವಧಿಗೆ ಸಂಸದರಾಗಿದ್ದ ರಾಜಶೇಖರನ್ ಬಹಳ ದಿನಗಳಿಂದಲೂ ಅಧಿಕಾರದಿಂದ ದೂರವಿದ್ದಾರೆ. ೧೯೭೭ರಲ್ಲಿ ಜನತಾಪಕ್ಷದ ಅಭ್ಯರ್ಥಿಯಾಗಿ ಕೇವಲ ೪೦೦೦ ಮತಗಳ ಅಂತರದಿಂದ ಅವರು ಸೋಲೊಪ್ಪಿಕೊಂಡಿದ್ದರು. ಆಗ ನಮ್ಮ ತಂದೆ ರಾಜಶೇಖರನ್ ಪರವಾಗಿ ದುಡಿದಿದ್ದರು. ರಾಜ್ಯದಲ್ಲಿ ಜನತಾಪಕ್ಷದ ನಾಯಕರಲ್ಲಿ ಒಬ್ಬರಾಗಿದ್ದ ನಮ್ಮ ತಂದೆಯವರಿಗೆ ೧೯೭೮ರಲ್ಲಿ ವಿಧಾನಸಭಾ ಚುನಾವಣೆಯಲ್ಲಿ ಸ್ಪರ್ಧಿಸಲು ಟಿಕೆಟ್ ದೊರೆಯಲಿಲ್ಲ. ಆಗ ರಾಜಶೇಖರನ್ ನಮ್ಮ ತಂದೆಯವರ ಪರವಾಗಿದ್ದರೆಂಬುದಂತೂ ನಿಜ. ಅನಂತರ ನಮ್ಮ ತಂದೆಯವರು ನಿಧನರಾದರು. ವಿರೋಧ ಪಕ್ಷಗಳ ನಾಯಕರುಗಳಲ್ಲಿ ಒಬ್ಬರನ್ನೊಬ್ಬರು ಕಾಲೆಳೆದು ಬೀಳಿಸಿ ಖುಷಿಪಡುವ ಪ್ರವೃತ್ತಿಯೇ ಹೆಚ್ಚು. ಇದಕ್ಕೆ ಬಲಿಯಾದವರಲ್ಲಿ ಎಂ.ವಿ.ರಾಜಶೇಖರನ್ ಹಾಗೂ ಬಿ.ಜೆ. ಲಿಂಗೇಗೌಡರಂತಹ ಸಾತ್ವಿಕ ನಾಯಕರಿದ್ದಾರೆ. ಇವರನ್ನು ಮತದಾರರು ತಿರಸ್ಕರಿಸಲಿಲ್ಲ. ಆದರೆ ಈ ನಾಯಕರುಗಳು ಮೇಲೆ ಬಂದರೆ ತಮ್ಮ ಮಹತ್ವ ಕಡಿಮೆಯಾಗುವುದೆಂಬ ಭಯದಿಂದ ಆ ಪಕ್ಷದ ಹಿರಿಯ ನಾಯಕರೇ ಅವರನ್ನೂ ಬೀಳಿಸಿದ್ದಾರೆ. ಆದರೆ ಇವರುಗಳು ಮಾತ್ರ ಎಂದೂ ಆ ಕಹಿಯನ್ನು ಮನಸ್ಸಿನಲ್ಲಿಟ್ಟುಕೊಂಡವರಲ್ಲ. ನಮ್ಮ ತಂದೆ ಯಾವಾಗಲೂ ನಮಗೆ ಹೇಳುತ್ತಿದ್ದರು : 'ನೋಡಪ್ಪಾ ರಾಜಕೀಯ ನನ್ನ ತಲೆಗೆ ಕೊನೆಯಾಗಿ ಹೋಗ್ಲಿ, ನೀವು ಓದಿ ಬೇರೆ ಕ್ಷೇತ್ರಕ್ಕೆ ಹೋಗಿ' ಹಿರಿಯರಾದ ರಾಜಶೇಖರನ್ ಬಾಯಲ್ಲಿ ಈ ಮಾತು ಹೇಳದಿರಬಹುದು. ಕೃತಿ ಮೂಲಕ ಮಾಡಿ ತೋರಿಸಿದ್ದಾರೆ. ಅವರ ಮಕ್ಕಳು ಅಥವಾ ಅವರ ಹತ್ತಿರದ ಸಂಬಂಧಿಗಳ್ಯಾರೂ ಸಾರ್ವಜನಿಕ ಕ್ಷೇತ್ರದಲ್ಲಿಲ್ಲ. ಅಂದರೆ ಅಸೂಯಾಪೂರಿತವಾದ ರಾಜಕೀಯ ಕ್ಷೇತ್ರ ಇವರ ಮನಸ್ಸನ್ನು ಎಂತಹ ಆಘಾತಕ್ಕೆ ಈಡುಮಾಡಿದೆಯೆಂಬುದು ಅರ್ಥವಾಗುತ್ತದೆ. ರಾಜಶೇಖರನ್ ಅನುಭವಿಸಿದ ನೋವು ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತಹದ್ದಲ್ಲ. ಅದಕ್ಕೆ ವಿಶಾಲವಾದ ಮನೋಭಾವ ಬೇಕು. ಈ ಕಹಿಯನ್ನು ಮರೆಯಲು ಅವರು ಗ್ರಾಮೀಣಾಭಿವೃದ್ಧಿ ಕ್ಷೇತ್ರವನ್ನು ತಮ್ಮ ಕಾರ್ಯಕ್ರೇತ್ರವನ್ನಾಗಿ ಆರಿಸಿಕೊಂಡಿದ್ದಾರೆ. ವೈದ್ಯನಾಗಿ ಅನೇಕ ದೇಶಗಳನ್ನು ಸುತ್ತಿರುವ ನನಗೆ ರಾಜಶೇಖರನ್ ಅವರು ಕಟ್ಟಿರುವ 'ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ'ಯ ಮಹತ್ವ ಚೆನ್ನಾಗಿ ಗೊತ್ತು. ಇಂತಹ ಅಂತಾರಾಷ್ಟ್ರೀಯ ಸಂಸ್ಥೆಯನ್ನು ಕಟ್ಟಲು ರಾಜಶೇಖರನ್ ಅವರಿಗಿರುವ ವಿದ್ವತ್ ಹಾಗೂ ಕ್ರಿಯಾಶೀಲತೆಯನ್ನು ನಮ್ಮ ಜನ ಅರ್ಥಮಾಡಿಕೊಳ್ಳಬೇಕು. ರಾಜಶೇಖರನ್ ಅವರ ಸಮಸ್ತ ಸಾಮರ್ಥ್ಯವನ್ನು ನಮ್ಮ ಸಮಾಜ ಸರಿಯಾಗಿ ಉಪಯೋಗಿಸಿಕೊಂಡಿಲ್ಲ. ಅದು ನಮ್ಮಗಳ ದುರ್ದೈವ. ನಮ್ಮ ತಂದೆ ನಿಧನರಾಗಿ ೨೫ ವರ್ಷಗಳು ಸಂದಿವೆ. ಆದರೆ ರಾಜಶೇಖರನ್ ಅವರನ್ನು ನೋಡಿದಾಗಲೆಲ್ಲಾ ನಮ್ಮ ತಂದೆಯ ಕಾಲದ ಪರಿಸರ ನೆನಪಿಗೆ ಬರುತ್ತದೆ. ಅವರೂ ಸಹ ಎಂದಿನಂತೆ ನಮ್ಮ ಕುಟುಂಬದ ಮೇಲೆ ಪ್ರೀತಿ ವಿಶ್ವಾಸವನ್ನು ತೋರಿಸುತ್ತಿದ್ದಾರೆ. ಇಂತಹ ಪೂಜ್ಯರ ಆಶೀರ್ವಾದ ನಮ್ಮ ಕುಟುಂಬದ ಮೇಲೆ ಸದಾ ಇರಲಿ. ದೇಶದ ಜನತೆ ರಾಜಶೇಖರನ್ ಅವರ ಪ್ರತಿಭೆ ಹಾಗೂ ಸಾಮರ್ಥ್ಯವನ್ನು ಚೆನ್ನಾಗಿ ಬಳಸಿಕೊಳ್ಳಲೆಂದು ಈ ಮೂಲಕ ಆಶಿಸುತ್ತೇನೆ.

***

# ಮಹಾ ಮಾನವತಾವಾದಿ

ಉಮೇಶಬಾಬು ಪಾಟೀಲ

ನಾನು ವಿದ್ಯಾರ್ಥಿಯಾಗಿದ್ದಾಗಲೇ ನನಗೆ ಎಂ.ವಿ.ರಾಜಶೇಖರನ್ ಪರಿಚಿತರು. ಏಕೆಂದರೆ ನಾನು ಆಗಲೇ ಪಕ್ಷ ಸಂಘಟನೆಗಳಲ್ಲಿ ಗುರುತಿಸಿಕೊಂಡವನಾಗಿದ್ದೆ. ಆದರೆ ನಮ್ಮಿಬ್ಬರಲ್ಲಿ ಹೆಚ್ಚಿನ ಸಂಪರ್ಕ ಬೆಳೆದದ್ದು ಕಾಂಗ್ರೆಸ್‌ನ ಅಂಗಪಕ್ಷವಾದ ತಿವಾರಿ ಕಾಂಗ್ರೆಸ್ ಪಕ್ಷವನ್ನು ಕರ್ನಾಟಕದಲ್ಲಿ ಸಂಘಟಿಸುವಾಗ. ಅಷ್ಟು ಹೊತ್ತಿಗಾಗಲೇ ಎಂ.ವಿ.ರಾಜಶೇಖರನ್ ರಾಜಕೀಯದ ಎಲ್ಲ ಸಿಹಿ-ಕಹಿಗಳನ್ನು ಅನುಭವಿಸಿದ್ದವರಾಗಿದ್ದರು. ಮೊದಲಿನಿಂದಲೂ ಅವರ ನೇರ ಸಂಪರ್ಕದಲ್ಲಿದ್ದ ನನಗೆ ತಿವಾರಿ ಕಾಂಗ್ರೆಸ್ ಸಂಘಟಿಸುವ ಸಂದರ್ಭದಲ್ಲಿ ಅವರನ್ನು, ಅವರ ಆದರ್ಶಗಳನ್ನು ತುಂಬಾ ಹತ್ತಿರದಿಂದ ಕಂಡವನಾಗಿದ್ದೇನೆ.

ಎಂ.ವಿ.ರಾಜಶೇಖರನ್ ಒಬ್ಬ ಅಜಾತಶತ್ರು. ಯಾರಿಗೂ ಕೆಡುಕನ್ನು ಮಾಡದವರು, ವಿದ್ವಾಂಸರು, ಸಂಶೋಧನಾರ್ಥಿಗಳು. ಸದಾ ಅಧ್ಯಯನ ಶೀಲತೆ ಅವರ ಪ್ರಮುಖ ಗುಣಸ್ವಭಾವ. ಉತ್ಕೃಷ್ಟ ಮಟ್ಟದ ಜನರ ಸಹವಾಸ, ಒಳ್ಳೆಯದನ್ನು ಬೆಂಬಲಿಸುವ ರೀತಿ, ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರಿಗೆ ಜವಾಬ್ದಾರಿ ಹೊರಿಸಿ ಕೆಲಸ ತೆಗೆದುಕೊಳ್ಳುವ ವಿಧಾನ-ನನಗೆ ಅವರ ಗುಣಗಳಲ್ಲಿ ಹೆಚ್ಚು ಇಷ್ಟವಾಗುತ್ತಿದ್ದ ಅಂಶ. ವಿರೋಧ ಪಕ್ಷದವನೇ ಆಗಲಿ, ತಮ್ಮ ವಿರುದ್ಧ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಅಭ್ಯರ್ಥಿಯೇ ಆಗಲಿ ಆಕಸ್ಮಾತ್ತಾಗಿ ಎದುರಿಗೆ ಬಂದಾಗಲೂ ಅವರು ತುಂಬಾ ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ವಿಶ್ವಾಸದಿಂದ ಸಮಾಜ ಸೇವೆ ಮತ್ತು ರಾಜನೀತಿಯ ಬಗೆಗೆ ಚರ್ಚಿಸುತ್ತಿದ್ದರು. ಈರ್ಷ್ಯೆ, ಅಸೂಯೆ ಇತ್ಯಾದಿ ರಾಜಕಾರಣ ಸಹಜವಾದಂತಹ ಚಿಕ್ಕ ದೌರ್ಬಲ್ಯಗಳನ್ನು ಆ ವ್ಯಕ್ತಿಯಲ್ಲಿ ಹುಡುಕಲು ಅವಕಾಶವಿಲ್ಲ.

ಎಂ.ವಿ.ರಾಜಶೇಖರನ್ ಅವರೊಡನೆ ನಾನು ಹಲವು ಸಲ ಜಗಳ ಮಾಡಿಕೊಂಡಿರುವೆ, ಸಿಟ್ಟುಮಾಡಿಕೊಂಡಿರುವೆ. ಅಂತಹ ಸನ್ನಿವೇಶಗಳು

ಹುಟ್ಟಿಕೊಂಡವು. ಅವರು ಸಮಕಾಲೀನ ಸಂದರ್ಭದ ರಾಜಕಾರಣಿಗಳ ಜೊತೆಗೆ ಚರ್ಚಿಸುವಾಗ ಹಲವು ಸಲ ಅಧಿಕಾರವನ್ನು ಬಿಟ್ಟುಕೊಡುವಾಗ ನಾನು ಸಿಟ್ಟು ಮಾಡಿಕೊಂಡು ಹೋದದ್ದುಂಟು. ಅವರ ಸೌಜನ್ಯಯುತ ವರ್ತನೆ, ತಾಳ್ಮೆ, ಉದಾರಗುಣಗಳು ನನ್ನು ಸಿಟ್ಟಿಗೆ ಕಾರಣವಾಗಿದ್ದವೇ ವಿನಹ ಅವರ ದರ್ಪದ ಅಥವಾ ಧಾರ್ಷ್ಟ್ಯದ ನಡವಳಿಕೆಗಳು ನನ್ನಲ್ಲಿ ಸಿಟ್ಟು ತಂದಿರಲಿಲ್ಲ. ಎಷ್ಟೆಲ್ಲಾ ಸಿಟ್ಟುಮಾಡಿಕೊಂಡು ಹೋದರೂ ಗಂಟೆ ಅರ್ಧಗಂಟೆಯಲ್ಲೇ ಅವರನ್ನು ನೋಡಬೇಕೆನಿಸುತ್ತಿತ್ತು. ಅಷ್ಟು ಹೊತ್ತಿಗೆ ಅವರೂ ನನ್ನನ್ನು ಕರೆದು ಅಥವಾ ಫೋನ್‌ಮಾಡಿ ಮಾತನಾಡಿಸಿಬಿಡುತ್ತಿದ್ದರು. ಹೀಗಾಗಿ ಅವರು ನಾನು ಕಂಡ ಅತ್ಯಂತ ದೊಡ್ಡ ಮಾನವತಾವಾದಿ.

ಎಂ.ವಿ. ರಾಜಶೇಖರನ್ ಅವರೊಬ್ಬ ಬುದ್ಧಿಜೀವಿ. ಎಂದೂ ಅಧಿಕಾರಕ್ಕಾಗಿ ಹಪಾಹಪಿಸಿದವರಲ್ಲ. ನಿಜಲಿಂಗಪ್ಪನವರ ಅಳಿಯಂದಿರಾಗಿದ್ದರೂ ಅವರು ತಮ್ಮ ಪಕ್ಷದಲ್ಲಿ ತಮ್ಮ ಪಕ್ಷದ ಸರ್ಕಾರದಲ್ಲಿ ಯಾವುದೇ ಹುದ್ದೆಯನ್ನು ಬಯಸಿದವರಲ್ಲ. ಏಷಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯನ್ನು ಹುಟ್ಟು ಹಾಕಿ ಸ್ವಂತ ಖರ್ಚಿನಿಂದ ದೇಶದ ಒಳಿತಿಗೆ ಸಂಶೋಧನೆಯಲ್ಲಿ ತೊಡಗಿದವರು ಅವರಾಗಿದ್ದಾರೆ. ೧೯೬೭ರಷ್ಟು ಹಿಂದೆಯೇ ಕನಕಪುರ ಲೋಕಸಭಾ ಕ್ಷೇತ್ರದ ಮೂಲಕ ಸದಸ್ಯರಾಗಿದ್ದರೂ ಅವರಿಗೆ ಪಕ್ಷದಲ್ಲಿ ಹಿರಿತನದ ಪಟ್ಟ ಸಿಗಲೇ ಇಲ್ಲ. ಇವರು ಅದನ್ನು ಬಯಸಿದವರೂ ಅಲ್ಲ. ಆದರೆ ಅವರ ಸರ್ಕಾರ ಅಥವಾ ಅವರ ಪಕ್ಷ ಯಾವುದೇ ಜವಾಬ್ದಾರಿ ಹೊರಿಸಿದರೆ ಪ್ರಾಮಾಣಿಕವಾಗಿ ಅತ್ಯಂತ ನಿಷ್ಠೆವಹಿಸಿ ಅದನ್ನು ನಿಭಾಯಿಸುತ್ತಿದ್ದರು. ಅವರಲ್ಲಿರುವ ಸಾರ್ವಜನಿಕ ಶಿಸ್ತು ಅಂತಹುದು.

ತಿವಾರಿಯವರ ಕಾಂಗ್ರೆಸ್ ಪಕ್ಷ ಕರ್ನಾಟಕದಲ್ಲಿ ಸಂಘಟಿತವಾಗುತ್ತಿರುವ ಸಂದರ್ಭದಲ್ಲಿ ಶ್ರೀ ಎಂ.ವಿ.ರಾಜಶೇಖರನ್ ಅವರು ಆಸಕ್ತಿ ವಹಿಸಿದ್ದರು. ಶ್ರೀಮತಿ ಇಂದಿರಾ ಗಾಂಧಿಯವರ ತತ್ವ ಪ್ರಣಾಳಿಕೆಗೆ ಅನುಗುಣವಾಗಿದ್ದ ಅವರ ಮನಸ್ಸು ಅವರ ಕುಟುಂಬ ರಾಜಕೀಯ ಅಸಹಾಯಕತೆಯನ್ನು ತೋರಿಸುವುದು ಅರ್ಜುನ್ ಸಿಂಗ್, ಎನ್.ಡಿ.ತಿವಾರಿ, ರಾಜಶೇಖರನ್ ಇಂಥಹ ಧೀಮಂತ ರಾಜಕಾರಣಿಗಳಿಗೆ ಬೇಕಾಗಿರಲಿಲ್ಲ. ಅಷ್ಟಕ್ಕೂ ಅರ್ಜುನ್‌ಸಿಂಗ್ ಮತ್ತು ಎಂ.ವಿ. ರಾಜಶೇಖರನ್ ರಾಜಕೀಯದಲ್ಲಿ ಹಳೆಯ ಮಿತ್ರರು. ಈ ಕಾರಣದಿಂದ ಎಂ.ವಿ. ರಾಜಶೇಖರನ್ ಅವರು ಕರ್ನಾಟಕದಲ್ಲಿ ಆ ಪಕ್ಷವನ್ನು ಕಟ್ಟುವತ್ತ ಮನಸ್ಸು ಮಾಡಿದ್ದರು. ಆ ಸಂದರ್ಭದಲ್ಲಿ ನಾನು ಆ ಪಕ್ಷ ಸಂಘಟನೆಯಲ್ಲಿ ಕಟಿಬದ್ಧನಾಗಿ ತೊಡಗಿಸಿಕೊಂಡಿದ್ದೆ. ದಿನಾಂಕ ೨೫, ಜನವರಿ ೧೯೯೫ರಂದು ಬೆಂಗಳೂರಿನ ಮಲ್ಲೇಶ್ವರಂ ಆಟದ ಮೈದಾನದಲ್ಲಿ ನನ್ನ ನೇತೃತ್ವದಲ್ಲಿಯೇ ಬೃಹತ್ ಬಹಿರಂಗ ಸಭೆಯನ್ನು ಏರ್ಪಡಿಸಿ ಆ ಪಕ್ಷವನ್ನು ಅಧಿಕೃತವಾಗಿ ಕರ್ನಾಟಕದಲ್ಲಿ ಹುಟ್ಟು ಹಾಕಿದೆವು. ಚುನಾವಣಾ ಆಯೋಗ 'ಕೈಗಳಲ್ಲಿ ಹೂವುಗಳನ್ನು ಹಿಡಿದಿರುವ ಮಹಿಳೆ'ಯ ಗುರುತನ್ನು ನೀಡಿತ್ತು.

ಕರ್ನಾಟಕದಲ್ಲಿ ಈ ಪಕ್ಷವನ್ನು ಸಂಘಟಿಸುವ ಜವಾಬ್ದಾರಿಯನ್ನು ಎಂ.ವಿ.ರಾಜಶೇಖರನ್

ಅವರ ಹೆಗಲಿಗೆ ಕಟ್ಟುವ ಅಪೇಕ್ಷೆ ನನ್ನದಾಗಿತ್ತು. ಆದರೆ ಆ ಸಂದರ್ಭದಲ್ಲಿ ವಿಚಿತ್ರ ಬೆಳವಣಿಗೆಗಳನ್ನು ಪರಿಸ್ಥಿತಿ ತಂದಿತು. ಹಾರನಹಳ್ಳಿ ರಾಮಸ್ವಾಮಿ, ಎಸ್.ಎಂ.ಯಾಹ್ಯ, ಕೆನರಾ ಲೋಕಸಭಾ ಸದಸ್ಯ ದೇವರಾಯ ನಾಯ್ಕ, ಡಿ.ಕೆ.ಶಿವಕುಮಾರ್ ಮುಂತಾದವರು ಆ ಸಭೆಗೆ ಹಾಜರಾಗಿದ್ದರು. ಈ ಪಕ್ಷವನ್ನು ಸಂಘಟಿಸಿದ ನಮಗೆ ಈಗ ಧ್ವನಿ ಇಲ್ಲವಾದುದು ಖೇದಕರ ಸಂಗತಿ. ಆ ಬೃಹತ್ ಸಭೆಯಲ್ಲಿ ಕಾಣಿಸಿಕೊಂಡ ಏಕಮೇವ ಎಂ.ಪಿ. ಎಂಬ ಕಾರಣಕ್ಕಾಗಿ ದೇವರಾಯ ನಾಯ್ಕ ಅವರನ್ನೇ ಅಧ್ಯಕ್ಷರನ್ನಾಗಿ ಮಾಡಲಾಯಿತು. ನನಗೆ ಕಾರ್ಯಕಾರಿ ಮಂಡಳಿಯ ಸದಸ್ಯನನ್ನಾಗಿಸಿದರು. ನಮ್ಮೆಲ್ಲರ ಒತ್ತಾಸೆಯ ಮೇರೆಗೆ ಎಂ.ವಿ.ರಾಜಶೇಖರನ್ ಉಪಾಧ್ಯಕ್ಷರಾದರು. ಮುಂದೆ ಆ ಪಕ್ಷ ಕಾಂಗ್ರೆಸ್‌ನಲ್ಲಿ ವಿಲೀನವಾಯಿತು. ಎಂ.ವಿ.ರಾಜಶೇಖರನ್ ಅವರಂತಹ ವ್ಯಕ್ತಿಗಳಿಗೆ ಪಕ್ಷದಲ್ಲಿ ಅಧಿಕಾರವನ್ನು ನೀಡಿದ್ದಿದ್ದರೆ ಅದು ಅರ್ಥಪೂರ್ಣ ರಾಜನೈತಿಕ ಪಕ್ಷವಾಗುತ್ತದೆ ಎಂಬುದೇ ನಮ್ಮೆಲ್ಲರ ಅಭೀಪ್ಸೆಯಾಗಿತ್ತು.

ಎಂ.ವಿ.ರಾಜಶೇಖರನ್ ಅವರು ರಾಜಕೀಯ ಮಾಡಿಕೊಂಡು ದುಡಿದವರಲ್ಲ. ರಾಜಕೀಯಕ್ಕಾಗಿ ಕಳೆದುಕೊಂಡವರು. ಪಿತ್ರಾರ್ಜಿತದಿಂದ ಬಂದ ಆಸ್ತಿಯೇ ಇಂದಿಗೂ ಅವರ ಜೀವನದ ಬಂಡವಾಳ. ಅಧ್ಯಯನ, ಪ್ರವಾಸವೆಂದು ಮತ್ತು ಇತರ ವಿದೇಶಗಳು ಸಲಹೆಗಾಗಿ ಎಂ.ವಿ. ರಾಜಶೇಖರನ್ ಅವರನ್ನು ಕರೆಸಿಕೊಂಡಾಗ ಹೋಗಿ ಬಂದು ಉಳಿದ ಹಣವನ್ನು ಕೃಷಿ ಪ್ರಾಯೋಗಿಕತೆಗೆ ಬಳಸಿಕೊಂಡು ಹಲವು ಸಲ ನಷ್ಟ ಅನುಭವಿಸಿದ್ದಾರೆ. ರಾಷ್ಟ್ರದಲ್ಲಿಯೇ ದೊಡ್ಡ ಲೋಕಸಭಾ ಕ್ಷೇತ್ರಗಳಲ್ಲೊಂದಾದ ಕನಕಪುರ ಲೋಕಸಭಾ ಕ್ಷೇತ್ರದ ಸದಸ್ಯರಾಗಿದ್ದವರು. ವಿಧಾನಸಭೆ, ವಿಧಾನ ಪರಿಷತ್ತನ್ನು ಪ್ರತಿನಿಧಿಸಿದವರು. ಬೆಂಗಳೂರಿನಲ್ಲಿ ಒಂದು ಮನೆ ಕಟ್ಟಿ ಪೂರ್ಣಗೊಳಿಸಲಿಕ್ಕೆ ೧೪ ವರ್ಷಗಳನ್ನು ತೆಗೆದುಕೊಂಡಿದ್ದಾರೆಂದರೆ ಯಾರಾದರೂ ಆಶ್ಚರ್ಯಪಡುವ ಸಂಗತಿ. ನಮ್ಮ ಸಮಕಾಲೀನ ರಾಜಕಾರಣಿಗಳು ಹಣ ಮಾಡಲಿಕ್ಕಾಗಿ ಜನಸೇವೆ ಮಾಡುತ್ತಾರೆ. ಆದರೆ ಇವರದ್ದು ವ್ಯತಿರಿಕ್ತ ಸಂಗತಿ. ಮನೆಯಲ್ಲಿದ್ದದ್ದನ್ನೆಲ್ಲಾ ಹಾಕಿ ಜನಸೇವೆಗಿಳಿಯುವ ಸದ್ಗುಣವಂತರು ಇವರಾಗಿದ್ದಾರೆ. ನಿಜಲಿಂಗಪ್ಪ ಅವರ ಅಳಿಯನೆಂದು ಎಂದೂ ಯಾರಲ್ಲೂ ಹೇಳಿಕೊಂಡವರಲ್ಲ. ಆ ನಾಮದ ಬಲದಿಂದ ಏನನ್ನೂ ಪಡೆದವರಲ್ಲ. ಸತತ ದುಡಿಮೆ, ನಿರಂತರ ಅಧ್ಯಯನಶೀಲತೆ, ಸದಾ ಜನತೆಯ ಒಳಿತಿಗಾಗಿ ಚಿಂತಿಸುತ್ತಿರುವ ನೈಜ ನಾಯಕರಾಗಿ ನಮಗೆಲ್ಲಾ ಆದರ್ಶರಾಗಿದ್ದಾರೆ. ರಾಜಕಾರಣದಲ್ಲಿ ಸಕ್ರಿಯರಾಗಿದ್ದುಕೊಂಡು ಅಧ್ಯಯನದಲ್ಲಿ ನಿರತರಾದವರಾಗಿದ್ದಾರೆ. ಲೋಕಸಭೆಯನ್ನು ಪ್ರತಿನಿಧಿಸಿದಾಗ ತಾವು ಲೋಕಸಭೆಯಲ್ಲಿ ಚರ್ಚಿಸಿದ ಬಗೆಗಿನ ಎಲ್ಲ ವಿವರಗಳನ್ನು ಕನ್ನಡಕ್ಕೆ ಅನುವಾದಿಸಿ ಎಲ್ಲರಿಗೂ ಕಳುಹಿಸಿದ್ದಾರೆ.

ಎಂ.ವಿ. ರಾಜಶೇಖರನ್ ಅವರದ್ದು ಆದರ್ಶ ವ್ಯಕ್ತಿತ್ವ. ಅವರ ಬದುಕೇ ಒಂದು ಆದರ್ಶದ

ಸಂಪುಟ. ತಾತ್ವಿಕಬದ್ಧತೆಯಿರುವ ರಾಜಕಾರಣಿ, ಸಜ್ಜನ. ಕೆಲವರಿಗೆ ಸ್ಥಾನದ ಮೂಲಕ ಗೌರವ ಬಂದರೆ ಎಂ.ವಿ. ರಾಜಶೇಖರನ್ ಸ್ಥಾನಕ್ಕೆ ಗೌರವವನ್ನು ತರಬಲ್ಲ ರಾಜಕೀಯ ಮುತ್ಸದ್ದಿ. ಅವರು ಪ್ರತಿನಿಧಿಸಿರುವ ಸಂಸತ್ತಿನ ಮೇಲ್ಮನೆಗೂ ಇಂತಹವರಿಂದ ಒಂದು ಶೋಭೆ. ಮೇಲ್ಮನೆ, ಹಿರಿಯರ ಮನೆ ಎಂದು ಪರ್ಯಾಯವಾಗಿ ಕರೆಸಿಕೊಳ್ಳುವ ರಾಜ್ಯಸಭೆಗೆ ಎಂ.ವಿ. ರಾಜಶೇಖರನ್ ಅವರು ಅನ್ವರ್ಥವನ್ನು ತಂದುಕೊಡಬಲ್ಲರು. ಅವರಿಗೆ ಎಪ್ಪತ್ತೈದು ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ ಕಿರಿಯನಾದ ನನ್ನ ಅಭಿನಂದನೆಗಳನ್ನು ಸಲ್ಲಿಸುವೆ.

❊❊❊

# ವಿಶಿಷ್ಟ ಗುಣಸಂಪನ್ನ



ಎಸ್. ಚನ್ನಬಸವಯ್ಯ

ಶ್ರೀಮಂತಿಕೆ ಇರುವೆಡೆಯಲ್ಲಿ ಸರಳತೆ, ಸಜ್ಜನಿಕೆ, ಕರುಣೆ, ಅನುಕಂಪ, ಅಭಿಮಾನ, ಭಕ್ತಿಭಾವನೆ, ನಿರಾಡಂಬರ - ನಿಸ್ವಾರ್ಥ ಸೇವೆ ಅಪರೂಪ. ಇಂಥ ಅಪರೂಪದಲ್ಲೂ ಅಪರೂಪದ ವ್ಯಕ್ತಿ ದೊಡ್ಡಮರಳವಾಡಿ ವೀರಶೆಟ್ಟಯ್ಯ ರಾಜಶೇಖರನ್. ಬೆಂಗಳೂರಿನಿಂದ ೪೫ ಕಿ.ಮೀ. ದೂರದಲ್ಲಿರುವ ಕನಕಪುರ ತಾಲ್ಲೂಕಿನ ದೊಡ್ಡಮರಳವಾಡಿ ಗ್ರಾಮದಲ್ಲಿ ವೀರಶೈವ ಸಂಪನ್ನ ಪ್ರತಿಷ್ಠಿತ ಜೋಡಿದಾರರ ಕುಟುಂಬದಲ್ಲಿ ಶರಣ ಶ್ರೀ ಸಿ.ವೀರಶೆಟ್ಟಯ್ಯ ಮತ್ತು ಶಿವಶರಣೆ ಶ್ರೀಮತಿ ಬಸಮ್ಮನವರ ಜೇಷ್ಠಪುತ್ರರಾಗಿ ೧೨ನೇ ಸೆಪ್ಟೆಂಬರ್ ೧೯೨೮ರಲ್ಲಿ ಜನನ.

ಶ್ರೀ ಎಂ.ವಿ. ರಾಜಶೇಖರನ್‌ರವರ ವಂಶಸ್ಥರು ಆಗರ್ಭ ಶ್ರೀಮಂತರು, ಸಮಾಜದಲ್ಲಿ ಗೌರವಯುತ ಸ್ಥಾನಮಾನ ಹೊಂದಿದ್ದವರು. ಕನಕಪುರ ತಾಲ್ಲೂಕಿನ ೩೦-೪೦ ಗ್ರಾಮಗಳಲ್ಲಿ ಯಾವುದೇ ಮದುವೆ ಮುಂಜಿ, ಉತ್ಸವ, ಜಾತ್ರೆ, ಸಂತೆ, ಸಮಾರಂಭಗಳು ನಡೆದರೂ ಇವರ ಅಜ್ಜ ಶ್ರೀ ಮುದ್ದಮಲ್ಲಶೆಟ್ಟರ ಮುಂದಾಳತ್ವ. ಸುತ್ತಮುತ್ತಲ ಗ್ರಾಮದ ಜನರಿಗೆ ಇವರ ಮನೆಯೇ ನ್ಯಾಯಾಲಯವಾಗಿತ್ತು. ಶ್ರೀ ಮುದ್ದಮಲ್ಲಶೆಟ್ಟರೇ ನ್ಯಾಯಮೂರ್ತಿಯಾಗಿದ್ದರು. ನ್ಯಾಯ ತೀರ್ಮಾನಕ್ಕೆ ಮಧ್ಯವರ್ತಿಗಳ ಪ್ರವೇಶಕ್ಕೆ ಆಸ್ಪದವಿರುತ್ತಿರಲಿಲ್ಲ. ಎಲ್ಲಾ ವ್ಯಾಜ್ಯ ವೈಷಮ್ಯಗಳನ್ನು ಇವರು ಹಂಸಕ್ಷೀರ ನ್ಯಾಯದಂತೆ ನಿಷ್ಪಕ್ಷಪಾತವಾಗಿ ತೀರ್ಮಾನಿಸಿ ಉಭಯತ್ರರನ್ನೂ ಒಂದುಗೂಡಿಸಿ, ಸ್ನೇಹ ಸಾಮರಸ್ಯ ಮೂಡಿಸುತ್ತಿದ್ದರು. ಯಾರೂ ಕೋರ್ಟು ಕಚೇರಿಗೆ ಹೋಗುತ್ತಿರಲಿಲ್ಲ.

ಶ್ರೀ ಎಂ.ವಿ. ರಾಜಶೇಖರನ್‌ರವರ ತಂದೆ ಶ್ರೀ ಸಿ.ವೀರಶೆಟ್ಟಯ್ಯನವರು ಶಾಲಾ ಉಪಾಧ್ಯಾಯರಾಗಿದ್ದರು. ಇವರು ಉದ್ಧಾಮ ಪಂಡಿತರೂ ಆಗಿದ್ದರು. ರಾಜಶೇಖರ ವಿಳಾಸ ಮುಂತಾದ ವಿದ್ವತ್ ಗ್ರಂಥಗಳನ್ನು ಓದಿ ಕರಗತ ಮಾಡಿಕೊಂಡಿದ್ದರು. ವಂಶದ ಹಿರಿಯರ ಪರಂಪರೆ ಇವರ ಕಾಲದಲ್ಲೂ ಮುಂದುವರಿದಿತ್ತು. ಅವರ ತಂದೆಯಂತೆ ಇವರೂ ಜನಾನುರಾಗಿಯಾಗಿದ್ದರು.

ಇವರ ಧರ್ಮಪತ್ನಿ ಬಸಮ್ಮನವರು ಕೂಡ ಬಡವರ ಬಗ್ಗೆ ಅನುಕಂಪ ಹೊಂದಿದ್ದರು. ಕೊಡುಗೈ ದಾನಿಯಾಗಿದ್ದರು. ಸರಳ ಸಜ್ಜನಿಕೆಯ ಸಾಕಾರ ಮೂರ್ತಿಯಾಗಿದ್ದರು. ಸರ್ವಧರ್ಮ ಸಹಿಷ್ಣುತೆ ಈ ವಂಶಸ್ಥರ ವಿಶೇಷತೆ.

ಶ್ರೀ ಎಂ.ವಿ. ರಾಜಶೇಖರನ್‌ರವರ ಪ್ರಾಥಮಿಕ ವಿದ್ಯಾಭ್ಯಾಸ ಹುಟ್ಟೂರು ಮರಳವಾಡಿಯಲ್ಲಿ. ಹಾರೋಹಳ್ಳಿಯಲ್ಲಿ ಮಾಧ್ಯಮಿಕ ಶಾಲಾಭ್ಯಾಸ. ರಾಮನಗರ ತಾಲ್ಲೂಕು ಬಿಡದಿಯಲ್ಲಿ ಲೋಯರ್ ಸೆಕೆಂಡರಿ ಶಿಕ್ಷಣ. ನಂತರ ಕನಕಪುರಕ್ಕೆ ಪಯಣ. ಶ್ರೀ ದೇಗುಲ ಮಠದಲ್ಲಿ ವಾಸ್ತವ್ಯ. ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಮತ್ತು ಇಮ್ಮಡಿ ಮಹಾಲಿಂಗ ಸ್ವಾಮೀಜಿಯವರ ಅಚ್ಚುಮೆಚ್ಚಿನ ಶಿಷ್ಯ. ಶ್ರೀ ಕರಿಯಪ್ಪನವರ ಪ್ರೌಢಶಾಲೆಯಲ್ಲಿ ಎಸ್.ಎಸ್.ಎಲ್.ಸಿ.ವರೆಗೆ ಅಧ್ಯಯನ.

ಅಜ್ಜ ಶ್ರೀ ಮುದ್ದಮಲ್ಲಶೆಟ್ಟರ ಮತ್ತು ತಾಯಿ ಬಸಮ್ಮನವರ ಪ್ರಭಾವ ಇವರ ಮೇಲೆ ಅಪಾರವಾಗಿತ್ತು. ಅವರು ನಡೆಸುತ್ತಿದ್ದ ನ್ಯಾಯ ತೀರ್ಮಾನ, ದಾನ, ಧರ್ಮ, ಸೇವೆಗಳನ್ನು ಕಣ್ಣಾರೆ ನೋಡುತ್ತಿದ್ದ ಬಾಲಕ ರಾಜಶೇಖರನ್ ಅವೆಲ್ಲವನ್ನು ಮನನ ಮಾಡಿಕೊಂಡಿದ್ದರು. ತಾಯಿಯವರ ಸರಳತೆ, ಸಹೃದಯತೆ, ಬಡವರ ಬಗ್ಗೆ ಅನುಕಂಪ, ಗುರುಹಿರಿಯರಲ್ಲಿ ಗೌರವ, ಬಂಧುಬಳಗದಲ್ಲಿ ವಾತ್ಸಲ್ಯ-ಈ ಎಲ್ಲಾ ಗುಣಗಳು ಇಡಿಯಾಗಿ ಇವರಲ್ಲಿ ಅಂಕುರಾರ್ಪಣೆ ಯಾಗಿದ್ದವು.

ಇದರ ಜೊತೆಗೆ ದೇಗುಲಮಠದ ಶ್ರೀಗಳವರ ಮಮತೆ, ಆಶೀರ್ವಾದ ಮತ್ತು ಮಾರ್ಗದರ್ಶನದಲ್ಲಿ ಒಪ್ಪವಿಟ್ಟ ನಡೆ, ನುಡಿ, ವಿದ್ಯೆ, ಬುದ್ಧಿ, ಕಾಯಕ ತತ್ವದ ದೀಕ್ಷೆ ಮೊದಲೇ ಅಂಕುರಾರ್ಪಣೆಯಾಗಿದ್ದ ವಂಶಪಾರಂಪರ್ಯ ಗುಣವೈಶಿಷ್ಟ್ಯತೆಗಳ ವಿಕಸನಕ್ಕೆ ಅನುವು. ಬಾಹ್ಯ ಪ್ರಪಂಚದ ವಿದ್ಯಮಾನಗಳನ್ನು ತಿಳಿಯುವ ಕುತೂಹಲ. ಏನನ್ನಾದರೂ ಸಾಧಿಸುವ ಉತ್ಸುಕತೆ. ಎಲ್ಲಾ ಚಟುವಟಿಕೆಗಳಲ್ಲಿ ಮುಂದೆ ನಿಲ್ಲುವ ಚಾತುರ್ಯ ಬೆಳವಣಿಗೆ. ಇದಕ್ಕೆಲ್ಲ ಶ್ರೀಗಳಿಂದ ಸ್ಫೂರ್ತಿ, ಪ್ರೋತ್ಸಾಹ. ಈ ದಿಸೆಯಲ್ಲಿ ತಾನು ಮುಂದೆ ಉತ್ತಮ ವ್ಯಕ್ತಿಯಾಗಬೇಕೆಂಬ ಆಕಾಂಕ್ಷೆಯ ಮಿಂಚಿನ ಸಂಚಾರ.

ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಹಾಗೆಯೇ ಶ್ರೀ ಇಮ್ಮಡಿ ಮಹಾಲಿಂಗಸ್ವಾಮೀಜಿಯವರು ಮಠದಲ್ಲಿ ಓದುತ್ತಿದ್ದ ಹುಡುಗರ ಬಗ್ಗೆ ಹೊಂದಿದ್ದ ಮಮತೆ, ವಾತ್ಸಲ್ಯ ಮತ್ತು ವಿದ್ಯಾರ್ಥಿಗಳ ಭವ್ಯ ಭವಿಷ್ಯದ ಬಗೆಗಿನ ಕಾಳಜಿ, ಸ್ವತಃ ಶ್ರೀಗಳವರೆ ನಿಂತು ಊಟಕ್ಕೆ ತುಪ್ಪ ಬಡಿಸುತ್ತಿದ್ದ ಗುರುಶಿಷ್ಯ ಬಾಂಧವ್ಯದ ರಸನಿಮಿಷಗಳನ್ನು ಎಪ್ಪತ್ತೈದರ ಹರೆಯದ ರಾಜಶೇಖರನ್ ಇಂದಿಗೂ ಸ್ಮರಿಸಿಕೊಂಡು ಮೈಮರೆತು ಆನಂದಪಡುವುದನ್ನು ನೋಡಿದರೆ ನಮಗೂ ಅಂಥ ಅವಕಾಶ ಸಿಕ್ಕಿರಬಾರದಿತ್ತೆ ಎಂಬ ಆಸೆ ಯಾರಿಗಾದರೂ ಉಂಟಾಗದಿರದು.

ಕನಕಪುರದಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ನಂತರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ

ಮೈಸೂರಿಗೆ ಪಯಣ. ಯುವರಾಜ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ಅಭ್ಯಾಸ. ನಂತರ ಮಹಾರಾಜ ಕಾಲೇಜಿನಲ್ಲಿ ೧೯೫೩ರಲ್ಲಿ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ಪತ್ರಿಕೋದ್ಯಮ ವಿಷಯಗಳಲ್ಲಿ ಬಿ.ಎ. ಪದವಿ ಗಳಿಕೆ. ಮಹಾರಾಜ ಕಾಲೇಜಿನಲ್ಲಿ ಎಸ್.ಎಂ.ಕೃಷ್ಣ, ಜೆ.ಎಚ್.ಪಟೇಲ, ಹಾ.ಮಾ.ನಾಯಕ, ಯು.ಆರ್. ಅನಂತಮೂರ್ತಿ ಮುಂತಾದವರು ಆತ್ಮೀಯ ಸ್ನೇಹಿತರಾಗಿದ್ದರು.

ಮೈಸೂರಿನಲ್ಲಿ ಬಿ.ಎ.ಪದವಿ ಪಡೆದ ನಂತರ ಕಾನೂನು ಶಿಕ್ಷಣ ಪಡೆಯಲು ದೆಹಲಿಗೆ ಪಯಣ. ಮೈಸೂರಿನ ರಾಮಕೃಷ್ಣ ಮಠದ ಶ್ರೀ ರಂಗನಾಥಸ್ವಾಮಿಯವರ ಪ್ರೋತ್ಸಾಹ ಇದಕ್ಕೆ ಕಾರಣ. ೧೯೫೪-೫೫ರಲ್ಲಿ ದೆಹಲಿ ವಿಶ್ವವಿದ್ಯಾಲಯದಲ್ಲಿ ಕಾನೂನು ಶಿಕ್ಷಣ ಆರಂಭ. ವಿದ್ಯಾರ್ಥಿ ಸಂಘಟನೆ, ಸಂಘ-ಸಂಸ್ಥಾಪನೆಯಲ್ಲಿ ಸಕ್ರಿಯ ಹೋರಾಟ. ಈ ದಿಸೆಯಲ್ಲಿ ರಾಧಾಕೃಷ್ಣನ್, ಆಜಾದ್, ಜಾಕಿರ್ ಹುಸೇನ್, ನೆಹರು, ಇಂದಿರಾ ಗಾಂಧಿ, ಮೊರಾರ್ಜಿ ದೇಸಾಯಿ ಮುಂತಾದ ಗಣ್ಯ ವ್ಯಕ್ತಿಗಳ ಪರಿಚಯ. ತಂದೆಯವರ ಹಠಾತ್ ನಿಧನದಿಂದಾಗಿ ಕಾನೂನು ಪದವಿ ಅಭ್ಯಾಸ ಎರಡನೆಯ ವರ್ಷಕ್ಕೆ ನಿಲುಗಡೆ. ಕುಟುಂಬದ ಜವಾಬ್ದಾರಿ ಹೊರಲು ಹುಟ್ಟೂರಿಗೆ ಆಗಮನ. ಆದರೂ ಓದುವ ಆಕಾಂಕ್ಷೆ ಕೊನೆಗೊಳ್ಳಲಿಲ್ಲ. ೧೯೫೮ರಲ್ಲಿ ಅಮೆರಿಕದ ಮಿಸ್ಸೋರಿ ವಿಶ್ವವಿದ್ಯಾಲಯದಲ್ಲಿ ಕೃಷಿಗೆ ಸಂಬಂಧಿಸಿದ ವಿಷಯದಲ್ಲಿ ಅಲ್ಪಾವಧಿ ತರಬೇತಿ. ನಂತರ ಅದೇ ದೇಶದಲ್ಲಿನ ಕನ್ಸಾಸ್ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ, ಆರೋಗ್ಯ ಮತ್ತು ವಿಸ್ತರಣಾ ಸೇವೆಯಲ್ಲಿ ತಾಂತ್ರಿಕ ತರಬೇತಿ. ಗಳಿಕೆ-ಕಲಿಕೆ ಅವರ ಜೀವನ ಶೈಲಿ.

ದೆಹಲಿಯಲ್ಲಿ ಕಾನೂನು ಶಿಕ್ಷಣ ಪಡೆಯುತ್ತಿದ್ದಾಗ ಶ್ರೀ ನಿಜಲಿಂಗಪ್ಪನವರ ಪುತ್ರ ಶ್ರೀ ಉಮಾಕಾಂತರವರ ಸ್ನೇಹ, ಈ ಸ್ನೇಹ ಮುಂದೆ ಸಂಬಂಧವಾಗಿ ಮಾರ್ಪಾಡು. ಶ್ರೀ ನಿಜಲಿಂಗಪ್ಪನವರ ಪುತ್ರಿ ಗಿರಿಜಾರವರೊಡನೆ ವಿವಾಹ. ಇದಕ್ಕೆ ದಾಸಪ್ಪ ಯಶೋಧರಮ್ಮನವರದೂ ಪ್ರೇರಣೆ. ಇಬ್ಬರು ಪುತ್ರರು, ಇಬ್ಬರು ಪುತ್ರಿಯರು ಮತ್ತು ಐದು ಮಂದಿ ಮೊಮ್ಮಕ್ಕಳನ್ನು ಪಡೆದಿರುವ ಸಂತೃಪ್ತ ಜೀವನ ಇವರದು.

ಗ್ರಾಮೀಣಾಭಿವೃದ್ಧಿ ಮತ್ತು ಕೃಷಿಯಲ್ಲಿ ಆಧುನಿಕತೆ, ರೇಷ್ಮೆ ಕೃಷಿಯಲ್ಲಿ ಸಂಶೋಧನೆಗೆ ಒಲವು. ಸುಮಾರು ನಾಲ್ಕು ದಶಕಗಳಿಗೂ ಮೀರಿ ಈ ಕ್ಷೇತ್ರಗಳಲ್ಲಿ ದುಡಿಮೆ. ಇಂದಿಗೂ ದುಡಿಮೆ ಮುಂದುವರಿಕೆ.

**ಸಂಘಟನಾ ಶಕ್ತಿ** : ವಂಶಪರಂಪರೆಯಿಂದ ಪಡಿಮೂಡಿ ಬಂದಿರುವ ಸಂಘಟನಾ ಶಕ್ತಿಯನ್ನು ರಾಜಶೇಖರನ್ ಮೈಗೂಡಿಸಿಕೊಂಡಿದ್ದಾರೆ. ಪ್ರೌಢಶಾಲೆ ದಿನಗಳಲ್ಲೆ ಸಂಘ-ಸಂಸ್ಥೆಗಳ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರ. ರಾಜಕೀಯ ಅಧಿಕಾರಕ್ಕಿಂತ ಸಂಘ-ಸಂಸ್ಥೆಗಳ ಸ್ಥಾಪನೆ, ನಿರ್ವಹಣೆಯ ಆಕಾಂಕ್ಷೆ ಅಪಾರ. ಗ್ರಾಮೀಣ ಜನರ ಒಳಿತಿಗಾಗಿ, ರಾಜ್ಯದ ಹಿತಕ್ಕಾಗಿ, ದೇಶದ ಅಭ್ಯುದಯಕ್ಕಾಗಿ ತಮ್ಮನ್ನು ಸಮರ್ಪಣೆ ಮಾಡಿಕೊಂಡಿರುವ ಪರಮ ದೇಶಭಕ್ತ. ತಾಲ್ಲೂಕು ಮಟ್ಟದಿಂದ, ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದವರೆಗೆ ಕಟ್ಟಿ

ಬೆಳೆಸಿದ ಸಂಘ-ಸಂಸ್ಥೆಗಳು ಅಗಣಿತ. ಸಂಘ-ಸಂಸ್ಥೆಗಳ ಸದಸ್ಯರಾಗಿ, ಸಂಘಟಕರಾಗಿ, ಕಾರ್ಯದರ್ಶಿಯಾಗಿ, ನಿರ್ದೇಶಕರಾಗಿ, ಅಧ್ಯಕ್ಷರಾಗಿ ದುಡಿದಿರುವ ಶ್ರೀಯುತರು ಸಮಾಜಕ್ಕೆ ಅವುಗಳ ಲಾಭ ದೊರೆಯುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ವೈಯಕ್ತಿಕವಾಗಿಯಾಗಲಿ, ಸಾಮಾಜಿಕವಾಗಿಯಾಗಲಿ ಇಲ್ಲವೆ ರಾಜಕೀಯವಾಗಿಯಾಗಲಿ ಯಾವುದೇ ಕೆಲಸ ಮಾಡಬೇಕಾದರೂ ಅದಕ್ಕೆ ಸಮರ್ಪಣಾ ಭಾವನೆ ಮುಖ್ಯವಾಗಿರಬೇಕು. ರಚನಾತ್ಮಕ ಕಾರ್ಯದ ಚೌಕಟ್ಟನ್ನು ಹೊಂದಿರಬೇಕು. ಹಾಗಿದ್ದರೆ ಮಾತ್ರ ಆ ಕಾರ್ಯ ಯಶಸ್ವಿಯಾಗುತ್ತದೆ ಎಂಬ ನಿಲುವು ಅವರದು. ತಮ್ಮ ನಿಜಜೀವನದಲ್ಲಿ ಹಾಗೂ ರಾಜಕೀಯ ಜೀವನದಲ್ಲಿ ಇದೇ ನೀತಿ ಅಳವಡಿಸಿಕೊಂಡಿರುವರು.

ಶ್ರೀಯುತರು ಸ್ವಾತಂತ್ರ್ಯ ಚಳವಳಿಯಲ್ಲೂ ಪಾಲ್ಗೊಂಡಿದ್ದರು. ಭಾರತದ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಮೈಸೂರು ರಾಜ್ಯದ ಸೇರ್ಪಡೆಗೆ ಒತ್ತಾಯಿಸಿ ಇತರ ನಾಯಕರೊಡನೆ ಕನಕಪುರ ತಾಲ್ಲೂಕಿನಿಂದ ಮೈಸೂರಿಗೆ 'ಮೈಸೂರು ಚಲೊ' ಜಾಥಾ ನಡೆಸಿದ್ದರು. ಗಾಂಧೀಜಿಯವರನ್ನು ಭೇಟಿ ಮಾಡಲು ಮದ್ರಾಸಿಗೆ ತೆರಳಿದ್ದರು. ಕನಕಪುರ ತಾಲ್ಲೂಕು ಕಾಂಗ್ರೆಸ್ ಸಮಿತಿಯಿಂದ ಜಿಲ್ಲಾ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಕಾಂಗ್ರೆಸ್ ಸಾಂಸ್ಥಿಕ ಸಂಸ್ಥೆಗಳಲ್ಲಿ ಸದಸ್ಯರಾಗಿ, ಕಾರ್ಯದರ್ಶಿಯಾಗಿ, ಕಾರ್ಯಾಧ್ಯಕ್ಷರಾಗಿ, ವಿಶೇಷ ಆಹ್ವಾನಿತರಾಗಿ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಉಪಾಧ್ಯಕ್ಷರಾಗಿ, ಎಐಸಿಸಿ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ.

**ರಾಜಕಾರಣ** : ೧೯೬೭-೭೦ರಲ್ಲಿ ಕನಕಪುರ ಕ್ಷೇತ್ರದಿಂದ ಪ್ರಥಮ ಬಾರಿಗೆ ಲೋಕಸಭೆಗೆ ಆಯ್ಕೆ. ೧೯೬೭-೭೦ರಲ್ಲಿ ಭಾರತ ಸರ್ಕಾರದ ವಿದೇಶಾಂಗ ವ್ಯವಹಾರ ಸಚಿವಾಲಯದ ಸಲಹಾ ಸಮಿತಿ ಸದಸ್ಯತ್ವ. ೧೯೭೮-೮೨ರಲ್ಲಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಜನತಾ ಪಕ್ಷದಿಂದ ಆಯ್ಕೆ. ನಂತರ ಕಾಂಗ್ರೆಸ್ ಪಕ್ಷಕ್ಕೆ ಮರಳಿ ಸೇರ್ಪಡೆ. ಪ್ರಸ್ತುತ ರಾಜ್ಯಸಭಾ ಸದಸ್ಯರಾಗಿರುವರು.

**ವಿಶ್ವಪರ್ಯಟನೆ** : ಶ್ರೀಯುತರು ವಿಶ್ವದ ಬಹುಪಾಲು ರಾಷ್ಟ್ರಗಳನ್ನು ಸುತ್ತಿಬಂದಿದ್ದಾರೆ. ಆಫ್ರಿಕ, ಏಷ್ಯಾ, ಯೂರೋಪ್, ಉತ್ತರ ಅಮೆರಿಕ, ಲ್ಯಾಟಿನ್ ಅಮೆರಿಕಾದ ಎಲ್ಲಾ ದೇಶಗಳಿಗೂ ಭೇಟಿ ನೀಡಿ ಬಂದಿದ್ದಾರೆ. ಅವರು ಭಾಗವಹಿಸಿರುವ ಅಂತರರಾಷ್ಟ್ರೀಯ ಸಮ್ಮೇಳನಗಳು, ಮಂಡಿಸಿದ ಲೇಖನಗಳು ಅಪಾರ.

**ಸಮಾಜದ ಬಗ್ಗೆ ಅನಿಸಿಕೆ** : ಅವರು ಕಂಡಂತೆ ಎರಡು ದಶಕದ ಹಿಂದಿನ ಸಮಾಜ ಎಲ್ಲಾ ರೀತಿಯಲ್ಲೂ ಉತ್ತಮವಾಗಿದ್ದಿತು. ಶಿಸ್ತು, ಸಂಯಮ, ಸೇವಾ ಭಾವನೆ ಇತ್ತು. ಗುರುಹಿರಿಯರಲ್ಲಿ ಗೌರವವಿತ್ತು. ದೇಶಭಕ್ತಿ ಮುಖ್ಯವಾಗಿತ್ತು. ಕಾಯಕ ನಿಷ್ಠೆ, ಸಹಬಾಳ್ವೆ, ಧರ್ಮ, ಸಂಸ್ಕೃತಿ, ಆಚಾರ ವಿಚಾರಗಳು ಉತ್ತಮವಾಗಿದ್ದವು. ಕೋಮು ಸಾಮರಸ್ಯ ಚೆನ್ನಾಗಿತ್ತು ಎಂದು ತೃಪ್ತಿ ವ್ಯಕ್ತಪಡಿಸುವ ಶ್ರೀಯುತರು ಇಂದಿನ ಸಮಾಜದ ಬಗ್ಗೆ, ರಾಜಕೀಯ ಬೆಳವಣಿಗೆ ಬಗ್ಗೆ ವಿಷಾದಪಡುವರು. ಇಂದಿನ ಸಾಮಾಜಿಕ ವಾತಾವರಣ ಅಸಹ್ಯಪಡುವಷ್ಟು ಕೆಟ್ಟಿದೆ.

ಎಲ್ಲಾ ಸದ್ಗುಣಗಳೂ ಮೂಲೆಗುಂಪಾಗಿ ಹಣ ಸಂಪಾದನೆ, ವೈಭವ ಜೀವನ ಮುಖ್ಯವಾಗಿದೆ ಎಂದು ಆಕ್ರೋಶಪಡುವ ಅವರು, ರಾಜಕೀಯದಲ್ಲೂ ಅರಾಜಕತೆ ತಲೆದೋರಿದೆ. ಅನುಭವಕ್ಕೆ ಬೆಲೆಯಿಲ್ಲದಾಗಿದೆ. ಅಧಿಕಾರದ ದಾಹ ಅಧಿಕವಾಗಿದೆ. ಶಿಸ್ತು, ಗೌರವ, ಬುದ್ಧಿವಂತಿಕೆಗೆ ಎಡೆಯಿಲ್ಲದಾಗಿ ರಾಷ್ಟ್ರಪ್ರೇಮ ಬತ್ತಿಹೋಗಿದೆ ಎಂಬ ಖಿನ್ನತೆ ಅವರದು.

**ವೀರಶೈವ ಮಠಗಳು :** ಅನಾದಿ ಕಾಲದಿಂದಲೂ ವೀರಶೈವ ಮಠಮಾನ್ಯಗಳು ಸಮಾಜ ಸುಧಾರಣೆಯಲ್ಲಿ ಪ್ರಮುಖ ಪಾತ್ರವಹಿಸಿವೆ ಎಂದು ಅಧಿಕಾರವಾಣಿಯಿಂದ ಹೇಳುವ ರಾಜಶೇಖರನ್, ವೀರಶೈವ ಮಠಗಳು ಸಮಾಜದ ಸರ್ವಧರ್ಮೀಯರಿಗೂ ವಿದ್ಯಾದಾನ ನೀಡುವುದರ ಜೊತೆಗೆ ಭಕ್ತಿ ಭಾವನೆ, ಆಚಾರವಿಚಾರ ಕಾಯಕತತ್ವವನ್ನು ಬೋಧಿಸುತ್ತಾ ಜನಜೀವನವನ್ನು ಒಪ್ಪಗೊಳಿಸುವ ಕೈಂಕರ್ಯದಲ್ಲಿ ನಿರತವಾಗಿವೆ ಎಂದು ಅಭಿಮಾನಪಡುವ ಅವರು ಮಠಗಳು ವಿದ್ಯಾದಾನಕ್ಕೆ ಕೊಟ್ಟಿರುವ ಮಹತ್ವದ ಜೊತೆಗೆ, ರಾಷ್ಟ್ರದ ಸ್ವಾತಂತ್ರ್ಯ ಗಳಿಕೆಗೆ, ಕಲೆ, ಸಾಹಿತ್ಯ ಬೆಳವಣಿಗೆಗೆ ಅಪಾರ ಕೊಡುಗೆ ನೀಡಿವೆ ಎಂದು ಸಂತಸಪಡುವರು.

***

# ಅಪರೂಪದ ಸಮಾಜ ಸೇವಕರು

ಎಂ. ನಾಗೇಗೌಡ

ಎಂ.ವಿ. ರಾಜಶೇಖರನ್ ಹಿರಿಯರು. ತತ್ವಬದ್ಧತೆಯಿಂದ ರಾಜಕಾರಣ ಮಾಡುತ್ತಿರುವ ನಮ್ಮ ನಡುವಿನ ಅಪರೂಪದ ಸಮಾಜ ಸೇವಕರು. ಅವರು ದೇಗುಲಮಠದಲ್ಲಿ ಓದುತ್ತಿದ್ದ ದಿನಗಳಿಂದ ನನಗೆ ಪರಿಚಿತರು. ವಿದ್ಯಾರ್ಥಿದೆಸೆಯಿಂದಲೇ ಗಾಂಧೀ ಮಾರ್ಗದಿಂದ ಹೋರಾಟ ಮಾಡುತ್ತಿದ್ದ ಸ್ವಭಾವ ಅವರದ್ದು. ೧೯೪೨ರಲ್ಲಾಗಲೇ ಚಲೇಜಾವ್ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೆಲ್ಲರ ಗಮನ ಸೆಳೆದಿದ್ದರಂತೆ. ೧೯೪೭ರಲ್ಲಿ ಭಾರತ ಸ್ವಾತಂತ್ರ್ಯವನ್ನು ಪಡೆದು ಕೊಂಡಾಗ ಕನಕಪುರದಲ್ಲಿ ತ್ರಿವರ್ಣ ಧ್ವಜವನ್ನು ಹಾರಿಸಿ ಅವರೊಡನೆ ಸಂತೋಷಪಟ್ಟವರಲ್ಲಿ ನಾನೂ ಕೂಡಾ ಒಬ್ಬನಾಗಿದ್ದೆ. ನಾನಾಗ ಸಣ್ಣ ಹುಡುಗ. ನನಗೆ ಅದು ಚೂರು-ಪಾರು ನೆನಪು. ಅದಾದ ನಂತರ ಮೈಸೂರು ಸಂಸ್ಥಾನವನ್ನು ಜವಾಬ್ದಾರಿ ಸರ್ಕಾರದ ಒಕ್ಕೂಟದಡಿಗೆ ತರಲು 'ಮೈಸೂರು ಚಲೋ' ರ್‍ಯಾಲಿಯನ್ನು ಸಂಘಟಿಸಿದ್ದು ಎಲ್ಲರಲ್ಲೂ ಸೋಜಿಗ ಮೂಡಿಸಿತ್ತಂತೆ. ಸುಮಾರು ೪೦೦ ರಿಂದ ೬೦೦ ಜನರು ಕೇವಲ ಕನಕಪುರವೊಂದರಿಂದಲೇ ಆ ಐತಿಹಾಸಿಕ ಕಾಲ್ನಡಿಗೆಯಲ್ಲಿ ಭಾಗವಹಿಸಿದ್ದರಂತೆ. ಈಗ ಅದೊಂದು ಚರಿತ್ರೆಯಾಗಿದೆ. ಭಾರತ, ಹಾಗೆಯೇ ಮೈಸೂರು ಸಂಸ್ಥಾನ ಜವಾಬ್ದಾರಿಯುತ ಪ್ರಜಾ ಸರ್ಕಾರವನ್ನು ಸ್ಥಾಪಿಸಿಕೊಂಡು ಅಭಿವೃದ್ಧಿಯ ಪಥದಲ್ಲಿ ಸಾಗುತ್ತಿದೆ. ಆರು ದಶಕಗಳ ಈ ಸಾರ್ಥಕ ಅವಧಿಯಲ್ಲಿ ಸಂಪೂರ್ಣ ರಾಜಕೀಯ ಚಿತ್ರಣ ಬದಲಾಗಿದೆ. ರಾಜಶೇಖರನ್ ಇನ್ನೂ ರಾಜಕಾರಣದಲ್ಲಿ ಸಕ್ರಿಯವಾಗಿದ್ದಾರೆ. ಅವರ ತ್ಯಾಗ, ಸಂಕಲ್ಪಗಳನ್ನು ಗಮನಿಸಿ ಅವರ ರಾಜಕಾರಣದ ಮಜಲುಗಳನ್ನು ನೋಡಿದಾಗ ಒಂದು ರೀತಿಯ ಸಖೇದಾಶ್ಚರ್ಯವಾಗುತ್ತದೆ. ಅವರು ನಂಬಿಕೊಂಡ ಆದರ್ಶಗಳು ಇಂದಿಗೂ ಜೀವಂತವಾಗಿವೆ ಎಂದಷ್ಟೇ ಹೇಳಬಲ್ಲೆ. ಏಕೆಂದರೆ ಅವರಿನ್ನೂ ಸಕ್ರಿಯ ರಾಜಕಾರಣಿಗಳು ಮತ್ತು ಸಂಸತ್ತಿನ ಮೇಲ್ಮನೆ ಸದಸ್ಯರು. ಅವರ ಅನುಭವ, ಆದರ್ಶ, ಮುತ್ಸದ್ದಿತನಗಳನ್ನೂ ನೋಡಿದಾಗ ಅವರು ಈಗಾಗಲೇ ಎಂಥೆಂಥ ರಾಜಕೀಯ ಹುದ್ದೆಗಳನ್ನು ಅನುಭವಿಸಬೇಕಾಗಿತ್ತಿತ್ತು ಅನ್ನಿಸುತ್ತದೆ.

ಕರ್ನಾಟಕದ ಅರ್ಥಾತ್ ಭಾರತೀಯ ರಾಜಕಾರಣ ನಮ್ಮ ಸಂದರ್ಭದಲ್ಲಿ ಹಲವು ಹೊಸ ಆಯಾಮಗಳನ್ನು ಕಂಡುಕೊಂಡಿದೆ. ತುಂಬಾ ಸಭ್ಯರಾದ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ಅಪಥ್ಯವಾದ ಎಷ್ಟೋ ವಿಚಾರಗಳು ರಾಜಕೀಯದಲ್ಲಿವೆ. ಇಂತಹ ವಿಚಾರಗಳ ಜೊತೆಗೆ ಅವರು ರಾಜಿ ಮಾಡಿಕೊಳ್ಳುತ್ತಿಲ್ಲ. ಅವರ ಸೌಮ್ಯತಾವಾದ, ಮೃದು ಧೋರಣೆಗಳು ನಮ್ಮ ಸಂದರ್ಭದ ರಾಜಕಾರಣಕ್ಕೆ ಬೇಕಾಗಿಲ್ಲ. ಆದುದರಿಂದಲೇ ಅವರಿಂದ ಅನೇಕ ಹುದ್ದೆಗಳು ವಂಚಿತಗೊಂಡಿವೆ. ಮನಸ್ಸು ಮಾಡಿದ್ದರೆ ಅವರು ಎಂದೋ ಏನೋ ಆಗಬಹುದಾಗಿತ್ತು. ಏಕೆಂದರೆ ಅವರು ಇಂದಿರಾ ಗಾಂಧಿಯವರ 'ಯಂಗ್ ಟರ್ಕ್'ನಲ್ಲಿದ್ದವರು. ಅವರ ಜೊತೆಗಿದ್ದ ಐ.ಕೆ.ಗುಜ್ರಾಲ್, ಚಂದ್ರಶೇಖರ್ ರಾಷ್ಟ್ರದ ಪ್ರಧಾನಿಯಾಗಿ ಹೋದರು. ಅರ್ಜುನ್ ಸಿಂಗ್, ದಿನೇಶ್‌ಸಿಂಗ್ ಮುಂತಾದವರು ರಾಷ್ಟ್ರಮಟ್ಟದಲ್ಲಿ ಮಿಂಚಿದರು. ಆದರೆ ಕರ್ನಾಟಕದ ರಾಜಕಾರಣ ೧೯೬೭ರಲ್ಲಿ ಬಿಟ್ಟರೆ ೧೯೯೯ರ ವರೆಗೆ ಅವರನ್ನು ದೆಹಲಿಗೆ ಕಳಿಸಲು ಹಿಂಜರಿಯಿತು. ಪರಿಣಾಮವಾಗಿ ಒಬ್ಬ ನಿಸ್ವಾರ್ಥ, ಕ್ರಿಯಾಶೀಲ, ರಾಜಕಾರಣಿಯನ್ನು ಕರ್ನಾಟಕದ ಜನತೆ ಚುನಾವಣೆ ಎಂಬ ಹಗ್ಗದಲ್ಲಿ ಕಟ್ಟಿಹಾಕಿದ್ದಾರೆ. ಅವರ ರಾಜಕೀಯದ ಹಾವು-ಏಣಿ ಆಟವೇನೇ ಇರಲಿ ನಿಸ್ವಾರ್ಥ ಮನಸ್ಸಿನಿಂದ ಅವರು ಜನಸೇವೆ ಮಾಡುತ್ತಿದ್ದಾರೆ.

ನಾನೂ ಮೊದಲಿನಿಂದಲೂ ಕಾಂಗ್ರೆಸ್ ಪಕ್ಷದಲ್ಲಿದ್ದವನು. ಪಕ್ಷದಲ್ಲಿ ಅವರಿಗೆ ಉನ್ನತವಾದ ಗೌರವವಿದೆ. ಇಂತಹ ಒಬ್ಬರಿಂದಲೇ ಪಕ್ಷ ತನ್ನ ನೆಲೆಗಟ್ಟನ್ನು ಭದ್ರಪಡಿಸಿಕೊಂಡಿದೆ. ಕನಕಪುರದಂತಹ ಅತಿದೊಡ್ಡ ಕ್ಷೇತ್ರ ಅವರ ಜಾತಿಯ ಹಿನ್ನೆಲೆಯನ್ನಾಗಲೀ, ಅವರ ಪಕ್ಷದ ಹಿನ್ನೆಲೆಯನ್ನಾಗಲೀ ೧೯೬೭ರಲ್ಲಿ ನೋಡಿ ಅವರನ್ನು ಲೋಕಸಭೆಗೆ ಆರಿಸಿಕೊಳ್ಳಲಿಲ್ಲ. ಅವರ ವ್ಯಕ್ತಿತ್ವವನ್ನು ನೋಡಿ ಆರಿಸಿತು. ಅವರು ಮತ್ತೊಮ್ಮೆ ಲೋಕಸಭೆಗೆ ಆಯ್ಕೆ ಬಯಸಿ ಕನಕಪುರದಿಂದ ಸ್ಪರ್ಧಿಸಿದ್ದರು. ಆದರೆ ಸಾತನೂರು ಘಟನೆಯ ಹಿನ್ನೆಲೆಯ ಅನಿವಾರ್ಯ ಬೆಳವಣಿಗೆಯಿಂದಾಗಿ ಅವರು ಅದರಿಂದ ವಂಚಿತರಾದರು. ಅನಂತರದ ಚುನಾವಣೆಗಳಲ್ಲಾಗಲೇ ಕರ್ನಾಟಕದ ರಾಜಕಾರಣ ಮತ್ತೊಂದು ತಿರುವನ್ನು ಪಡೆದುಕೊಂಡಿತು. ಆಗ ರಾಜಶೇಖರನ್ ಅಪ್ರಸ್ತುತರಾಗುತ್ತಾ ನಡೆದರು. ಆದರೆ ಅವರ ನಿಸ್ವಾರ್ಥ ಮನಸ್ಸು ಮತ್ತು ತತ್ವಾದರ್ಶಗಳು ಕಾಂಗ್ರೆಸ್ ಪಕ್ಷಕ್ಕೆ ಬೇಕಾದ್ದರಿಂದ ಉತ್ತರೋತ್ತರ ಅವರಿಗೆ ಉತ್ತಮ ಅವಕಾಶಗಳು ಕಾದಿವೆಯೆಂಬುದೇ ನನ್ನ ಅಭಿಪ್ರಾಯ. ರಾಜಕೀಯದಲ್ಲಿ ಬದ್ಧ ಶತ್ರುವಾಗಿದ್ದರೂ ನಿಜಜೀವನದಲ್ಲಿ ರಾಜಶೇಖರನ್ ಅವರನ್ನು ಗೆಳೆಯರಂತೆ, ಆತ್ಮೀಯರಂತೆ ಕಾಣುತ್ತಿದ್ದುದು ಎಲ್ಲರಿಗೂ ಆಶ್ಚರ್ಯ ತರುತ್ತಿದ್ದಿತು. ಚಂದ್ರಶೇಖರಮೂರ್ತಿಯವರು ಒಮ್ಮೆ ಅವರ ವಿರುದ್ಧ ಗೆದ್ದಾಗ ಮತ್ತು ಪಿ.ಜಿ.ಆರ್.ಸಿಂಧ್ಯಾರವರು ಅವರ ವಿರುದ್ಧ ಚುನಾವಣೆಯಲ್ಲಿ ಗೆದ್ದಾಗಲೂ ಅವರನ್ನು ಅಭಿನಂದಿಸಿ ಮಾಲೆಯನ್ನು ಹಾಕಿ ಕ್ಷೇತ್ರದ ಜನತೆಯ ಕಲ್ಯಾಣಕ್ಕೆ ಇಬ್ಬರೂ ಸೇರಿ ದುಡಿಯೋಣ ಎಂದು ಹೇಳುವ ರೀತಿಯಂತೂ ನಮ್ಮ ಮುಂದಿನ ಪೀಳಿಗೆಗೆ ಆದರ್ಶಪ್ರಾಯವಾಗಿದೆ. ಅವರ ಎಪ್ಪತ್ತೈದು ವರ್ಷಗಳ ಈ ಸಂದರ್ಭದಲ್ಲಿ ಭಗವಂತ ಅವರಿಗೆ ಸಕಲವನ್ನೂ ಕರುಣಿಸಲಿ ಎಂದು ದೇವರಲ್ಲಿ ಪ್ರಾರ್ಥಿಸಿಕೊಳ್ಳುವೆ.

# ಪ್ರೇರಕ ಶಕ್ತಿ

● ಸಿ.ಪಿ. ಸದಾಶಿವಯ್ಯ

ನನಗೆ ೭೩ ವರ್ಷ. ಕೃಷಿ ಕ್ಷೇತ್ರ ಮತ್ತು ಕೃಷಿ ಉಪಕರಣಗಳ ತಯಾರಿಕೆ ಬಿಟ್ಟು ನನಗೇನೂ ಗೊತ್ತಿಲ್ಲ. ಆ ಕ್ಷೇತ್ರದಲ್ಲಿ ಹೊಸ ಆವಿಷ್ಕಾರಗಳನ್ನು ಮಾಡಿ ರೈತರಿಗೆ ನೆರವು ಕೊಡವುದಷ್ಟೇ ನನ್ನ ಜೀವಿತದ ಗುರಿ. ೧೯೫೬ರಲ್ಲಿ ತುಮಕೂರಿನಲ್ಲಿ ಇದಕ್ಕಾಗಿ 'ಶಿವ ಇಂಡಸ್ಟ್ರೀಸ್' ಪ್ರಾರಂಭಿಸಿದೆ. ಸ್ವಾತಂತ್ರ್ಯ ನಮ್ಮಂತಹ ಯುವಕರಿಗೆ ೪೭ರ ನಂತರ ಕೆಲಸವಾದರೂ ಏನು. ಇಂದಿನ ಡಿ.ಸಿ. ಬಂಗ್ಲೆ ಹತ್ತಿರ ಹತ್ತು ಎಕರೆ ನನ್ನ ಜಮೀನಿತ್ತು. ಅಲ್ಲಿ ವ್ಯವಸಾಯ ಮಾಡಲು ಪ್ರಾರಂಭಿಸಿದೆ. ಸಿ.ಆರ್.ಬಸಪ್ಪನವರು ನನ್ನ ಚಿಕ್ಕಪ್ಪ. ನಿಜಲಿಂಗಪ್ಪ ಅವರು ೪೦ರ ದಶಕದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಜೈಲು ಸೇರಿದಾಗ ಅವರ ಲಾಯರ್ ಆಫೀಸ್ ನೋಡಿಕೊಂಡವರು ನನ್ನ ಚಿಕ್ಕಪ್ಪ. ನಿಜಲಿಂಗಪ್ಪನವರ ಏಕೀಕರಣದ ಹೋರಾಟ ಹಾಗೂ ನೀರಾವರಿ ವಿಚಾರದಲ್ಲಿ ಅವರಿಗಿರುವ ಬದ್ಧತೆ ನನಗೆ ಮೊದಲಿನಿಂದಲೂ ತಿಳಿದ ವಿಚಾರವಾಗಿತ್ತು. ನಾನು ಕೃಷಿಯನ್ನು ಸಾಂಪ್ರದಾಯಿಕ ವಾತಾವರಣದಲ್ಲಿ ಆರಂಭಿಸಿದ್ದೇನೊ ನಿಜ. ಆದರೆ ಅದರಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಂಡ ನಂತರ ನನಗೆ ಅಲ್ಲಿನ ಕೊರತೆಗಳು ಗೋಚರವಾಗತೊಡಗಿದವು. ರೈತರಿಗೆ ಸಹಾಯಕವಾಗುವ ಕೃಷಿ ಉಪಕರಣಗಳೇ ಅಲ್ಲಿರಲಿಲ್ಲ. ಹಳೇ ಕಾಲದ ನೇಗಿಲು, ಹಾರೆ, ಕೂರಿಗೆ, ಗಾಡಿ ಮೊದಲಾದವುಗಳಿದ್ದವೇ ಹೊರತು ರೈತನ ಶ್ರಮ ಹಾಗೂ ಸಮಯವನ್ನು ಉಳಿಸುವ ದಿಶೆಯಲ್ಲಿ ಯಾರೂ ಯೋಚಿಸಿರಲಿಲ್ಲ. ೧೯೫೫-೫೬ರ ಸಮಯದಲ್ಲಿ ಇದಕ್ಕಾಗಿ ನಾನು "ಶಿವ ಇಂಡಸ್ಟ್ರೀಸ್" ಎಂಬ ಸಣ್ಣ ಉದ್ಯಮ ಸ್ಥಾಪಿಸಿದೆ. ನಾನೇ ಕಬ್ಬಿಣ ಬಡಿದು ಬೇಕಾದ ಉಪಕರಣಗಳನ್ನು ತಯಾರಿಸಿಕೊಂಡೆ. ರೈತರಿಗೆ ಉಪಯುಕ್ತವಾಗುವ ಉಪಕರಣಗಳು ಸಿದ್ಧವಾದವು. ಕೇವಲ ೧೬೦ ರೂ.ಗಳ ಬಂಡವಾಳ ದೊಡನೆ ಪ್ರಾರಂಭವಾದ ಈ ಉದ್ಯಮ ದೇಶದಾದ್ಯಂತ ಜನರನ್ನು ಆಕರ್ಷಿಸಿತು. ವಿಶ್ವಸಂಸ್ಥೆಯು ನಾನು ತಯಾರಿಸಿದ "ಟ್ರಾಕ್ಟರ್ ಮೌಂಟೆಡ್ ಮಲ್ಟಿ ಪರ್ಪಸ್ ಡೀಪ್ ಟ್ರೆಂಚರ್" ಉಪಕರಣಕ್ಕೆ ಪ್ರಶಸ್ತಿ ಕೊಟ್ಟಿದೆ. ಅದೇ ರೀತಿ ಇಲ್ಲಿ ಸಿದ್ಧವಾದ ಸೀಮೆ ನೇಗಿಲು ಸರ್ವಜನಾದರಣೀಯ

ವಾಯಿತು. ನನ್ನ ಕೃಷಿ ಉಪಕರಣಗಳಿಗೆ ದೆಹಲಿಯ NRDC (National Research Development Corporation) ಪ್ರಶಸ್ತಿ ಕೂಡಾ ಬಂದಿದೆ. ವಿಶ್ವಸಂಸ್ಥೆಯ ಪ್ರಶಸ್ತಿ ಪಡೆದ ವಿವಿಧೋದ್ದೇಶದ ಟ್ರಾಕ್ಟರ್ ತೋಟಗಾರಿಕೆಗೆ ತುಂಬಾ ಉಪಯುಕ್ತ ಉಪಕರಣವೆನ್ನಿಸಿತು. ಟ್ರೆಂಚ್ ತೆಗೆದು ಏಕಕಾಲದಲ್ಲಿ ಮಣ್ಣು ಹೊರಹಾಕುವ ಈ ಉಪಕರಣ ಕೃಷಿ ವಿಜ್ಞಾನಿಗಳಿಗೆ ಅಚ್ಚರಿ ಮೂಡಿಸಿತು. ಖ್ಯಾತ ಕೃಷಿ ವಿಜ್ಞಾನಿ ಡಾ। ಕೆ.ಸಿ. ನಾಯ್ಕ್ ನನ್ನ ವರ್ಕ್‌ಷಾಪ್‌ನಲ್ಲಿ ಎರಡುಮೂರು ದಿನ ಕುಳಿತು ಇಂತಹ ಉಪಕರಣದ ಬಗೆಗೆ ಚರ್ಚೆ ನಡೆಸಿದ್ದಾರೆ. ಕೃಷಿ ಕ್ಷೇತ್ರದಲ್ಲಿ ಹೊಸ ಅನ್ವೇಷಣೆಗಳಿಗಾಗಿ NRDC ನನ್ನನ್ನು ನಿರಂತರವಾಗಿ ಬೆಂಬಲಿಸುತ್ತಾ ಬಂದಿದೆ. ರಾಜ್ಯ ಸರ್ಕಾರ ಕೃಷಿ ಇಲಾಖೆಯ ಮೂಲಕ ನನಗೆ "ಕೃಷಿ ಪಂಡಿತ" ಎಂಬ ಪ್ರಶಸ್ತಿ ಕೊಟ್ಟಿದೆ. ಈ ಎಲ್ಲ ವಿವರಗಳನ್ನು ಏಕೆ ಹೇಳುತ್ತಿದ್ದೇನೆಂದರೆ ಇದರ ಪ್ರೇರಕ ಶಕ್ತಿ ಎಂ.ವಿ.ರಾಜಶೇಖರನ್ ಅವರಿಗಿದ್ದಾರೆಂಬುದು ಮುಖ್ಯವಾದ ಅಂಶ.

೧೯೫೦ರಿಂದಲೂ ಎಂ.ವಿ.ರಾಜಶೇಖರನ್ ಅವರು ನನಗೆ ಚಿರಪರಿಚಿತರು. ಪ್ರಗತಿಪರ ಕೃಷಿಕರಾಗಿದ್ದ ಅವರು ವೃತ್ತಿ ಕಾಲಂನಲ್ಲಿ ಶೋಕಿಗಾಗಿ 'ಕೃಷಿಕ'ರೆಂದು ಬರೆದವರಲ್ಲ. ಕೃಷಿಯ ಬಗೆಗೆ ಅಪಾರ ಪ್ರೀತಿಯಿದ್ದು ಅವರು ತುಂಬಾ ನಿಷ್ಠೆಯಿಂದ ವ್ಯವಸಾಯ ಮಾಡುತ್ತಿದ್ದರು. ಈ ಕ್ಷೇತ್ರದ ಒಳಗೂ ಹೊರಗೂ ಅವರಿಗೆ ಚೆನ್ನಾಗಿ ಗೊತ್ತಿತ್ತು. ನೈಜ ಅರ್ಥದಲ್ಲಿ ಅವರನ್ನು ಮಣ್ಣಿನಮಗನೆಂದು ಕರೆಯಬೇಕು. ಅವರ ತಂದೆಯ ಕಾಲದಿಂದಲೂ ಅವರು ಜಮೀನ್ದಾರರು. ನೂರು ಎಕರೆ ಅವರ ಜಮೀನನ್ನು ಯಾರಿಗೋ ವಾರಕ್ಕೆ ಕೊಟ್ಟು ಪಟ್ಟಣದಲ್ಲಿ ಜೀವಿಸುತ್ತಿದ್ದವರಲ್ಲ, ಕೃಷಿಯೇ ಅವರ ಪ್ರಮುಖ ಜೀವನಾಧಾರವಾಗಿತ್ತು. ೧೯೪೦ರಿಂದಲೂ ಅವರ ಮರಳವಾಡಿ ಜಮೀನಿಗೆ ಹಲವು ಸಲ ಹೋಗಿ ಬಂದಿದ್ದೇನೆ. ತುಮಕೂರಿನಿಂದ ರೈಲಿನಲ್ಲೋ ಅಥವಾ ಬಸ್‌ನಲ್ಲೋ ಹೋಗುವುದು ನನ್ನ ಅಭ್ಯಾಸ. ಸ್ವಲ್ಪ ಕಾಲ ನನಗೆ ಬೇಕಾದವರೊಬ್ಬರನ್ನು ಅವರ ಜಮೀನು ನೋಡಿಕೊಳ್ಳೋದಕ್ಕೆ ಮ್ಯಾನೇಜರ್‌ರನ್ನಾಗಿ ನೇಮಿಸಿದ್ದೆ.

ಎಂ.ವಿ.ರಾಜಶೇಖರನ್ ಅವರ ಮನೋಭಾವ ಅವರ ಕೃಷಿ ಚಟುವಟಿಕೆಯಲ್ಲಿ ಚೆನ್ನಾಗಿ ಪ್ರತಿಬಿಂಬಿತವಾಗಿದೆ. ರಾಸಾಯನಿಕ ಗೊಬ್ಬರವನ್ನೇ ನೆಚ್ಚಿಕೊಳ್ಳದೆ ನಮ್ಮ ಕೊಟ್ಟಿಗೆ ಗೊಬ್ಬರವನ್ನು ಬಳಸಿ ಉತ್ತಮ ಬೆಳೆ ತೆಗೆದು ದಾಖಲೆ ಮಾಡಿದ್ದಾರೆ. ತಮ್ಮ ಭೂಮಿಯನ್ನು ಸರಿಯಾಗಿ ವಿಂಗಡಿಸಿ ಅದರಲ್ಲಿ ಎಲ್ಲ ರೀತಿಯ ಬೆಳೆ ತೆಗೆದಿದ್ದಾರೆ. ಅವರೇಕಾಳು, ತೆಂಗು, ರಾಗಿ, ಸಪೋಟ, ಬತ್ತ, ತರಕಾರಿ ಹೀಗೆ ವೈವಿಧ್ಯಮಯ ಬೆಳೆಗಳನ್ನು ತೆಗೆಯುವ ರಾಜಶೇಖರನ್ ದೂರದೃಷ್ಟಿಯುಳ್ಳ ರೈತರು. ಎಷ್ಟೋ ಜನಗಳಿಗೆ ಗೊತ್ತಿಲ್ಲ-ಅವರು ಹೊಗೆಸೊಪ್ಪು ಬೆಳೆದು ನೂತನ ಪ್ರಯೋಗ ನಡೆಸಿದ್ದಾರೆ. ಸೀಮೆಹಸುಗಳನ್ನು ಸಾಕಿ ಪಶುಸಂಗೋಪನೆಯಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿದ್ದಾರೆ. ಒಟ್ಟಾರೆ ಕೃಷಿ ಚಟುವಟಿಕೆ ರೈತರನಿಗೆ ಆರ್ಥಿಕ ಚೈತನ್ಯ ತಂದುಕೊಡಬೇಕೆಂಬ ಹಂಬಲ ಅವರಲ್ಲಿತ್ತು. ಜಮೀನು ಕೆಲಸವನ್ನು ಯಾರಿಗೋ ವಹಿಸಿ ಕೈಕಟ್ಟಿ ಕುಳಿತುಕೊಂಡವರಲ್ಲ. ತಾವೇ ಜಮೀನಿಗೆ ಹೋಗಿ ಅಲ್ಲಿಗೆ ಏನು ಬೇಕೋ ಅದನ್ನು ತಂದುಕೊಡುತ್ತಿದ್ದರು. ಒಮ್ಮೆ

ನೆಲಮಂಗಲದ ಅವರ ಜಮೀನಿಗೆ ಬೇಕಾದ ಸಿಮೆಂಟ್ ಪೈಪನ್ನು ಲಾರಿಯಲ್ಲಿ ಹಾಕಿಕೊಂಡು ಹೋಗಿದ್ದೇವೆ.

ಬೆಂಗಳೂರಿನಲ್ಲಿರುವ 'ಕೃಷಿಕ ಸಮಾಜ'ದ ಕಲ್ಪನೆ ಯಾರದ್ದು? ರಾಜಶೇಖರನ್ ಇಲ್ಲದೆ ಹೋಗಿದ್ದರೆ ಹಡ್ಸನ್ ವೃತ್ತದಲ್ಲಿ ಈ ಮಹತ್ವದ ಕಟ್ಟಡ ನಮಗೆ ಅಂದರೆ ರೈತ ಸಮುದಾಯಕ್ಕೆ ದೊರೆಯಲು ಸಾಧ್ಯವಿತ್ತೆ, ನಮ್ಮ ಜಿಲ್ಲೆಯವರು ಹಾಗೂ ಅಂದಿನ ಗೃಹ ಸಚಿವರಾದ ಎಂ.ವಿ.ರಾಮ್‌ರಾವ್ ಅವರಿಗೆ ಅಲ್ಲಿ ಪೋಲಿಸ್ ಹೆಡ್‌ಕ್ವಾರ್ಟರ್ಸ್‌ನಲ್ಲಿ ಕಟ್ಟಿಸಬೇಕೆಂಬ ಆಸೆಯಿತ್ತು. ರಾಜಶೇಖರನ್ ಹಟ ಹಿಡಿದು ಸರ್ಕಾರದಿಂದ ೯೯ ವರ್ಷಗಳ ಗುತ್ತಿಗೆ ಆಧಾರದ ಮೇಲೆ ಈ ಜಾಗ ಪಡೆದು ಕೃಷಿಕ ಸಮಾಜದ ಕಟ್ಟಡ ಕಟ್ಟಿದರು. ಅವರಿಗೆ ಜಪಾನ್‌ನಲ್ಲಿ ಇದ್ದ ಹಾಗೆ ದೊಡ್ಡ ಗೋಪುರ ಅಲ್ಲಿರಬೇಕು, ಅದು ಹವಾಮಾನದ ಅಧ್ಯಯನವನ್ನು ನಿರಂತರವಾಗಿ ಮಾಡುತ್ತಿರಬೇಕು. ಅದರ ಅಧ್ಯಯನದ ಫಲವನ್ನು ರಾಜ್ಯದ ರೈತರಿಗೆ ಶೀಘ್ರವಾಗಿ ತಲುಪಿಸಬೇಕು. ಅದರ ಪ್ರಯೋಜನವನ್ನು ನಮ್ಮ ರೈತ ಸಮುದಾಯ ಪಡೆಯಬೇಕು. ಈ ಕಟ್ಟಡದಲ್ಲಿ ಹತ್ತಾರು ವಿಶ್ರಾಂತಿ ಗೃಹಗಳಿದ್ದು ಅದು ರಾಜ್ಯದ ರೈತರಿಗೆ ಸುಲಭವಾಗಿ ದೊರೆಯುವಂತಾಗಬೇಕು. ತಿಂಗಳಿಗೊಮ್ಮೆಯಾದರೂ ಕೃಷಿಯಲ್ಲಿನ ಆಧುನಿಕತೆಯನ್ನು ಕುರಿತು ವಿಚಾರ ಸಂಕಿರಣ ಏರ್ಪಟ್ಟು ಅದಕ್ಕೆ ಎಲ್ಲ ರೈತನಾಯಕರು ಬರುವಂತಾಗಬೇಕು. ಕೃಷಿಕ ಸಮಾಜದ ವತಿಯಿಂದ ಭಾನುವಾರ ಬೆಂಗಳೂರಿನ ಹತ್ತಾರು ದಿಕ್ಕಿನಲ್ಲಿ ರೈತ ಸಂತೆಗಳು ನಡೆಯಬೇಕು. ರೈತರು ಬೆಳೆದ ಮಾಲುಗಳನ್ನು ಅಲ್ಲಿಗೆ ತಂದರೆ ಪಟ್ಟಣದ ಗ್ರಾಹಕ ಅಲ್ಲಿಗೆ ಹೋಗಿ ಖುಷಿಯಿಂದ ಅದನ್ನು ಕೊಂಡುಕೊಳ್ಳುತ್ತಾನೆ. ಇದರಿಂದ ರೈತರಿಗೆ ಮಧ್ಯವರ್ತಿಗಳ ಕಾಟ ತಪ್ಪುತ್ತದೆ. ಹಾಗೆಯೇ ಗ್ರಾಹಕನಿಗೆ ತಾಜಾ ಮಾಲು ದೊರೆಯುತ್ತದೆ. ರೈತರ ಹಾಗೂ ಗ್ರಾಹಕರ ನಡುವೆ ಸೇತುವೆಯಾಗಿ ಕೃಷಿಕ ಸಮಾಜ ಕೆಲಸ ಮಾಡಬೇಕೆಂದು ಅವರು ಭಾವಿಸಿದ್ದರು. ಇತ್ತೀಚೆಗೆ ಆಂಧ್ರ ಪ್ರದೇಶದಲ್ಲಿ ಈ ರೈತಸಂತೆ ಜನಪ್ರಿಯವಾಗುತ್ತಿದೆ. ಬೆಂಗಳೂರಿನಲ್ಲೂ ಆ ಪ್ರಯೋಗ ನಡೆಯುತ್ತಿದೆ. ಆದರೆ ೪೦ ವರ್ಷಗಳ ಹಿಂದೆ ಈ ಬಗ್ಗೆ ಯೋಚಿಸಿದ ಎಂ.ವಿ.ರಾಜಶೇಖರನ್ ಎಂತಹ ದೂರದೃಷ್ಟಿಯುಳ್ಳ, ಕೃಷಿಕರ ಪರವಾದ ಚಿಂತಕರೆಂಬುದು ಇಲ್ಲಿನ ಮುಖ್ಯ ವಿಚಾರ. ರಾಜಶೇಖರನ್ ಏರುಪೇರುಗಳಿಂದಾಗಿ ರಾಜಕೀಯ ಅಧಿಕಾರದಿಂದ ಸದಾ ದೂರವಿದ್ದವರು. ಆದರೂ ಅವರ ವಿಚಾರಗಳು ಒಂದಿಲ್ಲೊಂದು ರೀತಿ ನಮ್ಮ ಸಮಾಜಕ್ಕೆ ಉಪಯುಕ್ತವೆನಿಸಿ ಇಂದಿಗೂ ನಮಗೆ ಬೇಕೆನಿಸಿವೆ.

ಒಂದು ವಿಚಾರ ಹೇಳಿದರೆ ರಾಜಶೇಖರನ್ ಮತ್ತು ನಿಜಲಿಂಗಪ್ಪನವರ ಸಂಬಂಧ ತಿಳಿಯುತ್ತದೆ. ೧೯೮೮ ಇರಬಹುದು, ರಾಜಶೇಖರನ್ ಫೋನ್ ಮಾಡಿ "ಸದಾಶಿವಯ್ಯ ರೆಡಿಯಾಗಿರು. ಚಿತ್ರದುರ್ಗಕ್ಕೆ ಹೋಗಿ ಯಜಮಾನರನ್ನು ನೋಡಿಕೊಂಡು ಬರೋಣ" ಎಂದರು. ಬೆಳಗ್ಗೆ ೯ ಗಂಟೆಗೆ ಅವರೇ ನಮ್ಮ ಮನೆಗೆ ಬಂದರು. ತಿಂಡಿ ತಿಂದು ಅಲ್ಲಿ ನಿಜಲಿಂಗಪ್ಪನವರ ಜೊತೆ ಸಂಜೆವರೆಗೆ ಮಾತನಾಡಿದೆವು. ತಾವು ಯುವ ಪ್ರಧಾನಿ ರಾಜೀವ್

ಗಾಂಧಿಯವರ ಆದರ್ಶಗಳಿಗೆ ಮನಸೋತು ಕಾಂಗ್ರೆಸ್ ಸೇರುವುದಾಗಿ ರಾಜಶೇಖರನ್ ನಿಜಲಿಂಗಪ್ಪನವರಿಗೆ ಹೇಳಿದರು. ನಿಜಲಿಂಗಪ್ಪನವರಿಂದ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಅನಂತರ ರಾಜ್ಯ ಹಾಗೂ ರಾಷ್ಟ್ರದ ಅನೇಕ ಘಟನಾವಳಿಗಳನ್ನು ಕುರಿತು ಇಬ್ಬರೂ ಚರ್ಚಿಸಿದರು. ಒಮ್ಮೆಯೂ ರಾಜಶೇಖರನ್ ಅವರು 'ನನಗೆ ಅನುಮತಿ ಕೊಡಿ' ಎಂದು ಕೇಳಲಿಲ್ಲ. ಅಥವಾ ಜನತಾಪಕ್ಷದಲ್ಲಿ ತಾವು ಅನುಭವಿಸುತ್ತಿದ್ದ ಹಿಂಸೆಯನ್ನೂ ತಿಳಿಸಲಿಲ್ಲ. ಅದೇ ರೀತಿ ನಿಜಲಿಂಗಪ್ಪ ಅವರು 'ನೀನೇಕೆ ಜನತಾಪಕ್ಷವನ್ನು ಬಿಡುತ್ತಿದ್ದಿ' ಎಂದು ಕೇಳಲಿಲ್ಲ. ಏನಿದ್ದರೂ ಸಿದ್ಧಾಂತದ ಬಗೆಗೆ ಅವರಿಬ್ಬರ ಚರ್ಚೆ.

ರಾಜಶೇಖರನ್ ಅವರಷ್ಟು ಗುಣಗ್ರಾಹಿಯಾದ ವ್ಯಕ್ತಿಯನ್ನು ನಾನೆಲ್ಲೂ ಕಂಡಿಲ್ಲ. ನನ್ನ ವರ್ಕ್‌ಷಾಪ್‌ನಲ್ಲಿ ಏನಾದರೂ ಹೊಸ ವಿಚಾರಗಳ ಆವಿಷ್ಕಾರವಾದರೆ ಅದನ್ನು ಜಗತ್ತಿಗೆ ಪರಿಚಯ ಮಾಡಿಕೊಡುವುದರಲ್ಲಿ ರಾಜಶೇಖರನ್ ಮೊದಲಿಗರಾಗಿರುತ್ತಾರೆ. ನಮ್ಮ ರಾಜ್ಯದ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಯಲ್ಲಿ ಆಸಕ್ತಿಯಿರುವ ವ್ಯಕ್ತಿಗಳಲ್ಲಿ ರಾಜಶೇಖರನ್ ಅವರಷ್ಟು ವಿದೇಶಗಳನ್ನು ಸುತ್ತಿದವರು ಯಾರೂ ಇಲ್ಲ. ಹಾಗೆಯೇ ವಿದೇಶಗಳಿಗೆ ಹೋದಾಗಲೆಲ್ಲ ನನ್ನ ಕೃಷಿ ಉಪಕರಣಗಳ ಬಗೆಗೆ ಮಾಹಿತಿಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಅಲ್ಲಿನ ಕೃಷಿ ಪಂಡಿತರಿಗೆ ಇದನ್ನು ಮುಟ್ಟಿಸಿ ಅವರ ಅಭಿಪ್ರಾಯ ತಂದು ನನಗೆ ಹೇಳುತ್ತಿದ್ದರು. ಜಪಾನ್, ಶ್ರೀಲಂಕಾ, ಜರ್ಮನಿ, ದ. ಆಫ್ರಿಕಾ, ಪಾಕಿಸ್ತಾನ ಮೊದಲಾದ ದೇಶದ ರೈತನಾಯಕರು ರಾಜಶೇಖರನ್ ಅವರ ಮೂಲಕ ನಮ್ಮ ಶಿವ ಇಂಡಸ್ಟ್ರೀಸ್‌ಗೆ ಬಂದಿದ್ದಾರೆ. ಅವರಿಗೂ ನನ್ನ ಸಾಧನೆಯನ್ನು ಇಂಗ್ಲಿಷ್ ಭಾಷೆಯಲ್ಲಿ ಮನಮುಟ್ಟುವಂತೆ ವರ್ಣಿಸಿದವರು ರಾಜಶೇಖರನ್ ಅವರೇ.

ಕೃಷಿಯಲ್ಲಿ ರಾಜಶೇಖರನ್ ಯಥೇಚ್ಛವಾದ ಲಾಭ ಮಾಡಿಕೊಂಡಿಲ್ಲದಿರಬಹುದು. ಆದರೆ ಆ ಕ್ಷೇತ್ರದಲ್ಲಿ ಅವರು ನಡೆಸಿದ ಪ್ರಯೋಗಗಳು ಅಧ್ಯಯನಕ್ಕೆ ಅರ್ಹವಾದವುಗಳು. ಒಬ್ಬ ಪ್ರಗತಿಪರ ರೈತನಿಗೆ ಆಗುವ ವಿವಿಧ ಅನುಭವಗಳು ರಾಜಶೇಖರನ್ ಅವರಿಗಾಗಿವೆ.

ರಾಜಶೇಖರನ್ ಅವರಷ್ಟು ನಿಸ್ಪೃಹ ಪ್ರಾಮಾಣಿಕ ವ್ಯಕ್ತಿಯನ್ನು ನಾನು ಕಂಡಿಲ್ಲ. ಅವರಿಗೆ ಬೇರೆಯವರ ಒಂದು ಬಿಡಿಗಾಸೂ ಬೇಡ. ವಿದೇಶಗಳಿಗೆ ಹೋದಾಗ ಮಿತವ್ಯಯ ಮಾಡಿ ಹಣ ಉಳಿಸಿಕೊಂಡು ಬಂದು ಇಲ್ಲಿ ತಮ್ಮ ಕೃಷಿ ಚಟುವಟಿಕೆಯನ್ನು ನಡೆಸಿದ್ದಾರೆ. ಹಾಗಾಗಿ ಯಾರ ಮುಂದೆಯೂ ತಲೆ ತಗ್ಗಿಸಿ ಕೈಯೊಡ್ಡಿ ನಿಂತವರಲ್ಲ. ಅವರು ಹಟವಾದಿಗಳು, ಅಷ್ಟೇ ಆತ್ಮವಿಶ್ವಾಸವುಳ್ಳವರು. ಯಾರನ್ನೋ ಮೆಚ್ಚಿಸಲು ಬದುಕಿದವರಲ್ಲ. ತಮ್ಮ ಗುರಿಗೆ ತಕ್ಕಂತೆ ಆತ್ಮಸಾಕ್ಷಿಗನುಗುಣವಾಗಿ ಶಿವನ ಮೆಚ್ಚುಗೆಗನುಗುಣವಾಗಿ ಬದುಕಿದವರು. ಅವರ ಬಾಳಿನ ಆದರ್ಶದ ಹೆಜ್ಜೆಗಳು ಯುವ ಜನಾಂಗಕ್ಕೆ ಸದಾ ಮಾರ್ಗದರ್ಶನ ನೀಡುವಂಥವು.

***

# ಆದರ್ಶ ಪುರುಷ

◆ ಸದಾಶಿವಯ್ಯ

ಪೂಜ್ಯರಾದ ಎಂ.ವಿ.ರಾಜಶೇಖರನ್ ಅವರ ಅಭಿನಂದನ ಗ್ರಂಥಕ್ಕೆ ಹಿರಿಯ ವ್ಯಕ್ತಿಗಳನ್ನು ಸಂದರ್ಶಿಸಲು ರಾಮನಗರ, ಚನ್ನಪಟ್ಟಣಗಳಿಗೆ ಮಿತ್ರರಾದ ಕಮಲೇಶ್ ಜೊತೆ ಹೊರಟಾಗ ದಾರಿ ಮಧ್ಯೆ "ತಮಗೆ ರಾಜಶೇಖರನ್ ಅವರ ಪರಿಚಯ ಎಷ್ಟು ದಿನಗಳದ್ದು" ಎಂದರು. "೧೯೭೨ರಿಂದ ಅವರ ಪರಿಚಯವಿದ್ದರೂ ೧೯೭೭ರಲ್ಲಿ ಅದು ತುಂಬಾ ಆತ್ಮೀಯತೆಗೆ ತಿರುಗಿತು ಎಂದೆ". ಮೂರು ದಶಕಗಳ ನಿಮ್ಮ ಸಂಬಂಧ ಕುರಿತು ಲೇಖನ ಬರೆಯಿರಿ ಎಂದರವರು. "ಈಗ ನಾನು ಹೇಳಿ ಕೇಳಿ ವ್ಯವಹಾರಸ್ಥ, ನನ್ಮಾತು ಯಾರು ಕೇಳ್ತಾರೆ" ಅಂದೆ. ಕಮಲೇಶ್ "ನೀವು ಸಿದ್ಧಗಂಗಾ ಮಠದ ವಿದ್ಯಾರ್ಥಿ, ತುರ್ತು ಪರಿಸ್ಥಿತಿ ವಿರುದ್ಧ ಪ್ರತಿಭಟಿಸಿದವರು. ಉತ್ತರಹಳ್ಳಿ ಕ್ಷೇತ್ರದಲ್ಲಿ ಮೂರ್‍ನಾಲ್ಕು ವರ್ಷ ಉಚಿತವಾಗಿ ಪಾಠಹೇಳಿ ಜನ ಸಂಘಟನೆ ಮಾಡಿದವರು. ನಿಮ್ಮ ಮತ್ತು ರಾಜಶೇಖರನ್ ಅವರ ಒಡನಾಟದ ಅನುಭವ ತುಂಬಾ ಮುಖ್ಯವಾದದ್ದು" ಎಂದರು.

ಅವರು ಹೇಳಿದಂತೆ ನಾನು ತುರ್ತುಪರಿಸ್ಥಿತಿಯಲ್ಲಿ ಸರ್ಕಾರದ ವಿರುದ್ಧ ಪ್ರತಿಭಟನೆ ಮಾಡಿ ರೈಲ್ವೆ ಇಲಾಖೆಯಲ್ಲಿದ್ದ ಕೆಲಸವನ್ನು ತೊರೆದು ಬಂದಿದ್ದೆ. ೧೯೭೭ರ ತುರ್ತುಪರಿಸ್ಥಿತಿಯಲ್ಲಿ ನಡೆದ ಚುನಾವಣೆಯಲ್ಲಿ ಜನತಾ ಪಕ್ಷದ ಪರವಾಗಿ ಕನಕಪುರದಿಂದ ಸ್ಪರ್ಧಿಸಿದ್ದ ರಾಜಶೇಖರನ್ ಅವರ ಜೊತೆ ಹಗಲಿರುಳು ಕೆಲಸ ಮಾಡಿದ್ದೆ. ಆ ಚುನಾವಣೆಯಲ್ಲಿ ಅವರು ಕೇವಲ ೩,೬೦೦ ಮತಗಳ ಅಂತರದಿಂದ ಸೋತಿದ್ದರು. ಆದರೆ ನಾನು ಅವರ ಹಿರಿದಾದ ವ್ಯಕ್ತಿತ್ವಕ್ಕೆ ಸೋತು ಅವರ ಜೊತೆ ಉಳಿದುಬಿಟ್ಟೆ.

ಎಂ.ವಿ. ರಾಜಶೇಖರನ್ ಅವರ ವ್ಯಕ್ತಿತ್ವವನ್ನು ತಿಳಿಯಲು ೧೯೭೭ರ ಲೋಕಸಭಾ ಚುನಾವಣೆಯೊಂದೇ ಸಾಕು. ಸಾತನೂರಿನಲ್ಲಿ ಮೊರಾರ್ಜಿ ದೇಸಾಯಿಯವರಿಂದಾದ ಅನಾಹುತದ ಬಗ್ಗೆ ನಾನು ನೊಂದುಕೊಂಡು 'ಏನ್ಸಾರ್ ಅವರು ಅಷ್ಟು ದೂರದಿಂದ ಚುನಾವಣಾ ಪ್ರಚಾರಕ್ಕೆ ಬಂದಿದ್ರು, ಒಂದ್ನಿಮಿಷ ಕಾರ್‍ನಿಂದ ಇಳಿದು ಜನರಿಗೆ ಮನವಿ ಮಾಡಿದ್ರೆ ಅವರ ಗಂಟು

ಏನು ಹೋಗಿತ್ತು' ಎಂದೆ. ಅದಕ್ಕವರು, "ಹಾಗಲ್ಲ ಸದಾಶಿವಯ್ಯ, ಮೊರಾರ್ಜಿಯವರ ಶಿಸ್ತೇ ಅಂತಹದ್ದು, ಪ್ರೋಗ್ರಾಂಗಲ್ಲಿಲ್ಲದ ಸ್ಥಳದಲ್ಲಿ ಅವರು ಇಳಿಯೋಲ್ಲ. ಇಂತಹ ಘಟನೆಯಿಂದ ನಮ್ಮಂತವರಿಗೆ ತೊಂದರೆಯಾಗುವುದು. ಆದ್ರೆ ನಾವು ಜನರನ್ನು ಸಿದ್ಧ ಮಾಡ್ಬೇಕು. ಮೊರಾರ್ಜಿ ದೇಸಾಯಿ ಅವರ ಶಿಸ್ತನ್ನು ಗೌರವಿಸಬೇಕು" ಎಂದು ಸೌಮ್ಯವಾಗಿ ನುಡಿದರು.

ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಆಡಳಿತ ಕಾಂಗ್ರೆಸ್ ಪರವಾಗಿ ಸ್ಪರ್ಧಿಸಿದ್ದ ಅಭ್ಯರ್ಥಿಯೊಬ್ಬರು ಆಗ ಚನ್ನಪಟ್ಟಣ-ರಾಮನಗರಗಳಿಗೆ ಹೋಗಿ "ನಿಜಲಿಂಗಪ್ಪನವರ ಅಳಿಯ ರಾಜಶೇಖರನ್ ಗೆದ್ರೆ ಕೇಂದ್ರದಲ್ಲಿ ಮಂತ್ರಿಯಾಗುತ್ತಾರೆ. ಆಮೇಲೆ ನಿಮಗೆಲ್ಲಾ ಯಾವ ಗತಿಯೋ ಯೋಚಿಸಿ" ಎಂದು ತಮ್ಮ ಕುಲಬಾಂಧವರನ್ನು ಕೆರಳಿಸುತ್ತಾರೆ. "ಇದಕ್ಕೆ ಪ್ರತಿಯಾಗಿ ನಾವು ಮತ್ತೊಂದು ಅಸ್ತ್ರ ಹೂಡೋಣ" ಎಂದು ರಾಜಶೇಖರನ್ ಅವರನ್ನು ಕೇಳಿದರೆ "ಅವರ ಧರ್ಮ ಅವರಿಗೆ, ನಮ್ಮ ಧರ್ಮ ನಮಗೆ" ಎಂದು ತಣ್ಣಗೆ ಉತ್ತರಿಸುತ್ತಾರೆ. ಈ ಚುನಾವಣೆಯಲ್ಲಿ ತಮ್ಮ ವಿರುದ್ಧ ಕೆಲಸ ಮಾಡಿದವರಿಗೂ ಸಹ ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಜನತಾ ಪಕ್ಷದಿಂದ ಟಿಕೆಟ್ ಕೊಡಿಸಲು ರಾಜಶೇಖರನ್ ಅವರು ಪ್ರಯತ್ನಿಸಿದ್ದುಂಟು. ರಾಜಶೇಖರನ್ ಆ ಲೋಕಸಭಾ ಚುನಾವಣೆಯಲ್ಲಿ ಹಣದ ಹೊಳೆ ಹರಿಸಲಿಲ್ಲ. ಜನತಾ ಪಕ್ಷಕ್ಕೆ ದುಡ್ಡು ತಾನೆ ಎಲ್ಲಿಂದ ಬರಬೇಕು. ಅದು ಚುನಾವಣೆ ಒಂದು ತಿಂಗಳ ಹಿಂದೆ ಜೈಲಿನಲ್ಲಿ ಹುಟ್ಟಿದ ಪಕ್ಷತಾನೆ! ಜನರ ಕಾಣಿಕೆ ಹಾಗೂ ಹಿತೈಷಿಗಳ ಸಹಕಾರದಿಂದ ಚುನಾವಣೆ ಹೇಗೂ ಮುಗಿಯಿತು. ಚುನಾವಣಾ ವೆಚ್ಚಕ್ಕೆ ಬಂದ ಹಣ ಸರಿಹೋಗಿತ್ತು. ಆದರೆ ವಾಹನಗಳ ಬಾಡಿಗೆ ಬಾಬ್ತು ೧೬,೮೨೦ ರೂಪಾಯಿಗಳು ಹಾಗೆಯೇ ಉಳಿಯಿತು. ಎಂಟು ದಿನಗಳ ನಂತರ ಮರಳವಾಡಿಗೆ ಕರೆದುಕೊಂಡು ಹೋಗಿ ಕಣದಲ್ಲಿದ್ದ ಅವರೇಕಾಳನ್ನು ಮಾರಿ ನನಗೆ ಹಣಕೊಟ್ಟರು. ಈ ಘಟನೆಯ ನಂತರ ನನ್ನ ಮನಸ್ಸಿನಲ್ಲಿ ಛಲ ಮೂಡಿತು. ಕನಕಪುರ ಲೋಕಸಭಾ ಕ್ಷೇತ್ರದ ವ್ಯಾಪ್ತಿಗೆ ಬರುವ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಅವರಿಗೆ ೮೦೦೦ಕ್ಕೂ ಹೆಚ್ಚಿನ ಲೀಡ್ ದೊರಕಿತ್ತು. ಅದನ್ನೇ ನೆಚ್ಚಿಕೊಂಡು ಕೆಲವು ಮಿತ್ರರು (ನಾವುಗಳು) ಉತ್ತರಹಳ್ಳಿ ಕ್ಷೇತ್ರದಲ್ಲಿ ಕೆಲಸ ಪ್ರಾರಂಭಿಸಿದೆವು. ಇಡೀ ರಾಷ್ಟ್ರದಲ್ಲಿ ಉತ್ತರಹಳ್ಳಿ ಅತಿ ದೊಡ್ಡ ವಿಧಾನಸಭಾ ಕ್ಷೇತ್ರ. ನಾಲ್ಕು ಲಕ್ಷದಷ್ಟು ಮತದಾರರು ಇಲ್ಲಿದ್ದಾರೆ. ಮತಕ್ಷೇತ್ರ ಕೂಡಾ ಹರಿದು ಹಂಚಿಹೋಗಿದೆ. ಈ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮಲ್ಲತ್ತಹಳ್ಳಿ ನನ್ನ ಹುಟ್ಟೂರು. ಇಲ್ಲಿ ನಾನು ಬಡಮಕ್ಕಳಿಗೆ ಉಚಿತ 'ಕೋಚಿಂಗ್ ಕ್ಲಾಸ್' ಪ್ರಾರಂಭಿಸಿದೆ. ನೂರಾರು ವಿದ್ಯಾರ್ಥಿಗಳು ಪಾಠಕ್ಕೆ ನನ್ನ ಪತ್ತಿರ ಬರುತ್ತಿದ್ದರು. ಹಳ್ಳಿಹಳ್ಳಿಗೆ ಭೇಟಿ ಕೊಟ್ಟು ಕಳೆದ ಲೋಕಸಭಾ ಚುನಾವಣೆಯಲ್ಲಿ ರಾಜಶೇಖರನ್ ಅವರಿಗಾದ ಅನ್ಯಾಯದ ಬಗ್ಗೆ ಅವರಿಗೆ ತಿಳಿಯ ಹೇಳತೊಡಗಿದೆ. ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ರಾಜಶೇಖರನ್ ಅವರು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ೪೦೦೦ ಮತಗಳ ಅಂತರದಿಂದ ಚುನಾಯಿತರಾದರು.

೧೯೬೭ರಲ್ಲಿ ಕನಕಪುರ - ಲೋಕಸಭಾ ಕ್ಷೇತ್ರದಿಂದ ಚುನಾಯಿತರಾಗಿದ್ದ ರಾಜಶೇಖರನ್ ಅವರು ಹೇಗೆ ರಚನಾತ್ಮಕ ಕೆಲಸಗಳನ್ನು ಮಾಡಿದ್ದರೋ ಆ ಪರಂಪರೆಯನ್ನು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಮುಂದುವರಿಸಿದರು. ಅಂದಿನ ಕಂದಾಯ ಸಚಿವರಾದ ವಿ.ಬಸವಲಿಂಗಪ್ಪನವರು ಹೇಳುತ್ತಿದ್ದ ಮಾತೆಂದರೆ "ಯಾರಾದರೂ ಯಾವುದಾದರೂ ಸಮಿತಿಗಳಿಗೆ ನಾಮಕರಣ ಮಾಡಬೇಕಾದರೆ ರಾಜಶೇಖರನ್ ಅವರನ್ನು ಕೇಳಬೇಕು. ಅವರು ಸೂಕ್ತ ವ್ಯಕ್ತಿಯನ್ನು ಆಯ್ಕೆ ಮಾಡುತ್ತಾರೆ. ಅವರ ಆಯ್ಕೆಯಲ್ಲಿ ಪ್ರಾಮಾಣಿಕತೆ ಹಾಗೂ ನಿಸ್ಪೃಹತೆ ಇರುತ್ತದೆ." ಚರಣ್‌ಸಿಂಗ್ ಹಾಗೂ ಮೊರಾರ್ಜಿದೇಸಾಯಿ ಅವರ ಕಿತ್ತಾಟದಲ್ಲಿ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಜನತಾಪಕ್ಷ ದಿನೇ ದಿನೇ ತನ್ನ ವಿಶ್ವಾಸಾರ್ಹತೆಯನ್ನು ಕಳೆದುಕೊಳ್ಳುತ್ತಿತ್ತು. ಆದರೆ ಎಂ.ವಿ.ರಾಜಶೇಖರನ್ ಇದಾವುದನ್ನು ಗಮನಿಸದೇ ಕೆಲಸ ಮಾಡುತ್ತಾ ಹೋದರು. ಈ ಕಾಲದಲ್ಲಿ ಉತ್ತರಹಳ್ಳಿ ವಿಧಾನ ಸಭಾಕ್ಷೇತ್ರದ ಎಲ್ಲ ಹಳ್ಳಿಗಳಿಗೆ ರಸ್ತೆ ಸಂಪರ್ಕ ದೊರೆಯಿತು. ಈ ಹಳ್ಳಿಗಳಿಗೆ ಟಾರ್‌ರಸ್ತೆ ಇರದಿದ್ದರೂ 'ಮೆಟ್ಲಿಂಗ್' ಮಾಡಿಸಿದ ಮಣ್ಣಿನ ರಸ್ತೆ ದೊರೆಯಿತು. "ವಿಶ್ವನೀಡಂ ಸಂಸ್ಥೆ"ಯ ಸಭಾಂಗಣದಲ್ಲಿ ವಾಣಿಜ್ಯ ಬ್ಯಾಂಕ್‌ಗಳ ನೆರವಿನಿಂದ ಕ್ಷೇತ್ರದ ಯುವಕ-ಯುವತಿಯರಿಗೆ ಸ್ವಯಂ ಉದ್ಯೋಗಕ್ಕೆ ಮಾರ್ಗದರ್ಶನ ಶಿಬಿರಗಳು ನಡೆದವು. ತಮ್ಮ ಕ್ಷೇತ್ರದ ಯಾವ ಮತದಾರ ಅವರ ಬಳಿ ಬರಲಿ ಅವನನ್ನು ಆತ್ಮೀಯವಾಗಿ ಮಾತನಾಡಿಸಿ ಅವರ ಸಮಸ್ಯೆಗೆ ಸ್ಪಂದಿಸುತ್ತಿದ್ದರು. ಮೊದಲ ಮೂರು ವರ್ಷದಲ್ಲಿ ಈ ಕ್ಷೇತ್ರದಲ್ಲಿ ಆದ ಬದಲಾವಣೆ ಅತ್ಯದ್ಭುತವಾದದ್ದು. ಈ ಸಂದರ್ಭದಲ್ಲಿ ರಾಜಶೇಖರನ್ ವಿಧಾನಸಭೆಯಲ್ಲಿ ವಿರೋಧ ಪಕ್ಷಗಳ ಸಾಲಿನಲ್ಲಿ ಕುಳಿತಿದ್ದರು. ಆಗ ಅವರು ಮಾಡುತ್ತಿದ್ದ ಭಾಷಣ, ಹಾಕುತ್ತಿದ್ದ ಪ್ರಶ್ನೆ ವಿವಿಧ ಸಂದರ್ಭಗಳಲ್ಲಿ ಪ್ರಜ್ಞಾವಂತ ಜನರ ಮೆಚ್ಚುಗೆಗೆ ಪಾತ್ರವಾಗಿದ್ದವು. ಒಟ್ಟಾರೆ ವಿಧಾನಸಭಾ ಸದಸ್ಯರಾಗಿ ರಾಜಶೇಖರನ್ ಬಹುಮಟ್ಟಿಗೆ ಯಶಸ್ವಿ ಶಾಸಕರೆನಿಸಿಕೊಂಡಿದ್ದರು.

೧೯೮೦ರಲ್ಲಿ ಕೇಂದ್ರದಲ್ಲಿದ್ದ ಜನತಾಪಕ್ಷದ ಸರ್ಕಾರ ಪತನವಾಗಿ ಜಗಜೀವನರಾಮ್ ನೇತೃತ್ವದಲ್ಲಿ ಜನತಾಪಕ್ಷ ಮಧ್ಯಂತರ ಚುನಾವಣೆಯನ್ನು ಎದುರಿಸಿತು. ಎಂ.ವಿ.ರಾಜಶೇಖರನ್ ಅವರು ಕೇಂದ್ರದ ಜನತಾಪಕ್ಷದ ಹಿರಿಯ ನಾಯಕರು ತಮ್ಮ ಕಿತ್ತಾಟದಿಂದ ಜನರಿಗೆ ಯಾವ ರೀತಿಯ ಭ್ರಮನಿರಸನ ಮಾಡಿದ್ದಾರೆ ಎಂಬುದನ್ನು ಊಹಿಸಲು ಅಸಮರ್ಥರಾದರು. ಜಗಜೀವನರಾಮ್‌ರವರನ್ನು ಪ್ರಧಾನಿಯಾಗಿ ಪ್ರತಿಬಿಂಬಿಸಿದರೆ ಭಾರತದ ಮತದಾರ ಅದನ್ನು ಹೇಗೆ ಸ್ವೀಕರಿಸುತ್ತಾರೆಂಬ ಪರಿಕಲ್ಪನೆ ಆ ಪಕ್ಷದ ಹಿರಿಯ ನಾಯಕರಿಗಿರಲಿಲ್ಲ. ೧೯೭೭ರ ರಾಜಕೀಯ ವಾತಾವರಣವನ್ನು ಕಲ್ಪಿಸಿಕೊಂಡು ಕಣಕ್ಕಿಳಿದ ಜನತಾಪಕ್ಷ ೧೯೮೦ರ ಚುನಾವಣೆಯಲ್ಲಿ ಬರೀ ಮುಖಭಂಗಕ್ಕೆ ಒಳಗಾಯಿತು. ಸ್ವತಃ ರಾಜಶೇಖರನ್ ಕನಕಪುರ ಕ್ಷೇತ್ರದಿಂದ ಒಂದೂವರೆ ಲಕ್ಷ ಮತಗಳ ಅಂತರದಿಂದ ಸೋತರು. ಇಲ್ಲಿ ಅವರ ಮನಸ್ಸಿಗೆ ಘಾಸಿ ತಂದ ವಿಚಾರವೆಂದರೆ ತಮ್ಮ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ತಮಗೆ ಲೀಡ್ ದೊರೆಯಲಿಲ್ಲವೆಂಬುದಾಗಿತ್ತು. ಅಂದರೆ ನನ್ನ ಕೆಲಸ ಜನರಿಗೆ ತೃಪ್ತಿ ಕೊಟ್ಟಿಲ್ಲ ಎಂಬ

ಭಾವನೆ ಅವರ ಮನಸ್ಸಿನಲ್ಲಿ ಹೊಕ್ಕಿತ್ತು. ಎಷ್ಟೋ ಸಂದರ್ಭದಲ್ಲಿ ಎಂ.ಎಲ್.ಎ. ಸ್ಥಾನಕ್ಕೆ ರಾಜೀನಾಮೆ ಕೊಡಲು ಮುಂದಾಗಿದ್ದುಂಟು. ವಿಧಾನಸಭಾ ಅಧಿವೇಶನಕ್ಕೆ ಅವರು ಹೋಗುತ್ತಿದ್ದರೇ ಹೊರತು ಅಭಿವೃದ್ಧಿ ಕೆಲಸಗಳಲ್ಲಿ ಮೊದಲಿನ ಉತ್ಸಾಹವನ್ನಿಟ್ಟುಕೊಳ್ಳಲಿಲ್ಲ. ನೈಜ ಜನನಾಯಕರೊಬ್ಬರು ಮತದಾರರ ತೀರ್ಪನ್ನು ಗೌರವಿಸಬೇಕು. ಆಗಾಗ್ಗೆ ಆತ್ಮಶೋಧನೆ ಮಾಡಿಕೊಳ್ಳಬೇಕೆಂಬುದು ಅವರ ಅಭಿಮತ.

ಅದಾದ ಮೇಲೆ ಅವರ ಸ್ವಂತ ಪಕ್ಷದಲ್ಲಿ ಕಿರಿಕಿರಿ, ರಾಜ್ಯ ಹಾಗೂ ರಾಷ್ಟ್ರನಾಯಕರ ಸ್ವಪ್ರತಿಷ್ಠೆ ಮತ್ತು ಸ್ವಾರ್ಥ ಮನೋಭಾವವನ್ನು ಕಂಡು ನೊಂದು ೧೯೮೪ರಲ್ಲಿ ಜನತಾಪಕ್ಷ ತೊರೆದು ಕಾಂಗ್ರೆಗೆ ಬಂದರು. ಒಂದು ಪಕ್ಷ ೧೯೮೩ರಲ್ಲಿ ಜನತಾಪಕ್ಷದಿಂದ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಅವರು ಸ್ಪರ್ಧಿಸಿದ್ದರೆ ಅವರು ಖಂಡಿತಾ ಜಯಗಳಿಸುತ್ತಿದ್ದರು. ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಪಕ್ಷದ ಸರ್ಕಾರದಲ್ಲಿ ಅವರಿಗೆ ದೊಡ್ಡಮಟ್ಟದ ಸ್ಥಾನ ದೊರೆಯುತ್ತಿತ್ತೆಂಬುದು ನನ್ನ ಭಾವನೆ. ರಾಜಶೇಖರನ್ ಅವರದ್ದು ಒಂದೇ ಹಟ. ಉತ್ತರಹಳ್ಳಿ ಕ್ಷೇತ್ರದ ಜನರಿಗೆ ತಮ್ಮ ಅಭಿವೃದ್ಧಿ ಕೆಲಸ ಹಿಡಿಸಿಲ್ಲ ಎಂಬುದು. ಭಾರತದ ಮತದರರು ಅವರು ತಿಳಿದುಕೊಂಡಷ್ಟು ಪ್ರಬುದ್ಧರೇ? ಕೇವಲ ತಕ್ಷಣದ ಭಾವನೆಗಳಿಗೆ ಸ್ಪಂದಿಸಿ ಮತ ಚಲಾಯಿಸುವ ಪ್ರವೃತ್ತಿ ಆತನದಲ್ಲವೇ?

೧೯೮೪ರಲ್ಲಿ ಜನತಾಪಕ್ಷ ತೊರೆದ ಮೇಲೆ ರಾಜಶೇಖರನ್ ಏಕಾಏಕಿ ೧೯೮೫ರಲ್ಲಿ ರಾಜ್ಯ ವಿಧಾನಸಭೆಗೆ ಕನಕಪುರ ಕ್ಷೇತ್ರದಿಂದ ಕಾಂಗ್ರೆ ಪರವಾಗಿ ಸ್ಪರ್ಧೆಗಿಳಿದಿದ್ದರು. ಆ ಕ್ಷೇತ್ರದ ಸಾಮಾನ್ಯ ಮತದಾರನಿಗೆ ರಾಜಶೇಖರನ್ ಪಕ್ಷ ಬದಲಾವಣೆ ಮಾಡಿದ ವಿಚಾರವೇ ತಿಳಿದಿರಲಿಲ್ಲ. ತಿಳಿದಿದ್ದರೂ ಅದಕ್ಕಿರುವ ಕಾರಣಗಳು ಆತನಿಗೆ ಅಪರಿಚಿತವಾಗಿದ್ದವು. ಈ ಚುನಾವಣೆಯಲ್ಲಿ ಎಸ್.ನಿಜಲಿಂಗಪ್ಪ ಅವರು 'ರಾಜಶೇಖರನ್ ಅವರಿಗಿಂತ ಯುವ ನಾಯಕರಾಗಿರುವ ಪಿ.ಜಿ.ಆರ್. ಸಿಂಧ್ಯ ಸರ್ವರೀತಿಯಲ್ಲಿ ಉತ್ತಮ' ಎಂದು ಬಹಿರಂಗ ಹೇಳಿಕೆ ಕೊಟ್ಟರು. ಅದನ್ನು ಸಾವಿರಗಟ್ಟಲೇ ಪ್ರತಿ ಮಾಡಿ ಕ್ಷೇತ್ರದಾದ್ಯಂತ ಹಂಚಲಾಯಿತು. ಮತ್ತೆ ರಾಜಶೇಖರನ್ ಅವರು ಸೋತರು. ಕಾಂಗ್ರೆ ಪಕ್ಷವನ್ನು ತಬ್ಬಿಕೊಂಡ ಮೇಲೆ ರಾಜಶೇಖರನ್ ಅತ್ತಿತ್ತ ನೋಡಲಿಲ್ಲ. ಈ ಮಧ್ಯೆ ಕಾಂಗ್ರೆ ಪಕ್ಷದ ಖಾಯಂ ಖಜಾಂಚಿ ಸೀತಾರಾಮ್ ಕೇಸರಿ ಅವರ ಕೃಪೆಯಿಂದ ಇವರಿಗೆ ಬರಬೇಕಾಗಿದ್ದ ರಾಜ್ಯಸಭಾ ಸದಸ್ಯತ್ವ ತಪ್ಪಿಹೋಯಿತು. ಆಸ್ಕರ್ ಫರ್ನಾಂಡಿಸ್ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ಕಾಲದಲ್ಲಿ ರಾಜಶೇಖರನ್ ಇಲ್ಲಿ ಪ್ರಧಾನ ಕಾರ್ಯದರ್ಶಿ. ಆಗ ಜಿಲ್ಲಾ ಪಂಚಾಯತ್ ಮತ್ತು ಮಂಡಲ್ ಪಂಚಾಯತ್ ಚುನಾವಣೆ ನಡೆಯಿತು. ಕಾಂಗ್ರೆ ಅಭ್ಯರ್ಥಿಗಳಿಗೆ ಆರ್ಥಿಕ ನೆರವು ಕೊಡುವ ಹೊಣೆ ರಾಜಶೇಖರನ್ ಅವರ ಪಾಲಿಗೆ ಹೋಯಿತು. ಕಾಂಗ್ರೆಸ್ ಇತಿಹಾಸದಲ್ಲಿ ಇಷ್ಟೊಂದು ಅಚ್ಚುಕಟ್ಟಾಗಿ ಆ ಕೆಲಸ ನಡೆದಿರಲಿಲ್ಲ. ಎಲ್ಲ ಅಭ್ಯರ್ಥಿಗಳಿಗೂ ಸಮರ್ಪಕವಾಗಿ ಹಣ ಮುಟ್ಟಿಸಿದರು. ಉಳಿದ ಹಣವನ್ನು ಒಂದು ರೂಪಾಯಿ ವ್ಯರ್ಥ ಮಾಡದೆ ಪಕ್ಷಕ್ಕೆ ಮುಟ್ಟಿಸಿದರು.

ಕಾಂಗ್ರೆ ನಾಯಕರಿಗೆ ಇದೊಂದು ಅಪರೂಪದ ನಡೆಯಾಯಿತು. ೧೯೮೯ರಲ್ಲಿ ವೀರೇಂದ್ರ ಪಾಟೀಲರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಮೇಲೆ ರಾಜಶೇಖರನ್ ಮತ್ತಷ್ಟು ಕ್ರಿಯಾಶೀಲರಾದರು. ಅವರಿಗೆ ರಾಜಾಜಿನಗರ ವಿಧಾನಸಭಾ ಕ್ಷೇತ್ರದಿಂದ ಟಿಕೆಟ್ ಕೊಟ್ಟ ಸುದ್ದಿ ತಿಳಿದ ತಕ್ಷಣ ನಾವು ಸಂತೋಷದಿಂದ ಕುಣಿದಾಡಿ ಕೆಲಸ ಪ್ರಾರಂಭಿಸಿದೆವು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತೆ ಟಿಕೆಟ್ಟನ್ನು ಹಿಂದಕ್ಕೆ ಪಡೆಯಲಾಯಿತು. ೧೯೮೯ರಲ್ಲಿ ಕಾಂಗ್ರೆ ಅಭೂತಪೂರ್ವವಾಗಿ ವಿಜಯಗಳಿಸಿತು. ವೀರೇಂದ್ರ ಪಾಟೀಲ್ ಮತ್ತೆ ಮುಖ್ಯಮಂತ್ರಿಯಾದರು. ಈ ಸಂದರ್ಭದಲ್ಲಿ ವೀರೇಂದ್ರ ಪಾಟೀಲ್ ಮುಖ್ಯಮಂತ್ರಿಗಳಾಗಲು ರಾಜಶೇಖರನ್ ಕಾರಣವೆಂಬುದು ಯಾರಿಗೂ ಗೊತ್ತಿಲ್ಲ. ವೀರೇಂದ್ರ ಪಾಟೀಲರನ್ನು ಶಾಸಕಾಂಗ ಪಕ್ಷದ ನಾಯಕನೆಂದು ತೀರ್ಮಾನಿಸಲು ಕಾಂಗ್ರೆ ಹೈಕಮಾಂಡ್ ಹಿಂದೆ ಮುಂದೆ ನೋಡುತ್ತಿತ್ತು. ರಾಜಶೇಖರನ್ ಮಧ್ಯ ಪ್ರವೇಶದಿಂದಾಗಿ ವೆಂಕಟಸುಬ್ಬಯ್ಯ ಅವರು ವೀರೇಂದ್ರ ಪಾಟೀಲರನ್ನು ಸರ್ಕಾರ ರಚಿಸುವಂತೆ ಆಮಂತ್ರಣ ನೀಡಿದರು. ಅವರು ರಾಜಶೇಖರನ್ ಅವರನ್ನು ವಿಧಾನ ಪರಿಷತ್‌ಗೆ ನಾಮಕರಣ ಮಾಡುತ್ತಾರೆಂದು ನಾವೆಲ್ಲ ಭಾವಿಸಿಕೊಂಡಿದ್ದರೆ ತಮ್ಮ ಕ್ಷೇತ್ರದ ಯುವಕನೊಬ್ಬನನ್ನು ವಿಧಾನ ಪರಿಷತ್ತಿಗೆ ನಾಮಕರಣ ಮಾಡಿದರು. ಪಕ್ಷಕ್ಕೆ ಬಹುದೊಡ್ಡ ತ್ಯಾಗ ಮಾಡಿದ್ದ ರಾಜಶೇಖರನ್ ಆ ಕಾಲದಲ್ಲಿ ಯಾರ ಗಮನಕ್ಕೂ ಬರಲಿಲ್ಲ. ೧೯೯೯ರ ತನಕ ಶಬರಿಯಂತೆ ಅವರು ಕಾದರು. ಎಸ್.ಎಂ.ಕೃಷ್ಣ ಅವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಮೇಲೆ ರಾಜಶೇಖರನ್ ಅವರು ಮತ್ತೆ ಮುಂಚೂಣಿಗೆ ಬಂದರು. ಎಂ.ರಾಜಶೇಖರಮೂರ್ತಿ ಕಾಂಗ್ರೆಸ್ ತೊರೆದು ಬಿ.ಜೆ.ಪಿ.ಗೆ ಹೋದ ನಂತರ ಕಾಂಗ್ರೆಸ್ ಹೈಕಮಾಂಡ್‌ಗೆ ಚೈತನ್ಯ ಉಡುಗಿಹೋಗಿತ್ತು. ಆಗ ರಾಜಶೇಖರನ್ ನೇತೃತ್ವದಲ್ಲಿ ಅನೇಕ ವೀರಶೈವ ಮುಖಂಡರು, ಸೋನಿಯಾಗಾಂಧಿ ಅವರನ್ನು ಕಂಡು ಕಾಂಗ್ರೆಸ್‌ಗೆ ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಿದರು. ಹೇಗೋ ಕಾಂಗ್ರೆಸ್ ಪಕ್ಷ ೧೯೯೯ರ ಚುನಾವಣೆಯಲ್ಲಿ ಜಯಶಾಲಿಯಾಯಿತು.

ಎಸ್.ಎಂ. ಕೃಷ್ಣ ಮುಖ್ಯಮಂತ್ರಿಯಾದ ಮೇಲೆ ರಾಜಶೇಖರನ್ ವಿಧಾನ ಪರಿಷತ್ತಿಗೆ ಆಯ್ಕೆಯಾದರು. ನಾವೆಲ್ಲಾ ಅವರು ರಾಜ್ಯದಲ್ಲಿ ಕೃಷಿ ಮಂತ್ರಿಯೋ ಅಥವಾ ಗ್ರಾಮೀಣಾಭಿವೃದ್ಧಿ ಖಾತೆ ಮಂತ್ರಿಯೋ ಆಗುತ್ತಾರೆ ಅಂದುಕೊಂಡರೆ ಅವರನ್ನು ಕಾಂಗ್ರೆಸ್ ಹೈಕಮಾಂಡ್ ರಾಜ್ಯಸಭಾ ಸದಸ್ಯರನ್ನಾಗಿಸಿದೆ. ಅವರ ಜ್ಞಾನ, ತಿಳುವಳಿಕೆ ಹಾಗೂ ಅನುಭವಗಳನ್ನು ಕಂಡಾಗ ಅವರು ರಾಜ್ಯಸಭಾ ಸದಸ್ಯರಾಗಿರುವುದೇ ಸರಿ ಎನ್ನಿಸುತ್ತದೆ. ನಮ್ಮ ಸಂವಿಧಾನದಲ್ಲಿ ಹೇಳಿರುವಂತೆ ರಾಜ್ಯಸಭೆ ಹಿರಿಯರ ಸಭೆ. ದೇಶದಲ್ಲಿನ ವಿವಿಧ ಕ್ಷೇತ್ರದಲ್ಲಿನ ಹಿರಿಯರು ತಮ್ಮ ಅನುಭವದ ಮೂಲಕ ಸರ್ಕಾರವನ್ನು ಮುನ್ನಡೆಸಬೇಕೆಂದು ಸಂವಿಧಾನ ತಜ್ಞರು ಅಭಿಪ್ರಾಯ ಪಟ್ಟಿದ್ದರು. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಜತ್ತಿ, ಕೊಲೂರು ಮಲ್ಲಪ್ಪ, ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ್ ಮೊದಲಾದ ರಾಜ್ಯದ ಹಿರಿಯ ಮುತ್ಸದ್ದಿಗಳ ನಂತರ ವಯಸ್ಸಿನಲ್ಲಿ ಹಾಗೂ ಅನುಭವದಲ್ಲಿ ರಾಜಶೇಖರನ್ ಅವರನ್ನು

ಬಿಟ್ಟರೆ ಹಿರಿಯರು ಯಾರಿದ್ದಾರೆ. ಅವರ ಐದು ದಶಕಗಳ ಸಾರ್ವಜನಿಕ ಜೀವನದ ಅನುಭವ ಈ ದೇಶವನ್ನು ಸಮರ್ಥ ದಾರಿಯಲ್ಲಿ ಮುನ್ನಡೆಸಲು ಸಹಾಯಕವಾಗುತ್ತದೆಂಬ ದೃಢ ನಂಬಿಕೆ ನನ್ನದು.

ರಾಜಶೇಖರನ್ ಜೊತೆ ಕಳೆದ ಮೂವತ್ತು ವರ್ಷಗಳಲ್ಲಿ ನನಗೆ ನೂರಾರು ಸವಿ ನೆನಪುಗಳಿವೆ. ಅವರ ಅಂತಃಕರಣ, ಪ್ರಾಮಾಣಿಕತೆ ಹಾಗೂ ಜನಪರ ಕಾಳಜಿ ತಿಳಿಸಲು ಅನೇಕ ಘಟನೆಗಳನ್ನೂ ಒಮ್ಮೆಲೇ ಹೇಳಬಲ್ಲೆ. ಆದರೆ ಒಂದೆರಡು ವಿಚಾರಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತೇನೆ. ೧೯೭೭ರ ಲೋಕಸಭಾ ಚುನಾವಣೆಯ ನಂತರ ನಾನು ಸಂಪೂರ್ಣವಾಗಿ ಅವರಿಗೆ ಅರ್ಪಿಸಿಕೊಂಡು ಬಿಟ್ಟಿದ್ದೆ. ಅದರ ಹಿಂದೆಯೇ ಕೃಷಿಯಲ್ಲಿದ್ದ ನನ್ನ ಕೆಲಸವನ್ನು ತೊರೆದಿದ್ದು, ಮನೆಗೆ ಹೋದರೆ ಹೋದೆ ಇಲ್ಲದಿದ್ದರೆ ಇಲ್ಲ. ಎಐಆರ್‌ಡಿ ಕಚೇರಿಯಲ್ಲಿಯೇ ಬಹುಮಟ್ಟಿನ ಕಾಲ ಕಳೆಯುತ್ತಿದ್ದೆ. ರಾಜಶೇಖರನ್ ಜೊತೆ ಪ್ರವಾಸ ಹೋಗುವುದೂ ಇತ್ತು. ಅವರಿಗೆ ನಾನು ಮನೆಯ ವಿಚಾರವನ್ನು ಯಾವುದೂ ಹೇಳುತ್ತಿರಲಿಲ್ಲ. ಒಮ್ಮೆ ನನ್ನ ಮನೆಯವರು ನನ್ನನ್ನು ಹುಡುಕಿಕೊಂಡು ಬರಲು ಒಬ್ಬ ಹುಡುಗನನ್ನು ಕಳಿಸಿದರು. ನಾನೂ ಎಲ್ಲೋ ಹೋಗಿದ್ದೆ. ಆತನಿಗೆ ಸಿಗಲಿಲ್ಲ, ಆತ ನೇರವಾಗಿ ರಾಜಶೇಖರನ್ ಅವರನ್ನೇ ಕಂಡಿದ್ದಾನೆ. ವಿಷಯ ತಿಳಿದ ತಕ್ಷಣ ಅವರು ಕೆಂಡಾಮಂಡಲವಾದರು. ಎಲ್ಲೋ ಹೋಗಿದ್ದ ನಾನು ಅವರನ್ನು ನೋಡಿದ ತಕ್ಷಣ ನನ್ನ ಮೇಲೆ ಎರ್ರಾಬಿರ್ರಿ ರೇಗುತ್ತಿದ್ದಾರೆ. ಏನ್ಸಾರ್! ಅಂದೆ, "ಏನು ಸದಾಶಿವಯ್ಯ! ನೀನು ಈ ರೀತಿ ಮಾಡೋದಾ, ಮನೆಯವರಿಗೆ ಅಷ್ಟೊಂದು ತ್ರಾಸು ಕೊಡೋದೆ. ಸರಿ ತಗೋ ಒಂದು ಸಾವಿರ ರೂಪಾಯಿ. ಮನೆಗೆ ಹೋಗು ಯಾವತ್ತೂ ಮನೆಯ ಜವಾಬ್ದಾರಿಯನ್ನು ಮರೀಬಾರ್ದು" ಎಂದರು. ಅವರು ಹೇಳಿದ ತಕ್ಷಣ ನಾನು ಜಾಗ್ರತನಾದೆ. ಅವರಿಂದ ೫೦೦ ರೂಗಳನ್ನು ಮಾತ್ರ ತೆಗೆದುಕೊಂಡು ಮನೆಗೆ ಹೋದೆ. ಆದರ್ಶದಲ್ಲಿ ಅವರನ್ನು ತೊರೆಯದೆ ಸಾಂಸಾರಿಕ ಜವಾಬ್ದಾರಿಗಳನ್ನು ನಿರ್ವಹಿಸಿದೆ. ಇಂದು ನನ್ನ ಕುಟುಂಬ ಎಲ್ಲ ರೀತಿಯ ಸುಖ ಶಾಂತಿ ಅನುಭವಿಸುತ್ತಿದೆ. ರಾಜಶೇಖರನ್ ಅವರು ಅಂದು ನನ್ನನ್ನು ಎಚ್ಚರಿಸದಿದ್ದರೆ ನಮ್ಮ ಕುಟುಂಬ ಏನಾಗುತ್ತಿತ್ತೊ?

ರಾಜಶೇಖರನ್ ಅವರು ಮೊದಲಿನಿಂದಲೂ ಹಣಕಾಸಿನ ವಿಚಾರದಲ್ಲಿ ತುಂಬಾ ಎಚ್ಚರ. ಹಾಸಿಗೆಯಿದ್ದಷ್ಟು ಕಾಲು ಚಾಚುವುದು ಅವರ ಹುಟ್ಟುಗುಣ. ಬೇರೆಯವರ ದುಡ್ಡನ್ನು ಮಜಾ ಮಾಡುವ ಪ್ರವೃತ್ತಿ ಅವರಲಿಲ್ಲ. ೧೯೯೯ರಲ್ಲಿ ನನ್ನ ಮಿತ್ರರೊಬ್ಬರಿಗೆ ಲೋಕಸಭಾ ಸ್ಪರ್ಧಿಸಲು ಟಿಕೆಟ್ ಕೊಡಿಸಲು ಹೋಟೆಲಿನಲ್ಲಿ ಇರೋಣ ಎಂದು ಹೇಳಿದೆ. ಅವರು ಒಪ್ಪಲಿಲ್ಲ. ಕರ್ನಾಟಕ ಭವನದಲ್ಲಿಯೇ ಉಳಿದುಕೊಂಡ್ರು. ನನ್ನ ಮಿತ್ರರಿಗೆ ಟಿಕೆಟ್ ಸಿಗೋಲ್ಲ ಎನ್ನುವುದು ಅವರಿಗೆ ಖಾತ್ರಿಯಾದ ತಕ್ಷಣ 'ನೀನು ಹೊರಡಪ್ಪಾ, ಅವರ ಹಣ ವ್ಯರ್ಥವಾಗಬಾರದು' ಎಂದು ಎಚ್ಚರಿಸಿದರು. ಹೀಗೆ ಬೇರೆಯವರ ಹಣವನ್ನು ತಮ್ಮ ಹಣದಂತೆ ಮಿತವಾಗಿ ಖರ್ಚು ಮಾಡುವವರು ಎಷ್ಟು ಜನ ಇದ್ದಾರೆ? ಮಹಾತ್ಮ ಗಾಂಧೀಜಿ, ಜೆ.ಪಿ, ಒಂದಿಬ್ಬರ ಕೈಲಿ ಇದು ಸಾಧ್ಯ ಇರಬಹುದು.

ರಾಜಶೇಖರನ್ ಅವರ ಮನೆಯಲ್ಲಿರುವ ಫರ್ನಿಚರ್ಸ್‌ಗಳನ್ನು ನೋಡಿದರೆ ಸಾಕು ಲೌಕಿಕ ಸೌಲಭ್ಯಗಳಿಗೆ ಅವರು ಕೊಡುವ ಮಹತ್ವ ಗೊತ್ತಾಗುತ್ತದೆ. ವಿದೇಶಗಳಿಗೆ ಹೋದಾಗ ಅಲ್ಲಿ ಕೊಡುವ ಪ್ರಯಾಣ ಭತ್ಯೆಯನ್ನು ಉಳಿಸಿಕೊಂಡು ಬರ್‍ತಾರೆ. ನೂರಾರು ದೇಶಗಳನ್ನು ಸುತ್ತಿರುವ ಇವರು ವಿದೇಶಿ ವಸ್ತುಗಳ ವ್ಯಾಮೋಹಕ್ಕೆ ಬಲಿಯಾದವರಲ್ಲ. ಡಾಲರ್ ರೂಪದಲ್ಲಿ ಬಂದ ಉಳಿತಾಯದ ಹಣದಿಂದ ಹದಿನಾಲ್ಕು ವರ್ಷದ ಅವಧಿಯಲ್ಲಿ ಈಗಿರುವ ಅವರ ಮನೆಯನ್ನು ಕಟ್ಟಿ ಮುಗಿಸಿದ್ದಾರೆ.

ಪ್ರತಿನಿತ್ಯ ಸಂಜೆ ರಾಜಶೇಖರನ್ ಅವರ ಧರ್ಮಪತ್ನಿ ಪೂಜ್ಯ ಗಿರಿಜಕ್ಕ ಅವರೇ ಇಂದಿಗೂ ಗಾಂಧಿಬಜಾರ್‌ಗೆ ನಡೆದುಕೊಂಡೇ ಹೋಗಿ ತರಕಾರಿ ತರ್‍ತಾರೆ. ನಾನು ನೋಡಿದಂತೆ ಅವರು ಸೀಮೆಎಣ್ಣೆಗಾಗಿ ಕ್ಯೂ ನಿಂತಿದ್ದಾರೆ. ರೇಷನ್ ಅಂಗಡಿಯಲ್ಲಿ ಕೊಡುವ ಸಕ್ಕರೆಯನ್ನು ಪ್ರತಿ ತಿಂಗಳೂ ತಂದಿದ್ದಾರೆ. ಮುಖ್ಯಮಂತ್ರಿಯೊಬ್ಬರ ಮಗಳೆಂಬ ಹಮ್ಮು ಬಿಮ್ಮು ಅವರಿಗಿಲ್ಲ. ರಾಜಶೇಖರನ್ ಸಹ ಅವರ ಮಕ್ಕಳನ್ನು ಅಷ್ಟೇ ಶಿಸ್ತಾಗಿ ಬೆಳೆಸಿದ್ದಾರೆ. ಈಗಿನ ಕಾಲದ ತಂದೆ-ತಾಯಿಗಳಂತೆ ಬಲವಂತದಿಂದ ಮಕ್ಕಳನ್ನು ವೈದ್ಯರು ಅಥವಾ ಇಂಜಿನಿಯರನ್ನಾಗಿ ಮಾಡಿಸಲು ಹೋಗಿಲ್ಲ. ಅವರಿಬ್ಬರ ಗಂಡುಮಕ್ಕಳು ಇಂಜಿನಿಯರ್ ಆಗಿಯೋ ಅಥವಾ ಡಾಕ್ಟರರನ್ನಾಗಿಯೋ ಮಾಡಿಸಬಹುದಾಗಿತ್ತು. ಶೈಕ್ಷಣಿಕ ಅರ್ಹತೆಯ ಮೇಲೆ ಅವರೇ ಮುಂದೆ ಬರಬೇಕೆಂಬ ನಿಲುವು ರಾಜಶೇಖರನ್ ಅವರದ್ದು. ಇಂಜಿನಿಯರ್ ಅಥವಾ ಡಾಕ್ಟರ್ ಆಗದಿದ್ದರೂ ಅವರ ಮಕ್ಕಳು ತಂದೆ ನಡೆದ ದಾರಿಯನ್ನು ಬಿಟ್ಟಿಲ್ಲ. ಸ್ವಂತ ಉದ್ಯೋಗ ರೂಢಿಸಿಕೊಂಡು ಸ್ವಾವಲಂಬಿಗಳಾಗಿ ನೆಮ್ಮದಿಯ ಜೀವನ ನಡೆಸುತ್ತಿದ್ದಾರೆ. ಇಬ್ಬರು ಹೆಣ್ಣು ಮಕ್ಕಳು ತಂದೆಯ ಆದರ್ಶವನ್ನು ಮರೆತಿಲ್ಲ. ಕೊನೆಯ ಮಗಳು ರಾಜಶೇಖರನ್ ಕಟ್ಟಿದ ಎಐಆರ್‌ಡಿಯನ್ನು ನೋಡಿಕೊಳ್ಳುತ್ತಿದ್ದಾಳೆ. ಐದು ಮೊಮ್ಮಕ್ಕಳ ಈ ಸುಖಸಂಸಾರದಲ್ಲಿ ಸುಖ-ಸಂತೋಷಗಳಿಗೆ ಕೊರತೆಯಿಲ್ಲ. ರಾಜಶೇಖರನ್ ದಂಪತಿಗಳು ತಮ್ಮ ಎಲ್ಲ ಮಕ್ಕಳನ್ನು ಪ್ರೀತಿಸಿ ಅವರಿಗೆ ಸರಿಯಾದ ಮಾರ್ಗದರ್ಶನ ನೀಡಿ ಸಮಾಜಕ್ಕೆ ಅಮೂಲ್ಯ ಕಾಣಿಕೆ ಕೊಟ್ಟಿದ್ದಾರೆ. ಇಂತಹ ನೆಮ್ಮದಿಯ ಕುಟುಂಬದಲ್ಲೂ ಸಣ್ಣ ನೋವಿದೆ. ತಮ್ಮ ಕುಟುಂಬದ ಘನತೆಗೆ ತಕ್ಕವನಲ್ಲದ ಮೊದಲ ಅಳಿಯನ ಬಗೆಗೆ ರಾಜಶೇಖರನ್ ದಂಪತಿಗಳಲ್ಲಿ ಅಪಾರವಾದ ನೋವಿದೆ.

ಒಂದು ಸಣ್ಣ ಪ್ರಸಂಗವನ್ನು ನಿರೂಪಿಸಿ ರಾಜ್ಯದ ಸಾರ್ವಜನಿಕ ಕ್ಷೇತ್ರದಲ್ಲಿ ರಾಜಶೇಖರನ್ ಅವರ ಮಾತುಗಳಿಗಿರುವ ಬೆಲೆಯನ್ನು ತಿಳಿಸಬಯಸುತ್ತೇನೆ. ಇಂದು ರಾಜಕಾರಣಿಗಳಿಗೆ ಪತ್ರ ಕೊಡುವ ಚಟ ಬಹಳಷ್ಟಿದೆ. ಕೆಲಸ ಆಗಲಿ ಬಿಡಲಿ ಪತ್ರ ಕೊಟ್ಟರೆ ನಮ್ಮ ಜವಾಬ್ದಾರಿ ಮುಗಿದುಹೋಯಿತೆಂದು ಅವರು ಭಾವಿಸಿಕೊಳ್ಳುತ್ತಾರೆ. ಕೆಲವು ಶಾಸಕರು ಹಾಗೂ ಮಂತ್ರಿಗಳು ತಮ್ಮ ಪತ್ರಗಳಿಗೆ, ಅಥವಾ ಟಿಪ್ಪಣಿಗಳಿಗೆ ಬೆಲೆ ನಿಗದಿ ಮಾಡಿದ್ದಾರೆ. ಇಂತಹ ಪತ್ರಗಳನ್ನು ಹಿರಿಯ ಅಧಿಕಾರಿಗಳಾಗಲೀ ಅಥವಾ ಬೇರೆಯವರಾಗಲಿ ಗಂಭೀರವಾಗಿ ಪರಿಗಣಿಸುವುದಿಲ್ಲ.

ಆ ಪತ್ರ ತೆಗೆದುಕೊಂಡು ಪ್ರಶ್ನೆ ಉತ್ತರ ಬರೆಯಬಹುದು. ಇಲ್ಲ ಕರ್ನಾಟಕ ಸರ್ಕಾರ ಕಸದ ಬುಟ್ಟಿಗೆ ಹಾಕಬಹುದು. ಆದರೆ ಇವರ ವಾದ ಹಾಗಲ್ಲ. ನಿತ್ಯ ಪತ್ರ ಕೊಡುವ 'ಉದ್ಯಮ'ವನ್ನು ಅವರು ಇಟ್ಟುಕೊಂಡಿಲ್ಲ. ಅವರ ಮನಸ್ಸಿಗೆ ಇದು ಸರಿ ಎಂದು ಕಂಡುಬಂದರೆ ಹತ್ತಾರು ಸಲ ಯೋಚಿಸಿ ಪತ್ರ ನೀಡುತ್ತಾರೆ. ನನ್ನ ವ್ಯವಹಾರದಲ್ಲಿ ಬಿ.ಡಿ.ಎ. ಅಧಿಕಾರಿಗಳಿಂದ ತೊಂದರೆಯಾಗಿ ಸಂಬಂಧಪಟ್ಟವರಿಗೆ ಒಂದು ಪತ್ರ ಕೊಡುವಂತೆ ರಾಜಶೇಖರನ್ ಅವರಲ್ಲಿ ಪ್ರಾರ್ಥಿಸಿದೆ. ಒಮ್ಮೆಲೆ ಅವರು ಒಪ್ಪಲೇ ಇಲ್ಲ. ಅದೇ ರೀತಿ ಮೂರು ದಶಕಗಳ ನನ್ನ ಸ್ನೇಹವನ್ನು ಒಂದೇ ಏಟಿನಿಂದ ಕಿತ್ತೊಗೆಯಲು ಅವರಿಗೆ ಸಾಧ್ಯವಾಗಲಿಲ್ಲ. ಅವರ ತೊಳಲಾಟ ನೋಡಿ 'ಏನೂ ಬೇಡ ಬಿಡಿ' ಎಂದೆ. ೧೫ ದಿನಗಳಾದ ಮೇಲೆ ದೂರವಾಣಿ ಮಾಡಿ ಕರೆಸಿಕೊಂಡು ಪತ್ರಕೊಟ್ಟರು. ಅದನ್ನು ಹಿರಿಯ ಅಧಿಕಾರಿಗಳಿಗೆ ತಲುಪಿಸಿದೆ. ಅವರುಗಳು ಆಶ್ಚರ್ಯದಿಂದ "ಓಹೋ! ರಾಜಶೇಖರನ್ ಅವರ ಪತ್ರ" ಎಂದು ಉದ್ಗಾರ ತೆಗೆದರು. ಆ ತನಕ ಬಿ.ಡಿ.ಎ.ಗೆ ರಾಜಶೇಖರನ್ ಅವರಿಂದ ಒಂದು ಪತ್ರವೂ ಹೋಗಿರಲಿಲ್ಲ.

ರಾಜಶೇಖರನ್ ನ್ಯಾಯೋಚಿತವಾದ ಸಹಾಯ ಮಾಡುತ್ತಾರೆಂಬ ನಂಬಿಕೆ ಎಲ್ಲರಲ್ಲೂ ಇದೆ. ಇಂತಹ ಘನತೆ ಎಷ್ಟು ಜನ ರಾಜಕಾರಣಿಗಳಿಗೆ ಲಭ್ಯ.

ಮೂಲತಃ ಸಜ್ಜನರಾದ ರಾಜಶೇಖರನ್ ಅವರು ಹೋರಾಟ ಮಾಡಿ ಕೂಗಾಡಿ ವಿವಿಧ ಸರ್ಕಸ್ಸುಗಳನ್ನು ಮಾಡಿ ತಮ್ಮ ಅಸ್ತಿತ್ವ ಉಳಿಸಿಕೊಂಡವರಲ್ಲ. ತಮಗೆ ದೈವದತ್ತವಾಗಿ ಬಂದ ಸಜ್ಜನಿಕೆ, ವಿನಯಶೀಲತೆ ಹಾಗು ಮಾನವೀಯ ಗುಣಗಳಿಂದ 'ತಮ್ಮತನ' ಉಳಿಸಿಕೊಂಡವರು. ಇಂತಹ ಗುಣಗಳಿಗೆ ಆಕರ್ಷಿತವಾಗುವ ವ್ಯಕ್ತಿಗೆ ಅರ್ಹತೆ ಬೇಕು ತಾನೇ! ಕೇವಲ ಬಣ್ಣದ ಮಾತು, ಆರ್ಭಟ ಹಾಗೂ ಸಮಯಸಾಧಕತನವೇ ಹೆಚ್ಚಾಗಿರುವ ನಮ್ಮ ಸಮಾಜದಲ್ಲಿ ರಾಜಶೇಖರನ್ ಅವರಂತಹ ಅಪರೂಪದ ವ್ಯಕ್ತಿಗಳು ಮುಂಚೂಣಿಗೆ ಬರಲು ಹೇಗೆ ಸಾಧ್ಯ. ಇಂತಹ ನಾಯಕರನ್ನು ಗುರುತಿಸಿ ಅವರಿಂದ ಪ್ರಯೋಜನ ಪಡೆಯಲು ಜನತೆ ಸಿದ್ಧವಾಗಬೇಕು. ಬಸವಣ್ಣ ಸಹ ತನ್ನ ಕಾಲದ ಜನರಿಗೆ ಅಪರಿಚಿತನಾಗಿದ್ದಾನೆ. ರಾಜಶೇಖರನ್ ಸಹ ಅಷ್ಟೇ. ನೈಜ ಪ್ರಜಾಪ್ರಭುತ್ವದ ತತ್ವಗಳನ್ನು ನಂಬಿರುವ ರಾಜಶೇಖರನ್ ಇಂದಿನ ರಾಜಕಾರಣಕ್ಕೆ ಸಪ್ಪೆಯಾಗಿ ಕಾಣುತ್ತಾರೆ. ಆದರೂ ಚಿಂತೆಯಿಲ್ಲ. ರಾಜ್ಯದ ಪ್ರಜ್ಞಾವಂತರಾದ ಒಂದಿಬ್ಬರು ನಾಯಕರು ಹಾಗೂ ಬಹುಸಂಖ್ಯಾತ ವಿಚಾರವಂತ ಪ್ರಜೆಗಳು ರಾಜಶೇಖರನ್ ಅವರನ್ನು ಗುರುತಿಸಿದ್ದಾರೆ. ಅಷ್ಟೇ ನೆಮ್ಮದಿ ನನಗೆ.

❊❊❊

# ಸಾಂಸ್ಕೃತಿಕ ಕ್ಷೇತ್ರದಲ್ಲೂ ಮಿನುಗಿದ ಕಾಯಕಯೋಗಿ

◆ ಟಿ. ನಾಗರಾಜು

ವಯಸ್ಸಿನಲ್ಲಿ ನನಗಿಂತ ಮೂರು ವರ್ಷ ಹಿರಿಯರಾದ ಶ್ರೀ ಎಂ.ವಿ. ರಾಜಶೇಖರನ್ ಅವರು ದೇಶಪ್ರೇಮ, ಸಾರ್ವಜನಿಕ ಕ್ಷೇತ್ರ ಮತ್ತು ರಾಜಕೀಯ ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಹಿರಿಯರು ಎಂದು ಹೇಳುವುದಕ್ಕೆ ನನಗೆ ಹೆಮ್ಮೆಯೆನಿಸುತ್ತದೆ.

ಕನಕಪುರ ತಾಲ್ಲೂಕು ಮರಳವಾಡಿ ಗ್ರಾಮದಿಂದ ಬಂದ ರಾಜಶೇಖರನ್ ಅವರ ಪರಿಚಯ, ಚಿಕ್ಕಬಳ್ಳಾಪುರ ತಾಲ್ಲೂಕಿನ ಕುಗ್ರಾಮ ಬಚ್ಚಹಳ್ಳಿಯಿಂದ ಬಂದ ನನಗಾದುದು ೧೯೫೨-೫೪ರ ಸಾಲಿನಲ್ಲಿ. ಅದೂ ರಾಜ್ಯದ ಪ್ರತಿಷ್ಠಿತ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಬ್ಬರೂ ಬಿ.ಎ. ವ್ಯಾಸಂಗ ಮಾಡುತ್ತಿದ್ದಾಗ.

ಇಂಗ್ಲಿಷ್ ಸಹಿತ ಹಲವಾರು ಭಾರತೀಯ ಭಾಷೆಗಳು ಮತ್ತು ಸುಮಾರು ೨೬ ಐಚ್ಚಿಕ ವಿಷಯಗಳನ್ನು ಆಗ ಕಾಲೇಜಿನಲ್ಲಿ ಬೋಧಿಸಲಾಗುತ್ತಿತ್ತು. ಪಾಠ ಪ್ರವಚನಗಳ ಜೊತೆಗೆ ಬಹುತೇಕ ಎಲ್ಲಾ ವಿಷಯಗಳಿಗೆ ಸಂಬಂಧಪಟ್ಟ ವಿದ್ಯಾರ್ಥಿ ಸಂಘಗಳಿದ್ದವು. ಇವೆಲ್ಲಕ್ಕೂ ಮಿಗಿಲಾಗಿ ಸುಗಮ ಸಂಗೀತ, ಶಾಸ್ತ್ರೀಯ ಸಂಗೀತ ಮತ್ತು ನಾಟಕಗಳಿಗಾಗಿ ಇಡೀ ಮೈಸೂರಿನಲ್ಲಿಯೇ ಪ್ರಸಿದ್ಧವಾಗಿದ್ದ 'ಮಿತ್ರ ಮೇಳ' ಸಾಂಸ್ಕೃತಿಕ ಮನರಂಜನೆ ಒದಗಿಸುತ್ತಿತ್ತು. ಮಿತ್ರಮೇಳದ ಪೋಷಕರಾಗಿ ಇಂದಿಗೂ ನಮ್ಮೊಂದಿಗಿರುವ ಪ್ರಸಿದ್ಧ ಇಂಗ್ಲಿಷ್ ಪ್ರಾಧ್ಯಾಪಕ ಪ್ರೊ। ಸಿ.ಡಿ.ನರಸಿಂಹಯ್ಯ ಅವರಿದ್ದರು. ದಿವಂಗತ ಪ್ರೊ। ಎಂ.ಇ. ಭರತರಾಜಸಿಂಗ್, ಉಪನ್ಯಾಸಕ ನಟ ಸಿದ್ದಪ್ಪ, ಶ್ರೀಮತಿ ಲಕ್ಷ್ಮೀಬಾಯಿ ಮುಂತಾದ ಶಿಕ್ಷಕವರ್ಗದವರು ಮೇಳದಲ್ಲಿದ್ದರು. ಶ್ರೀ ಎಂ.ವಿ.ರಾಜಶೇಖರನ್ ಅವರು ಮೇಳದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಮೇಳದ ನಾಟಕ ಸಮಿತಿಯ ಸಂಚಾಲಕನಾಗಿ ಅವರೊಂದಿಗೆ ಕೆಲಸ ಮಾಡುವ ಭಾಗ್ಯ ನನ್ನದಾಗಿತ್ತು. ಪ್ರತಿಭಾವಂತ ವಿದ್ಯಾರ್ಥಿ ಕಲಾವಿದರನ್ನು ಆಯ್ಕೆ ಮಾಡಿ ತಿಂಗಳಿಗೊಂದು ನಾಟಕ ಪ್ರದರ್ಶನಕ್ಕೆ ಸಿದ್ದಪಡಿಸುತ್ತಿದ್ದುದು ರಾಜಶೇಖರನ್ ಅವರ ಸಂಘಟನೆ ಮತ್ತು ಕಲಾಪ್ರೇಮಕ್ಕೆ ಒಂದು ನಿದರ್ಶನ.

ಮಿತ್ರಮೇಳದ ಸಾಂಸ್ಕೃತಿಕ ಕಾರ್ಯಕ್ರಮಗಳು ಎಷ್ಟು ಜನಪ್ರಿಯಗೊಂಡಿದ್ದವೆಂದರೆ, ನಮ್ಮ ಕಾಲೇಜಿನ ಜೂನಿಯರ್ ಬಿ.ಎ. ಸಭಾಂಗಣ ಕಿಕ್ಕಿರಿದು ತುಂಬಿರುತ್ತಿತ್ತು. ನಮ್ಮ ಕಾಲೇಜಿನ ವಿದ್ಯಾರ್ಥಿಗಳಿಗೆ ಜಾಗ ಸಾಲದಿದ್ದಾಗ, ಬೇರೆ ಕಾಲೇಜುಗಳ ಪ್ರೇಕ್ಷಕರನ್ನು ಹತೋಟಿಯಲ್ಲಿಡಲು ನಾಲ್ಕಾಣೆ ಪ್ರವೇಶ ಶುಲ್ಕವನ್ನು ವಿಧಿಸಲಾಯಿತು.

ಸದಾ ಮೊಣಕಾಲಿನವರೆಗೆ ಕೋಟು ಧರಿಸಿ, ಕೈನಲ್ಲಿ ಒಂದು ಉದ್ದನೆಯ ಫೈಲು ಹಿಡಿದು ಕಾಲೇಜಿಗೆ ಬರುತ್ತಿದ್ದ ಎಂ.ವಿ.ರಾಜಶೇಖರನ್ ಅವರು ಬಹುತೇಕ ಎಲ್ಲಾ ಶಿಕ್ಷಕ ವರ್ಗ ಮತ್ತು ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿದ್ದರು. ಇದೇ ಪೋಷಾಕಿನಲ್ಲಿ ಇವರ ಜೊತೆಯಲ್ಲಿ ಬರುತ್ತಿದ್ದ ಮತ್ತೊಬ್ಬರು ಎಚ್.ಸಿ. ದಾಸಪ್ಪ ಮತ್ತು ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರ ಪುತ್ರ ಶ್ರೀ ತುಳಸೀದಾಸ್ ದಾಸಪ್ಪ. ಇವರಿಬ್ಬರನ್ನು ನೋಡಿದಾಗ ಒಂದಲ್ಲಾ ಒಂದು ದಿನ ಸಂಸತ್ ಸದಸ್ಯರೋ, ಶಾಸಕರೋ ಆಗುವುದು ಖಚಿತವೆಂದು ನನಗನಿಸುತ್ತಿತ್ತು. ಮುಂದೆ ಹಾಗೆಯೇ ಇಬ್ಬರೂ ಲೋಕಸಭಾ ಸದಸ್ಯರಾಗಿ ಆಯ್ಕೆಯಾದರು. ವಿದ್ಯಾರ್ಥಿದೆಸೆಯಲ್ಲಿಯೇ ೧೯೪೨ರ "ಕ್ವಿಟ್ ಇಂಡಿಯಾ" ಚಳವಳಿಯಲ್ಲಿ ಭಾಗವಹಿಸಿದ್ದುದು, ೧೯೪೭ರ ಮೈಸೂರು ಜವಾಬ್ದಾರಿ ಸರ್ಕಾರ ಸ್ಥಾಪನೆ ಹೋರಾಟದಲ್ಲಿ ಭಾಗವಹಿಸಿದ್ದುದು, ಈ ಎಲ್ಲಾ ಹಿನ್ನೆಲೆ, ಅನುಭವ ರಾಜಶೇಖರನ್ ಅವರಿಗೆ ಇದ್ದುದರಿಂದ, ಇಂದು ರಾಜ್ಯದಲ್ಲಿ ಮಾತ್ರವಲ್ಲ, ಇಡೀ ಭಾರತದಲ್ಲಿ ಒಬ್ಬ ಪರಿಪಕ್ವ ನಿಷ್ಠಾವಂತ, ಪ್ರಾಮಾಣಿಕ ರಾಜಕೀಯ ಮುತ್ಸದ್ದಿಯಾಗಿ ಕಾರ್ಯವೆಸಗುತ್ತಿದ್ದಾರೆ.

ಅವರೇ ಸ್ಥಾಪಿಸಿದ ನಮ್ಮ ಮನೆಯ ಸಮೀಪವಿರುವ 'ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ' ಮೂಲಕ ಗ್ರಾಮೀಣ ರೈತರ ಅಭಿವೃದ್ಧಿಗಾಗಿ, ಸದ್ದುಗದ್ದಲವಿಲ್ಲದೆ, ಪ್ರಚಾರಕ್ಕೆ ಹಂಬಲಿಸದೆ, ಬಸವಣ್ಣನವರ 'ಕಾಯಕವೇ ಕೈಲಾಸ' ತತ್ವದಡಿಯಲ್ಲಿ ಶ್ರಮಿಸುತ್ತಿರುವ ರಾಜಶೇಖರನ್ ಅವರ ಕಾರ್ಯನಿಷ್ಠೆ ಅನುಕರಣೀಯ.

ಸಂಸತ್ತಿನ ಎರಡೂ ಸದನಗಳು, ರಾಜ್ಯ ವಿಧಾನಮಂಡಲದ ಎರಡೂ ಸದನಗಳಲ್ಲಿ ಅವರು ಯಾವುದೇ ರಚನಾತ್ಮಕ ವಿಷಯಗಳಲ್ಲಿ ವ್ಯಕ್ತಪಡಿಸುತ್ತಿದ್ದ ಅಭಿಪ್ರಾಯಗಳು, ಎಲ್ಲರ ಗಮನ ಸೆಳೆಯುತ್ತಿದ್ದವು ಸಹೋದ್ಯೋಗಿಗಳಿಂದ ಗೌರವ ಪಡೆಯುತ್ತಿದ್ದರು.

ಇತ್ತೀಚೆಗಂತೂ ಅವರು ೨೦೦೨ರಲ್ಲಿ ರಾಜ್ಯಸಭೆಗೆ ಚುನಾಯಿತರಾದ ನಂತರ ರಾಜ್ಯದ ಸಮಸ್ಯೆಗಳ ಬಗ್ಗೆ ಕೇಂದ್ರದ ಪ್ರಸ್ತುತ ಸರ್ಕಾರದ ನಿಷ್ಕ್ರಿಯತೆ, ಉದಾಸೀನ ಮನೋಭಾವದ ಬಗ್ಗೆ ನಿರ್ದಾಕ್ಷಿಣ್ಯವಾಗಿ ತಮ್ಮದೇ ಆದ ಗಂಭೀರ ಭಾಷೆಯಲ್ಲಿ ಖಂಡಿಸಿ, ಸರ್ಕಾರದ ಗಮನ ಸೆಳೆಯುತ್ತಿರುವುದನ್ನು ನಾವು ಪತ್ರಿಕೆಗಳಲ್ಲಿ ಮಾತ್ರವಲ್ಲದೆ, ಟಿ.ವಿ. ಮಾಧ್ಯಮ ಪ್ರಸಾರಗಳಲ್ಲಿಯೂ ಕಾಣಬಹುದು.

ಈ ೭೫ರ ಇಳಿವಯಸ್ಸಿನಲ್ಲೂ ಕಂಡವರೊಂದಿಗೆ ಹಸನ್ಮುಖಿಗಳಾಗಿ ಸಂಭಾಷಿಸಿ ತಾವು

ಪ್ರತಿನಿಧಿಸಿದ ಕಾಂಗ್ರೆಸ್ ಪಕ್ಷ ಮತ್ತು ಎಲ್ಲಕ್ಕಿಂತಲೂ ಮಿಗಿಲಾಗಿ ಗ್ರಾಮೀಣ ಜನರ ಸೇವೆ ಗೈಯ್ಯುತ್ತಿರುವ ಹಿರಿಯ ರಾಜಶೇಖರನ್ ಅವರಿಗೆ ದೇವರು ಆಯುರಾರೋಗ್ಯ ನೀಡಿ ಬರುವ ದಿನಗಳಲ್ಲಿ ಮತ್ತಷ್ಟು ಜನಸೇವೆಗೆ ಅವಕಾಶ ನೀಡಲೆಂದು ಹಾರೈಸುತ್ತೇನೆ.

ಕೆ.ಪಿ.ಸಿ.ಸಿ. ಉಪಾಧ್ಯಕ್ಷರಾಗಿ, ಎಐಸಿಸಿ ಸದಸ್ಯರಾಗಿ ಇಂದಿಗೂ ನಿಷ್ಠೆಯಿಂದ ತನ್ನ ಪಾಲಿಗೆ ಬಂದ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸುತ್ತಿರುವ ರಾಜಶೇಖರನ್ ಅವರನ್ನು ಸಚಿವರನ್ನಾಗಿ ಅಥವಾ ವಿಧಾನಸಭೆ ಅಧ್ಯಕ್ಷರನ್ನಾಗಿ ಇಲ್ಲವೆ ವಿಧಾನ ಪರಿಷತ್ತಿನ ಸಭಾಪತಿಯನ್ನಾಗಿ ಮಾಡದಿದ್ದುದು ನನ್ನಂತಹವನಿಗೆ ಖೇದವೆನಿಸಿದೆ.

ಇನ್ನು ಮುಂದಾದರೂ, ಅಧಿಕಾರಕ್ಕೆ ಬರುವ ಕಾಂಗ್ರೆಸ್ ಪಕ್ಷ ಕೇಂದ್ರದಲ್ಲಿ ಅಥವಾ ರಾಜ್ಯದಲ್ಲಿ ನಿಷ್ಠಾವಂತ ಅನುಭವಿ ಕಾರ್ಯಕರ್ತ ರಾಜಶೇಖರನ್ ಅವರ ಸೇವೆಯನ್ನು ಇನ್ನೂ ಗರಿಷ್ಠ ಮಟ್ಟದಲ್ಲಿ ಬಳಸಿಕೊಳ್ಳಲೆಂದು ಆಶಿಸುತ್ತೇನೆ.

***

# ತ್ಯಾಗಜೀವಿ

**ಜೀರಿಗೆ ಲೋಕೇಶ್**

ಹಿರಿಯರಾದ ಎಂ.ವಿ.ರಾಜಶೇಖರನ್‌ರವರ ಬಗ್ಗೆ ಮಾತನಾಡಬೇಕಾದರೆ ನನಗೆ ಮೂರು ದಶಕಗಳಷ್ಟು ಹಿಂದೆ ಹೋಗಬೇಕಾಗುತ್ತದೆ. ರಾಜಶೇಖರನ್ ಅವರು ನಮ್ಮಂತಹ ಅನೇಕ ಯುವಕರಿಗೆ ಆ ಕಾಲದಲ್ಲೇ ಆದರ್ಶವಾಗಿದ್ದರು. ಅವರು ನಿಜಲಿಂಗಪ್ಪನವರ ಅಳಿಯ ಎಂಬುದಕ್ಕೆ ಆದರ್ಶವಾಗಿರಲಿಲ್ಲ, ಸದಾ ಯುವಕರೊಡನೆ ಬೆರೆಯುತ್ತಾ, ಯುವಶಕ್ತಿಯನ್ನು ರೂಪಿಸುವ ಸಂಘಟಕರಾಗಿ ನಮಗೆ ಆದರ್ಶವಾಗಿದ್ದರು. ತರುಣ ವಯಸ್ಸಿನಲ್ಲೇ ಒಬ್ಬ ಆದರ್ಶ ಜನಪ್ರತಿನಿಧಿ ಹೇಗೆ ಕೆಲಸ ಮಾಡಬೇಕು ಎಂಬುದನ್ನು ತಮ್ಮ ನಡೆ-ನುಡಿಯಿಂದ ಸಾಧಿಸಿ ತೋರಿಸಿದ್ದರು.

೧೯೬೯ರಲ್ಲಿ ಕಾಂಗ್ರೆಸ್ ತತ್ವ ಆಧಾರಿತ ಆಡಳಿತ ಹಾಗೂ ಸಂಸ್ಥಾ ಕಾಂಗ್ರೆಸ್ ಎಂಬ ಹೆಸರಿನಲ್ಲಿ ವಿಭಜನೆಗೊಂಡಿತು. ನನಗೆ ಅಂದಿನ ಮೈಸೂರು ರಾಜ್ಯದ ಮುಖ್ಯಮಂತ್ರಿ ವೀರೇಂದ್ರ ಪಾಟೀಲರನ್ನು ಕಂಡರೆ ವಿಶೇಷವಾದ ಅಭಿಮಾನ. ಇದಕ್ಕೆ ಕಾರಣ ಕರ್ನಾಟಕದ ನೆಲ, ಜಲ ಹಾಗೂ ಭಾಷೆಯ ರಕ್ಷಣೆಯಲ್ಲಿ ಅವರಿಗಿರುವ ಬದ್ಧತೆ. ಈ ಅಭಿಮಾನ ನನಗೆ ನಿರಂತರವಾಗಿ ವೀರೇಂದ್ರ ಪಾಟೀಲರ ಜೊತೆ ಇರಲು ಪ್ರೇರಣೆ ಕೊಟ್ಟಿತು. ಕಾಂಗ್ರೆಸ್ ವಿಭಜನೆಯಾದ ಮೇಲೂ ನಾನು ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದು ವೀರೇಂದ್ರ ಪಾಟೀಲರ ಅನುಯಾಯಿ ಆದೆ. ೧೯೭೦ರಲ್ಲಿ ಬೆಂಗಳೂರಿನ ಮಹಾನಗರ ಪಾಲಿಕೆಗೆ ನಡೆದ ಚುನಾವಣೆಯಲ್ಲಿ ಕೋದಂಡರಾಮಪುರ ಕ್ಷೇತ್ರದಿಂದ ಸ್ಪರ್ಧಿಸಿದ್ದೆ. ಆಗ ವೀರೇಂದ್ರ ಪಾಟೀಲರು ನನ್ನ ಮತಕ್ಷೇತ್ರಕ್ಕೆ ಬಂದು ಮತ ಪ್ರಚಾರ ಕೈಗೊಂಡಿದ್ದರು. ಈ ಸಂದರ್ಭದಲ್ಲಿ ಮೇಲ್ಮನೆಗೆ ನಡೆದ ಪದವೀಧರ ಕ್ಷೇತ್ರದಿಂದ ವಿ.ಎಸ್.ಕೃಷ್ಣಅಯ್ಯರ್ ಸ್ಪರ್ಧಿಸಿದ್ದರು. ಅವರ ಜಯಕ್ಕೆ ನಾನು ಕೂಡ ಕೆಲಸ ಮಾಡಿದ್ದೇನೆ.

ತುರ್ತು ಪರಿಸ್ಥಿತಿಯ ನಂತರ ಕೇಂದ್ರದಲ್ಲಿ ಜನತಾಪಕ್ಷ ಸರ್ಕಾರ ಅಧಿಕಾರಕ್ಕೆ ಬಂದಿತಷ್ಟೆ. ಆ ಚುನಾವಣೆಯಲ್ಲಿ ವೀರೇಂದ್ರ ಪಾಟೀಲ ಅವರೇ ಜನತಾಪಕ್ಷದ ಅಧ್ಯಕ್ಷರಾಗಿದ್ದರು. ವೀರೇಂದ್ರ ಪಾಟೀಲರನ್ನು ಕೆಳಗಿಳಿಸುವ

ಪ್ರಯತ್ನ ಜನತಾ ಪಕ್ಷದಲ್ಲೇ ತೆರೆಮರೆಯಲ್ಲಿ ಒಮ್ಮೆ, ಬಹಿರಂಗವಾಗಿ ಒಮ್ಮೆ ನಡೆಯುತ್ತಿದ್ದುದು ಉಂಟು. ಆ ಕಾಲದಲ್ಲಿ ರಾಜಶೇಖರನ್ ನಿಲುವು ಬೇರೆಯದಾಗಿತ್ತು. ಅವರಿಗೆ ಪಕ್ಷದ ಏಳಿಗೆ ಮುಖ್ಯ ಎಂಬುದು ಅವರ ಅಭಿಮಾನಿಗಳ ಉತ್ತರ.

ರಾಜಶೇಖರನ್ ನಮ್ಮ ಗುಂಪಿನಲ್ಲಿ ಸದಾ ಚರ್ಚೆಗೆ ಒಳಪಟ್ಟಿದ್ದ ವ್ಯಕ್ತಿಯಾಗಿದ್ದರು. ಆಗೆಲ್ಲಾ ರಾಜಶೇಖರನ್ ಅವರ ನಿಸ್ಪೃಹತೆ, ಪ್ರಾಮಾಣಿಕತೆ, ಯುವಜನ ಪರವಾದ ನಿಲುವು, ಗ್ರಾಮೀಣ ಅಭಿವೃದ್ಧಿ ಹಾಗೂ ಕೃಷಿ ಚಟುವಟಿಕೆಗಳಲ್ಲಿನ ಅವರ ಆಸಕ್ತಿ ಸದಾ ಚರ್ಚೆಗೆ ಒಳಪಡುತ್ತಿತ್ತು.

೧೯೮೦ರಲ್ಲಿ ವೀರೇಂದ್ರ ಪಾಟೀಲ್ ಕಾಂಗ್ರೆಸ್‌ಗೆ ಹೋದಮೇಲೆ ಎಂ.ವಿ. ರಾಜಶೇಖರನ್ ಇನ್ನೂ ಜನತಾ ಪಕ್ಷದಲ್ಲೇ ಇದ್ದರು. ರಾಜೀವ ಗಾಂಧಿಯವರು ಪ್ರಧಾನಮಂತ್ರಿ ಆದಮೇಲೆ ರಾಜಶೇಖರನ್ ಕಾಂಗ್ರೆಗೆ ಬಂದರು. ಮೂಲತಃ ಕಾಂಗ್ರೆಸ್‌ನವರಾದ ರಾಜಶೇಖರನ್‌ಗೆ ಈ ಪಕ್ಷದಲ್ಲಿ ಅನೇಕ ಸಂಬಂಧಗಳಿದ್ದವು. ಪ್ರಾರಂಭದಿಂದಲೂ ವೈಯಕ್ತಿಕ ಸಂಬಂಧಗಳನ್ನು ಚೆನ್ನಾಗಿಟ್ಟುಕೊಳ್ಳುವ ರಾಜಶೇಖರನ್ ಬಹು ಬೇಗನೆ ಕಾಂಗ್ರೆ ಪಕ್ಷದಲ್ಲಿ ತಮ್ಮ ನೆಲೆ ಕಂಡುಕೊಂಡರು. ಅಧಿಕಾರದಲ್ಲಿರಲಿ ಬಿಡಲಿ ಅವರು ತಮ್ಮ ಮಿತ್ರರೊಡನೆ ಪತ್ರ ವ್ಯವಹಾರಗಳನ್ನು ಇಟ್ಟುಕೊಂಡಿರುತ್ತಾರೆ. ಇದೇ ರಾಜಶೇಖರನ್‌ರವರ ಹೆಗ್ಗಳಿಕೆ. ಸಾಮಾನ್ಯ ರಾಜಕಾರಣಿಗಳು ಎಡವುವ ಸಂದರ್ಭದಲ್ಲಿ ರಾಜಶೇಖರನ್ ಮಿಂಚುತ್ತಾರೆ.

೧೯೮೯ರ ಚುನಾವಣಾ ಸಂದರ್ಭದಲ್ಲಿ ಗುಲ್ಬರ್ಗಾದಲ್ಲಿ ನನ್ನ ಮೇಲೆ ಮಾರಣಾಂತಿಕ ಹಲ್ಲೆ ನಡೆಯಿತು. ವೀರೇಂದ್ರ ಪಾಟೀಲರನ್ನು ಮುಖ್ಯಮಂತ್ರಿಯನ್ನಾಗಿಸಬಾರದೆಂಬ ಶಕ್ತಿಗಳು ಇದರ ಹಿಂದಿದ್ದವು. ನನ್ನ ಮೇಲೆ ಹಲ್ಲೆ ನಡೆದಾಗ ಸ್ವತಃ ರಾಜಶೇಖರನ್ ರಾಜ್ಯಪಾಲರಾದ ವೆಂಕಟಸುಬ್ಬಯ್ಯರವರನ್ನು ಭೇಟಿ ಮಾಡಿ ನನಗೆ ಸೂಕ್ತ ರಕ್ಷಣೆ ಕೊಡಿಸುವಂತೆ ಪೊಲೀಸ್ ಅಧಿಕಾರಿಗಳಿಗೆ ಹೇಳಿದರು. ಆದರೆ ಈ ಹಲ್ಲೆಯನ್ನು ವೀರೇಂದ್ರ ಪಾಟೀಲ್ ತಮ್ಮ ಅನುಕೂಲಕ್ಕೆ ಬಳಸಿಕೊಂಡು ಅತ್ಯಲ್ಪ ಮತದಿಂದ ಚುನಾಯಿತರಾದರು.

ಈ ಚುನಾವಣೆಯಾದ ಮೇಲೆ ವೀರೇಂದ್ರ ಪಾಟೀಲ್ ಅನೇಕ ಎಡರು ತೊಡರುಗಳ ನಡುವೆ ಕೂಡ ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಈ ಸಂದರ್ಭದಲ್ಲಿ ಅವರಿಗೆ ರಾಜಶೇಖರನ್ ಅವರ ನೈಜ ವ್ಯಕ್ತಿತ್ವ ಪರಿಚಯವಾಯಿತು. ಕಾಂಗ್ರೆಸ್ ಹೈಕಮಾಂಡ್ ಹಾಗು ವೀರೇಂದ್ರ ಪಾಟೀಲರ ನಡುವೆ ಅವರು ಸ್ನೇಹ ಸೇತುವೆ ನಿರ್ಮಿಸಲು ಶ್ರಮಿಸಿದ್ದಾರೆ. ವೀರೇಂದ್ರ ಪಾಟೀಲರನ್ನು ಮುಖ್ಯಮಂತ್ರಿಯನ್ನಾಗಿ ಮಾಡಲು ರಾಜ್ಯಪಾಲ ವೆಂಕಟಸುಬ್ಬಯ್ಯ ಅವರನ್ನು ಪ್ರಾರ್ಥಿಸಿದ್ದಾರೆ. ಇಷ್ಟೆಲ್ಲಾ ಸಹಾಯ ಮಾಡಿದರೂ ಮುಖ್ಯಮಂತ್ರಿಗಳಲ್ಲಿ ಅವರು ಸ್ವಾರ್ಥಕ್ಕೆ ಏನನ್ನೂ ಕೇಳಲಿಲ್ಲ. ರಾಜಶೇಖರನ್ ಅವರ ನಡೆ-ನುಡಿಯನ್ನು ಗಮನಿಸಿದ ವೀರೇಂದ್ರ ಪಾಟೀಲ್ ಅವರೇ ಇವರ ಬಗ್ಗೆ ತಾನು ಈ ಹಿಂದೆ ತಪ್ಪು ತಿಳಿದುಕೊಂಡು

ಬಿಟ್ಟಿದ್ದೆನಲ್ಲ ಎನ್ನುವಷ್ಟರ ಮಟ್ಟಿಗೆ ರಾಜಶೇಖರನ್ ಆ ಕಾಲದಲ್ಲಿ ಅರ್ಪಣಾ ಮನೋಭಾವದಿಂದ ವೀರೇಂದ್ರ ಪಾಟೀಲರ ಸೇವೆ ಮಾಡಿದ್ದರು. ಈ ಸೇವೆಯ ಹಿಂದೆ ಸ್ವಾರ್ಥವಿರಲಿಲ್ಲ. ಕರ್ನಾಟಕದಲ್ಲಿ ಸುಭದ್ರ ಹಾಗು ಕ್ರಿಯಾಶೀಲ ಸರ್ಕಾರ ಇರಬೇಕೆಂಬುದು ಅವರ ಮುಖ್ಯ ಗುರಿಯಾಗಿತ್ತು.

ರಾಜಶೇಖರನ್ ಅವರನ್ನು ನೆನೆದಾಗೆಲ್ಲ ಮಹಾಭಾರತದ ಕರ್ಣನ ಪಾತ್ರ ನೆನಪಿಗೆ ಬರುತ್ತದೆ. ರಾಜಕಾರಣದಲ್ಲಿ ತಮಗೆ ಸಿಗುವ ಅವಕಾಶವನ್ನು ಬೇರೆಯವರಿಗೆ ಕೊಡಲು ಯಾರು ತಾನೇ ಮುಂದೆ ಬರುತ್ತಾರೆ. ಆದರೆ ರಾಜಶೇಖರನ್ ಅನೇಕ ಸಾರಿ ತಮ್ಮ ಮಿತ್ರರಿಗಾಗಿ ಈ ತರಹದ ತ್ಯಾಗವನ್ನು ಮಾಡಿದ್ದಾರೆ. ೧೯೮೯ರ ಚುನಾವಣೆಯಲ್ಲಿ ಅವರಿಗೆ ಟಿಕೆಟ್ ಕೊಟ್ಟು ಅದನ್ನು ತಪ್ಪಿಸಿದಾಗಲೂ ಅವರು ಕೆರಳಲಿಲ್ಲ. ರಾಜ್ಯಸಭೆಯ ಸದಸ್ಯ ಸ್ಥಾನಕ್ಕೆ ಹೆಸರು ಒಪ್ಪಿಗೆಯಾಗಿ ಕಾರಣಾಂತರದಿಂದ ಅದು ಬಿಟ್ಟು ಹೋದಾಗಲೂ ಕೂಡ ಕೂಗಾಡಿ ಸೀನ್ ಕ್ರಿಯೇಟ್ ಮಾಡಲಿಲ್ಲ. ಈ ಉದಾರತೆ ಹಾಗೂ ನೋವನ್ನು ನುಂಗಿಕೊಳ್ಳುವ ತಾಳ್ಮೆ ರಾಜಶೇಖರನ್ ಅವರಿಗೆ ಮಾತ್ರ ಸಾಧ್ಯ. ಇಂತಹ ದೈವದತ್ತ ಗುಣನಿಧಿ ರಾಜಶೇಖರನ್ ನಮ್ಮ ಜೊತೆ ಇರುವುದೇ ನಮ್ಮ ಭಾಗ್ಯ. ಅವರು ಈ ಗುಣಗಳಿಂದಾಗಿ ಎಲ್ಲರಿಗೂ ಮಾರ್ಗದರ್ಶಕರಾಗಿದ್ದಾರೆ.

***

# ಆದರ್ಶ ಜನಪ್ರತಿನಿಧಿ

**ಎನ್.ಕೆ. ವೆಂಕಟೇಶ್ವರ್**

೧೯೬೭ರಲ್ಲಿ ರಾಜಶೇಖರನ್‌ರವರು ಕನಕಪುರ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿದ್ದಾಗ ನಾನು ಆರ್.ಸಿ. ಕಾಲೇಜಿನ ವಿದ್ಯಾರ್ಥಿ. ಅವರು ದೆಹಲಿಯ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಕಾನೂನು ಪದವಿ ಪಡೆದುಕೊಂಡು ಬಂದಿದ್ದರು. ರಾಜಶೇಖರನ್‌ರವರು ಅಂದು ನಮಗೆಲ್ಲಾ ನಾಯಕರಾಗಿದ್ದರು. ಆಗಿನ ಸರ್ಕಾರ ರಾಷ್ಟ್ರದಲ್ಲಿ 'ಮೊದಲ ಬಾರಿಗೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ'ಯನ್ನು ಪ್ರಾರಂಭಿಸಲು ಸ್ಫೂರ್ತಿ ಇವರು ಕೊಟ್ಟಿದ್ದರು. ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ರಾಜಶೇಖರನ್‌ರವರ ಕ್ರಿಯಾಶೀಲತೆಯನ್ನು ಮೆಚ್ಚಿಕೊಂಡು ನಿಜಲಿಂಗಪ್ಪ ನವರಿಗೆ ಇಷ್ಟವಿಲ್ಲದಿದ್ದರೂ ರಾಜಶೇಖರನ್‌ರವರಿಗೆ ಟಿಕೇಟ್ ಕೊಡಿಸಿದ್ದರು ಎಂದು ನಮ್ಮ ಮಿತ್ರರು ಆಗಾಗ ಹೇಳುತ್ತಿದ್ದರು. ಸಹಜವಾಗಿ ರಾಜಶೇಖರನ್‌ರವರು ಆ ಸಲ ಗೆದ್ದು ಬಂದರು. ಆದರ್ಶ ಜನ ಪ್ರತಿನಿಧಿ ಮಾಡಬೇಕಾದ ಕೆಲಸವನ್ನು ಅವರು ಆ ಕಾಲದಲ್ಲಿ ಮಾಡಿದ್ದರು. ಆನಂತರ ರಾಜಶೇಖರನ್‌ರವರು ವಿರೋಧ ಪಕ್ಷದಲ್ಲಿದ್ದರೂ ಕೂಡ ನಾನು ಮತ್ತು ಅವರು ತುಂಬಾ ಒಳ್ಳೆಯ ಸ್ನೇಹಿತರಾಗಿದ್ದೆವು. ನಮ್ಮ ಆಲೋಚನಾ ಸರಣಿಗಳಲ್ಲಿ ಸಾಮ್ಯತೆ ಇತ್ತು. ಪ್ರಚಲಿತ ವಿಚಾರಗಳ ಬಗ್ಗೆ ನಮ್ಮಿಬ್ಬರದು ಒಂದೇ ಅಭಿಪ್ರಾಯ. ೧೯೮೫ರಲ್ಲಿ ರಾಜೀವ್‌ಗಾಂಧಿ ಪ್ರಧಾನಮಂತ್ರಿ ಆದ ಮೇಲೆ ಕಾಂಗ್ರೆಸ್ಸಿಗೆ ಹೊಸ ನೀರು ಹರಿದುಬರುವಂತಾಯಿತು. ಕಾಂಗ್ರೆಸ್ ಪಕ್ಷಕ್ಕೆ ಪ್ರಜ್ಞಾವಂತ ಜನರ ಸಹಕಾರ, ಸಹಾನುಭೂತಿ ದೊರೆಯಬೇಕು ಎಂಬ ಹಿರಿದಾಸೆ ರಾಜೀವ್‌ಗಾಂಧಿಯವರಲ್ಲಿ ಇತ್ತು. ಪಕ್ಷವನ್ನು ಕೇಡರ್ ಬೇಸಿಸ್ ಪದ್ಧತಿಯಲ್ಲಿ ಕಟ್ಟಬೇಕು. ವಿವಿಧ ಕ್ಷೇತ್ರಗಳಲ್ಲಿ ದುಡಿದ ಪರಿಣಿತರನ್ನು ಬಳಸಿಕೊಳ್ಳಬೇಕು ಎಂದು ಅವರು ಆಲೋಚಿಸಿದರು. ಪಕ್ಷದಲ್ಲಿ 'ಚಿಂತನಾ ಘಟಕ' ಇರಬೇಕೆಂದು ಅವರು ನಿರ್ಧರಿಸಿದ್ದರು. ಕರ್ನಾಟಕ ಪ್ರದೇಶ ಕಾಂಗ್ರೆಸ್‌ನಲ್ಲೂ ಕೂಡ ವಿಚಾರ ವೇದಿಕೆಯೊಂದು ಹಾರ್‍ನಳ್ಳಿ ರಾಮಸ್ವಾಮಿಯವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಅದರ ಕಾರ್ಯದರ್ಶಿಯಾಗಿ ನಾನು ನೇಮಕ ಆದೆ. ಆಗ ನಮ್ಮ ಅಧ್ಯಕ್ಷರಾದ

ಹಾರನಹಳ್ಳಿ ರಾಮಸ್ವಾಮಿಯವರು ಇಂದು ರಾಷ್ಟ್ರದಲ್ಲಿ ಹಾಗೂ ರಾಜ್ಯದಲ್ಲಿ ಯಾವ ಯಾವ ಕ್ಷೇತ್ರದಲ್ಲಿ ಬುದ್ಧಿ ಜೀವಿಗಳಿದ್ದಾರೆ ಎಂಬುದನ್ನು ತಿಳಿಯಲು ನಮ್ಮ ರಾಜಶೇಖರನ್‌ರವರನ್ನು ಬಿಟ್ಟರೆ ಬೇರೆ ಯಾರು ಸಮರ್ಥರಲ್ಲ ಎಂದು ಹೇಳಿದ್ದರು. ಡಾ. ಎಂ.ಎಸ್.ಸ್ವಾಮಿನಾಥನ್, ಪ್ರೊ. ಯು.ಆರ್.ರಾವ್, ಡಾ. ಗಿರೀಶ್ ಕಾರ್ನಾಡ್, ಡಾ. ಅನಂತಮೂರ್ತಿ, ಪ್ರೊ. ಸಿ.ಎನ್.ಆರ್.ರಾವ್, ಡಾ. ಸಿ.ಸುಬ್ರಹ್ಮಣ್ಯಂ ಹೀಗೆ ವಿವಿಧ ವಿದ್ವಾಂಸರನ್ನು ಬಳಸಿಕೊಳ್ಳಲು ರಾಜಶೇಖರನ್ ಸಮರ್ಥರೆಂಬುದು ನಮ್ಮ ಅಧ್ಯಕ್ಷರ ದೃಢ ನಿಲುವಾಗಿತ್ತು. ಈ ವಿಚಾರಕ್ಕೆ ಸಂಬಂಧಪಟ್ಟಂತೆ ಅಧ್ಯಕ್ಷರ ಅಭಿಪ್ರಾಯಕ್ಕೆ ನನ್ನದೂ ಸಹಮತ ಇತ್ತು. ರಾಜಶೇಖರನ್‌ರವರನ್ನು ಸಂಪರ್ಕಿಸಿ ವಿಚಾರ ವೇದಿಕೆಯ ಕಾರ್ಯಕ್ರಮಗಳನ್ನು ರಾಜ್ಯದಾದ್ಯಂತ ವಿಸ್ತರಿಸುತ್ತಾ ಹೋದೆವು.

ರಾಜಶೇಖರನ್‌ರವರನ್ನು ನೋಡಿದಾಗೆಲ್ಲಾ ನನಗೆ ಮಹಾಭಾರತದ ಕರ್ಣನ ಪಾತ್ರ ನೆನಪಿಗೆ ಬರುತ್ತದೆ. ಕರ್ಣನಿಗೂ ಕೂಡ ಎಲ್ಲಾ ಶಕ್ತಿ ಸಾಮರ್ಥ್ಯಗಳಿದ್ದವು. ಇಂದ್ರ, ಕೃಷ್ಣ, ಪರಶುರಾಮ ಮೊದಲಾದವರಿಂದ ಅವನ ಶಕ್ತಿ ಕಳೆಗುಂದಿತ್ತು. ರಾಜಶೇಖರನ್ ಅವರಿಗೆ ರಾಜಾಜಿನಗರದಿಂದ ವಿಧಾನಸಭೆಗೆ ಸ್ಪರ್ಧಿಸಲು ಟಿಕೆಟ್ ಕೊಟ್ಟು ಹಿಂದೆ ಪಡೆಯಲಾಯಿತು. ರಾಜೀವ್‌ಗಾಂಧಿಯವರ ಕಾಲದಲ್ಲಿ ರಾಜ್ಯಸಭೆಯ ಸದಸ್ಯತ್ವ ಸ್ಥಾನ ಸ್ವಲ್ಪದರಲ್ಲಿ ತಪ್ಪಿ ಹೋಯಿತು. ಆನಂತರ ಕೂಡ ಅನೇಕ ಅವಕಾಶಗಳು ಅವರಿಂದ ಕಸಿಯಲ್ಪಟ್ಟವು. ಆದರೂ ರಾಜಶೇಖರನ್ ಮನಸ್ಸಿನಲ್ಲಿ ಕಹಿ ತುಂಬಿಕೊಂಡಿಲ್ಲ. ತಮ್ಮದು ದುರದೃಷ್ಟವೆಂದು ಹಳಿದುಕೊಂಡು ಬೇರೆಯವರ ಸಹಾನುಭೂತಿಯನ್ನು ಗಿಟ್ಟಿಸಿಕೊಳ್ಳುವ ಪ್ರಯತ್ನ ಮಾಡಿಲ್ಲ. ಅದಮ್ಯ ಆತ್ಮವಿಶ್ವಾಸ ಮತ್ತು ಸತತ ದುಡಿಮೆಯಿಂದ ಕೆಲಸ ಮಾಡುತ್ತಾ ಬಂದಿದ್ದಾರೆ. ಇಂತಹ ವ್ಯಕ್ತಿ ರಾಜ್ಯದ ಚುಕ್ಕಾಣಿ ಹಿಡಿದರೆ ಜನತೆಯ ಜೀವನದಲ್ಲಿ ಅಪೂರ್ವ ಬದಲಾವಣೆ ಖಂಡಿತ. ಅಂತಹ ಕಾಲ ಬರಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

***

# ಮುವ್ವತ್ತರ ಹರೆಯದವರು

ಅಸಗೋಡು ಜಯಸಿಂಹ

ಹಿರಿಯರಾದ ಎಂ.ವಿ.ರಾಜಶೇಖರನ್ ಅವರನ್ನು ಜ್ಞಾಪಿಸಿಕೊಂಡಾಗೆಲ್ಲ ನನಗೆ ಹಳೆಯ ಮೌಲ್ಯಗಳು ನೆನಪಿಗೆ ಬರುತ್ತವೆ. ಅವರ ಜೀವನಾನುಭವ ಹಾಗೂ ಸಾರ್ವಜನಿಕ ಜೀವನದಲ್ಲಿ ಅವರು ಸಾಧಿಸಿದ ಹತ್ತು ಹಲವು ಕಾರ್ಯಗಳನ್ನು ನೆನೆದುಕೊಂಡಾಗ ಅವರ ಬಗ್ಗೆ ಮಾತನಾಡಲು ನನ್ನಂತಹ ಕಿರಿಯನಿಗೆ ಸಂಕೋಚವಾಗುವುದರಲ್ಲಿ ಸಂಶಯವಿಲ್ಲ. ಆದರೆ ಹಿರಿಯರನ್ನು ಗೌರವಿಸಿ ಅವರ ಆದರ್ಶಗಳನ್ನು ಮನತುಂಬಿಕೊಳ್ಳುವ ಲಕ್ಷಣ ನಮ್ಮಂತಹ ಕಿರಿಯರದ್ದು. ಈ ಕಾರಣಕ್ಕಾಗಿ ರಾಜಶೇಖರನ್ ಅವರನ್ನು ಅಗತ್ಯವಾಗಿ ನೆನೆಯಲೇಬೇಕು. ವಿ. ಕೃಷ್ಣರಾವ್ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದಾಗ ರಾಜಶೇಖರನ್ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಆಗ ನನಗೆ ಅವರ ಸಂಪರ್ಕ ಹೆಚ್ಚಾಯಿತು.

ರಾಜಶೇಖರನ್ ಅವರ ಮಾವ ಕರ್ನಾಟಕದ ತಾತ್ವಿಕ ಶಕ್ತಿಯಾಗಿದ್ದ ಎಸ್. ನಿಜಲಿಂಗಪ್ಪರವರು ನಮ್ಮ ಚಿತ್ರದುರ್ಗ ಜಿಲ್ಲೆಯವರು. ತಾನು ಬೆಳೆದ ಪರಿಸರದ ಬಗ್ಗೆ ಅವರಿಗಿದ್ದ ಪ್ರೀತಿ ಅನನ್ಯವಾದದ್ದು. ಯಾರು ಎಷ್ಟೇ ಪ್ರಯತ್ನಿಸಿದರೂ ತಮ್ಮ ಕೊನೆ ಉಸಿರನ್ನು ದುರ್ಗದಲ್ಲಿ ಮುಗಿಸುವುದಾಗಿ ಹಠ ಹಿಡಿದು ಅದರಂತೆ ನಡೆದುಕೊಂಡರು. ಅವರ ಹುಟ್ಟೂರಿನ ಪ್ರೇಮವೇ ಬೇರೆ ರೂಪದಲ್ಲಿ ದೇಶಪ್ರೇಮವಾಗಿ ಪರಿವರ್ತನೆಯಾಗಿದೆ. ನಿಜಲಿಂಗಪ್ಪನವರು ಇಂದು ರಾಷ್ಟ್ರದಲ್ಲಿ ತಮ್ಮ ತಾತ್ವಿಕ ಬದ್ಧತೆಗಾಗಿ ಖ್ಯಾತರಾಗಿದ್ದಾರೆ. ಇಡೀ ಬದುಕನ್ನು ಒಂದು ಧ್ಯೇಯಕ್ಕಾಗಿ ಮೀಸಲಿಟ್ಟು ಅದರಂತೆ ನಡೆದುಕೊಂಡ ಎಸ್. ನಿಜಲಿಂಗಪ್ಪನವರು ಕರ್ನಾಟಕದ ಕೀರ್ತಿಯನ್ನು ಎಲ್ಲೆಡೆ ಬೆಳಗಿದ್ದಾರೆ. ಅದೇ ಪರಂಪರೆಯಲ್ಲಿ ಬೆಳೆದವರು ನಮ್ಮ ರಾಜಶೇಖರನ್‌ರವರು. ಅಧಿಕಾರವಿದ್ದಾಗ, ಇಲ್ಲದಿದ್ದಾಗ ಕೂಡ ಅವರು ಜನಮನದಿಂದ ದೂರ ಸರಿದಿಲ್ಲ. ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ವಿದ್ವತ್‌ಪೂರ್ಣ ಪ್ರಬಂಧವನ್ನು ಮಂಡಿಸಿ ತಮಗಿರುವ ಅಗಾಧ ಪಾಂಡಿತ್ಯವನ್ನು ನಿರೂಪಿಸಿದ್ದಾರೆ. ರಾಜಶೇಖರನ್‌ರವರು ೧೯೬೭ರಲ್ಲಿ

ಕನಕಪುರ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾಗಿದ್ದರು. ಆಗ ನಾನಿನ್ನೂ ಪ್ರೌಢಶಾಲಾ ವಿದ್ಯಾರ್ಥಿ. ರಾಜಕೀಯವೇ ಗೊತ್ತಿರಲಿಲ್ಲ. ಎಪ್ಪತ್ತರ ದಶಕದಲ್ಲಿ ನಾನು ಶಾಸಕರ ಭವನಕ್ಕೆ ಹೆಜ್ಜೆಯಿಡಲಾರಂಭಿಸಿದೆ. ಅಂತ ಸಂದರ್ಭದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿವಿಧ ಪಕ್ಷಗಳ ನಾಯಕರು ಹಿಂದೆ ಲೋಕಸಭಾ ಸದಸ್ಯರಾಗಿದ್ದ ರಾಜಶೇಖರನ್‌ರವರ ಗುಣಗಾನ ಮಾಡುತ್ತಿದ್ದರು. ಪ್ರತಿಯೊಂದು ಹಳ್ಳಿಯ ಮುಖ್ಯಸ್ಥರಿಗೆ ಪತ್ರ ಬರೆಯುತ್ತಿದ್ದುದು, ಲೋಕಸಭೆಯಲ್ಲಿ ತಾವು ಮಾಡಿದ ಭಾಷಣದ ಸಾರಾಂಶವನ್ನು ಮುದ್ರಿಸಿ ಮತದಾರರಿಗೆ ಹಂಚುತ್ತಿದ್ದುದು, ಏಕಾಂಗಿಯಾಗಿ ಮಂಚನಬೆಲೆ ನೀರಾವರಿ ಯೋಜನೆಯ ಅನುಷ್ಠಾನ ಮಾಡಿದ್ದು - ಹೀಗೆ ಆಗಿನ ಗ್ರಾಮಾಂತರ ಪ್ರದೇಶದ ನಾಯಕರುಗಳು ರಾಜಶೇಖರನ್ ಅವರ ಕ್ರಿಯಾಶೀಲತೆಯನ್ನು ಪ್ರಶಂಸಿಸುತ್ತಿದ್ದರು. ಒಂದು ದಶಕದ ನಂತರವೂ ಒಬ್ಬ ಲೋಕಸಭಾ ಸದಸ್ಯರು ಜನರಿಗೆ ಪ್ರಸ್ತುತರಾಗಿದ್ದಾರೆಂದರೆ ಅವರ ವ್ಯಕ್ತಿತ್ವ ಎಂತಹುದು ಎಂಬುದು ಎಲ್ಲರೂ ಯೋಚಿಸಬೇಕಾದ ವಿಚಾರ. ರಾಜಶೇಖರನ್‌ರವರಿಗೆ ಇತರ ರಾಜಕಾರಣಿಗಳಿಗಿಂತ ಬೇರೆಯಾದ ಮುಖವಿದೆ. ಅವರು ಮೂಲತಃ ಒಬ್ಬ ದಾರ್ಶನಿಕರು. ದೇಶ ವಿದೇಶಗಳನ್ನು ಸುತ್ತಿ ಎಲ್ಲಾ ಕ್ಷೇತ್ರಗಳಲ್ಲೂ ಅಪಾರ ಅನುಭವ ಪಡೆದಿರುವವರು. ಪಡೆದ ಅನುಭವವನ್ನು ನಿರ್ವಂಚನೆಯಿಂದ ಸಮಾಜಕ್ಕೆ ಹಂಚಬೇಕೆಂಬ ಕಳಕಳಿಯುಳ್ಳವರು. ಅವರ ಸ್ನೇಹಶೀಲತೆ, ಸಹಜವಾದ ವಿನಯ, ತಾಳ್ಮೆ ಹಾಗೂ ನೇರ ನುಡಿ ಅವರಿಗೆ ದೊಡ್ಡ ಸಂಖ್ಯೆಯ ಅಭಿಮಾನಿಗಳನ್ನು ದೊರಕಿಸಿಕೊಟ್ಟಿದೆ.

೧೯೬೮ರಲ್ಲಿ ಎಂ.ವಿ.ರಾಜಶೇಖರನ್ ಮುಂದೆ ಮುಖ್ಯಮಂತ್ರಿ ಆದ ಆರ್. ಗುಂಡೂರಾವ್ ಅವರಿಗೆ ಅಪಾರ ರಾಜಕೀಯ ಶಕ್ತಿಯನ್ನು ಕೂಡಿಸಿದವರು ಎಂಬುದು ಅನೇಕರಿಗೆ ಗೊತ್ತಿಲ್ಲ. ಗುಂಡೂರಾವ್ ಯುವಕಾಂಗ್ರೆ ಅಧ್ಯಕ್ಷರಾಗಲು ರಾಜಶೇಖರನ್ ಅವರು ಕಾರಣಕರ್ತರಾಗಿದ್ದಾರೆ. ೧೯೮೦ರಿಂದ ೮೨ರವರೆಗೆ ಕರ್ನಾಟಕದಲ್ಲಿ ಮುಖ್ಯಮಂತ್ರಿ ಆಗಿದ್ದ ಗುಂಡೂರಾವ್ ಅವರು ಗ್ರಾಮಾಂತರ ಅಭಿವೃದ್ಧಿ ಯೋಜನೆ ರೂಪಿಸಲು ರಾಜಶೇಖರನ್ ಪ್ರೇರಕರು. ಅಂತರ್ಜಲವನ್ನು ಬಳಸಿಕೊಂಡು ಕುಡಿಯುವ ನೀರು ಒದಗಿಸಲು ಬೃಹತ್ ಯೋಜನೆಯನ್ನು ಸಿದ್ಧಿ ಮಾಡಿ ಅಂದಿನ ಗುಂಡೂರಾವ್ ಸರಕಾರಕ್ಕೆ ಕೊಟ್ಟವರೇ ರಾಜಶೇಖರನ್. ಆ ಕಾರಣಕ್ಕಾಗಿಯೇ ಗುಂಡೂರಾವ್ ಸರಕಾರ ಬೋರ್‌ವೆಲ್ ಮಿಷನ್‌ಗಳನ್ನು ತರಿಸಿಕೊಂಡಿತ್ತು. ಆದರೆ ಯೋಜನೆ ಅನುಷ್ಠಾನಕ್ಕೆ ಬರಲಿಲ್ಲ. ಆ ನಂತರ ಬಂದ ಜನತಾಪಕ್ಷ ಸರಕಾರ ವಿಶೇಷವಾಗಿ ನಜೀರ್ ಸಾಬ್, ರಾಜಶೇಖರನ್ ಅವರ ಕುಡಿಯುವ ನೀರಿನ ಯೋಜನೆಯನ್ನು ಅನುಷ್ಠಾನ ಮಾಡಿ 'ನೀರ್ ಸಾಬ್' ಎಂದು ಖ್ಯಾತರಾದರು. ಜನತಾಪಕ್ಷದವರು ಅನುಷ್ಠಾನ ಮಾಡಿ ಒಳ್ಳೆ ಹೆಸರು ಪಡೆದುಕೊಂಡು ಬಿಡುತ್ತಾರಲ್ಲಾ ಎಂಬ ಆತಂಕ ಅವರಲ್ಲಿ ಇಲ್ಲ. ಪಕ್ಷ, ಗುಂಪುಗಾರಿಕೆ ಹಾಗು ಪ್ರಾಂತೀಯ ದೃಷ್ಟಿ ಅವರಲ್ಲಿ ಎಂದೂ ಇಲ್ಲ. ಜನ ಸಮುದಾಯಕ್ಕೆ ಒಳಿತಾಗುವ ಕಾರ್ಯಕ್ರಮವನ್ನು ಯಾರೇ ಅನುಷ್ಠಾನ ಮಾಡಿದರೂ ಅವರಿಗೆ ರಾಜಶೇಖರನ್ ಬೆಂಬಲ ಇರುತ್ತದೆ. ಯಾರಾದರೂ ಜನಪರ ಕೆಲಸಗಳನ್ನು ಮಾಡುತ್ತೇವೆಂದು ಮುಂದೆ ಬಂದರೆ ಅವರಿಗೆ

ರಾಜಶೇಖರನ್ ಹೃತ್ಪೂರ್ವಕ ಬೆಂಬಲ ನೀಡುತ್ತಾರೆ. ಇದು ರಾಜಕಾರಣಿಗಳಲ್ಲಿ ಅಪರೂಪವಾಗಿರುವ ಗುಣ. ಇವರನ್ನು ರಾಜಕಾರಣಿ ಎಂದು ವರ್ಗೀಕರಿಸಿದರೆ ದೊಡ್ಡ ದೋಷವಾಗುತ್ತದೆ. ಅದರ ಬದಲು ಜನ ಸಮುದಾಯದ ಹಿತವನ್ನು ಕಾಯುವ ನೈಜ ಜನಸೇವಕ ಎಂಬುದು ಸಮಂಜಸವಾದುದು.

೨೦೦೦ದಲ್ಲಿ ಬೆಂಗಳೂರಿನಲ್ಲಿ ಆಗಿನೆಯ ಅಖಿಲ ಭಾರತ ಕಾಂಗ್ರೆಸ್ ಸಮಾವೇಶ ಜರುಗಿತಷ್ಟೆ. ಆ ಸಮಾವೇಶಕ್ಕೆ ಪೂರಕವಾಗಿ ಸ್ಮರಣಸಂಚಿಕೆ ತರುವ ಹೊಣೆಯನ್ನು ಎ.ಐ.ಸಿ.ಸಿ.ಯು ಎಂ.ವಿ.ರಾಜಶೇಖರನ್ ಹಾಗೂ ಕರ್ನಾಟಕ ಸರ್ಕಾರದ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರಾದ ಆರ್.ವಿ.ದೇಶಪಾಂಡೆಯವರಿಗೆ ವಹಿಸಿತ್ತು. ಅವರ ಕೈ ಕೆಳಗೆ ಕೆಲಸ ಮಾಡುವ ಸೌಭಾಗ್ಯ ನನ್ನದಾಗಿತ್ತು. ಆರ್.ವಿ.ದೇಶಪಾಂಡೆ ಅವರಿಗೆ ರಾಜಶೇಖರನ್ ಅವರನ್ನು ಕಂಡರೆ ಅಪಾರ ಗೌರವ. ಗಾಂಧೀಜಿ ಬೋಧಿಸಿದ ಮೌಲ್ಯಗಳ ಸಾಕ್ಷ್ಯರೂಪ ರಾಜಶೇಖರನ್ ಎಂಬುದು ದೇಶಪಾಂಡೆಯವರ ಅಭಿಮತ. ಎ.ಐ.ಸಿ.ಸಿ.ಯ ನಿರೀಕ್ಷೆಗೂ ಮೀರಿ ಸ್ಮರಣಸಂಚಿಕೆ ಅಚ್ಚುಕಟ್ಟಾಗಿ ಮೂರಬಂತು. ಕಾಂಗ್ರೆಸ್ ಸಮಾವೇಶ ಮುಗಿದು ಹಳೆಯದಾದರೂ ಸ್ಮರಣಸಂಚಿಕೆ ವಿದ್ವತ್ ಕ್ಷೇತ್ರದಲ್ಲಿ ಇಂದಿಗೂ ಅಚ್ಚ ಹೊಸತಾಗಿದೆ. ಇಂತಹ ಸಂಚಿಕೆ ಬರಲು ರಾಜಶೇಖರನ್ ಮತ್ತು ದೇಶಪಾಂಡೆ ಕಾರಣಕರ್ತರು. ವಿಶೇಷವಾಗಿ ರಾಜಶೇಖರನ್ ನಾಡಿನ ಎಲ್ಲಾ ಹಿರಿಯ ವಿದ್ವಾಂಸರ ಹಾಗೂ ಕಾಂಗ್ರೆಸ್ ನಾಯಕರ ಸಮ್ಮಿಲನವನ್ನು ಈ ಸಂಚಿಕೆಯಲ್ಲಿ ಮಾಡಿದ್ದಾರೆ. ಯಾವುದೇ ರಾಜಕೀಯ ಪಕ್ಷಕ್ಕೆ ಆದರ್ಶರೂಪವಾಗಿ ಈ ಸಂಚಿಕೆ ನಿಂತಿದೆ. ಹೀಗೆ ಯಾವುದೇ ಕೆಲಸವನ್ನು ಕೈಗೆತ್ತಿಕೊಂಡರೂ ರಾಜಶೇಖರನ್ ತಮ್ಮೆಲ್ಲಾ ಶಕ್ತಿಯನ್ನು ಅದಕ್ಕೆ ವಿನಿಯೋಗಿಸುತ್ತಾರೆ. ಗರಿಷ್ಠ ಪ್ರಮಾಣದಲ್ಲಿ ತಾವು ಕೈಗೊಂಡ ಯೋಜನೆಗಳು ಯಶಸ್ವಿಯಾಗಬೇಕೆಂಬ ಮಹದಾಸೆ ಅವರದು. ಸಮಯದ ಅರಿವಿಲ್ಲದೆ ದುಡಿಯುವ ಸಂಕಲ್ಪ ಶಕ್ತಿ ಅವರಲ್ಲಿದೆ.

ರಾಜಶೇಖರನ್ ಅವರಲ್ಲಿರುವ ಮತ್ತೊಂದು ವಿಶೇಷ ಗುಣ ಯುವಕರನ್ನು ಪ್ರೋತ್ಸಾಹಿಸುವುದು. ಸಾಮಾನ್ಯವಾಗಿ ರಾಜಕೀಯ ಪಕ್ಷಗಳಲ್ಲಿ ಬಾವುಟ ಹಿಡಿಯಲು ಮತ್ತು ಬ್ಯಾನರ್ ಕಟ್ಟಲು ಮಾತ್ರ ಯುವ ಪಡೆಗಳಿರುತ್ತವೆ. ಅಧಿಕಾರ ನಿರ್ವಹಣೆಗೆ ಅನುಭವ ಬೇಕೆಂದು ಏಕಪಕ್ಷೀಯವಾಗಿ ನಿರ್ಣಯವನ್ನು ಕೈಗೊಳ್ಳಲಾಗುತ್ತದೆ. ಕ್ರಿಯಾಶೀಲ ಸಮಾಜದಲ್ಲಿ ಯುವಶಕ್ತಿ ಹಾಗು ಹಿರಿಯರು ಸಮ ಪ್ರಮಾಣದಲ್ಲಿ ಅಲ್ಲ, ೭೫:೨೫ ಅಂತರದಲ್ಲಿ ಇರಬೇಕು. ೭೫ಕ್ಕೂ ಹೆಚ್ಚಿನ ಅವಕಾಶಗಳು ತರುಣ ಜನಾಂಗಕ್ಕೆ ದೊರೆಯಬೇಕು, ಈ ಕೆಲಸವನ್ನು ವ್ಯವಸ್ಥಿತವಾಗಿ ಮಾಡಿದ ಶ್ರೀಮತಿ ಇಂದಿರಾ ಗಾಂಧಿ ಹಾಗೂ ರಾಜೀವ ಗಾಂಧಿಯರವರು ದೇಶದ ಇತಿಹಾಸದಲ್ಲಿ ಅದ್ಭುತ ಬದಲಾವಣೆಗೆ ಕಾರಣೀಕೃತರಾಗಿದ್ದಾರೆ. ಆ ಪರಂಪರೆಗೆ ಸೇರಿದವರು ನಮ್ಮ ಎಂ.ವಿ. ರಾಜಶೇಖರನ್. ಸದಾ ಯುವಕರನ್ನು ತಮ್ಮ ಬಳಿ ಇಟ್ಟುಕೊಂಡು ಅವರಿಗೆ ಮಾರ್ಗದರ್ಶನ ಮಾಡುತ್ತಾರೆ. ಉತ್ತಮ ಕೆಲಸ ಮಾಡಿದ ಯುವಕರನ್ನು ಬೆನ್ನು

ತಟ್ಟಿ ಪಕ್ಷ ಹಾಗೂ ಸರಕಾರದಲ್ಲಿ ಸೂಕ್ತ ಸ್ಥಾನ ದೊರೆಯಬೇಕೆಂದು ಒತ್ತಾಯಿಸುತ್ತಾರೆ. ಅವರ ಮನಸ್ಸು ಇಂದಿಗೂ ಯುವಕರಂತೆ ಚೇತೋಹಾರಿಯಾಗಿದೆ. ಅವರ ದೇಹಕ್ಕೆ ೭೫ ತುಂಬಿರಬಹುದು, ಆದರೆ ಅವರ ಮನಸ್ಸು ೩೦ರ ಹದಿಹರೆಯದಂತಿದೆ. ಅವರ ಆ ಉತ್ಸಾಹ, ಕ್ರಿಯಾಶೀಲತೆ, ಸಂಘಟನೆ ಹಾಗೂ ದೇಶಪ್ರೇಮ ಆದರ್ಶ ಯುವಕನನ್ನು ಆಕರ್ಷಿಸುತ್ತದೆ. ಇಂತಹ ಉತ್ಸಾಹಶೀಲ ರಾಜಶೇಖರನ್ ಸದಾ ನಮಗೆ ಮಾರ್ಗದರ್ಶನ ನೀಡಲಿ.

***

# ರೈತ ಸಂಘಟಕ

ಬಿ.ಎಂ. ಕೃಷ್ಣಪ್ಪಗೌಡ

ಎಂ.ವಿ. ರಾಜಶೇಖರನ್‌ರವರು ಮೇಲ್ಪಂಕ್ತಿಯ ರಾಜಕಾರಣಿಗಳು. ರಚಾನಾತ್ಮಕ ಕಾರ್ಯಕರ್ತರು. ನನಗೆ ತಿಳಿದಿರುವಂತೆ ಇವರು ಉತ್ಸಾಹಿ ತರುಣ ರಾಜಕೀಯ ಧುರೀಣರು. ಇವರು ಕೃಷಿಕ ಸಮಾಜ ಮತ್ತು ವ್ಯವಸಾಯ ಕ್ಷೇತ್ರದಲ್ಲಿ ರೈತರ ಸಮಸ್ಯೆಗಳನ್ನು ಸರ್ಕಾರದಲ್ಲಿ ಬಗೆಹರಿಸಿ ಕೊಡುವುದಕ್ಕೆ ಬಹಳ ನೆರವಾದರು. ಇವರು ಕೃಷಿಕ ಸಮಾಜಕ್ಕೆ ಸಲ್ಲಿಸಿರುವ ಸೇವೆ ಅತ್ಯಂತ ಹಿರಿದಾದದ್ದು, ಸರ್ಕಾರದಿಂದ ೯೯ ವರ್ಷಗಳ ಗುತ್ತಿಗೆ ಆಧಾರದ ಮೇಲೆ ಕೃಷಿಕ ಸಮಾಜಕ್ಕೆ ನಿವೇಶನವನ್ನು (ಕಟ್ಟಡ ಸೇರಿದಂತೆ) ಕೊಡಿಸಿಕೊಟ್ಟಿರುವುದು ಸ್ಮರಣೀಯವಾದದ್ದು.

೧೯೬೬-೬೭ರ ಸಾಲಿನಲ್ಲಿ ನಿವೇಶನವನ್ನು ಪಡೆದಾಗ ಅಂದಿನ ಮೈಸೂರು ಪ್ರದೇಶ ಕೃಷಿಕ ಸಮಾಜದ ಶೈತ್ಯಾಗಾರ ಸಹಕಾರ ಸಂಘವನ್ನು ಸ್ಥಾಪಿಸಿ, ಹಣ್ಣು ತರಕಾರಿಗಳನ್ನು ಶೈತ್ಯಾಗಾರದಲ್ಲಿ ಶೇಖರಿಸಿ ಇಟ್ಟು ಕೊಳ್ಳಲು ಅವಕಾಶ ಮಾಡಿಕೊಟ್ಟಿರುತ್ತಾರೆ.

ಎಂ.ವಿ.ರಾಜಶೇಖರನ್‌ರವರು ಸಮಾಜದ ಪ್ರಧಾನ ಕಾರ್ಯದರ್ಶಿಯವರಾಗಿದ್ದಾಗ ಬಹು ಮುಖ್ಯವಾಗಿ ಯುವಕ ರೈತರನ್ನು ಸಂಘಟನೆ ಮಾಡಿ- "ಯುವಕ ರೈತರ ಜಾಥಾಗೋಷ್ಠಿ" ಏರ್ಪಡಿಸುವುದರ ಮೂಲಕ ಸಹಾಯ ಮಾಡಿರುತ್ತಾರೆ. ಕೃಷಿಕ ಸಮಾಜದಲ್ಲಿ ವಾಚನಾಲಯ, ಸಭಾಭವನ ಏರ್ಪಡಿಸಲು ಆಗಲೇ ವ್ಯವಸ್ಥೆ ಮಾಡಿದ್ದರು.

ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಯುವಕ ರೈತರನ್ನು ಸಂಘಟಿಸಿ, ಸದಸ್ಯರನ್ನು ನೊಂದಾಯಿಸುವ ವ್ಯವಸ್ಥೆ ಮಾಡಿದ್ದರು. ಇವರು ಲೋಕಸಭಾ ಸದಸ್ಯರಾಗಿದ್ದ ಅವಧಿಯಲ್ಲಿ ತಮ್ಮ ಕ್ಷೇತ್ರ ರೈತರಲ್ಲಿ ಅತಿ ಹೆಚ್ಚಿನ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಶ್ರೀಯುತರು ಶಾಸಕರಾಗಿಯೂ, ವಿಧಾನ ಪರಿಷತ್ತಿನ ಸದಸ್ಯರಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಈಗ ರಾಜ್ಯಸಭಾ ಸದಸ್ಯರಾಗಿ ಕರ್ನಾಟಕ ರಾಜ್ಯಕ್ಕೆ ಮತ್ತು ರಾಷ್ಟ್ರಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ ಸಮಾಜದ ರಾಜಕೀಯ ಹಾಗೂ ಇತ್ತೀಚಿನ ಸಮಸ್ಯೆಗಳನ್ನು ಬಗೆಹರಿಸುವ ಶಕ್ತಿಯನ್ನು ದಯಾಮಯನಾದ ಭಗವಂತನು ನೀಡಿ ಆಯುರಾರೋಗ್ಯ ಐಶ್ವರ್ಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

***

# ಕೃಷಿಕ ಸಮಾಜ ನಿರ್ಮಾಪಕ

ಡಾ। ಸಿ. ನಾಗರಾಜಯ್ಯ

ಶ್ರೀ ಎಂ. ವಿ ರಾಜಶೇಖರನ್‌ರವರ ಸೇವೆಯು ಕೃಷಿಕ ಸಮಾಜಕ್ಕೆ ಅನನ್ಯವಾದುದ್ದು, ಅಂದಿನ ಮೈಸೂರು ಪ್ರದೇಶ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿಯವರಾಗಿದ್ದ ಅವಧಿಯ ದಾಖಲಾತಿ ಪುಟಗಳನ್ನು ತಿರುವಿಹಾಕಿದರೆ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ. ಶ್ರೀಯುತರು ತಾಲ್ಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ರೈತರ ಸಂಘಟನೆಗೆ ನೆರವಾಗಿದ್ದಾರೆ. ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ರೈತರದೇ ಆದಂತಹ ವೇದಿಕೆ ಇರಬೇಕೆಂದು ಕೆಲವು ಕಡೆ ನಿವೇಶನ ಮತ್ತು ಕಟ್ಟಡಗಳು ನಿರ್ಮಿತವಾಗಿರುತ್ತವೆ. ರೈತರಿಗೆ ಕೃಷಿ ಬಗ್ಗೆ ತಿಳುವಳಿಕೆ ಮೂಡಿಸಲು 'ಮೈಸೂರು ವ್ಯವಸಾಯ ಪತ್ರಿಕೆ'ಯನ್ನು ಮುದ್ರಿಸಿ ರೈತರಿಗೆ ವಿತರಿಸಲು ವ್ಯವಸ್ಥೆ ಮಾಡಿರುವುದು ಕಂಡುಬಂದಿದೆ. ಇಂದಿಗೂ ಸಹ 'ವ್ಯವಸಾಯ ಪತ್ರಿಕೆ'ಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಿಸಿ ರಾಜ್ಯದಾದ್ಯಂತ ತನ್ನ ಎಲ್ಲಾ ಸದಸ್ಯರುಗಳಿಗೆ ಉಚಿತವಾಗಿ ಕಳುಹಿಸಿಕೊಡುತ್ತಾ ಬರಲಾಗುತ್ತಿದೆ.

ಕೃಷಿಕ ಸಮಾಜಕ್ಕೆ ತನ್ನದೇ ಆದ ಒಂದು ಸ್ವಂತ ಮುದ್ರಣಾಲಯ ಇರಬೇಕೆಂಬ ಉದ್ದೇಶದಿಂದ, ಈ ಬಗ್ಗೆ ಚಿಂತನೆ ಮಾಡಿ ಕೃಷಿ ಇಲಾಖೆಯ ಕೃಷಿ ನಿರ್ದೇಶಕರ ನೆರವಿನೊಂದಿಗೆ ಜರ್ಮನಿಯಿಂದ ಒ.ಎಂ. ಯಂತ್ರವನ್ನು ಸಮಾಜದ ಮುದ್ರಣಾಲಯಕ್ಕೆ ತರಿಸಿಕೊಟ್ಟಿರುತ್ತಾರೆ.

೧೯೬೧ ರಿಂದ ೧೯೭೦ರವರೆಗೆ ಶ್ರೀಯುತರ ಸೇವಾ ಅವಧಿಯಲ್ಲಿ ದೇಶ ವಿದೇಶದಿಂದ ರೈತರನ್ನು ರಾಜ್ಯಕ್ಕೆ ಬರಮಾಡಿಕೊಳ್ಳುವ ವ್ಯವಸ್ಥೆ ಮಾಡಿರುತ್ತಾರೆ. ಹಾಗೆಯೇ ನಮ್ಮ ರಾಜ್ಯದ ರೈತರನ್ನು ದೇಶ, ವಿದೇಶಗಳಿಗೆ ಕಳುಹಿಸಿಕೊಡುವ ಹವ್ಯಾಸ ಹೊಂದಿದ್ದರು.

ಶ್ರೀಯುತರು ಯುವ ರೈತರ ಪೀಳಿಗೆಯನ್ನು ಸಂಘಟಿಸಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. ೧೯೬೫-೬೬ ರ ಸಾಲಿನಲ್ಲಿ ಯುವಕ ರೈತರ ಮೇಳ ಹಾಗೂ ಈ ಕೃಷಿ ಮೇಳಕ್ಕೆ ಸಂಬಂಧಿಸಿದಂತೆ ವಸ್ತು ಪ್ರದರ್ಶನ, ಹೈನುಗಾರಿಕೆ, ಕುರಿ ಸಾಕಾಣಿಕೆ- ಮುಂತಾದ ತರಬೇತಿಗಳನ್ನು ಸಹ 'ಏರ್ಪಾಡು' ಮಾಡುತ್ತಿದ್ದರು.

ಮೈಸೂರು ಪ್ರದೇಶ ಕೃಷಿಕ ಸಮಾಜಕ್ಕೆ ಸ್ವಂತ ಕಟ್ಟಡವಿರಬೇಕೆಂದು ಆಲೋಚಿಸಿ, ಸರ್ಕಾರದಿಂದ ೯೯ ವರ್ಷಗಳ ಗುತ್ತಿಗೆ ಆಧಾರದ ಮೇಲೆ ಈಗಿರುವ ಕಟ್ಟಡದ ನಿವೇಶನವನ್ನು ಕೊಡಿಸಿರುವುದರಿಂದ ರೈತರಿಗೆ ಬಹಳ ಉಪಯೋಗವಾಗಿದೆ. ಇವರ ಅಧಿಕಾರ ಅವಧಿಯಲ್ಲಿ ಕೃಷಿಕ ಸಮಾಜದ ಶೈತ್ಯಾಗಾರ ಸಹಕಾರ ಸಂಘವಿರಬೇಕೆಂಬ ಆಶಾಭಾವನೆಯಿಂದ ಶೈತ್ಯಾಗಾರ ಸಹಕಾರ ಸಂಘವನ್ನು ಸಹ ಕಟ್ಟಿ ಬಹು ಯಶಸ್ವಿಯಾಗಿದ್ದಾರೆ. ಇದರ ಮೂಲಕ ರೈತರು ಬೆಳೆದ ಹಣ್ಣು, ತರಕಾರಿಗಳನ್ನು ಶೇಖರಣೆಮಾಡಲು ಅನುವುಮಾಡಿಕೊಟ್ಟಿದ್ದಾರೆ.

ಶ್ರೀಯುತರು ಸೇವೆಯನ್ನು ಕರ್ನಾಟಕ ಪ್ರದೇಶ ಕೃಷಿಕ ಸಮಾಜವು ಸ್ಮರಿಸಿಕೊಳ್ಳಬೇಕಾಗಿದೆ. ಮುಖ್ಯವಾಗಿ ಈಗ ರಾರಾಜಿಸುತ್ತಿರುವ ಕೃಷಿಕ ಸಮಾಜವು ಇವರ ಪ್ರಯತ್ನದಿಂದಲೇ ನಿರ್ಮಾಣವಾಯಿತೆಂಬುದರಲ್ಲಿ ಸಂದೇಹವಿಲ್ಲ.

***



# ರೈತ ಬಂಧು

● ಕೆ.ವಿ. ಜಯರಾಂ

ಶ್ರೀ ಎಂ. ವಿ ರಾಜಶೇಖರನ್, ರಾಜ್ಯಸಭಾ ಸದಸ್ಯರು. ಇವರು ದಿನಾಂಕ ೧೨ನೇ ಸೆಪ್ಟೆಂಬರ್ ೧೯೨೮ರಲ್ಲಿ ಕನಕಪುರ ತಾಲ್ಲೂಕಿನ ಮರಳವಾಡಿ ಗ್ರಾಮದ ಒಂದು ಸಾಮಾನ್ಯ ಕುಟುಂಬದಲ್ಲಿ ಜನಿಸಿದರು. ಇವರು ವೃತ್ತಿಯಲ್ಲಿ ವಕೀಲರಾಗಿ ಚಿಕ್ಕನಿಂದಲೂ ಬಹಳ ಪ್ರಾಮಾಣಿಕವಾಗಿ ಬಂದು ಜನರ ಸೇವೆಯನ್ನು ಮಾಡಿ ಅದರಲ್ಲೂ ಹಳ್ಳಿಗಾಡುಗಳ ಜನರಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟು ಹಳ್ಳಿಗಳ ರೈತರ ಜೊತೆ ಸ್ಪಂದಿಸಿ ತಮ್ಮ ಕೈಲಾದ ಸಹಾಯವನ್ನು ಮಾಡಿ ಬಡ ರೈತರ ಏಳಿಗೆಗೆ ದುಡಿದಂತಹ ಮಹಾನ್ ವ್ಯಕ್ತಿ. ಇವರ ಮಾವನವರಾದ ಶ್ರೀ ಎಸ್. ನಿಜಲಿಂಗಪ್ಪನವರು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಅವರ ಅಳಿಯಂದಿರಾಗಿ ಬಹಳ ಪ್ರಾಮಾಣಿಕತೆಯಿಂದ ರಾಜಕೀಯ ಪ್ರವೇಶಮಾಡಿ ಶಾಸನ ಸಭಾ ಸದಸ್ಯರಾಗಿ ಹೆಚ್ಚಿನ ರೀತಿಯ ಸೇವೆ ಸಲ್ಲಿಸಿ ವಿವಿಧ ಕ್ಷೇತ್ರಗಳಲ್ಲಿ ಬಡ ಜನರಿಗೆ ಅದರಲ್ಲೂ ರೈತಾಪಿ ಜನರಿಗೆ ಮಾರ್ಗದರ್ಶಕರಾಗಿದ್ದಾರೆ. ತದನಂತರ ಕರ್ನಾಟಕದ ಕನಕಪುರ ಲೋಕಸಭಾ ಕ್ಷೇತ್ರದಿಂದ ಸದಸ್ಯರಾಗಿ ಆರಿಸಿಬಂದಿರುವುದು ಸರಿಯಷ್ಟೆ. ಇವರು ಲೋಕಸಭಾ ಸದಸ್ಯರಾದ ಮೇಲೆ ಆದಷ್ಟು ಹಳ್ಳಿಗಳ ಅವಶ್ಯಕತೆಗಳಾದ ರಸ್ತೆಗಳು, ವಿದ್ಯುತ್ ದೀಪಗಳು, ನೀರಿನ ಅನುಕೂಲ ಹಾಗೂ ಬಡ ಜನರ ಆರೋಗ್ಯದ ದೃಷ್ಟಿಯಿಂದ ಆಸ್ಪತ್ರೆಗಳ ಅಭಿವೃದ್ಧಿ ಯೋಜನೆಗಳನ್ನು ಕೈಗೆತ್ತಿಕೊಂಡು ತುಂಬಾ ಕಾಳಜಿ ವಹಿಸಿ ಗ್ರಾಮಾಂತರ ಪ್ರದೇಶದ ಬಡ ಜನರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಜನರ ಪ್ರೀತಿಗೆ ಪಾತ್ರರಾಗಿದ್ದಾರೆ.

ದಿವಂಗತ ಕೆ.ವಿ. ಭೈರೇಗೌಡರು, ಕರ್ನಾಟಕ ಕೃಷಿಕ ಸಮಾಜದ ಅಧ್ಯಕ್ಷರಾಗಿದ್ದಾಗ ಇವರು ಅದರ ಗೌರವ ಕಾರ್ಯದರ್ಶಿಯಾಗಿ ರೈತರ 'ಏಳಿಗೆ'ಗಾಗಿ ಹೆಚ್ಚಿನ ಉತ್ತೇಜನ ಉತ್ತೇಜನ ನೀಡುವ ಸಲುವಾಗಿ ರೈತ ಕುಟುಂಬದ ಜನರಿಗೆ ಅನೇಕ ಅನುಕೂಲಗಳನ್ನು ಮಾಡಿ, ಚಿರಸ್ಮರಣೀಯರಾಗಿದ್ದಾರೆ. ಯುವಕರ ಅಭಿವೃದ್ಧಿ ಯೋಜನೆಯಡಿಯಲ್ಲಿ ನಮ್ಮ

ಯುವಕರು ಪರರಾಷ್ಟ್ರಗಳಲ್ಲಿ ಹೋಗಿ ಕೃಷಿಕ ಸಮಾಜದ ಏಳಿಗೆಯ ಬಗ್ಗೆ ತರಬೇತಿ ಪಡೆಯುವುದು, ಮತ್ತು ಹೊರ ರಾಷ್ಟ್ರಗಳ ವಿದ್ಯಾವಂತ ಯುವಕರು ಅಂದರೆ ಕೃಷಿಕರು ನಮ್ಮ ಭಾರತದಲ್ಲಿ ಬಂದು ಕೃಷಿಕ ಸಮಾಜದ ಏಳಿಗೆಯ ಬಗ್ಗೆ ತರಬೇತಿ ಪಡೆಯುವುದು-ಇಂತಹ ಒಂದು ಕಾರ್ಯಕ್ರಮವನ್ನು ಏರ್ಪಡಿಸಿ ನಮ್ಮ ದೇಶದ ಅದರಲ್ಲೂ ಕರ್ನಾಟಕ ರಾಜ್ಯದಲ್ಲಿ ರೈತರ ಅಭಿವೃದ್ಧಿ ಹೆಚ್ಚಿನ ಪ್ರೋತ್ಸಾಹ ಕೊಟ್ಟಿರುತ್ತಾರೆ. ಈ ಅಭಿವೃದ್ಧಿ, ಯೋಜನೆಯಡಿಯಲ್ಲಿ ನಾನು ಕೂಡ ಒಬ್ಬ ಸದಸ್ಯನಾಗಿ ಹೊರ ದೇಶಕ್ಕೆ ಹೋಗಿ ಬಂದಿರುತ್ತೇನೆ ಎಂದು ಹೇಳಲು ಹೆಮ್ಮೆಪಡುತ್ತೇನೆ.

***

# ನವಿರು ನಡೆನುಡಿಯ ಚಿಂತಕ

◆ ಎಸ್.ವಿ. ಜಯಶೀಲರಾವ್

ಸುಮಾರು ನಾಲ್ಕು ದಶಕಗಳ ಹಿಂದೆ. ಸಂಪಾದಕ ದಿವಂಗತ ಟಿ.ಎಸ್. ರಾಮಚಂದ್ರರಾಯರನ್ನು ಭೇಟಿ ಮಾಡಲು 'ಪ್ರಜಾವಾಣಿ' ಕಛೇರಿಗೆ ಸುಂದರ ಯುವಕರೊಬ್ಬರು ಬಂದರು.

ನನಗೆ ಪರಿಚಯವಿರಲಿಲ್ಲ. ನನ್ನನ್ನು ನೋಡಿದ ಕೂಡಲೇ ನಕ್ಕರು. ನಗುಮುಖದೊಡನೆ ಸಂಪಾದಕರ ಕೊಠಡಿ ಪ್ರವೇಶಿಸಿದರು. ಹೊರ ಬಂದಾಗಲೂ ಅದೇ ಅರಳಿದ ಮುಖ, ಅವರು ಯಾರೆಂಬುದು ಅವರು ವಾಪಸು ಹೋದನಂತರ ತಿಳಿಯಿತು.

ಅನಂತರದ ವರ್ಷಗಳಲ್ಲಿ ಭೇಟಿ ಮಾಡಿದಾಗಲೆಲ್ಲ ಅವರ ನಗುವಿನ ಮಮತೆಯನ್ನು ಅನುಭವಿಸಿದ್ದೇನೆ. ಯಾವ ಭೇದವೂ ಇಲ್ಲದ ಇವರ ಆತ್ಮೀಯತೆ ಭೇಟಿ ಮಾಡಿದವರನ್ನು ಅಪ್ಪಿಕೊಳ್ಳುತ್ತದೆ.

ಅಹಂಮ್ಮೇ ಇಲ್ಲದ ಸ್ವಾಭಿಮಾನಿ, ಸರ್ವರನ್ನು ಪ್ರೀತಿಸಿ, ಗೌರವಿಸುವ ವಿಶಾಲ ಹೃದಯಿ. ೧೯೪೨ರ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲೇ ಭಾಗವಹಿಸಿದ ದೇಶಭಕ್ತ ಯುವಕ. ಆಗಿನಿಂದಲೇ ಪರಿಸರದ ಬಗ್ಗೆ 'ಜನರ' ಅದರಲ್ಲೂ ಗ್ರಾಮೀಣ ಜನತೆಯ ಅಭಿವೃದ್ಧಿ ಕುರಿತು ಚಿಂತನೆ. ಅಂದಿನಿಂದ ಆರಂಭವಾಗಿ, ಇನ್ನೂ ನಿಲ್ಲದೆ, ಮುಂದೆಯೂ ಸಾಗುವ ಶ್ರದ್ಧೆ ಹಾಗೂ ಪ್ರಯತ್ನ ಇವರದು. ವಿಧಾನಸಭೆ, ಲೋಕಸಭೆ, ರಾಜ್ಯಸಭೆಗಳಲ್ಲಿ ಸದಸ್ಯರಾಗಿ ಸಮಾಜದ ಸರ್ವತೋಮುಖದ ಅಭಿವೃದ್ಧಿಗಾಗಿ ಶ್ರಮಿಸುತ್ತಾ ಬಂದಿರುವುದು ಅವರ ಸೇವೆಯ ಸಂತಸ ತರುವ ಒಂದು ಮುಖ.

ಲೆಕ್ಕವಿಲ್ಲದಷ್ಟು ವಿದೇಶಗಳಲ್ಲಿ ಪ್ರವಾಸ ಮಾಡಿ ಅಪಾರ ಜ್ಞಾನ ಹಾಗೂ ಅನುಭವ ಸಂಪಾದನೆ ಮಾಡಿದ್ದಾರೆ. ಇದರಿಂದಾಗಿ ಭಾರತದ ಕೃಷಿ, ಗ್ರಾಮೀಣ ಅಭಿವೃದ್ಧಿ ಹಾಗೂ ಮಾನವ ಸಂಪನ್ಮೂಲ ಕ್ಷೇತ್ರಕ್ಕೆ ಅಪಾರ ಉಪಕಾರವಾಗಿದೆ.

ಕರ್ನಾಟಕದಲ್ಲಿ ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ ಹಾಗೂ ಯುವಜನ ಸೇವಾ ಇಲಾಖೆ ಆರಂಭವಾಗಲು ಇವರು ಕಾರಣರು. ಇದು ಇವರು ಸಲ್ಲಿಸುತ್ತ ಬಂದಿರುವ ಅಮಿತ ಸೇವಾ ವ್ಯಾಪ್ತಿಯನ್ನು ಸೂಚಿಸುತ್ತದೆ.

ಇವರ ಆನಂದದ ನಗುವೇ ಇವರಿಗಿರುವ ಪರಿಸರಪ್ರೇಮ ಹಾಗೂ ಎಲ್ಲರ ಹಿತಕ್ಕಾಗಿ ಶ್ರಮಿಸಬೇಕೆಂಬ ಆರದ ಆಸಕ್ತಿಯ ಸಂಕೇತ. ನುಡಿಯೂ, ನಡೆಯೂ ಎಂದೂ ನವಿರು. ಇದಕ್ಕಾಗಿಯೇ ಇವರು ಅಪರೂಪದ ವ್ಯಕ್ತಿ. ಅನುಕರಣೀಯ ವ್ಯಕ್ತಿ.

ಭಾರತದ ಸ್ವಾತಂತ್ರ್ಯಕ್ಕಾಗಿ, ಕರ್ನಾಟಕದ ಏಕೀಕರಣಕ್ಕಾಗಿ ಯಾರೊಡನೆಯೂ ರಾಜಿ ಮಾಡಿಕೊಳ್ಳದೆ, ನಿಸ್ಪೃಹತೆಯಿಂದ ಹೋರಾಡಿದ ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪ ಅವರು ನಾಡಿನ ಅಭಿವೃದ್ಧಿ ಕುರಿತು ಸದಾ ಚಿಂತಿಸುತ್ತಿದ್ದರು. ನೈಸರ್ಗಿಕ ಸಂಪತ್ತನ್ನು ದೇಶದ ಎಲ್ಲರ ಏಳಿಗೆಗಾಗಿ ಉಪಯೋಗಿಸಿಕೊಳ್ಳಬೇಕೆಂದು ಹಂಬಲಿಸಿ ಹೇಳಿದ ಅವರ ಭಾಷಣ ಅಪರೂಪ. ಅವರ ನಾಲ್ಕನೆಯ ಮಗಳು ಗಿರಿಜಾ ಅವರ ಕೈಹಿಡಿದ ಇವರೂ ರೈತರ ಹಾಗೂ ಗ್ರಾಮೀಣ ಜನತೆಯ ಅಭಿವೃದ್ಧಿಗಾಗಿ ದುಡಿಯುತ್ತ ಬಂದಿರುವ, ತಮ್ಮ ಬಗ್ಗೆ ಕೊಚ್ಚಿಕೊಳ್ಳದ ಅಪರೂಪ ನಾಯಕರು. ಏಕೋದ್ದೇಶವಿರುವ ಹಾಗೂ ಅದಕ್ಕಾಗಿ ದುಡಿದ ಇವರಿಬ್ಬರು ಮಾವ-ಅಳಿಯ ಆದುದು ಕರ್ಮ-ಧರ್ಮ ಸಂಯೋಗ.

ನನಗೆ ಗೊತ್ತು. ನಾನು ಮತ್ತೆ ಭೇಟಿ ಮಾಡಿದಾಗ "ಏನ್ ಜಯಶೀಲ್ ಹೆಂಗಿದ್ದೀರಿ" ಎಂದು ಅತ್ಯಂತ ಅಭಿಮಾನದಿಂದ ನನ್ನ ಕೈ ಹಿಡಿಯುವರು. ಹಠಾತ್ತನೆ ಲವಲವಿಕೆಯನ್ನುಂಟು ಮಾಡುವ ಈ ಸ್ಪರ್ಶಕ್ಕಾಗಿ ಕಾಯುತ್ತಿದ್ದೇನೆ. ಈಗ ಇವರಿಗೆ ೭೫ ತುಂಬಿದೆ. ಆದರೂ ಯುವಕ ನಾಯಕರೇ ಆಗಿರುವ ಶ್ರೀ ಎಂ.ವಿ. ರಾಜಶೇಖರನ್ ಅವರು ಬಹುಕಾಲ ನಗುತ್ತಿರುವಂತೆ ಕರುಣಿಸು ಎಂದು ವಿಶ್ವಶಕ್ತಿಯನ್ನು ಪ್ರಾರ್ಥಿಸುತ್ತೇನೆ.

***

# ಗ್ರಾಮೀಣಾಭಿವೃದ್ಧಿಗೆ ಪರ್ಯಾಯ ಹೆಸರು

◆ **ಕೆ.ಶ್ರೀಧರ ಆಚಾರ್**

ಕೆಲವರು ಇದ್ದಾರೆ, ಅವರಿಗೆ ಪ್ರಚಾರ ಪಡೆಯುವ ಕಲೆ ಕರಗತ ವಾಗಿರುತ್ತದೆ. ಕೆಲಸ ಮಾಡಿದರೂ ಪ್ರಚಾರ, ಕೆಲಸ ಮಾಡದೇ ಇದ್ದರೂ ಪ್ರಚಾರ. ಇನ್ನೂ ಕೆಲವರು ಪ್ರಚಾರಕ್ಕಾಗಿಯೇ ಕೆಲಸ ಮಾಡುತ್ತಾರೆ. ಇಂಥವರು ರಾಜಕೀಯ ಕ್ಷೇತ್ರಕ್ಕೆ ಸೀಮಿತರಾದವರಲ್ಲ.

ರಾಜಕೀಯದಲ್ಲಿ ಸಕ್ರಿಯ ಪಾತ್ರ ವಹಿಸಿದ್ದರೂ ಪ್ರಚಾರಕ್ಕಾಗಿ ಎಂದೂ ಹಂಬಲಿಸದ ಅಪರೂಪದ ರಾಜಕಾರಣಿ ಎಂ.ವಿ. ರಾಜಶೇಖರನ್. ಗ್ರಾಮೀಣ ಅಭಿವೃದ್ಧಿಗೆ ಪರ್ಯಾಯ ಹೆಸರು ರಾಜಶೇಖರನ್ ಎಂದು ಹೇಳುವಷ್ಟರ ಮಟ್ಟಿಗೆ ಅವರು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬಗ್ಗೆ ಸದಾಕಾಲ ಚಿಂತನೆ ನಡೆಸಿದ್ದಾರೆ, ಆ ದಿಸೆಯಲ್ಲಿ ಶ್ರಮಿಸಿದ್ದಾರೆ.

ಸುಮಾರು ೨೫-೩೦ ವರ್ಷಗಳಿಂದ ರಾಜಶೇಖರನ್ ಅವರು ನನಗೆ ಪರಿಚಿತರು. ಅವರು ಲೋಕಸಭಾ ಸದಸ್ಯರಾಗಿ, ವಿಧಾನಸಭಾ ಸದಸ್ಯರಾಗಿ, ಕಾಂಗ್ರೆಸ್ ಶಾಸಕಾಂಗ ಪಕ್ಷದ ವಕ್ತಾರರಾಗಿ, ಪ್ರದೇಶ ಕಾಂಗ್ರೆಸ್ ಪದಾಧಿಕಾರಿ ಯಾಗಿ ಕಾರ್ಯ ನಿರ್ವಹಿಸಿರುವುದನ್ನು ವರದಿಗಾರನಾಗಿ ಸಮೀಪದಿಂದ ನೋಡಿದ್ದೇನೆ. ಒಬ್ಬ ಚುನಾಯಿತ ಪ್ರತಿನಿಧಿ, ರಾಜಕಾರಣಿಯಲ್ಲಿ ಜನಪರ ಕಾಳಜಿ ಯಾವ ರೀತಿ ಇರಬೇಕು ಎಂಬುದಕ್ಕೆ ರಾಜಶೇಖರನ್ ಮಾದರಿ ಯಾಗಿದ್ದಾರೆ ಎಂದರೆ ಉತ್ಪ್ರೇಕ್ಷೆ ಆಗಲಾರದು. ವಿಧಾನಸಭೆಯ ಪ್ರಶ್ನೋತ್ತರ ವೇಳೆಯಲ್ಲಾಗಲೀ, ಚರ್ಚೆಯಲ್ಲಾಗಲೀ ರಾಜಶೇಖರನ್ ಅವರು ಭಾಗ ವಹಿಸಿದಾಗ ತಮ್ಮ ಕ್ಷೇತ್ರದ ಮಾತ್ರವಲ್ಲ. ರಾಜ್ಯದ ಗ್ರಾಮೀಣ ಪ್ರದೇಶದ ಸ್ಥಿತಿಗತಿಯನ್ನು ಅಂಕಿ-ಅಂಶಗಳೊಂದಿಗೆ ಯಥಾವತ್ತಾಗಿ ಮೂಡಿಸುತ್ತಿದ್ದ ವೈಖರಿ ಅನುಕರಣೀಯ.

ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಯ ಸಂಸ್ಥಾಪಕ-ಸಂಚಾಲಕರಾಗಿ ರಾಜಶೇಖರನ್ ಅವರು ಗ್ರಾಮೀಣ ಅಭಿವೃದ್ಧಿಗೆ ನೀಡಿದ ಕೊಡುಗೆ ಅನನ್ಯ.

ಸಾರ್ವಜನಿಕ ಕ್ಷೇತ್ರದಲ್ಲಿ ಐದು ದಶಕಗಳಿಂದ ಸೇವೆ ಸಲ್ಲಿಸುತ್ತಾ ಬಂದಿರುವ ಈ ಹಿರಿಯ ನೇತಾರರು ಸರಳತೆ, ಸಜ್ಜನಿಕೆಯಲ್ಲೂ ಕಿರಿಯರಿಗೆ ಆದರ್ಶಪ್ರಾಯರಾಗಿದ್ದಾರೆ.

ರಾಜಕೀಯದಲ್ಲಿ ಇಷ್ಟು ದೀರ್ಘಕಾಲದ ಅನುಭವ ಇದ್ದರೂ, ರಾಜಶೇಖರನ್ ಒಂದು ಬಾರಿಯೂ ಮಂತ್ರಿಯಾಗಿಲ್ಲ ಎಂದರೆ ಆಶ್ಚರ್ಯಕರ, ಆದರೂ ಸತ್ಯ. ರಾಜಕಾರಣದಲ್ಲಿ ಅಂಬೆಗಾಲು ಇಡುತ್ತಿರುವವರೂ ಸಚಿವರಾಗಿದ್ದಾರೆ, ನಿಜ. ಆದರೆ ಅದಕ್ಕಾಗಿ ಲಾಬಿ ನಡೆಸುವ, ಒತ್ತಡ ಹೇರುವ ಕೆಲಸ ರಾಜಶೇಖರನ್ ಮಾಡಲಿಲ್ಲ ಅಷ್ಟೆ. ಇದರಿಂದ ನಷ್ಟ ಆಗಿರುವುದು ರಾಜಶೇಖರನ್ ಅವರಿಗಲ್ಲ, ಚುನಾಯಿತ ಪ್ರತಿನಿಧಿಗಳಿರುವ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ.

***

# ಅನನ್ಯ ಜೀವನಾನುಭವಿ

**ಸೈಯದ್ ಇಬ್ರಾಹಿಂ**

ಜೀವದ ಗೆಳೆಯ, ಅನನ್ಯ ಜೀವನಾನುಭವಿ ಎಂ.ವಿ. ರಾಜಶೇಖರನ್ ಸದಾ ನನ್ನ ಜೊತೆಗಿದ್ದವರು. ಈಗಲೂ ಕೂಡಾ ಪರಮಾಪ್ತ ಸ್ನೇಹಿತರು. ಅವರ ಜೊತೆಯಲ್ಲೇ ಇರುವ ನನಗೆ ಅವರ ಬಗೆಗೆ ಬರೆಯುವುದಕ್ಕಾಗಲೀ, ಮಾತನಾಡುವುದಕ್ಕಾಗಲೀ ನಿಜಕ್ಕೂ ಮುಜುಗರವನ್ನುಂಟುಮಾಡುತ್ತದೆ. ಏಕೆಂದರೆ ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಕನಿಷ್ಟ ಏಳೆಂಟು ಗಂಟೆ ಅವರ ಜೊತೆಯಲ್ಲೇ ಇರುವ ನನಗೆ 'ಅವರ- ನನ್ನ' ನಡುವೆ ಇರುವ ವಿಶಿಷ್ಟ ಅಂಶಗಳನ್ನು ಹೇಗೆ ಗುರುತಿಸಿ ಬರೆಯಬೇಕು ಎಂಬುದು ನನಗೆ ಬಹುದೊಡ್ಡ ಸವಾಲಾಗಿದೆ. ಅದೇನೇ ಇದ್ದರೂ ಕೇವಲ ಒಂದರೆಡು ಮಾತುಗಳನ್ನು ಇಲ್ಲಿ ಹೇಳಲು ಇಷ್ಟಪಡುತ್ತೇನೆ.

ಇದು ರಂಜಾನ್ ಮಾಸಾಚರಣೆಯ ಸಮಯ. ದೈವ ಸಂಕಲ್ಪದಲ್ಲಿಯೇ ಹೊತ್ತು ಕಳೆಯಬೇಕಾದ ಸಂದರ್ಭ. ನಮ್ಮಿಬ್ಬರ ಗೆಳೆತನವೂ ಕೂಡ ದೇವರಷ್ಟೇ ಪವಿತ್ರವಾದದ್ದು. ಈ ಕಾರಣದಿಂದ ನಾನು ನನ್ನ ಪರಮಾಪ್ತ ಗೆಳೆಯನೊಬ್ಬನ ಬಗೆಗೆ ಕುರಿತು ನನ್ನ ಅಭಿಪ್ರಾಯಗಳನ್ನು ಹೇಳಿದರೆ ಅದೂ ಕೂಡಾ ದೇವರಿಗೆ ಪ್ರಿಯವಾಗಬಹುದೆಂಬ ನಂಬಿಕೆ ನನ್ನದು. ವಾಸ್ತವದಲ್ಲಿ ನಾನು ಅವರನ್ನು ಪರಮಾಪ್ತ ಗೆಳೆಯ ಎನ್ನುವುದಕ್ಕಿಂತ ನನ್ನ ಪ್ರೀತಿಯ ಸಹೋದರ ಎಂದೇ ಕರೆಯುವೆ.

ಸಿಲ್ಕು ಜುಬ್ಬ, ಪೈಜಾಮ ಹಾಕಿದ ಎಂ.ವಿ. ರಾಜಶೇಖರನ್ ನನಗೆ ಮೊದಲಸಲ ಭೇಟಿಯಾದದ್ದು ಕಾಂಗ್ರೆಸ್ ಕಚೇರಿಯಲ್ಲಿ. ಸರಿಯಾಗಿ ನೆನಪಿಲ್ಲವಾದರೂ ೧೯೬೦ರಲ್ಲಿ ಎಂದಷ್ಟೇ ಹೇಳಬಹುದು. ಆಗ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದ ಮೊಹಮ್ಮದಾಲಿ ಅವರೇ ಎಂ.ವಿ. ರಾಜಶೇಖರನ್ ಅವರನ್ನು ಪರಿಚಯಿಸಿದರು. ಆಗ ಅವರು ತುಂಬಾ ಸ್ಫುರದ್ರೂಪಿಯಾಗಿದ್ದು ಶಿಸ್ತಿನ ಸಿಪಾಯಿಯಂತೆ ಕಂಡರು. ಮೊದಲ ನೋಟದಲ್ಲಿ ಅವರೊಡನೆ ಆಪ್ತ ಬಾಂಧವ್ಯ ಬೆಳೆಸಬೇಕೆಂಬ ಆಸಕ್ತಿ ಹುಟ್ಟತೊಡಗಿತು. ನಾನು ಆಗ ಬೆಂಗಳೂರು ನಗರ ಘಟಕದ ಯುವ ಕಾಂಗ್ರೆಸ್‌ನ ಉಸ್ತುವಾರಿಯನ್ನು

ನೋಡಿಕೊಳ್ಳುತ್ತಿದ್ದೆ. ಅನಂತರ ಆಗೊಮ್ಮೆ - ಈಗೊಮ್ಮೆ ಸಿಗುತ್ತಿದ್ದರು. ಸಿಕ್ಕಾಗ 'ಹಾಯ್!' ಹೇಳಿ ಹೋಗುತ್ತಿದ್ದರು. ೧೯೬೭ರಲ್ಲಿ ಎ.ಐ.ಸಿ.ಸಿ.ಯು. ಎಂ.ವಿ. ರಾಜಶೇಖರನ್ ಅವರನ್ನು "ಕನ್ವೀನರ್ ಆಫ್ ಮೈಸೂರು ಯೂತ್ ಕಾಂಗ್ರೆಸ್ ಕಮಿಟಿ" ಎಂದು ನೇಮಿಸಲಾಗಿದೆ ಎಂಬ ಪ್ರಕಟಣೆ ಪತ್ರಿಕೆಗಳಲ್ಲಿ ಬಂದಿತು. ಆವಾಗ ಎಂ.ವಿ. ರಾಜಶೇಖರ್ ಅವರ ಮುಖ ನೆನಪಾಗಿ ತೀರಾ ಹತ್ತಿರದ ಸಂಬಂಧ ಬೆಳೆಯಲು ಕಾರಣವಾಯಿತು. ಆಗ ಅವರಲ್ಲಿ ತುಂಬಿದ ಉತ್ಸಾಹ, ಅಪ್ರತಿಮ ಸಂಘಟನಾ ಚತುರತೆ ತಕ್ಷಣದಿಂದಲೇ ಕಾರ್ಯರೂಪಕ್ಕೆ ಬಂದಿತು. ನನ್ನನ್ನು ರಾಜ್ಯದ ಯುವ ಕಾಂಗ್ರೆಸ್‌ಗೆ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದರು.

ಈ ಸಂದರ್ಭದಲ್ಲಿ ನಾವಿಬ್ಬರೂ ಸೇರಿಕೊಂಡು ಮೈಸೂರು ರಾಜ್ಯ ಯುವ ಕಾಂಗ್ರೆಸ್‌ಗೆ ಹೊಸ ರೂಪವನ್ನು ಕೊಡಲು ಉತ್ಸುಕರಾದೆವು. ಪ್ರತಿ ಶನಿವಾರ ಪಕ್ಷದ ಕಚೇರಿಯಲ್ಲಿ ಆಯ್ದ ಬುದ್ಧಿಜೀವಿಗಳಿಂದ ಉಪನ್ಯಾಸ, ಚಿಂತನ ಮಂಥನ ಗೋಷ್ಠಿಗಳನ್ನು ಆಯೋಜಿಸಿದ್ದೆವು. ನಂಬಿಯಾರ್, ಆರ್.ಆರ್. ದಿವಾಕರ್ ಮುಂತಾದ ಆ ಸಂದರ್ಭದ ಅಗ್ರಮಾನ್ಯ ಬುದ್ಧಿ ಜೀವಿಗಳೆಲ್ಲರೂ ಅದರಲ್ಲಿ ಭಾಗವಹಿಸಿದ್ದರು. ಆ ಕಾಲವನ್ನು ನೆನಸಿಕೊಂಡರೆ ಇಂದಿಗೂ ನಮ್ಮ ಮೈಯಲ್ಲಿ ಪುಳಕವೇಳುತ್ತದೆ. ರಾಜ್ಯದ ಕೇಂದ್ರಸ್ಥಾನದಲ್ಲಿ ಮಾತ್ರವಿದ್ದ ಮೈಸೂರು ಯುವ ಕಾಂಗ್ರೆಸ್‌ನ ಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸಂಘಟಿಸುವ ಮೊದಲ ಪ್ರಯತ್ನ ಮಾಡಿದೆವು. ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಆ ಸಂದರ್ಭದಲ್ಲಿ ಕಾಂಗ್ರೆಸ್ ಕಮಿಟಿಗಳಿಗಿಂತ ಯುವ ಕಾಂಗ್ರೆಸ್ ಕಮಿಟಿಗಳು ಹೆಚ್ಚು ಸ್ಫೂರ್ತಿದಾಯಕವಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಕರ್ನಾಟಕದಲ್ಲಿ ಯುವ ಕಾಂಗ್ರೆಸ್ ಹೆಚ್ಚು ಸಶಕ್ತವಾದ ಕಾಲಘಟ್ಟವೆಂದರೆ ಎಂ.ವಿ.ರಾಜಶೇಖರನ್ ಅವರು ಸೇವೆ ಸಲ್ಲಿಸಿದ ಹದಿಮೂರು ವರ್ಷಗಳ ಕಾಲ ಘಟ್ಟವೇ ಆಗಿದೆ. ಎಂ.ವಿ.ರಾಜಶೇಖರನ್ ಅವರ ರಾಜಕೀಯ ರಂಗದ ತಾಲೀಮಿಗೆ ಇದೊಂದು ವೇದಿಕೆಯಾಗಿತ್ತು. ರಾಷ್ಟ್ರಮಟ್ಟದ ನಾಯಕರೊಂದಿಗೆ ನೇರ ಸಂಪರ್ಕ ಗಳಿಸಿಕೊಳ್ಳಲು ಯುವ ಕಾಂಗ್ರೆಸ್ ಅಧ್ಯಕ್ಷ ಸ್ಥಾನ ಅವರಿಗೆ ತುಂಬಾ ಸಹಾಯಕವಾಯಿತು. ೧೯೬೭ರಲ್ಲಿ ಎಂ.ಪಿ.ಯಾಗಿ ಚುನಾಯಿತರಾದ ಮೇಲಂತೂ ಅವರ ವ್ಯಕ್ತಿತ್ವ ಹಾಗೂ ಕಾರ್ಯದಕ್ಷತೆಯಲ್ಲಿ ತುಂಬಾ ವ್ಯತ್ಯಾಸಗಳು ಕಂಡುಬಂದವು. ಅದರ ಬೆನ್ನಲ್ಲೇ ಎಂ.ವಿ.ರಾಜಶೇಖರನ್ ತಮ್ಮ ನೇತೃತ್ವದಲ್ಲಿ ಬೆಂಗಳೂರಿನ ಥಿಯಾಲಾಜಿಕಲ್ ಕಾಲೇಜ್‌ನಲ್ಲಿ ಅಖಿಲ ಭಾರತ ಯುವ ಕಾಂಗ್ರೆಸ್‌ನ ಸಮಾವೇಶವನ್ನು ಆಯೋಜಿಸಿದ್ದರು. ಆಗ ಅವರ ಮಾವನವರಾದ ಸನ್ಮಾನ್ಯ ನಿಜಲಿಂಗಪ್ಪನವರು ಅದನ್ನು ಉದ್ಘಾಟಿಸಿದರು. ಆ ಸಂದರ್ಭದಲ್ಲೇ ದೆಹಲಿಯ ರಾಜಕಾರಣಿಗಳು, ಎಂ.ವಿ.ರಾಜಶೇಖರನ್ ಅವರ ಮೇಲೆ ವಿಶೇಷ ಗಮನ ಹರಿಸತೊಡಗಿದರು.

ಅವರು ಪ್ರಥಮ ಬಾರಿಗೆ ಲೋಕಸಭೆ ಚುನಾವಣೆಯಲ್ಲಿ ಸ್ಪರ್ಧಿಸಿದ್ದಾಗ ಅನುಭವವಿಲ್ಲದ ನಮಗೆ ವಿಚಿತ್ರ ಸವಾಲುಗಳು ಎದುರಾದವು. ಚುನಾವಣೆಗೆ ಬೇಕಾಗುವ ಮುದ್ರಣ ಮತ್ತು ಪ್ರಕಟಣೆಯ ವ್ಯವಸ್ಥೆಯನ್ನು ಮಾಡುವ ಕೆಲಸವನ್ನು ಸ್ವತಃ ನಾನೇ ಹೊತ್ತುಕೊಂಡೆ. ಕನಕಪುರ

ಲೋಕಸಭಾ ಕ್ಷೇತ್ರ ಅತಿದೊಡ್ಡ ಲೋಕಸಭಾ ಕ್ಷೇತ್ರಗಳಲ್ಲೊಂದಾಗಿತ್ತು. ಬ್ಯಾನರ್‌ಗಳು, ಕರಪತ್ರಗಳನ್ನು ಅಧಿಕ ಸಂಖ್ಯೆಯಲ್ಲಿ ಹಂಚಬೇಕು. ನಮ್ಮಲ್ಲಿರುವ ಬಜೆಟ್ ಅಷ್ಟಕ್ಕಷ್ಟೆ. ಅವರ ಮಾವ ರಾಜಕಾರಣದಲ್ಲಿದ್ದರೂ ಅವರಿಗೂ ದುಡ್ಡು ಮಾಡುವ, ಅದನ್ನು ಇಂತಹ ಕೆಲಸಗಳಿಗೆ ವ್ಯರ್ಥ ವ್ಯಯ ಮಾಡುವ ಜಾಯಮಾನವಲ್ಲ. ಆದರೂ ಅಂದಿನ ಪುಣ್ಯವಂತ ಮತದಾರರು ಅಭ್ಯರ್ಥಿಯ ಹಿನ್ನೆಲೆಯನ್ನು ನೋಡಿ ಮತ ನೀಡಿದರು ಮಾತ್ರವಲ್ಲ ಜಯಶೀಲನನ್ನಾಗಿ ಮಾಡಿದರು.

೧೯೬೯ರಲ್ಲಿ ಎ.ಐ.ಸಿ.ಸಿ. ಅಧಿವೇಶನ ಗಾಜಿನಮನೆಯಲ್ಲಿ ಸಮಾವೇಶಗೊಂಡಾಗಲಂತೂ ರಾಜಶೇಖರನ್ ಅವರು ಅತ್ಯಂತ ಉತ್ಸಾಹದಿಂದ ಓಡಾಡಿ ಕೆಲಸ ಮಾಡುತ್ತಿದ್ದರು. ಇಂದಿರಾ ಗಾಂಧಿಯವರೇ ಉದ್ಘಾಟಿಸಿದ ಈ ಅಧಿವೇಶನ ರಾಜಕೀಯವಾಗಿ ಮಹತ್ವದಾಗಿತ್ತು. ನಿಜಲಿಂಗಪ್ಪ, ಕಾಮರಾಜ್, ಎಸ್.ಕೆ.ಪಾಟೀಲ್, ಅತುಲ್ಯಘೋಷ್, ಸಿ.ಸುಬ್ರಮಣ್ಯಂ ಜಗಜೀವನರಾಮ್, ನೀಲಂ ಸಂಜೀವರೆಡ್ಡಿ ಮೊದಲಾದವರು ರಾಜಶೇಖರನ್ ಅವರನ್ನು ಶ್ಲಾಘಿಸಿ ಮಾತನಾಡಿದರು. ಸ್ವತಃ ಇಂದಿರಾ ಗಾಂಧಿಯವರೇ ಸಂಪುಟ ಸೇರುವಂತೆ ರಾಜಶೇಖರನ್ ಅವರನ್ನೂ ಕರೆದರು. ಆದರೆ ಪ್ರಭಾವಿ ರಾಜಕಾರಣಿಯ ಸಂಬಂಧಿಯಾದ ರಾಜಶೇಖರನ್ ನಿಜಲಿಂಗಪ್ಪನವರಲ್ಲಿ ಅಭಿಪ್ರಾಯವನ್ನು ಕೇಳಿದರು. ನಾವಿಬ್ಬರೂ ಅಧಿಕಾರದಲ್ಲಿದ್ದರೆ ಕೆಲವು ಜನಗಳ ಕಾಕದೃಷ್ಟಿಗೆ ಕಾರಣವಾಗಬಹುದು ಅಥವಾ ಅಧಿಕಾರ ಕೇಂದ್ರೀಕರಣಗೊಳ್ಳುವುದು ಆಗಬಹುದು ಎಂದು ಹೇಳಿದಾಗ ಅವರು ಸಂಪುಟ ಸೇರುವುದನ್ನು ಬಿಟ್ಟರು.

ವಾಸ್ತವವಾಗಿ ಕಾಂಗ್ರೆಸ್ ಹೋಳಾದಾಗ ಶ್ರೀಮತಿ ಇಂದಿರಾ ಗಾಂಧಿಯವರ ಪಡೆಗೆ ರಾಜಶೇಖರನ್ ಸೇರಿಸಿಕೊಳ್ಳುವ ಮನಸ್ಸಿತ್ತು. ಒಂದು ವೇಳೆ ಇಂದಿರಾ ಅವರ ಕಾಂಗ್ರೆಸ್‌ಗೆ ಸೇರಿದ್ದರೆ, ಬಹುಶಃ ಅವರ ರಾಜಕೀಯ ಜೀವನ ಹೆಚ್ಚು ರಂಗು ರಂಗಾಗಿರುತ್ತಿತ್ತೋ ಏನೋ. ಆದರೆ ಮಾವನ ಮರ್ಯಾದೆಯ ಪ್ರಶ್ನೆ ಎಂದು ನಿಜಲಿಂಗಪ್ಪನವರ ಕಾಂಗ್ರೆಸ್‌ನಲ್ಲಿ ಸೇರಿಕೊಂಡರು. ನಾವೆಲ್ಲಾ ಆಗ ಈ ಪಕ್ಷಕ್ಕೆ ಬಂದುಬಿಟ್ಟೆವು. ಇಂದಿರಾ ಗಾಂಧಿಯವರು ಎಂ.ವಿ.ರಾಜಶೇಖರನ್ ನಮ್ಮ ಪಕ್ಷಕ್ಕೆ ಬಂದರೆ ಸಚಿವ ಸಂಪುಟದಲ್ಲಿ ಸೇರಿಸಿಕೊಳ್ಳುತ್ತೇನೆ ಎಂದು ಹಲವು ಸಲ ಕರೆ ನೀಡಿದರು. ಅವರ ಯಾವ ಆಸೆಯ ಬಲೆಗೂ ಬೀಳಲಿಲ್ಲ. ಎಂ.ವಿ. ರಾಜಶೇಖರನ್ ಅವರಿಗೆ ಅಧಿಕಾರಕ್ಕಿಂತ ಜನಸೇವೆ ಮತ್ತು ಪಕ್ಷಬದ್ಧತೆ ಮುಖ್ಯವಾಗಿತ್ತು.

ಎಂ.ವಿ.ರಾಜಶೇಖರನ್ ಜನತಾಪಕ್ಷದ ಮೂಲಕ ಕನಕಪುರ ಲೋಕಸಭಾ ಕ್ಷೇತ್ರದಿಂದ ಮತ್ತೆ ಸ್ಪರ್ಧಿಸಿದರು. ಸಾತನೂರು ಘಟನೆಯ ಹಿನ್ನೆಲೆಯಲ್ಲಿಯೇ ಅವರಿಗೆ ಹಿನ್ನಡೆಯಾದುದನ್ನು ನಾನು ಗಮನಿಸಿದೆ. ಎಂ.ವಿ.ರಾಜಶೇಖರನ್ ಮೊರಾರ್ಜಿಯವರಿರುವ ಕಾರಲ್ಲೇ ಕುಳಿತು ಸಾತನೂರಿನಲ್ಲಿ ಕಾರನ್ನು ನಿಲ್ಲಿಸಲಿಲ್ಲವೆಂಬ ಕಾರಣದಿಂದಾಗಿ ಆ ಜನತೆಯ ಅವಕೃಪೆಗೆ

ಪಾತ್ರರಾದದ್ದನ್ನು ನಾನು ಗಮನಿಸಿದ್ದೆ. ಅಂದಿನಿಂದಲೇ ನಾನು ಅವರನ್ನು ಕಾಂಗ್ರೆಸ್ ಪಕ್ಷಕ್ಕೆ ಬರುವಂತೆ ಒತ್ತಾಯಿಸಿದೆ. ಅಲ್ಲಿರುವ ಕೆಲ ಪಕ್ಷದ ನಾಯಕರೇ ಅವರ ಸೋಲಿಗೆ ಪಿತೂರಿ ನಡೆಸಿದ್ದುದು ನನಗೆ ತಿಳಿದಿತ್ತು. ಆ ಕಾರಣದಿಂದ ಮರಳಿ ಕಾಂಗ್ರೆಸ್ ಸೇರುವಂತೆ ಮನವೊಲಿಸಿದೆ. ೧೯೮೨ರ ನವೆಂಬರ್ ಕರ್ನಾಟಕ ವಿಧಾನಸಭೆಯ ಸದಸ್ಯ ಸ್ಥಾನಕ್ಕೂ ಮತ್ತು ಜನತಾಪಕ್ಷದ ಪ್ರಾಥಮಿಕ ಸದಸ್ಯತ್ವಕ್ಕೂ ರಾಜೀನಾಮೆ ನೀಡಿದರು. ರಾಜೀವಗಾಂಧಿ ಅವರ ಯುವ ಉತ್ಸಾಹದ ಕರೆಗೆ ಓಗೊಟ್ಟು ೧೯೮೪ರಲ್ಲಿ ಕಾಂಗ್ರೆಸ್ ಪಕ್ಷವನ್ನು ಮತ್ತೆ ಸೇರಿದರು. ಅವರ ಪ್ರತಿಯೊಂದು ರಾಜಕೀಯದ ಪ್ರಮುಖ ತೀರ್ಮಾನಗಳಲ್ಲಿ ಗೆಳೆಯನಾಗಿ ನಾನೂ ಕೂಡಾ ನನ್ನ ಕರ್ತವ್ಯವನ್ನು ನಿರ್ವಹಿಸಿದ್ದೇನೆ. ನನ್ನ ಮಾತಿನಲ್ಲಿ ಎಂ.ವಿ.ರಾಜಶೇಖರನ್‌ರವರು ಗೌರವವಿರಿಸುತ್ತಿದ್ದುದು ನಮ್ಮ ನಡುವಿನ ಪರಮಾಪ್ತ ಗೆಳೆತನಕ್ಕೆ ಬಹುತೇಕ ಕಾರಣವಾಗಿರಬಹುದೇನೋ ಅನ್ನಿಸುತ್ತದೆ.

ರಾಜಶೇಖರನ್ ಅವರಿಗೆ ಪತ್ರ ಬರೆಯುವ ಗುಣ ದೈವದತ್ತವಾಗಿ ಬಂದಿತ್ತೋ ಏನೋ ನಾನರಿಯೆ. ದಿನಾಲೂ ರಾತ್ರಿ ಒಂದು ಅಥವಾ ಎರಡು ಗಂಟೆಯವರೆಗೆ ಅಧ್ಯಯನ ಮತ್ತು ಪತ್ರ ಬರೆಯುವುದರಲ್ಲಿ ತೊಡಗುತ್ತಿದ್ದರು. ಹಿಂದೂ ಗೆಳೆಯರಿಗೆ ಯುಗಾದಿಯ ಸಂದರ್ಭದಲ್ಲಿ, ಮುಸ್ಲಿಂ ಗೆಳೆಯರಿಗೆ ರಂಜಾನ್ ಸಂದರ್ಭದಲ್ಲಿ, ಕ್ರಿಶ್ಚಿಯನ್ ಗೆಳೆಯರಿಗೆ ಕ್ರಿಸ್‌ಮಸ್ ಐದರಿಂದ ಸಂದರ್ಭದಲ್ಲಿ ಹತ್ತು ಸಾವಿರ ಶುಭಾಶಯ ಪತ್ರಗಳನ್ನು ಕಳಿಸುತ್ತಿದ್ದರು. ಅಷ್ಟು ಮಾತ್ರವಲ್ಲ, ವಿರೋಧ ಪಕ್ಷದಲ್ಲಿರುವ ನಾಯಕರೆಲ್ಲರಿಗೂ ಶುಭಾಶಯ ಪತ್ರ ಕಳಿಸುತ್ತಿದ್ದರು.

ಅವರ ವ್ಯಕ್ತಿತ್ವದ ಒಂದು ಭಾಗವಾಗಿ ಅವರ ಆರ್ಥಿಕ ಸ್ಥಿತಿಗತಿಯನ್ನು ಹೇಳಿದರೆ ಅದು ಸ್ವಲ್ಪದರಲ್ಲಿ ಮುಗಿಯಬಹುದು. ೧೯೬೬ರ ಮಾಡೆಲ್‌ನ ಅಂಬಾಸಿಡರ್ ಕಾರ್‌ನಲ್ಲಿ ಅವರ ಪ್ರಯಾಣ. ಅದರ ಸಂಖ್ಯೆ ಎಂವೈಬಿ ೨೦೨೩. ಅದು ಅವರ ಕೈಲಿ ಸುಮಾರು ವರ್ಷಗಳಿತ್ತು. ಲೋಕಸಭೆಯನ್ನು ಪ್ರವೇಶಿಸಿದರೂ ಅದೇ ಜೀರ್ಣವಾದ ಕಾರ್‌ನಲ್ಲೇ ಅವರು ಪಯಣಿಸುತ್ತಿದ್ದರು. ಅದರ ಡೋರ್ ಮುರಿದುಹೋಗಿತ್ತು. ಅದನ್ನು ಹಗ್ಗದಿಂದ ಕಟ್ಟಿಕೊಂಡು ಉಪಯೋಗಿಸುತ್ತಿದ್ದರು. ನನಗೆ ಈ ವಿಚಾರ ನಿಜಕ್ಕೂ ಬೇಸರ ತಂದಿತ್ತು. ಏಕೆಂದರೆ ಒಬ್ಬ ಲೋಕಸಭಾ ಸದಸ್ಯ ಗ್ರಾಮಪಂಚಾಯ್ತಿ ಸದಸ್ಯನ ಆರ್ಥಿಕ ಸ್ಥಿತಿವಂತಿಕೆಗಿಂತಲೂ ಕಡಿಮೆಯಿದ್ದದ್ದು. ಆಗ ಆ ಡೋರ್‌ನ್ನು ನಾನು ರಿಪೇರಿ ಮಾಡಿಸಿಬಿಟ್ಟೆ. ಅದಕ್ಕವರು ತುಂಬಾ ಬೇಸರಗೊಂಡರು. ಅದರ ಬಿಲ್ ಎಷ್ಟಾಯಿತು ಎಂದೆಲ್ಲಾ ವಿಚಾರಿಸಿ ಒಂದು ವಾರದ ತರುವಾಯ ನನಗೆ ಹಿಂತಿರುಗಿಸಿದರು. ಈ ಸಂಗತಿಯೊಂದೇ ಸಾಕು ಅವರ ಸರಳತನಕ್ಕೆ. ಅವರೊಬ್ಬ ಆಡಂಬರದ ವ್ಯಕ್ತಿಯಲ್ಲ, ಅವರಲ್ಲಿ ಯಾವುದೇ ಬೇರೆ ರೀತಿಯಿಂದ ಸಂಪಾದಿಸಿದ ಹಣವಿಲ್ಲವೆಂದು ತಿಳಿಯಲಿಕ್ಕೆ ಈ ನಿದರ್ಶನ ಸಾಕು. ಇತ್ತೀಚೆಗಷ್ಟೇ ಬಿ.ಡಿ.ಎ.ನಿಂದ ಒಂದು ಖಾಲಿ ನಿವೇಶನ, ಅದೂ ಮನೆಯವರ ಒತ್ತಾಯದ ಮೇರೆಗೆ ತೆಗೆದುಕೊಂಡಿರುವುದನ್ನು ಬಿಟ್ಟರೆ ಇಂದಿಗೂ ಅವರು ಯಾವ ಆಸ್ತಿಯನ್ನೂ ಮಾಡಲೇ ಇಲ್ಲ.

ನನ್ನ ಗೆಳೆಯ ಈ ರೀತಿಯ ಸಚ್ಚಾರಿತ್ರ್ಯವಂತನಾಗಿರುವುದು ಸಾಭ್ಯ ರಾಜಕಾರಣಿಯಾಗಿರುವುದು ನನ್ನ ಜೀವನದಲ್ಲಿ ನನಗೆ ಖುಷಿ ಕೊಟ್ಟ ಸಂಗತಿ. ಅನನ್ಯ ಬುದ್ಧಿಜೀವಿಯಾಗಿ ದಿನವೂ ಕರ್ನಾಟಕದ ಗ್ರಾಮೀಣ ಜನತೆಯ ಕಲ್ಯಾಣಕ್ಕೆ ದುಡಿಯುತ್ತಿರುವುದು, ನಾನೂ ಅದರಲ್ಲಿ ತೊಡಗಿಸಿಕೊಂಡಿರುವುದರ ಬಗೆಗೆ ತೃಪ್ತಿಯಿದೆ. ರಾಜಕೀಯ ಪಕ್ಷವೊಂದರಲ್ಲಿ ಇದ್ದುಕೊಂಡು ಅನನ್ಯ ಮಾನವತಾವಾದಿಯಾಗಿ ಚಿಂತನೆ ನಡೆಸುತ್ತಿರುವ ಅವರಿಗೆ ಈ ಸಂದರ್ಭದಲ್ಲಿ ನಾನು ಹೃದಯ ತುಂಬಿ ಶುಭ ಕೋರುವೆ. ಮುಂದೊಂದು ದಿನ ಭಾರತದ ಜನತೆಯ ಸೇವೆ ಮಾಡುವ ಬಹುದೊಡ್ಡ ಹುದ್ದೆಯನ್ನು ಶ್ರೀ ಎಂ.ವಿ.ರಾಜಶೇಖರನ್ ಅಲಂಕರಿಸುವರು ಎಂಬ ಸಂಪೂರ್ಣ ಭರವಸೆಯಿದೆ. ಆದಷ್ಟು ಬೇಗ ಅವರಿಗೆ ಅಂತಹ ಅವಕಾಶ ದೊರೆಯಲೆಂದು ನಾನು ಈ ಸಂದರ್ಭದಲ್ಲಿ ದೇವರನ್ನು ಪ್ರಾರ್ಥಿಸಿಕೊಳ್ಳುವೆ.

❊❊❊

# ಆರಾಧ್ಯ ವ್ಯಕ್ತಿ

ಎಸ್.ಎಸ್. ಪರಮಶಿವಯ್ಯ

ಪರಿಶುದ್ಧ ಮನಸ್ಸಿನ, ನಿಷ್ಕಾಮ ಕರ್ಮದ ನಿಸ್ವಾರ್ಥ ಅನನ್ಯ ಸ್ನೇಹಜೀವಿ ಹಾಗೂ ಅಪರೂಪದ ರಾಜಕಾರಣಿಯಾದ ಬಾಲ್ಯದ ಗೆಳೆಯನಿಗೆ ಎಪ್ಪತ್ತೈದು ವರ್ಷಗಳು. ಈ ಸಂದರ್ಭದಲ್ಲಿ ನಾನು ಏನೆಂದು ಅಭಿನಂದಿಸಬೇಕೆಂದು ತಿಳಿಯದು. ಎಲ್ಲದರಲ್ಲೂ ಸ್ವಚ್ಛ ಶುದ್ಧ ವ್ಯಕ್ತಿತ್ವದ ಮತ್ತು ಸ್ವಯಂ ವಿಚಾರವಂತಿಕೆಯ ಪ್ರತಿಭೆಯಿಂದ ಮೇಲೆದ್ದು ಬಂದ ರಾಜಶೇಖರನ್ ನನಗಂತೂ ಆರಾಧ್ಯ ವ್ಯಕ್ತಿತ್ವವಾಗಿ ಕಾಣುತ್ತಿದ್ದಾರೆ. ಆಡಂಬರವಿಲ್ಲದ ಬದುಕು. ಅಧಿಕಾರವಿರಲಿ - ಇರದಿರಲಿ ಒಂದೇ ಗತಿಯಲ್ಲಿ ಸದಾ ಜನಸೇವೆ ಮಾಡುತ್ತಾ ಇಂದು ತೃಪ್ತ ಬದುಕನ್ನು ಸಾಗಿಸುತ್ತಿದ್ದಾರೆ. ಅವರ ಸಾಧನೆಯ ಹಿನ್ನೋಟ - ಮುನ್ನೋಟಗಳನ್ನು ಒಂದರೆ ಕ್ಷಣ ನೋಡಿದಾಗ ಸಖೇದಾಶ್ಚರ್ಯಗಳು ವ್ಯಕ್ತವಾಗುತ್ತವೆ. ಹಿರಿಯಣ್ಣನ ಸ್ವಭಾವದ ಶ್ರೀ ಎಂ.ವಿ.ರಾಜಶೇಖರನ್ ಮುಂದಿನ ಪೀಳಿಗೆಗೆ ಆದರ್ಶವಾಗಿ ನಿಂತಿದ್ದಾರೆ.

ಈ ಸಂದರ್ಭದಲ್ಲಿ ಅವರ ಜೀವನದಲ್ಲಿ ನಡೆದುಹೋದ ಒಂದೆರಡು ಘಟನೆಗಳನ್ನು ಸ್ಮರಿಸಿಕೊಂಡರೆ ನನ್ನ ಮತ್ತು ಅವರ ಗೆಳೆತನ ಮತ್ತು ಪರಸ್ಪರರ ಒಡನಾಟ ಎಂತಹದೆಂಬುದು ಅರ್ಥವಾದೀತು. ೧೯೭೭ರ ಚುನಾವಣೆ ಯಲ್ಲಿ ಲೋಕಸಭೆಗೆ ಎಂ.ವಿ. ರಾಜಶೇಖರನ್ ಜನತಾಪಕ್ಷದ ಅಭ್ಯರ್ಥಿ ಯಾಗಿ ಆಯ್ಕೆ ಬಯಸಿದ್ದರು. ಆ ಸಂದರ್ಭದಲ್ಲಿ ರಾಜಶೇಖರನ್‌ಗೆ ಭಾರೀ ಜನಪ್ರಿಯತೆ ಕ್ಷೇತ್ರದಲ್ಲಿ ಪ್ರಾಪ್ತವಾಗಿತ್ತು. ದೇಶದೆಲ್ಲೆಡೆ ತುರ್ತು ಪರಿಸ್ಥಿತಿಯ ಕರಿನೆರಳಿನಲ್ಲಿ ಚುನಾವಣೆಯ ಮುಖಾಂತರ ಹೊಸತೊಂದು ಬೆಳಕು ಕಾಣಿಸತೊಡಗಿತ್ತು. ಇನ್ನೇನು ಜನತಾಪಕ್ಷ ಅದ್ದೂರಿಯಾಗಿ ಬಹುಮತ ಪಡೆಯುವ ಸನ್ನಾಹ ನಡೆಸಿತ್ತು. ಇಂತಹ ಮಹತ್ವದ ಸನ್ನಿವೇಶದಲ್ಲಿ ಕನಕಪುರ ಲೋಕಸಭೆ ಕ್ಷೇತ್ರದಲ್ಲಿ ಒಂದು ವಿಚಿತ್ರ ಘಟನೆ ನಡೆದುಹೋಯಿತು. ಅದೇ ಸಾತನೂರು ಘಟನೆ. ಅಂದಿನ ಪ್ರಧಾನಿ ಅಭ್ಯರ್ಥಿಯೆಂದು ಬಿಂಬಿತರಾಗಿದ್ದ ಮೊರಾರ್ಜಿ ದೇಸಾಯಿಯವರ ಶಿಸ್ತು ಮತ್ತು ಸಮಯ ಪಾಲನೆಯು ಕನಕಪುರ ಕ್ಷೇತ್ರದಲ್ಲಿ ಜನತಾಪಕ್ಷಕ್ಕೆ ಹಿನ್ನಡೆಯನ್ನುಂಟು ಮಾಡಿತು.

ಮೊರಾರ್ಜಿಯವರು ಕರ್ನಾಟಕದಲ್ಲಿ ಚುನಾವಣಾ ಪ್ರಚಾರ ಭಾಷಣವನ್ನು ಮಾಡಲು ಅಲ್ಲಲ್ಲಿ ಕ್ಷೇತ್ರಗಳನ್ನು ಗುರುತಿಸಲಾಗಿತ್ತು. ಮೈಸೂರಿನಿಂದ ಬೆಂಗಳೂರಿಗೆ ಬರುವ ದಾರಿಯಲ್ಲಿ ಮಳವಳ್ಳಿಯ ತರುವಾಯ ಬೆಂಗಳೂರಿನಲ್ಲಿಯೇ ಅವರು ನಿಲ್ಲುವ ಕಾರ್ಯಕ್ರಮ ನಿಗದಿಯಾಗಿತ್ತು. ಆದರೆ ಮೊರಾರ್ಜಿಯವರನ್ನು ನೋಡಲು ಸಾತನೂರಿನ ಜನ ಕಾತರದಿಂದ ಕಾಯ್ದಿದ್ದರು. ಸುಮಾರು ಇಪ್ಪತ್ತು-ಇಪ್ಪತ್ತೈದು ಸಾವಿರ ಜನರು ಒಂದೆಡೆ ಸೇರಿದ್ದರು. ಅದಕ್ಕೆ ತಕ್ಕುದಾದ ವೇದಿಕೆಯನ್ನು ನಿರ್ಮಾಣ ಮಾಡಿದ್ದೆವು. ನಾನು ಮತ್ತು ಶಿವಲಿಂಗೇಗೌಡರು ಒಟ್ಟಿಗೆ ಸೇರಿ ಆಯೋಜಿಸಿದ್ದ ಈ ಸಭೆಯಲ್ಲಿ ಮೊರಾರ್ಜಿಯವರು ಕಾರ್ಯಕ್ರಮ ನಿಗದಿಯಾದಂತೆ ಸಾತನೂರಿನ ಮೇಲೆ ಹಾದುಹೋದರೇ ಹೊರತು ವೇದಿಕೆಗೆ ಬಂದು ಮತದಾರರನ್ನುದ್ದೇಶಿಸಿ ಮಾತನಾಡಲಿಲ್ಲ. ಅವರ ಕಾರು ಸಾತನೂರನ್ನು ಪ್ರವೇಶಿಸುತ್ತಿದ್ದಂತೆಯೇ ಜನಸಮೂಹ ಬಾಜಾಭಜಂತ್ರಿಗಳಿಂದ ಸ್ವಾಗತಿಸಿತು. ಎಲ್ಲೆಲ್ಲೂ ಸ್ವಾಗತದ ಬ್ಯಾನರ್‌ಗಳು, ಚುನಾವಣಾ ಚಿಹ್ನೆಯನ್ನು ಹೊಂದಿದ ಚಿಕ್ಕ ಬಾವುಟಗಳನ್ನು ಕಟ್ಟಲಾಗಿತ್ತು. ಇವರು ವೇದಿಕೆಗೆ ಬರದೇ ಇರುವುದರ ಪರಿಣಾಮವಾಗಿ ಕುಪಿತಗೊಂಡ ಜನಸಮೂಹ ಮೊರಾರ್ಜಿಯವರಿಗೆ ಧಿಕ್ಕಾರ ಹಾಕಿತು. ಕಟ್ಟಿದ್ದ ಸ್ವಾಗತ ಮತ್ತು ಚುನಾವಣಾ ಬ್ಯಾನರ್‌ಗಳನ್ನು ಕಿತ್ತು ಎಸೆಯಲಾಯಿತು. ಸಾತನೂರಿನಿಂದ ಬಂದ ದಾರಿಯಿಂದಲೇ ಮೊರಾರ್ಜಿಯವರು ವಾಪಸ್ ಹೋಗಿ ರಾಮನಗರದ ಮೇಲೆ ಬೆಂಗಳೂರಿಗೆ ಹೋದರು. ಸೇರಿದ್ದ ೨೫೦೦೦ ಜನತೆಯ ವಿರೋಧಕ್ಕೆ ಮೊರಾರ್ಜಿಯವರು ಗುರಿಯಾದರು. ಪರಿಣಾಮವಾಗಿ ಎಂ.ವಿ. ರಾಜಶೇಖರನ್ ಕೇವಲ ೩೬೦೦ ಮತಗಳಿಂದ ಸೋತರು. ಈ ಘಟನೆ ಎಂ.ವಿ. ರಾಜಶೇಖರನ್ ಅವರ ರಾಜಕೀಯ ಭವಿಷ್ಯದ ಮೇಲೆ ಭಾರೀ ಪರಿಣಾಮವನ್ನುಂಟುಮಾಡಿರುವುದಂತೂ ಸತ್ಯ.

ಈ ಘಟನೆ ಏನೇ ನಡೆದಿದ್ದರೂ ಎಂ.ವಿ.ರಾಜಶೇಖರನ್ ಗೆಲ್ಲುತ್ತಾರೆಂಬ ವಿಶ್ವಾಸ ನನಗಿತ್ತು. ಅವರ ಕೊರಳಿಗೆ ವಿಜಯಮಾಲೆ ಹಾಕಲು ಎರಡು ನೂರ ಐವತ್ತು ರೂಪಾಯಿಯ ಭಾರೀ ಗಾತ್ರದ ಹೂವಿನ ಹಾರವನ್ನು ತಯಾರು ಮಾಡಿಸಿ ಕಾಯ್ದಿರಿಸಿದ್ದೆ. ಸುಮಾರು ಮಧ್ಯಾಹ್ನ ಮೂರು ಗಂಟೆವರೆಗೂ ಎಂ.ವಿ. ರಾಜಶೇಖರನ್ ಮತ ಎಣಿಕೆಯಲ್ಲಿ ಸತತ ಮುನ್ನಡೆ ಸಾಧಿಸಿದ್ದರು. ಆದರೆ ಕೊನೆಯ ಕ್ಷಣದಲ್ಲಿ ಅಸಂಖ್ಯ ಮತಗಳು ಕುಲಗೆಟ್ಟು ಹೋಗಿದ್ದವು. ಅದರ ಹಿಂದೆ ಇದ್ದ ಪಿತೂರಿಯ ಕುರಿತಾಗಲೀ, ಅದರ ಸಾಧ್ಯತೆ-ಅಸಾಧ್ಯತೆಗಳ ವಿಚಾರವಾಗಿ ಆಗಲೀ ನಾನು ಈ ಸಂದರ್ಭದಲ್ಲಿ ಮಾತನಾಡಲಾರೆ.

ಹಲವು ಸಂದರ್ಭಗಳಲ್ಲಿ ಅವರು ನನ್ನ ಒಡನಾಡಿಗಳು. ಸಾತನೂರು ವಿಧಾನಸಭಾ ಕ್ಷೇತ್ರಕ್ಕೆ ಟಿಕೆಟ್‌ಗಾಗಿ ನಾವು ದೆಹಲಿಗೆ ಹೋದಾಗ ಅಲ್ಲಿ ನಡೆದ ವಿದ್ಯಮಾನಗಳನ್ನು ನೋಡಿ 'ಪರಮಶಿವಯ್ಯ ಇಲ್ಲಿ ನೀನು ಯೋಗ್ಯನಲ್ಲ, ನಾವಿನ್ನು ಹೊರಡೋಣ ಬಾ' ಎಂದು ಹೇಳಿ ತಕ್ಷಣವೇ ಕರೆದುಕೊಂಡು ಬಂದರು. ಅವರ ಏಶಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗೆ ನನ್ನನ್ನು ಒಂದು ಅವಧಿಗೆ ಅಧ್ಯಕ್ಷನನ್ನಾಗಿ ಮಾಡಿದ್ದರು. ನಾನೇನು ಅಷ್ಟೊಂದು ವಿದ್ಯಾವಂತನಲ್ಲ ಎಂಬುದು ಗೊತ್ತಿತ್ತು. ಆಗ "ಪರಮಶಿವಯ್ಯ, ನೀವು ದಕ್ಷರಿದ್ದೀರಿ, ನಿಮ್ಮಲ್ಲಿ ಸಾರ್ವಜನಿಕ

ಕ್ಷೇತ್ರದಲ್ಲಿ ದುಡಿಯುವ ಹುಮ್ಮಸ್ಸಿದೆ. ಈ ಸಂಸ್ಥೆ ವಿಶ್ವವಿದ್ಯಾಲಯದ ಪ್ರೊಫೆಸರ್‌ಗಳಿಗಲ್ಲ, ನಿಮ್ಮಂತಹ ಗ್ರಾಮೀಣಾಭಿವೃದ್ಧಿ ಪರ ಕಾಳಜಿ ಇಟ್ಟುಕೊಂಡವರಿಗೆ ಮಾತ್ರ. ನೀನು ಒಂದು ಅವಧಿಗೆ ಇದರಲ್ಲಿ ಕೆಲಸ ಮಾಡು" ಎಂದು ಹೇಳುತ್ತಿದ್ದರು. ಆಗ ಆ ಸಂಸ್ಥೆಯ ಮುಖಾಂತರ ಬಡವರಿಗೆ ಕುರಿಗಳನ್ನು, ಹಸುಗಳನ್ನು ತಂದು ವಿತರಿಸಿದೆವು. ಸುಧಾರಿತ ತಳಿಯ ಬೀಜಗಳನ್ನು ಯೋಗ್ಯಬೆಲೆಗೆ ವಿತರಿಸಿದೆವು. ಅಸ್ತ್ರ (ಹೊಗೆ ರಹಿತ) ಒಲೆಗಳನ್ನು ಬಡಬಗ್ಗರಿಗೆ ವಿತರಿಸಿದೆವು.

ಎಂ.ವಿ. ರಾಜಶೇಖರನ್ ರಾಜಕೀಯವಾಗಿ ಬೆಳೆದು ಅತಿದೊಡ್ಡ ಹುದ್ದೆಗಳನ್ನು ಅಲಂಕರಿಸಬೇಕಾಗಿತ್ತು. ಅವರ ಜೀವನದಲ್ಲಿ ವಿಧಿ ಆಟವಾಡಿದೆ. ಆದರೆ ಇನ್ನು ಮುಂದೆ ಅದಕ್ಕೆ ಅವಕಾಶವಿಲ್ಲವಾಗಿದೆ. ತತ್ತ್ವ ನಿಷ್ಠ ರಾಜಕಾರಣಿಗೆ ಸಾರ್ವತ್ರಿಕವಾಗಿ ಸರ್ವಕಾಲದಲ್ಲೂ ಮನ್ನಣೆ ಸಿಗುತ್ತದೆ ಎಂಬುದು ನನ್ನ ದೃಢವಾದ ನಂಬಿಕೆ. ಅವರು ನೂರ್ಕಾಲ ಬಾಳಿ ಜನತೆಯ ಸೇವೆ ಮಾಡಲಿ. ಆ ಮೂಲಕ ರಾಷ್ಟ್ರದ ಘನತೆಯ ಹುದ್ದೆಗಳನ್ನು ಅವರು ಹೊಂದಲಿ ಎಂದು ನಾನು ಪ್ರೀತಿ ವಿಶ್ವಾಸಗಳ ಮೂಲಕ ಹಾರೈಸುವೆ.

***

# ಕೃಷಿಕ ಸಮಾಜದ ಉಸಿರು

ಜಿ.ಆರ್. ತಿಮ್ಮಪ್ಪ

ಕರ್ನಾಟಕ ಪ್ರದೇಶ ಕೃಷಿಕ ಸಮಾಜವು ಇಡೀ ರಾಷ್ಟ್ರದಲ್ಲಿ ರೈತರ ಹಿತಾಸಕ್ತಿಯನ್ನು ಕಾಪಾಡುವ ಒಂದು ಸೇವಾ ಸಂಸ್ಥೆ. ಇದು ಹಳೆಯ ಮೈಸೂರು ಸಂಸ್ಥಾನದಲ್ಲಿ ೧೯೨೮ರಲ್ಲಿ ಪ್ರಾರಂಭವಾಯಿತು. ಇದು ರಾಷ್ಟ್ರದ ಮೊಟ್ಟ ಮೊದಲ ರೈತರ ಹಿತಾಸಕ್ತಿಗಾಗಿ ದುಡಿಯುವ ಸಂಸ್ಥೆ. ೧೯೧೮ರಲ್ಲಿ ಮೈಸೂರು ರಾಜ್ಯದಲ್ಲಿ ಕೃಷಿ ಇಲಾಖೆ ಪ್ರಾರಂಭವಾಯಿತು. ಇದರ ಮೊದಲ ನಿರ್ದೇಶಕರು ಕೋಲ್‌ಮನ್. ಇವರೇ ಕೃಷಿಕ ಸಮಾಜದ ಸ್ಥಾಪಕರು. ಈ ಸಂಸ್ಥೆ ಅಲ್ಲಿಂದ ಇಲ್ಲಿಯವರೆಗೆ ನಿರಂತರವಾಗಿ ರೈತರ ಸಂಪರ್ಕ ಸಂಸ್ಥೆಯಾಗಿ, ಕೃಷಿಕರಿಗೆ ಮತ್ತು ಸರ್ಕಾರದ ವಿವಿಧ ಇಲಾಖೆಗಳಿಗೆ ಹಾಗೂ ಕೃಷಿ ವಿಶ್ವವಿದ್ಯಾನಿಲಯ ಇವುಗಳೊಡನೆ ಅರ್ಥಪೂರ್ಣವಾಗಿ ಕೆಲಸಮಾಡುತ್ತಿದೆ.

ಕರ್ನಾಟಕ ಪ್ರದೇಶ ಕೃಷಿಕ ಸಮಾಜವು ಸಹಕಾರ ಸಂಘಗಳ ನಿಬಂಧನೆ ಪ್ರಕಾರ ಕೆಲಸಮಾಡುತ್ತಿದೆ. ಕೃಷಿ ಸಚಿವರೇ ಈ ಸಂಸ್ಥೆಯ ಅಧ್ಯಕ್ಷರು. ಕೃಷಿ ಇಲಾಖೆಯ ನಿರ್ದೇಶಕರು ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ತಾಲ್ಲೂಕು ಹಾಗೂ ಜಿಲ್ಲೆಗಳಲ್ಲಿ ಜಂಟಿ ನಿರ್ದೇಶಕರು ಹಾಗೂ ಸಹಾಯಕ ನಿರ್ದೇಶಕರು ಇದರ ಪದನಿಮಿತ್ತ ಕಾರ್ಯದರ್ಶಿಗಳಾಗಿರುತ್ತಾರೆ. ಪ್ರಸ್ತುತ ಕರ್ನಾಟಕ ಪ್ರದೇಶ ಕೃಷಿಕ ಸಮಾಜದಲ್ಲಿ ೪೫,೦೦೦ ಸದಸ್ಯರಿದ್ದಾರೆ. ಪ್ರತಿ ಜಿಲ್ಲೆಯಲ್ಲೂ ಚುನಾಯಿತ ಅಧ್ಯಕ್ಷರು ಹಾಗೂ ರಾಜ್ಯದ ಪ್ರತಿನಿಧಿಗಳಿರುತ್ತಾರೆ. ಬೆಂಗಳೂರಿನಲ್ಲಿ ಕರ್ನಾಟಕ ಪ್ರದೇಶ ಕೃಷಿಕ ಸಮಾಜವು ಒಂದು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಕೃಷಿ ಭವನವನ್ನು ನಿರ್ಮಿಸಿದೆ. ಕೃಷಿ ಭವನದಲ್ಲಿ ಅತ್ಯಾಧುನಿಕ ಸಭಾಂಗಣ, ಉಚಿತ ವಾಚನಾಲಯ, ಪುಸ್ತಕ ಭಂಡಾರ, ವಸ್ತು ಸಂಗ್ರಹಾಲಯ ಮೊದಲಾದವುಗಳನ್ನು ಸಜ್ಜುಗೊಳಿಸುವ ಆಲೋಚನೆ ಇದೆ. ಮಂಡ್ಯ, ಮಡಿಕೇರಿ, ಹಾಸನ, ಶಿವಮೊಗ್ಗ, ಚಿತ್ರದುರ್ಗ, ಬೆಳಗಾವಿ, ಬಿಜಾಪುರ ಜಿಲ್ಲೆಗಳಲ್ಲಿ ಕೃಷಿಕ ಸಮಾಜ ಜಿಲ್ಲಾ ಭವನಗಳನ್ನು ಹೊಂದಿದೆ.

ಕೃಷಿಕ ಸಮಾಜದ ಮುಖ್ಯ ಉದ್ದೇಶಗಳು ವ್ಯವಸಾಯಗಾರರ ಸಮಸ್ಯೆಗಳ ಅಧ್ಯಯನ ಹಾಗೂ ಅದರ ಪರಿಹಾರ. ವ್ಯವಸಾಯಗಾರರ ಸಾಮಾಜಿಕ,

ಆರ್ಥಿಕ, ಸಾಂಸ್ಕೃತಿಕ ಹಾಗೂ ಅಭಿವೃದ್ಧಿಗೆ ಉತ್ತೇಜನ ಕೊಡುವುದು. ಕೃಷಿಯನ್ನು ಅವಲಂಬಿಸಿರುವ ಜನರ ಸ್ಥಿತಿಗತಿಗಳನ್ನು ತಿಳಿಸಲು ಮತ್ತು ತಿಳಿಯಲು ಪ್ರಚಾರ ಕೈಗೊಳ್ಳುವುದು. ಈ ಹಿನ್ನೆಲೆಯಲ್ಲಿ ಕೃಷಿಕ ಸಮಾಜವು ತನ್ನ ಕಾರ್ಯಕ್ರಮಗಳನ್ನು ಅರ್ಥಪೂರ್ಣವಾಗಿ ನಡೆಸಿಕೊಂಡು ಬರುತ್ತಿದೆ.

೧೯೬೧ರಿಂದ ೧೯೭೦ರವರೆಗೆ ಮೈಸೂರು ಪ್ರದೇಶ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿಯಾಗಿ ರಾಜಶೇಖರನ್‌ರವರು ಕೆಲಸಮಾಡಿರುತ್ತಾರೆ. ಈ ಅವಧಿಯಲ್ಲಿ ಅವರು ರಾಜ್ಯದ ರೈತ ಸಮುದಾಯಕ್ಕೆ ಮಾಡಿದ ಸೇವೆ ಸುವರ್ಣಾಕ್ಷರದಲ್ಲಿ ಬರೆದಿಡುವಂಥಾದ್ದು. ಇಂದು ಬೆಂಗಳೂರಿನ ಹಡ್ಸನ್ ವೃತ್ತದಲ್ಲಿರುವ ಕೃಷಿಕ ಭವನ ತಲೆ ಎತ್ತಲು ಮೂಲಭೂತವಾಗಿ ರಾಜಶೇಖರನ್‌ರವರು ಕಾರಣಕರ್ತರು. ಅವರು ಅಂದು ಸರ್ಕಾರದವರೊಡನೆ ಹೋರಾಡಿ ಈ ಜಾಗವನ್ನು ಕೃಷಿಕ ಸಮಾಜಕ್ಕೆ ಕೊಡಿಸದೇ ಇದ್ದಿದ್ದರೆ ಇಂದು ರೈತರು ಬೆಂಗಳೂರಿನ ಕೇಂದ್ರ ಪ್ರದೇಶದಲ್ಲಿ ಇರುತ್ತಲೇ ಇರಲಿಲ್ಲ. ಮೂಲತಃ ಅದು ಪೋಲಿಸ್ ಇಲಾಖೆಗೆ ಸೇರಿದ್ದ ಜಾಗವಾಗಿತ್ತು. ಅಂದಿನ ಗೃಹ ಸಚಿವರು ಆ ಜಾಗವನ್ನು ಕೊಡಲು ಸುತರಾಂ ಒಪ್ಪಿರಲಿಲ್ಲ. ರಾಜಶೇಖರನ್‌ರವರು ಹಠ ಹಿಡಿದು ಆ ಜಾಗವನ್ನು ಕೃಷಿಕ ಸಮಾಜಕ್ಕೆ ಕೊಡಿಸಿಕೊಟ್ಟರು. ಅವರದು ಮತ್ತೊಂದು ಹಿರಿದಾದ ಆಸೆ ಇತ್ತು - ಜಪಾನ್‌ನಲ್ಲಿರುವಂತೆ ಹವಾಮಾನಗಳ ಅಧ್ಯಯನ ಕೇಂದ್ರವನ್ನು ಸ್ಥಾಪಿಸಿ, ಅದರ ಸಹಾಯದಿಂದ ಹವಾಮಾನವನ್ನು ಅರಿತು ರಾಜ್ಯದ ರೈತ ಸಮುದಾಯಕ್ಕೆ ತಿಳಿಸಬೇಕೆಂಬುದು.

೧೯೬೬ರಲ್ಲಿ ಮೈಸೂರು ಸರ್ಕಾರದಿಂದ ಈ ನಿವೇಶನವನ್ನು ೯೯ ವರ್ಷಗಳ ಗುತ್ತಿಗೆ ಆಧಾರದ ಮೇಲೆ ಕೃಷಿ ಸಮಾಜಕ್ಕೆ ಕೊಡಿಸಿದರು. ಈ ನಿವೇಶನಕ್ಕೆ ವರ್ಷಕ್ಕೆ ಒಂದು ಸಾವಿರ ರೂಪಾಯಿಯಂತೆ ನೆಲಬಾಡಿಗೆಯನ್ನು ಅಂದಿನ ಸರ್ಕಾರ ನಿರ್ಧರಿಸಿತು. ಈ ಪ್ರದೇಶದಲ್ಲಿ ಕೃಷಿಕ ಸಮಾಜವು ಶೈತ್ಯಾಗಾರ ಸಹಕಾರ ಸಂಘಕ್ಕೆ ೨೮೭೦೦ ಅಡಿ ಜಾಗವನ್ನು ಬಿಟ್ಟುಕೊಟ್ಟಿತು. ನಾಲ್ಕು ಲಕ್ಷ ರೂಪಾಯಿಗಳ ಸಾಲ ಪಡೆದು ಇಲ್ಲಿ ಶೈತ್ಯಾಗಾರ ನಿರ್ಮಿಸಲಾಗಿತ್ತು. ಇದು ರಾಜ್ಯದಲ್ಲಿನ ಮೊದಲ ಶೈತ್ಯಾಗಾರ. ಇದರಲ್ಲಿ ೧೨೦೦ ಟನ್ ಆಲೂಗಡ್ಡೆ, ಅಷ್ಟೇ ಪ್ರಮಾಣದ ತರಕಾರಿ, ದ್ರಾಕ್ಷಿ ಸೇರಿದಂತೆ ವಿವಿಧ ಹಣ್ಣು ಹಂಪಲುಗಳನ್ನು ಶೇಖರಣೆ ಮಾಡಿಕೊಳ್ಳಬಹುದು. ರೈತರು ಬೆಳೆದ ಹಣ್ಣು ಹಂಪಲುಗಳನ್ನು ಸಂಗ್ರಹಿಸುವ ಸುಸಜ್ಜಿತ ಶೈತ್ಯಾಗಾರ ಸ್ಥಾಪಿತವಾಗಲು ರಾಜಶೇಖರನ್‌ರವರೇ ಕಾರಣಕರ್ತರಾಗಿದ್ದರು.

ಶ್ರೀ ರಾಜಶೇಖರನ್‌ರವರ ದೆಸೆಯಿಂದ ೧೮.೮.೧೯೬೯ರಲ್ಲಿ ಪಂಚಾಯತ್ ರಾಜ್ ಚಿಂತಕರಾದ ಎಸ್.ಕೆ.ಡೇ.ಯವರು ಕೃಷಿಕ ಸಮಾಜಕ್ಕೆ ಭೇಟಿ ಕೊಟ್ಟಿದ್ದರು. ಅಂದಿನ ಕಾಲದ ಅನೇಕ ನಾಯಕರುಗಳಾದ ಮಾಜಿ ಪ್ರಧಾನಿ ಚಂದ್ರಶೇಖರ್, ಕೃಷ್ಣಕಾಂತ್, ಮೋಹನ್ ಧಾರಿಯಾ ಮೊದಲಾದವರೂ ಕೂಡ ಕೃಷಿಕ ಸಮಾಜದ ಕಛೇರಿಗೆ ಭೇಟಿ ಕೊಟ್ಟಿದ್ದರು. ಯಾರಾದರೂ ಬೆಂಗಳೂರಿಗೆ ಗಣ್ಯರು ಬಂದರೆ ಅವರನ್ನು ಕೃಷಿಕ ಸಮಾಜಕ್ಕೆ ಕರೆದುಕೊಂಡು

ಬರುವ ಹವ್ಯಾಸ ರಾಜಶೇಖರನ್ ಅವರದು. ೧೯೬೭ರಲ್ಲಿ ರಾಜಶೇಖರನ್‌ರವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆ ಆದರಷ್ಟೆ. ಆಗ, ಒಬ್ಬರಿಗೆ ಒಂದೇ ಹುದ್ದೆ ಎಂಬ ತತ್ವವನ್ನು ತಮಗೆ ತಾವೇ ಹಾಕಿಕೊಂಡು ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ವಿ.ಎಸ್. ಹಿರೇಗೌಡರಿಗೆ ವಹಿಸಿಕೊಟ್ಟರು. ಸ್ವಯಂಇಚ್ಛೆಯಿಂದ ಹೀಗೆ ಅಧಿಕಾರವನ್ನು ಬಿಟ್ಟು ಕೊಡುವ ರಾಜಕಾರಣಿಗಳು ನಮ್ಮಲ್ಲಿ ಎಷ್ಟು ಜನರಿದ್ದಾರೆ?

ರಾಜಶೇಖರನ್ ಅವರು ಕೃಷಿಕ ಸಮಾಜದಲ್ಲಿ ಮಾಡಿದ ಕೆಲವು ಕೆಲಸ ಕಾರ್ಯಗಳನ್ನು ಹೀಗೆ ಸಂಗ್ರಹಿಸಬಹುದು:

೧೯೬೧ರಲ್ಲಿ ಅಂದಿನ ಸರ್ಕಾರವು ಆಲೂಗಡ್ಡೆ ಮೇಲೆ ವಿಧಿಸಿದ್ದ ತೆರಿಗೆಯನ್ನು ರದ್ದು ಮಾಡುವಂತೆ ಸರ್ಕಾರವನ್ನು ಒತ್ತಾಯಿಸಿ ಯಶಸ್ವಿಯಾದರು. ಪ್ರತಿ ತಾಲ್ಲೂಕಿನ ಕೃಷಿಕ ಸಮಾಜಕ್ಕೆ ಇಬ್ಬರು ಸದಸ್ಯರನ್ನು ನೋಂದಣಿ ಮಾಡಿಕೊಳ್ಳುವ ಕಾರ್ಯಕ್ರಮವನ್ನು ರೂಪಿಸಿದರು. ತಾಲ್ಲೂಕು ಮಟ್ಟದಲ್ಲಿ ಬಿ.ಡಿ.ಓ. ಕಛೇರಿಗೆ, ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಕಛೇರಿಗಳಿಗೆ ಹೊಂದಿಕೊಂಡಂತೆ ಕೃಷಿಕ ಸಮಾಜದ ನಿವೇಶನ ಕೊಡುವಂತೆ ಮೈಸೂರು ಸರ್ಕಾರವನ್ನು ಒತ್ತಾಯಿಸಿ ನಿವೇಶನಗಳನ್ನು ಕೊಡಿಸಿಕೊಟ್ಟರು. ಅಂದಿನ ಕೃಷಿ ಮಂತ್ರಿಯಾಗಿದ್ದ ಎನ್.ರಾಚಯ್ಯ, ಬಿ.ರಾಚಯ್ಯ ಹಾಗೂ ಜಿ. ನಾರಾಯಣಗೌಡ ಅವರುಗಳು ಕೃಷಿಕರ ಬಗ್ಗೆ ಹತ್ತು ಹಲವು ಕಾರ್ಯಕ್ರಮಗಳನ್ನು ರೂಪಿಸಲು ರಾಜಶೇಖರನ್ ಪ್ರೇರಕರಾಗಿದ್ದರು. ರೈತರ ಸಂಘಟನೆ, ಯುವ ರೈತರ ಸಂಘಟನೆ ಹಾಗೂ ಅವರಿಗೆ ಕಾರ್ಯಾಗಾರ, ತಾಲ್ಲೂಕು ಮಟ್ಟದಲ್ಲಿ ಯುವಕ ಸಂಘಗಳ ಸ್ಥಾಪನೆಯಾಗಲು ರಾಜಶೇಖರನ್ ಪ್ರೇರಕರಾಗಿದ್ದರು. ಈ ಕಾಲದಲ್ಲಿ ಅವರು ಯುವ ರೈತ ಸಮಾವೇಶವನ್ನು ಸಂಘಟಿಸಿದ್ದರು. ಯುವ ರೈತರ ಸಮಾವೇಶವನ್ನು ನಡೆಸಿ ಅಲ್ಲಿ ಕೃಷಿ ಪ್ರದರ್ಶನ, ಜೇನು ಸಾಕಾಣಿಕೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ, ಮೀನು ಸಾಕುವುದು, ವಿವಿಧ ಆಟೋಟಗಳು, ವಿಚಾರಗೋಷ್ಠಿ ಮುಂತಾದವುಗಳನ್ನು ವ್ಯವಸ್ಥೆ ಮಾಡಲಾಗುತ್ತಿತ್ತು. ಇಂತಹ ಗೋಷ್ಠಿಯ ರೂಪುರೇಷೆಗಳನ್ನು ರಾಜಶೇಖರನ್‌ರವರೇ ನಿರ್ಧರಿಸುತ್ತಿದ್ದರು. ಪ್ರತಿಯೊಂದು ಜಿಲ್ಲೆಯಲ್ಲೂ ಕೃಷಿ ಮೇಳವನ್ನು ಆಚರಿಸಬೇಕೆಂದು ರಾಜಶೇಖರನ್‌ರವರು ಯೋಚಿಸಿದ್ದರು.

ಕೃಷಿಕ ಸಮಾಜಕ್ಕೆ ಕೃಷಿ ನಿರ್ದೇಶಕರ ಸಹಾಯ ಪಡೆದು ಮುದ್ರಣಾಲಯವನ್ನು ಸ್ಥಾಪಿಸಿದರು. ಇದರಿಂದ 'ವ್ಯವಸಾಯ ಪತ್ರಿಕೆ' ಎಂಬ ಪತ್ರಿಕೆಯನ್ನು ಮುದ್ರಿಸಲು ಅನುಕೂಲವಾಯಿತು. ಪ್ರಸ್ತುತ ೪೫೦೦೦ ರೈತರಿಗೆ ಈ ವ್ಯವಸಾಯ ಪತ್ರಿಕೆಯನ್ನು ತಲುಪಿಸಲಾಗುತ್ತಿದೆ. ಆಗಿನ ಕೇಂದ್ರ ಯೋಜನಾ ಮಂತ್ರಿಗಳಾಗಿದ್ದ ಅಶೋಕ್ ಮೆಹತಾರವರು ಕೃಷಿಕ ಸಮಾಜದ ಮುದ್ರಣಾಲಯವನ್ನು ಉದ್ಘಾಟಿಸಿದ್ದರು. ಅಶೋಕ ಮೆಹತಾ ಅವರಿಗೆ ರಾಜಶೇಖರನ್‌ರವರಲ್ಲಿ ತುಂಬಾ ಪ್ರೀತಿ. ಆ ಕಾರಣಕ್ಕಾಗಿಯೇ ಅವರು ಈ ಸಮಾರಂಭಕ್ಕೆ ಬಂದಿದ್ದರು. ಇದೇ ಸಂದರ್ಭದಲ್ಲಿ ರಾಜಶೇಖರನ್‌ರವರು, ಕೃಷಿಕ ಸಮಾಜವು ವ್ಯವಸಾಯ ಉಪಕರಣ ಹಾಗೂ

ಚಿಕ್ಕ ಟ್ರ್ಯಾಕ್ಟರ್‌ಗಳನ್ನು ಫಾರ್ಮರ್ಸ್ ಕೋ-ಆಪರೇಟಿವ್ ಸೊಸೈಟಿ ಮೂಲಕ ತಯಾರಿಸಲು ಕೇಂದ್ರ ಸರ್ಕಾರ ಅನುಮತಿ ಕೊಡಬೇಕೆಂದು ಒತ್ತಾಯಿಸಿದರು. ಆಧುನಿಕ ವ್ಯವಸಾಯಕ್ಕೆ ಬೇಕಾದ ರಸಗೊಬ್ಬರ ಕಾರ್ಖಾನೆಯನ್ನು ಕರ್ನಾಟಕದಲ್ಲಿ ಸ್ಥಾಪಿಸಬೇಕು ಎನ್ನುವುದು ರಾಜಶೇಖರನ್‌ರವರ ಬೇಡಿಕೆಯಾಗಿತ್ತು. ಮಂಗಳೂರಿನಲ್ಲಿ ರಸಗೊಬ್ಬರ ಕಾರ್ಖಾನೆ ಪ್ರಾರಂಭವಾಗಲು ರಾಜಶೇಖರನ್‌ರವರೇ ಕಾರಣಕರ್ತರಾಗಿದ್ದರು.

೧೯೬೪ರಲ್ಲಿ ರಾಜಶೇಖರನ್‌ರವರು ರೈತರು ಬೆಳೆದ ಬೆಳೆಗಳಿಗೆ ಸರ್ಕಾರ ಬೆಂಬಲ ಬೆಲೆ ಕೊಡಬೇಕೆಂದು ಒತ್ತಾಯ ಮಾಡಿದರು. ಸುಗ್ಗಿ ಕಾಲದಲ್ಲಿ ಸರ್ಕಾರ ಮಾರುಕಟ್ಟೆಯನ್ನು ಪ್ರವೇಶಿಸಿ ರೈತರ ಹಿತಾಸಕ್ತಿ ಕಾಯಬೇಕು ಎನ್ನುವುದು ಅವರ ಅನಿಸಿಕೆ. ಈ ವಿಚಾರವನ್ನು ಕಳೆದ ೩೦ ವರ್ಷಗಳಿಂದ ವಿವಿಧ ವೇದಿಕೆಗಳಲ್ಲಿ ಒಂದೇ ಸಮನಾಗಿ ಪ್ರಸ್ತಾಪಿಸುತ್ತಿರುವ ಏಕೈಕ ನಾಯಕರೆಂದರೆ ರಾಜಶೇಖರನ್ ಮಾತ್ರ. ಲೋಕಸಭೆ, ವಿಧಾನಸಭೆ, ವಿಧಾನ ಪರಿಷತ್ತು, ರಾಜ್ಯಸಭೆ ಹಾಗೂ ವಿವಿಧ ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ರಾಜಶೇಖರನ್ ರೈತರು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ಕೊಡಬೇಕೆಂದು ಒತ್ತಾಯ ಮಾಡುತ್ತಾ ಬಂದಿದ್ದಾರೆ.

ರೈತರಲ್ಲಿ ಜಾಗೃತಿ ಮೂಡಬೇಕು, ಹೊಸ ವಿಚಾರಗಳ ಕಲಿಕೆ ಬಗ್ಗೆ ಆಸಕ್ತಿ ಮೂಡಬೇಕು ಎಂಬುದು ರಾಜಶೇಖರನ್‌ರವರ ಹಿರಿದಾದ ಆಸೆ. ಇದಕ್ಕಾಗಿ ಜಿಲ್ಲೆಯಿಂದ ಜಿಲ್ಲೆಗೆ ರೈತರ ಪ್ರವಾಸವನ್ನು ಅಣಿಗೊಳಿಸಿದರು. ೧೯೬೯ರಲ್ಲಿ ಅಮೆರಿಕಾ ದೇಶದ ರೈತ ಮುಖಂಡರು ಕೃಷಿಕ ಸಮಾಜಕ್ಕೆ ಬಂದು ಅದರ ಮೂಲಕ ರಾಜ್ಯದ ರೈತರ ಕುಟುಂಬಗಳಿಗೆ ಭೇಟಿ ಕೊಟ್ಟು ವಸ್ತುಸ್ಥಿತಿ ಪರಿಚಯಮಾಡಿಕೊಂಡರು. ಪ್ರಗತಿಪರ ರೈತರನ್ನು ದೇಶ ವಿದೇಶಗಳಿಗೆ ಕಳುಹಿಸಬೇಕೆಂದು ಯೋಚಿಸಿದ ರಾಜಶೇಖರನ್ ಆ ದಿಸೆಯಲ್ಲಿ ಕೆಲಸ ಮಾಡಿದ್ದಾರೆ.

ರಾಜ್ಯದಲ್ಲಿ ಬರ ಬಂದಾಗ ರೈತರು ಕಂದಾಯ ಪಾವತಿ ಮಾಡುವುದಕ್ಕೆ ವಿನಾಯಿತಿ ಕೊಡಲು ಹಾಗೂ ರೈತರಿಗೆ ಈ ಕಾಲದಲ್ಲಿ ಅಲ್ಪಾವಧಿ ಸಾಲ ಕೊಡಲು ರಾಜಶೇಖರನ್ ಕೃಷಿಕ ಸಮಾಜದ ಮೂಲಕ ಸರ್ಕಾರವನ್ನು ಒತ್ತಾಯಗೊಳಿಸಿದ್ದರು. ರಾಜಶೇಖರನ್‌ರವರ ವೈಯಕ್ತಿಕ ಪ್ರಯತ್ನದಿಂದ ಕೃಷಿ ನಿರ್ದೇಶಕರು ಹಾಗೂ ಕೃಷಿ ಇಲಾಖೆಯ ಸಿಬ್ಬಂದಿಯವರು ತಾಲ್ಲೂಕು ಹಾಗೂ ರಾಜ್ಯಮಟ್ಟದಲ್ಲಿ ರೈತರು ನಡೆಸುವ ಕಾರ್ಯಕ್ರಮಗಳಿಗೆ ಸಹಾಯಕರಾಗಿದ್ದಾರೆ. ಈ ಬಗ್ಗೆ ಸರ್ಕಾರಿ ಸುತ್ತೋಲೆ ಹೊರಡಿಸಲು ರಾಜಶೇಖರನ್‌ರವರು ಆ ಕಾಲದಲ್ಲಿ ಅವಿರತ ಪ್ರಯತ್ನ ನಡೆಸಿದರು. ಭಾರತ ಕೃಷಿಕ ಸಮಾಜದ ಸಹಯೋಗದಿಂದ ಅನೇಕ ತಾಲ್ಲೂಕುಗಳಲ್ಲಿ ಪೈಲೆಟ್ ಸ್ಕೀಂ (ಫ್ಯಾಮಿಲಿ ಪ್ಲಾನಿಂಗ್) ತರಲು ಪ್ರಯತ್ನಿಸಿ ಯಶಸ್ವಿ ಆಗಿದ್ದಾರೆ. ಕೃಷಿಕ ಸಮಾಜವು ರೈತರಿಗೆ ಸುಲಭ ಬೆಲೆಯಲ್ಲಿ ಬಿತ್ತನೆ ಬೀಜ, ರಸಗೊಬ್ಬರ ಒದಗಿಸಲು ಇವರು ಪ್ರೇರಕರಾಗಿದ್ದಾರೆ. ಹತ್ತು ವರ್ಷಗಳಲ್ಲಿ ರಾಜಶೇಖರನ್‌ರವರು ಕೃಷಿಕ ಸಮಾಜಕ್ಕೆ ವಿವಿಧ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಈ ಸಂದರ್ಭದಲ್ಲಿ ಅಭಿವೃದ್ಧಿ ಆಯುಕ್ತರಾಗಿದ್ದ ದಕ್ಷ ಅಧಿಕಾರಿ ಜಿ.ವಿ.ಕೆ. ರಾವ್ ಹೇಳುವಂತೆ "ರಾಜಶೇಖರನ್‌ರವರಿಗೆ ಕೃಷಿಕ ಸಮಾಜವೇ

ಸರ್ವಸ್ವವೂ ಆಗಿದೆ". ತಮ್ಮ ಎಲ್ಲಾ ಶಕ್ತಿಯನ್ನು ಕೃಷಿಕ ಸಮಾಜಕ್ಕೆ ವಿನಿಯೋಗಿಸಿದ ರಾಜಶೇಖರನ್, ಅದರಿಂದ ಯಾವುದೇ ಸ್ವಾರ್ಥ ಸಾಧನೆಯನ್ನು ಮಾಡಿಕೊಂಡಿಲ್ಲ. ಸ್ವತಃ ರೈತರಾದ ರಾಜಶೇಖರನ್‌ರವರಿಗೆ ಕೃಷಿಕ ಸಮಾಜದ ಎಲ್ಲಾ ಒಳಹರಿವು ಚೆನ್ನಾಗಿ ಗೊತ್ತು. ರೈತ ಸಮುದಾಯದ ಮೇಲೆ ಅಪಾರ ಪ್ರೇಮ ಇರುವ ರಾಜಶೇಖರನ್‌ರವರು ತುಂಬಾ ಪ್ರೀತಿಯಿಂದ ಕರ್ನಾಟಕ ರಾಜ್ಯದ ರೈತ ಸಮಾಜಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರನ್ನು ಕರ್ನಾಟಕದ "ನೈಜ ಮಣ್ಣಿನ ಮಗ" ಎಂದು ಕರೆಯಬಹುದು.



# ಗ್ರಾಮೀಣಾಭಿವೃದ್ಧಿಗೆ ಮುಡಿಪಾದ ಬದುಕು

**ಹೆಚ್.ಸಿ.ನೀರಾವರಿ**

ಎಂ.ವಿ.ರಾಜಶೇಖರನ್‌ರವರ ಪರಿಚಯ ಇತ್ತೀಚಿನದು. ನಾನು ಲೋಕಸೇವಾ ಆಯೋಗದ ಸದಸ್ಯನಾಗಿ ನಿವೃತ್ತನಾದ ಮೇಲೆ ಸಾರ್ವಜನಿಕ ಕ್ಷೇತ್ರಕ್ಕೆ ನನ್ನನ್ನು ಅರ್ಪಿಸಿಕೊಂಡೆ. ಸರ್ಕಾರದ ನೌಕರಿಯಲ್ಲಿದ್ದಾಗಲು ನಾನು ಹತ್ತು ಹಲವು ಸಾರ್ವಜನಿಕ ಕೆಲಸಗಳನ್ನು ಮಾಡುತ್ತಿದ್ದುದುಂಟು. ಆದರೆ ನಿವೃತ್ತಿಯಾದ ಮೇಲೆ ಸಂಪೂರ್ಣವಾಗಿ ಜನರ ಬದುಕಿನ ದುಃಖ-ದುಮ್ಮಾನಗಳನ್ನು ತಿಳಿಯಬೇಕೆಂಬ ಹಂಬಲ ನನ್ನದು. ಇದರ ಸಲುವಾಗಿ 'ಭಗೀರಥ ಸಂಕಲ್ಪ ಟ್ರಸ್ಟ್' ಪ್ರಾರಂಭಿಸಿ, ಹೈದ್ರಾಬಾದ್ ಕರ್ನಾಟಕ ಸೇರಿದಂತೆ ಗ್ರಾಮೀಣ ಜನರ ಬೇಕು-ಬೇಡಗಳನ್ನು ಆಳುವವರಿಗೆ ತಿಳಿಸುವದಕ್ಕೆ ನಮ್ಮ ಟ್ರಸ್ಟ್ ಮೂಲಕ ಮಾಸ ಪತ್ರಿಕೆ ಪ್ರಾರಂಭಿಸಲು ನಿರ್ಧರಿಸಿದೆ.

ದೆಹಲಿಯ 'ರಿಜಿಸ್ಟ್ರಾರ್ ಆಫ್ ನ್ಯೂಸ್ ಪೇಪರ್'ನವರಿಗೆ ನಮ್ಮ ಪತ್ರಿಕೆಗೆ ಸಂಬಂಧಪಟ್ಟ ಎಲ್ಲಾ ವಿವರಗಳನ್ನು ಕಳುಹಿಸಿ ಅಲ್ಲಿಂದ ಟೈಟಲ್ ಕೂಡ ಪಡೆದುಕೊಂಡೆ. ಆದರೆ ಖಾಯಂ ರಿಜಿಸ್ಟ್ರೇಷನ್ ನಂಬರ್ ಪಡೆಯಲು ಹರಸಾಹಸ ಪಡಬೇಕಾಯಿತು. ಈ ಬಗ್ಗೆ ದೆಹಲಿಯ ರಿಜಿಸ್ಟ್ರಾರ್ ಆಫ್ ನ್ಯೂಸ್ ಪೇಪರ್‌ನವರಿಗೆ ಹತ್ತಾರು ಮನವಿ ಪತ್ರಗಳನ್ನು ಬರೆದರೂ ಯಾವುದೋ ಒಂದು ದೋಷ ಹುಡುಕಿ ಅದನ್ನು ಹಿಂದಕ್ಕೆ ಕಳುಹಿಸುತ್ತಿದ್ದರು. ಅವರಿಗೂ ನನಗೂ ಈ ಬಗ್ಗೆ ಮುಸುಕಿನ ಆಟ ಸುಮಾರು ಒಂದೂವರೆ ವರ್ಷ ನಡೆಯಿತು. ನಾನು ಋಜು ಮಾರ್ಗದಲ್ಲಿ ನಡೆಯಬೇಕೆಂಬುವವನು. ಕೆಲವು ಮಿತ್ರರು 'ನೀವು ದೆಹಲಿಗೆ ಹೋಗಿ ಸಂಬಂಧಪಟ್ಟ ಕೇಸ್ ವರ್ಕರನನ್ನು ಸಂದರ್ಶಿಸಿದರೆ ಒಂದೇ ದಿನ ರಿಜಿಸ್ಟ್ರೇಷನ್ ನಂಬರ್ ಪಡೆದುಕೊಂಡು ಬರಬಹುದು' ಎಂದರು.

ಮೂಲತಃ ಅಧಿಕಾರಿಯಾಗಿದ್ದ ನಾನು ಕಾನೂನು ಪ್ರಕಾರವಾಗಿ ಇದು ನಡೆಯಲೆಂದು ನಿರ್ಧಾರ ಮಾಡಿಕೊಂಡೆ. ಈ ವಿಚಾರವನ್ನು ಮಿತ್ರರಾದ ಕಮಲೇಶ್ ಮೂಲಕ ತಿಳಿದ ರಾಜಶೇಖರನ್ ಅವರು 'ಅಯ್ಯೋ, ನೀರಾವರಿಯವರೇ ತಾವು ಗ್ರಾಮೀಣ ಪ್ರದೇಶದಲ್ಲಿ ಜಾಗೃತಿ ಮೂಡಲೆಂದು

ಪತ್ರಿಕೆ ಪ್ರಾರಂಭಿಸಿದ್ದೀರ. ಇದೊಂದು ಉತ್ತಮ ಕೆಲಸ, ನಾನು ತಮಗೆ ಸಹಾಯ ಮಾಡುತ್ತೇನೆ' ಎಂದರು. ಅನಂತರ ಅವರೇ ದೆಹಲಿಗೆ ಪತ್ರ ವ್ಯವಹಾರವನ್ನು ನಡೆಸಲು ಪ್ರಾರಂಭಿಸಿದರು. ರಾಜ್ಯಸಭಾ ಸದಸ್ಯರಾಗಿದ್ದರೂ ರಾಜಶೇಖರನ್ ಯಾರಿಗೂ ಈ ಬಗ್ಗೆ ದೂರವಾಣಿ ಮಾಡಲಿಲ್ಲ. ನಮ್ಮ ಎಲ್ಲಾ ರೆಕಾರ್ಡ್‌ಗಳನ್ನು ಎರಡು-ಮೂರು ಬಾರಿ ದೆಹಲಿಗೆ ಕೊಂಡೊಯ್ದು ಸಂಬಂಧಪಟ್ಟವರಿಗೆ ಪತ್ರ ಬರೆದು ಕೊನೆಗೂ ರಿಜಿಸ್ಟ್ರೇಷನ್ ನಂಬರ್ ಕೊಡಿಸಿದರು. ಸಾಮಾನ್ಯವಾಗಿ ರಾಜಕಾರಣಿಗಳು ಹೀಗೆ ಹಠ ಹಿಡಿದು ಕೆಲಸ ಮಾಡುವುದು ತುಂಬಾ ಕಡಿಮೆ. ರಚನಾತ್ಮಕ ಕೆಲಸಗಳಿಂದ ಸಾರ್ವಜನಿಕ ಕ್ಷೇತ್ರವನ್ನು ಪ್ರವೇಶಿಸಿರುವ ರಾಜಶೇಖರನ್‌ರವರಿಗೆ ಈ ರೀತಿಯ ಕೆಲಸ ಮಾಡುವುದು ವ್ಯಕ್ತಿಗತವಾಗಿ ಬಂದಿದೆ. ಅವರ ಎಐಆರ್‌ಡಿ ಕೂಡ ಗ್ರಾಮೀಣ ಬದುಕಿನ ಜನರ ಉನ್ನತಿಗೆ ದುಡಿಯುತ್ತಿದೆ. ಇಂದಿನ ಪರಿಸ್ಥಿತಿಯಲ್ಲಿ ಗ್ರಾಮೀಣಾಭಿವೃದ್ಧಿ ನಮ್ಮ ಆದ್ಯತೆಯ ವಿಷಯವಾಗಬೇಕು. ಗ್ರಾಮೀಣ ಅಭಿವೃದ್ಧಿ ಹೆಚ್ಚಿನ ಮಹತ್ವ ಪಡೆದುಕೊಂಡಂತೆಲ್ಲಾ, ಅದಕ್ಕಾಗಿ ತಮ್ಮ ಬದುಕನ್ನು ಮುಡುಪಾಗಿಟ್ಟ ರಾಜಶೇಖರನ್ ಹೆಚ್ಚು ಪ್ರಸ್ತುತರಾಗುತ್ತಾರೆ. ರಾಜಶೇಖರನ್ ಅವರಿಗೆ ಮಹತ್ವ ದೊರೆತಂತೆಲ್ಲಾ ನಮ್ಮ ಗ್ರಾಮೀಣ ಬದುಕಿಗೆ ಸಮೃದ್ಧಿ ದೊರೆಯುತ್ತದೆ. ಅಂತಹ ಕಾಲ ಬೇಗ ಬರಲೆಂದು ಅವರ ೭೫ನೆಯ ವರ್ಷದ ಹುಟ್ಟುಹಬ್ಬದ ಸಂದರ್ಭದಲ್ಲಿ ದೇವರಲ್ಲಿ ಪ್ರಾರ್ಥಿಸುತ್ತೇನೆ.

***

# ದೂರದೃಷ್ಟಿಯ ಪರಿಪಕ್ವ ರಾಜಕಾರಣಿ

ಡಾ। ಎಸ್.ಎಂ.ಗಂಗಾಧರಯ್ಯ

ಯಾವುದೇ ರಾಜಕಾರಣಿ ಸಂಸತ್ತಿನ ಉಭಯ ಸದನಗಳ ಸದಸ್ಯರಾದ ಮಾತ್ರಕ್ಕೆ ಸಂಸದೀಯ ಪಟುವಾಗಲಾರ. ಸಂಸದೀಯ ಪಟುತ್ವ ರೂಪಿತವಾಗುವುದು ಆ ರಾಜಕಾರಣಿಯ ಮನಸ್ಥಿತಿಯನ್ನು ಅವಲಂಬಿಸಿ ರುತ್ತದೆ. ಅದು ಒಮ್ಮಿಂದೊಮ್ಮೆಲೆ ಸ್ಫೋಟಗೊಳ್ಳುವಂತಹ ಗುಣವಲ್ಲ. ಬಾಲ್ಯದ ದಿನಗಳಿಂದಲೇ ಅದು ಅಮೂರ್ತವಾಗಿ ದಾಂಗುಡಿಯಿಡ ಲಾರಂಭಿಸುತ್ತದೆ. ಅನುಭವಗಳು ಘನೀಕೃತಗೊಂಡಂತೆ ನಿಲುವುಗಳಲ್ಲಿ ಪ್ರಬುದ್ಧತೆಯುಂಟಾಗುತ್ತದೆ. ದಟ್ಟ ರಾಜಕೀಯ ಅನುಭವಗಳು ಮೇಳೈಸಿ ಒಂದು ಸಿದ್ಧಾಂತಕ್ಕೆ ಅಥವಾ ಒಂದು ನಿಲುವಿಗೆ ಬರತೊಡಗುವ ಸ್ಥಿತಿಯು ಪಟುತ್ವದ ಸಂಕೀರ್ಣ ಕಾಲವೆಂದು ಹೇಳಬಹುದು. ರಾಜನೈತಿಕ ಚಿಂತನೆ ತುಂಬಾ ಪವಿತ್ರವಾದದ್ದು. ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಂತೂ ಅದರ ಮಹತ್ವ ಮತ್ತಷ್ಟು ಹೆಚ್ಚಿನದು. ಪ್ರಪಂಚದ ನಾಗರೀಕತೆಗಳ ಕಾಲದಿಂದ ಇಂದಿನ ನಮ್ಮ ಸಂದರ್ಭದವರೆಗಿನ ರಾಜನೈತಿಕ ಚಿಂತನೆ ನಡೆದುಬಂದ ಬಗೆಯ ಮೇಲ್ಮೈಯನ್ನು ಗಮನಿಸಿದಾಗಲೂ ನಮ್ಮ ಪೂರ್ವದ ಪ್ರಾಜ್ಞಾರರೆಲ್ಲರೂ ಅದರ ಬಗೆಗೆ ತುಂಬಾ ಆಸಕ್ತಿ ವಹಿಸಿ ಚರ್ಚಿಸಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯ ನಂತರದ ಭಾರತೀಯರ ರಾಜನೈತಿಕ ಚಿಂತನಾಕ್ರಮ ವಿಶ್ವದ ಬಹುಶ್ರುತ ನೆಲೆಗಳಲ್ಲಿ ಚರ್ಚೆಯಾಗಿರುವುದು ಕಂಡುಬರುತ್ತದೆ. ರಾಜಕೀಯ ಪಟುತ್ವ ಅಥವಾ ನಮ್ಮ ಸಂದರ್ಭದ ಸಂಸದೀಯ ಪಟುತ್ವ ಇದನ್ನೆಲ್ಲಾ ಗಮನಿಸುತ್ತದೆ.

ಪ್ಲೇಟೋನ ಆದರ್ಶ ಗಣರಾಜ್ಯದ ಪರಿಕಲ್ಪನೆಯಲ್ಲಿ **'Statesmen-ship'** ಬಗೆಗೆ ವಿಶೇಷ ಒತ್ತುಕೊಟ್ಟು ಚರ್ಚಿಸಲಾಗಿದೆ. ಹಾಗೆಯೇ ಭಾರತೀಯರ ಕೌಟಿಲ್ಯ ತನ್ನ ರಾಜನೀತಿ ಮತ್ತು ದಂಡಶಾಸ್ತ್ರದಲ್ಲಿ ರಾಜನಿಗೆ ಅಥವಾ ರಾಜನೈತಿಕ ವಿಚಾರವಂತನಿಗಿರಬೇಕಾದ ಕೆಲವು ಪ್ರಮುಖ ಗುಣಲಕ್ಷಣಗಳನ್ನು ಹೇಳಿದ್ದಾನೆ. ಕಾಳಿದಾಸ ಮಹಾಕವಿ ತನ್ನ ರಘುವಂಶ ಮಹಾಕಾವ್ಯದಲ್ಲಿ 'ಅತಿಥೇಃ ರಾಜನೀತಿಃ' ಎಂಬ ಒಂದು ಉಪಸರ್ಗವನ್ನು

ಕಲ್ಪಿಸಿಕೊಡುತ್ತಾನೆ. ಬಾಣಭಟ್ಟ ತನ್ನ ಪ್ರಸಿದ್ಧ 'ಕಾದಂಬರಿ' ಕೃತಿಯಲ್ಲಿ 'ಶುಕನಾಶನೋಪದೇಶ' ಸಂದರ್ಭದಲ್ಲಿ ರಾಜ ನೈತಿಕ ಚಿಂತಕರಿಗಿರಬೇಕಾದ ಲಕ್ಷಣಗಳನ್ನು ಉಪದೇಶಿಸಿದ್ದಾನೆ. ಆಧುನಿಕ ಸಂದರ್ಭದಲ್ಲೇನೂ ಇಂತಹ ಸಂಕಥನಗಳು ರೂಪಿತವಾಗಿಲ್ಲವೆಂದೇನೂ ಅಲ್ಲ. ೧೯ನೆಯ ಶತಮಾನದಿಂದೀಚೆಗೆ 'ಪ್ರಜಾಪ್ರಭುತ್ವ' ವ್ಯವಸ್ಥೆ ಪ್ರಮುಖ ರಾಜಕೀಯ ವ್ಯವಸ್ಥೆಯಾಗಿ ಕಾಣಿಸಿಕೊಂಡಿದೆ. ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ಪ್ರಜಾತಂತ್ರವಿಧಾನವೇ ರಾಜತಾಂತ್ರಿಕ ವ್ಯವಸ್ಥೆಯಾಗಿದೆ. ಆಧುನಿಕ ಯುಗದ ಈ ವ್ಯವಸ್ಥೆ ಯುರೋಪ್‌ನ ಕೊಡುಗೆ ಎಂಬುದು ಒಂದು ಸಾಮಾನ್ಯ ಅಭಿಪ್ರಾಯ. ಇಂಗ್ಲೆಂಡ್ ಮತ್ತು ಅಮೇರಿಕಾದ ಸಂಸತ್ತುಗಳ ಚರಿತ್ರೆಯನ್ನು ಗಮನಿಸಿದಾಗಲೂ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಪ್ರಜಾಪ್ರತಿನಿಧಿಯ ಕರ್ತವ್ಯ ಮತ್ತು ಅವರ ಸದ್ಗುಣಗಳನ್ನು ಕಂಡುಕೊಳ್ಳಬಹುದು. ಚರ್ಚಿಲ್, ಲಿಂಕನ್ ಕೆನಡಿಯವರಂತಹ ಸಂಸದೀಯ ಪಟುಗಳನ್ನು ನಾವು ಮಾದರಿಯಾಗಿಟ್ಟುಕೊಳ್ಳಬಹುದು. ಸಂಸದೀಯ ವ್ಯವಸ್ಥೆಯಿರುವ ಭಾರತದಲ್ಲಿಯೂ ಕೂಡ ಇಂತಹ ಪಟುತ್ವವನ್ನು ರೂಢಿಸಿಕೊಳ್ಳುವುದರಲ್ಲಿ ಇಲ್ಲಿನ ನಾಯಕರು ಹಿಂದೆ ಬಿದ್ದಿಲ್ಲ. ಬ್ರಿಟಿಷ್ ಸರ್ಕಾರವಿದ್ದಾಗ ಪ್ರಜೆಗಳ ಅಗತ್ಯವನ್ನು ಪೂರೈಸಲು ಪ್ರಜಾಪ್ರತಿನಿಧಿ ಸಭೆಗಳಲ್ಲಿ ನಿರ್ಭಿಡೆಯಿಂದ ಮಾತನಾಡಿದ್ದಾರೆ. ಇಂಗ್ಲೆಂಡ್‌ನ ಸಂಸತ್ತಿನ ಗಮನವನ್ನು ಇಲ್ಲಿಂದಲೇ ಸೆಳೆದಿರುವ ನಿದರ್ಶನಗಳಿಗೇನೂ ಕಡಿಮೆಯಿಲ್ಲ.

ಭಾರತೀಯರಿಗೆ ೨೦ನೆಯ ಶತಮಾನದಲ್ಲಿ ನಾಯಕತ್ವದ ಗುಣ ಬಾಲ್ಯದಿಂದಲೇ ಬೆಳೆಯಲಾರಂಭಿಸಿದೆ. ಏಕೆಂದರೆ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದ ರಾಜಕೀಯ ವಿದ್ಯಮಾನಗಳು ಭಾರತದ ಮಟ್ಟಿಗೆ ಅಂತಹ ಸಂದರ್ಭವನ್ನು ಸೃಷ್ಟಿಸಿವೆ. ಬಹುಭಾಷಿಕ ಮತ್ತು ಬಹು ಸಂಸ್ಕೃತಿ ನೆಲೆಯ ಈ ರಾಷ್ಟ್ರದಲ್ಲಿ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಎರಡು ಮೂರು ಹೋರಾಟಗಳನ್ನು ಒಟ್ಟೊಟ್ಟಿಗೆ ಮಾಡಬೇಕಾಗಿ ಬಂತು. ಮೊದಲನೆಯದು, ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ದೇಶದ ಸ್ವಾತಂತ್ರ್ಯ ಚಳುವಳಿ. ಎರಡನೆಯದು ಸ್ಥಾನೀಯ ಅರಸರ ವಿರುದ್ಧ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ರಾಜಕೀಯ ಹೋರಾಟ. ಮೂರನೆಯದು, ಉಪರಾಷ್ಟ್ರೀಯತೆಯ ಹಿನ್ನೆಲೆಯ ಭಾಷಾವಾರು ಪ್ರಾಂತ್ಯದ ರಚನೆಗಾಗಿ ಮಾಡಿದ ಚಳುವಳಿ. ಇಂತಹ ತ್ರಿಮುಖ ಹೋರಾಟಗಳ ಹಿನ್ನೆಲೆಯಲ್ಲಿ ಭಾರತದ ಪ್ರತೀ ಗ್ರಾಮಮಟ್ಟದಲ್ಲಿ ನಾಯಕತ್ವ ರೂಪಿತವಾಗತೊಡಗಿತು. ಆದುದರಿಂದಲೇ ಸ್ವಾತಂತ್ರ್ಯದ ಕನಸು ನನಸಾಯಿತು. ಜವಬ್ದಾರಿ ಸರ್ಕಾರದ ಆಶಯ ಕೈಗೂಡಿತು. ಭಾಷಾವಾರು ಪ್ರಾಂತಗಳು ರಚನೆಗೊಂಡು ಅಖಂಡ ಭಾರತ ರಾಜಕೀಯವಾಗಿ ಬಲಿಷ್ಠಗೊಳ್ಳತೊಡಗಿತು. ಸಮರ್ಥ ನಾಯಕರಿಂದಾಗಿ ಸ್ವಾತಂತ್ರ್ಯಾನಂತರದ 'ನವ ಭಾರತದ ನಿರ್ಮಾಣ' ಭರದಿಂದ ನಡೆಯ ತೊಡಗಿತು.

ಗಾಂಧಿ, ನೆಹರು, ಸರ್ದಾರ್ ವಲ್ಲಭಬಾಯಿ ಪಟೇಲರಾದಿಯಾಗಿ ನವಭಾರತದ ಬಹುತೇಕ ನಾಯಕರು ಜನಸೇವೆಯ ರಾಜಕೀಯ ಗುರಿಯಿಟ್ಟುಕೊಂಡು ತಮ್ಮ ಸಂಕಲ್ಪದಲ್ಲಿ

ಯಶಸ್ಸನ್ನು ಕಂಡುಕೊಂಡಿದ್ದಾರೆ. ಜಯಪ್ರಕಾಶ ನಾರಾಯಣ, ರಾಮಮನೋಹರ ಲೋಹಿಯಾ, ಆಚಾರ್ಯ ವಿನೋಬಾ, ಮೊರಾರ್ಜಿ ದೇಸಾಯಿ, ಶ್ರೀಮತಿ ಇಂದಿರಾಗಾಂಧಿ, ಶ್ಯಾಂ ಪ್ರಸಾದ್ ಮುಖರ್ಜಿ, ವಿ.ಕೆ. ಕೃಷ್ಣಮೆನನ್, ಶೇಖ ಮಹಮ್ಮದ್ ಅಬ್ದುಲ್ಲಾ, ಜೈ ಸುಖಲಾಲ್ ಹಾಥಿ ಎಸ್. ನಿಜಲಿಂಗಪ್ಪ, ಶಾಂತವೇರಿ ಗೋಪಾಲಗೌಡ, ಅಣ್ಣಾದೊರೈ, ಕಾಮರಾಜ್ ಮುಂತಾದ ಅಗ್ರಮಾನ್ಯ ನಾಯಕರು ನಿಸ್ವಾರ್ಥದಿಂದ ಬಡಜನತೆಯ ಪರವಹಿಸಿ ಸಂಸತ್ತಿನಲ್ಲಿ ಮತ್ತು ಇತರ ಸದನಗಳಲ್ಲಿ ಸಮರ್ಥವಾಗಿ ವಾದ ಹೂಡಿ ಸಾಮಾಜಿಕ ಪರಿವರ್ತನೆಯನ್ನು ಸಾಧಿಸಿದ್ದಾರೆ. ಆ ಮೂಲಕ ಪ್ರಜಾಪ್ರಭುತ್ವದ ಹಿತಾಸಕ್ತಿಯನ್ನು ಎತ್ತಿ ಹಿಡಿದಿದ್ದಾರೆ. ದುರ್ಬಲ ವರ್ಗದವರಿಗಾಗಿ ಹತ್ತು ಹಲವು ಚಳುವಳಿಗಳನ್ನು ಮಾಡಿದ್ದಾರೆ. ಸದನದ ಒಳಗೂ ಹೊರಗೂ ತಮ್ಮ ನಾಯಕತ್ವ ಗುಣಗಳಿಂದಾಗಿ ಸಾಮಾಜಿಕ ನ್ಯಾಯ ದೊರಕಿಸಿಕೊಡುವಲ್ಲಿ ನಿರಂತರ ಹೋರಾಟ ಮಾಡಿದ್ದಾರೆ. ಹಲವು ಅಭಿಯಾನಗಳ ಮೂಲಕ ಜನತೆಯನ್ನು ಜಾಗೃತಗೊಳಿಸಿದ್ದಾರೆ. ಹತ್ತು-ಹಲವು ಆಂದೋಲನಗಳನ್ನು ರೂಪಿಸಿ ಸ್ವಸ್ಥ ಪ್ರಜಾಸತ್ತೆಗೆ ಪ್ರಯತ್ನಿಸಿದ್ದಾರೆ. ಅವರ ಹೋರಾಟದ ಹಾದಿ ನಮಗೆ ಸ್ಪಷ್ಟವಾಗಿ ಗೋಚರವಾಗುತ್ತಿದೆ. "ರಾಜಕೀಯ" ಐಷಾರಾಮಿ ಜೀವನದ ವೃತ್ತಿಯಲ್ಲವೆಂಬ ಪಾಠವನ್ನು ಹೇಳಿಕೊಟ್ಟಿದ್ದಾರೆ. ಆದರೂ ನಮ್ಮ ಸಂದರ್ಭದಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ಬೇರೊಂದು ವ್ಯವಸ್ಥೆ ರೂಪಿತವಾಗಿರುವುದು ಬೇಸರದ ಸಂಗತಿ. ಭಾರತದ ಪ್ರಜಾಪ್ರಭುತ್ವದ ಭವಿಷ್ಯ ಆ ಮೂಲಕ ಮಸುಕು ಮಸುಕಾಗಿ ಕಾಣುತ್ತಿರುವುದು ಪ್ರಜ್ಞಾವಂತರಿಗೆ ನಿಜಕ್ಕೂ ಚಿಂತೆಯಾಗಿದೆ. ಆಗಮೀ ದಿನಗಳಲ್ಲಿ ರಾಜಕೀಯ ಯಾವ ಜಾಡು ಹಿಡಿಯಬೇಕು ಎಂಬುದಕ್ಕೆ ಸ್ಪಷ್ಟ ಮಾರ್ಗದರ್ಶಿ ಸೂತ್ರಗಳಿಲ್ಲ. ನಿರ್ದೇಶನ ಕೊಡುವವರಿಲ್ಲದೆ ಪ್ರಜಾಪ್ರಭುತ್ವದ ಹೆಸರಿನಲ್ಲಿ ವಿಚಿತ್ರ ರಾಜಕೀಯ ವ್ಯವಸ್ಥೆ ಉದ್ಭವವಾಗುತ್ತಿರುವುದು ಅಪಾಯದ ಮುನ್ಸೂಚನೆಯೇ ಆಗಿದೆ.

ಉಳಿದಿರುವ ಹಿರಿಯ ತಲೆಮಾರಿನ ಅಲ್ಲೊಬ್ಬ ಇಲ್ಲೊಬ್ಬ ರಾಜಕಾರಣಿಗಳಿಗೆ ಮಾತ್ರ ನಾಡಿನ, ರಾಷ್ಟ್ರದ ಮತ್ತು ಅಖಂಡವಾದ ಸಾಮಾಜಿಕ ಹಿತಾಸಕ್ತಿಯನ್ನು ಎತ್ತಿಹಿಡಿಯುವ ಮನೋಭಾವ ಉಳಿದುಕೊಂಡು ಬಂದಿದೆ. ಅವರೇ ನಿರ್ದೇಶಕ ಸೂತ್ರಗಳನ್ನು ನಿರ್ದೇಶಿಸಬೇಕಾಗಿದೆ. ಆ ಮೂಲಕ ರಾಷ್ಟ್ರದ ಆಗಮೀ ದಿನಗಳ ಹಣೆಬರಹವನ್ನು ಬರೆಯಬೇಕಾಗಿದೆ. ಹಳಿತಪ್ಪುತ್ತಿರುವ ರಾಜಕೀಯದ ರೈಲುಗಾಡಿಯನ್ನು ನಿಜ ನಿಟ್ಟಿನಲ್ಲಿ ಓಡಿಸಬೇಕಾದ ಕರ್ತವ್ಯ ಅವರದ್ದಾಗಿದೆ. ರಾಜತಾಂತ್ರಿಕ ವ್ಯವಸ್ಥೆಗೆ ಮೌಲಿಕವಾದ ಮತ್ತು ತಾತ್ವಿಕವಾದ ನೆಲೆಗಟ್ಟನ್ನು ಪುನರ್‌ಸೃಷ್ಟಿಸಬೇಕಾಗಿದೆ. ಇಂತಹ ಜವಾಬ್ದಾರಿಯು ಹಿರಿಯ ತಲೆಮಾರಿನವರಾದ ಮತ್ತು ರಾಜಕೀಯವಾಗಿ ಸಕ್ರಿಯರಾಗಿರುವ ಶ್ರೀ ಎಂ.ವಿ.ರಾಜಶೇಖರನ್ ಅವರಂತಹ ನಾಯಕರುಗಳ ಮೇಲಿದೆ. ರಾಷ್ಟ್ರದ ಭವಿಷ್ಯದ ದೃಷ್ಟಿಯಿಂದ ಅವರು ಮತ್ತಷ್ಟು ಸಕ್ರಿಯರಾಗಬೇಕು. ಯುವ ಪೀಳಿಗೆಯ ಹೊಸ ರಕ್ತದ ರಾಜಕಾರಣಿಗಳಿಗೆ ಅವರು ದಿಗ್ದರ್ಶಕರಾಗಬೇಕು. ತಾವು ಬೆಳೆದುಬಂದ ಮತ್ತು ತಮ್ಮ ಸರಳ ರೇಖಾತ್ಮಕವಾದ ವ್ಯಕ್ತಿತ್ವದ ತೆರೆದ ಪುಟಗಳನ್ನು ಅವರ ಮುಂದಿಡಬೇಕು. ಬಲವಂತವಾಗಿಯಾದರೂ ಹೊಸ ರಕ್ತದ

ರಾಜಕಾರಣಿಗಳಲ್ಲಿ 'ರಾಜಕಾರಣ ಒಂದು ಪವಿತ್ರವಾದ ವೃತ್ತಿ' ಎಂಬುದನ್ನು ನಿರೂಪಿಸಿ ತೋರಿಸಬೇಕು. ಅವರ ಎಪ್ಪತ್ತೈದು ವರ್ಷಗಳ ಜೀವನಾನುಭವ ಮತ್ತು ಅರವತ್ತು ವರ್ಷಗಳ ರಾಜಕೀಯ ಅನುಭವಕ್ಕ ಇದು ತಿಳಿದಿಲ್ಲವೆಂದೇನೂ ಇದರ ಅಭಿಪ್ರಾಯವಲ್ಲ. ಇದೊಂದು ಆಗ್ರಹವಷ್ಟೆ.

೨

ಶ್ರೀ ಎಂ.ವಿ.ರಾಜಶೇಖರನ್ ತಮ್ಮ ಹದಿನೈದನೇ ವರ್ಷದಿಂದಲೇ ನಾಯಕತ್ವದ ಗುಣಗಳನ್ನು ರೂಪಿಸಿಕೊಂಡವರು. ಅವರ ಮಾಧ್ಯಮಿಕ ಶಿಕ್ಷಣದ ಅವಧಿಯಿಂದಲೇ ಸ್ವಾತಂತ್ರ್ಯ ಚಳುವಳಿ ಮತ್ತು ಕಾಂಗ್ರೆಸ್‌ನ ಸಂಘಟನೆಯಲ್ಲಿ ಸಕ್ರಿಯರಾಗಿದ್ದವರು. ಸ್ವಾತಂತ್ರ್ಯ ಪೂರ್ವದ ಆರೇಳು ವರ್ಷಗಳ ಹಿಂದಿನಿಂದಲೇ ಅವರು ತಮ್ಮ ದೂರದೃಷ್ಟಿಯನ್ನು ಹಾಯಿಸಿ ಸಂಘಟನೆಯ ನಾಯಕತ್ವವನ್ನು ವಹಿಸಿಕೊಂಡಿದ್ದರು. ೧೯೪೭ರಲ್ಲಿ ಮೈಸೂರು ಸಂಸ್ಥಾನವನ್ನು ಜವಾಬ್ದಾರಿ ಸರ್ಕಾರದ ಒಕ್ಕೂಟದಡಿ ತರಲು ಮೈಸೂರು ಚಲೋ ಚಳುವಳಿಯನ್ನು ಆರಂಭಿಸಿದ ಕೀರ್ತಿ ಅವರದ್ದಾಗಿದೆ. ಸ್ವಾತಂತ್ರ್ಯಾನಂತರ ಕಾಂಗ್ರೆಸ್ ರಾಜನೀತಿ ಪಕ್ಷದಲ್ಲಿದ್ದುಕೊಂಡು ಪಕ್ಷವನ್ನು ಸಮರ್ಥವಾಗಿ ಕಟ್ಟುವಲ್ಲಿ ಯಶಸ್ವಿಯಾದರು.

ಈ ದಿನಗಳಿಂದಲೇ ಅವರಿಗೆ ನಾಯಕತ್ವದ ಗುಣಗಳು ಸಿದ್ಧಿಸಿದ್ದವು. ಒಬ್ಬ ನಾಯಕನಿಗಿರಬೇಕಾದ ದೂರದೃಷ್ಟಿ, ಸಮಯಪ್ರಜ್ಞೆ, ಆಯ್ಕೆಯ ವಿವೇಚನಾಶೀಲತೆ, ಅಧ್ಯಯನಶೀಲತೆ, ಸಂಘಟನೆ, ಸಾಮಾಜಿಕ ಹೊಣೆಗಾರಿಕೆ, ಬೌದ್ಧಿಕ ಸಂಪತ್ತು ಮತ್ತು ಸಂಪರ್ಕ, ವಾಕ್‌ಪಟುತ್ವ, ಮಾನವೀಕರಣದ ಪರವಾದ ಹೋರಾಟದ ಮನೋಭಾವ, ವಿನಯಶೀಲತೆ, ವಿಮರ್ಶನ ಪ್ರಜ್ಞೆ, ಚಿಕಿತ್ಸಕ ಬುದ್ಧಿ, ನೈತಿಕ ದೃಷ್ಟಿಕೋನ, ವಿಲೋಮ ಅನುಲೋಮಗಳ ಬಗೆಗಿನ ತಾತ್ವಿಕ ದೃಷ್ಟಿಕೋನ, ಬದ್ಧತೆ, ಅನನ್ಯ ರಾಷ್ಟ್ರಪ್ರೇಮ, ಸಾಂಸ್ಕೃತಿಕ ಪ್ರಜ್ಞೆ, ಆವೇಶಕ್ಕೆ ಒಳಗಾಗದೆ ವಿಷಯಗಳ ಪ್ರತಿಪಾದನೆ, ಸಮತೂಕದ ವಿಚಾರ ಮಂಡನೆ ಮತ್ತು ಜನಪರ ಕಾಳಜಿಗಳು ಬೆಳೆದಿದ್ದವು.

ಸ್ವತಃ ಅರ್ಥಶಾಸ್ತ್ರ, ರಾಜನೀತಿಶಾಸ್ತ್ರ ಮತ್ತು ಪತ್ರಿಕೋದ್ಯಮದ ವಿದ್ಯಾರ್ಥಿಯಾಗಿ ಸಾಮಾಜಿಕ ಚಿಂತನೆಗೆ ಒಳಗಾದವರು. ಕಾನೂನು ಪದವಿಯ ಶಿಕ್ಷಣ ಅವರ ನಾಯಕತ್ವಕ್ಕೆ ರಾಜಕೀಯ ಗರಿ ಮೂಡಿಸಿತು. ದೇಶದ ಮತ್ತು ವಿದೇಶದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಅವರು ನಡೆಸಿದ ಕೃಷಿ ಸಂಬಂಧಿ ಅಧ್ಯಯನಗಳು ಭಾರತದ ಗ್ರಾಮೀಣ ಕೃಷಿ ಚಟುವಟಿಕೆಗೆ ವರದಾನವಾಗುವಂತಾಯಿತು. ಹೀಗೆ ಅವರ ಅಧ್ಯಯನದ ವಿವಿಧ ವಿಷಯಗಳು ಅವರನ್ನು ಬಹುಮುಖಿಯಾಗಿ ಕ್ರಿಯಾಶೀಲರಾಗುವುದಕ್ಕೆ ಸಹಕಾರಿಯಾದವು. ಸ್ವತಃ ಕೃಷಿಕನಾಗಿ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದ ಕಾರಣದಿಂದ ಅವರಿಗ ಅವೆರಡರ ಮೇಲೆ ವಿಶೇಷ ಆಸಕ್ತಿಯುಂಟಾಯಿತು. ಭಾರತದ ಅರ್ಥವ್ಯವಸ್ಥೆಯ ಬೆನ್ನೆಲುಬಾದ ಕೃಷಿಕನ ಸುಧಾರಣೆಯು ದ್ವಿಮುಖ ಪ್ರಯೋಜನವನ್ನುಂಟುಮಾಡುತ್ತದೆ ಎಂಬ ಅಭಿಪ್ರಾಯದಿಂದ ಇದನ್ನೇ ತಮ್ಮ ಜೀವಿತದ

ಆಧ್ಯತಾ ವಲಯವಾಗಿ ಆಯ್ದುಕೊಂಡರು. ಗ್ರಾಮೀಣ ಅಭಿವೃದ್ಧಿಯ ಪೂರಕ ವಲಯವಾದ ಕೃಷಿಯ ಏಳ್ಗೆಯ ಮಾರ್ಗೋಪಾಯವನ್ನು ಹುಡುಕಹತ್ತಿದರು. ರಾಜಕೀಯವನ್ನು ಅದರ ವೇದಿಕೆಯನ್ನಾಗಿ ಮಾಡಿಕೊಂಡು ನಿರಂತರವಾಗಿ ಅದರ ಬೆಳವಣಿಗೆಗೆ ಶ್ರಮಿಸಿದವರು ಅವರಾಗಿದ್ದಾರೆ.

೨

ಶ್ರೀ ಎಂ.ವಿ.ರಾಜಶೇಖರನ್ ಅವರಿಗಾದ ಪ್ರೇರಣೆ ಮತ್ತು ಪ್ರಭಾವಗಳನ್ನು ಸಮೀಕ್ಷಿಸಿದಾಗ ಅವರ ರಾಜಕೀಯ ಹಿನ್ನೆಲೆ-ಮುನ್ನೆಲೆಗಳು ಅರ್ಥವಾಗುತ್ತವೆ. ರಾಜಶೇಖರನ್ ಕಳೆದ ಶತಮಾನದ ಐವತ್ತರ ದಶಕದಲ್ಲಿಯೇ ಭವಿಷ್ಯದ ನಾಯಕರೆನ್ನುವಂತೆ ರೂಪಿತರಾಗಿದ್ದರು. ಮೈಸೂರು ಮಹಾರಾಜ ಕಾಲೇಜಿನ 'ಮಿತ್ರಮೇಳ'ದಿಂದಲೇ ಅವರ ವೈಚಾರಿಕ ಪ್ರಜ್ಞೆ ಜಾಗೃತಗೊಂಡಿತು. ಸಮಷ್ಟಿ ಭವ್ಯಭಾರತದ ನವ ನಿರ್ಮಾಣದ ಹಿರಿಯರ ಕನಸನ್ನು ಸಾಕ್ಷಾತ್ಕರಿಸಲು ಹಲವು ಹನ್ನೊಂದು ಯೋಜನೆಗಳನ್ನು ಮನಸ್ಸಿನಲ್ಲೇ ನೇಯತೊಡಗಿದರು. ಉನ್ನತ ವ್ಯಾಸಂಗಕ್ಕೆಂದು ದೆಹಲಿಗೆ ಹೋದಾಗ ಆಗಿನ್ನೂ ಕಾಂಗ್ರೆಸ್ ಪಕ್ಷ ಅದೊಂದು ಕೇವಲ ಚುನಾವಣೆಯನ್ನು ಎದುರಿಸಲು ಮಾಡಿಕೊಂಡ ವ್ಯವಸ್ಥೆಯಂತೆ ರೂಪಿತವಾಗಿರಲಿಲ್ಲ. ಅದೊಂದು ಸ್ಪಷ್ಟ ಸೈದ್ಧಾಂತಿಕ ನೆಲೆಗಟ್ಟನ್ನುಳ್ಳ ರಾಜನೈತಿಕ ಪಕ್ಷವಾಗಿತ್ತು. ಇಂತಹ ತಾತ್ವಿಕ ಬದ್ಧತೆಯಿರುವ ಪಕ್ಷವದಾಗಿದ್ದರಿಂದ ದೆಹಲಿ ಪ್ರದೇಶ ವಿದ್ಯಾರ್ಥಿ ಕಾಂಗ್ರೆಸ್‌ನ ಅಧ್ಯಕ್ಷತೆಯನ್ನು ಇವರು ವಹಿಸಿಕೊಂಡರು. ಶ್ರೀಮತಿ ಇಂದಿರಾಗಾಂಧಿಯವರಿಂದ ನೇರ ಸಂಪರ್ಕವಿಟ್ಟುಕೊಂಡರು. 'ಯಂಗ್ ಟರ್ಕ್'ನಲ್ಲಿ ಸಕ್ರಿಯ ಸದಸ್ಯರಲ್ಲೊಬ್ಬರಾದರು. 'ಯಂಗ್ ಟರ್ಕ್' ತಾತ್ವಿಕ ಆದರ್ಶಗಳನ್ನು ಗಾಳಿಗೆ ತೂರಿ ಬೇರೊಂದು ಮಾರ್ಗ ಹಿಡಿದಾಗ ಇವರೂ ಬೇರೊಂದು ದಾರಿ ಹುಡುಕಿಕೊಂಡಿದ್ದು ಈಗ ಇತಿಹಾಸ. ಐ.ಕೆ.ಗುಜ್ರಾಲ್, ಅರ್ಜುನ್ ಸಿಂಗ್, ಚಂದ್ರಶೇಖರ್, ಮೆನನ್, ಮೆಹತಾ, ನಟವರಸಿಂಗ್ ಮುಂತಾದವರ ಸನಿಹ ದೊರೆತದ್ದು ಇಲ್ಲಿಂದಲೇ.

ಎಂ.ವಿ.ರಾಜಶೇಖರನ್ ಅವರಿಗೆ ಮಹಾತ್ಮ ಗಾಂಧೀಜಿ, ನೆಹರು, ಲಾಲ್‌ಬಹದ್ದೂರ್ ಶಾಸ್ತ್ರಿ, ರಾಜೇಂದ್ರ ಪ್ರಸಾದ್ ಮುಂತಾದ ಅಗ್ರಗಣ್ಯರ ನೇರವಾದ ಪ್ರಭಾವವುಂಟಾಗಿದೆ. ಗಾಂಧೀಜಿಯವರು ಬರೆದ 'ಹಿಂದ್ ಸ್ವರಾಜ್' ಕಿರುಹೊತ್ತಿಗೆ ಅವರ ಮನಸ್ಸಿನ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿದೆ. ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಆಗ ಅವರ ಸಹಪಾಠಿಗಳಾಗಿದ್ದ ಯು.ಆರ್.ಅನಂತಮೂರ್ತಿ, ಜೆ.ಹೆಚ್. ಪಟೇಲ್ ಮುಂತಾದವರೊಡನೆ ಈ ಪುಸ್ತಕದ ಆಳ-ವಿಸ್ತಾರವನ್ನು ಚರ್ಚಿಸಿದ್ದುಂಟು. ಗಾಂಧೀಜಿಯವರು ಹೇಳಿದ ಸಪ್ತ ಪಾತಕಗಳು ಅವರ ಮನಸ್ಸಿನಲ್ಲಿ ನೇರವಾಗಿ ನಾಟಿದ್ದುಂಟು. "ತತ್ವರಹಿತ ರಾಜಕಾರಣ"ವನ್ನು ಸಪ್ತ ಪಾತಕಗಳಲ್ಲಿ ಒಂದೊಂದು ಸಮರ್ಥವಾಗಿ ಹೇಳಿದ ಗಾಂಧಿ, ಶ್ರೀ ಎಂ.ವಿ.ರಾಜಶೇಖರನ್ ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿರುವುದು ಅವರ ರಾಜಕೀಯ ಬದುಕಿನ ಮೇಲ್ಮೈಯನ್ನು ಸಮೀಕ್ಷಿಸಿದಾಗ ತಿಳಿದುಬರುತ್ತದೆ.

ರಾಜಶೇಖರನ್ ಉತ್ತಮ ವಾಗ್ಮಿ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳನ್ನು ಸ್ಪಷ್ಟವಾಗಿ ನಿರರ್ಗಳವಾಗಿ ಮಾತನಾಡುವ ವಾಕ್‌ಚಾತುರ್ಯ ಗುಣ ಅವರಿಗೆ ಸಿದ್ಧಿಸಿದೆ. ಪ್ಲೇಟೋ ಹೇಳುವಂತೆ ರಾಜನೈತಿಕನಿಗೆ ಭಾಷೆಯ ಆಳ ಪರಿಜ್ಞಾನದ ಅಗತ್ಯವನ್ನು ರಾಜಶೇಖರನ್ ಮನಗಂಡಿದ್ದಾರೆ. ವ್ಯಾಕರಣ ದೋಷಗಳಿಲ್ಲದ, ಅನಗತ್ಯ ಭಾಷಾಡಂಬರವಿಲ್ಲದ ಸರಳ ಶಬ್ದಗಳ ವಾಕ್ಯ ಜೋಡಣೆ ನಿಜಕ್ಕೂ ಆಶ್ಚರ್ಯ ತರುವಂತಹದ್ದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಭಾಷೆಯದ್ದೇ ಮಹತ್ವ. ಆವೇಶರಹಿತವಾದ ಸಮತೂಕದ ವಿಷಯ ಮಂಡನವು ಉತ್ತಮ ಸಂಸದೀಯ ಪಟುವಿನ ಒಳಗುಟ್ಟಾಗಿದೆ. ಅವರ ಪತ್ರ ಬರವಣಿಗೆ ಮತ್ತು ಆಲೋಚನಾ ಕ್ರಮಗಳಿಂದ ಭಾಷೆ ಅವರ ಭವಿಷ್ಯವನ್ನು ರೂಪಿಸಿದೆ.

ಅಧ್ಯಯನಶೀಲತೆಯು ಉತ್ತಮ ಸಂಸದೀಯ ಪಟುವಿನ ಮತ್ತೊಂದು ಪ್ರಮುಖ ಲಕ್ಷಣ. ಶ್ರೀ ಎಂ.ವಿ.ರಾಜಶೇಖರನ್ ಸದಾ ಅಧ್ಯಯನಶೀಲರು. ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ಪತ್ರಿಕೋದ್ಯಮವಲ್ಲದೆ, ಕಾನೂನನ್ನು ಅಕಾಡೆಮಿಕ್ ಶಿಸ್ತುಗಳ ಮೂಲಕ ಅಧ್ಯಯನ ಮಾಡಿದವರಾದರೂ ಪ್ರಪಂಚದ ಬಹುತೇಕ ವೈಚಾರಿಕ ಕೃತಿಗಳನ್ನು ಅಧ್ಯಯನ ಮಾಡಿದವರಾಗಿದ್ದಾರೆ. ಅಲ್ಲದೆ ಸ್ವತಃ ವಿದೇಶಗಳಿಗೆ ತೆರಳಿ ಪ್ರಯೋಗಾತ್ಮಕ ಅಧ್ಯಯನ ಶೀಲತೆಯನ್ನು ಜೀವಂತವಾಗಿಟ್ಟಿದ್ದಾರೆ. ಅವರ ಕ್ರಮಬದ್ಧವಾದ ಓದು ಮತ್ತು ಅವರ ನಿಕಟ ಕ್ಷೇತ್ರಗಳಲ್ಲಿನ ನಿರಂತರ ಬೆಳವಣಿಗೆಯನ್ನು ತುಂಬಾ ಸೂಕ್ಷ್ಮವಾಗಿ ಗ್ರಹಿಸುತ್ತಿದ್ದಾರೆ.

ಎಂ.ವಿ.ರಾಜಶೇಖರನ್ ಅವರು ಇಂತಹ ಎಲ್ಲಾ ಸದ್ಗುಣಗಳಿದ್ದಾಗ್ಯೂ ರಾಜಕೀಯದ ಪ್ರಧಾನ ಧಾರೆಗೆ ಬರಲಿಲ್ಲವೆಂಬ ಮಾತು ಕೇಳಿಬರುತ್ತಿದೆ. ಅದು ಹೌದು. ಪ್ರಕೃತದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಒಬ್ಬ ಪ್ರಜ್ಞಾವಂತನಿಗೆ ನೆಲೆಯಿದೆಯೇ? ಎಂದು ಪ್ರಶ್ನಿಸಿಕೊಂಡಾಗ ನಮ್ಮಲ್ಲಿಯೇ ಕಸಿವಿಸಿಯುಂಟಾಗುತ್ತದೆ. ರಾಜಕೀಯದ ಗುರಿ ಜನಸೇವೆ ಎಂದರಿತವರಿಗೆ ನಮ್ಮ ಸಂದರ್ಭದ ವ್ಯವಸ್ಥೆಯಲ್ಲಿ ಕಿಂಚಿತ್ತೂ ಸ್ಥಾನಮಾನಗಳು ದೊರೆಯಲಾರವು. ಅವಕಾಶವಾದಿ ರಾಜಕಾರಣ, ಕೋಮುವಾದಿ ರಾಜಕಾರಣಗಳೇ ಇಂದು ಚಾಲ್ತಿಯಲ್ಲಿರುವ ನಾಣ್ಯಗಳಾಗಿವೆ. ಇದಕ್ಕೊಂದು ನಿದರ್ಶನವೆಂದರೆ ನಮ್ಮ ದೇಶದ ಚರಿತ್ರೆಯಲ್ಲಿ ೧೯೭೦ರ ದಶಕದವರೆಗಿನ ರಾಜಕೀಯ ಚರಿತ್ರೆಯನ್ನು ಗಮನಿಸಿದಾಗ ನಮ್ಮದು ಜಾತ್ಯತೀತ ರಾಜಕಾರಣವಾಗಿತ್ತು ಎಂಬುದು ಅರಿಕೆಗೆ ಬರುತ್ತದೆ. ಆದರಿಂದ ಜಾತಿ ಕಾರಣವೇ ಪ್ರಧಾನವಾಗಿ ಕಂಡು ಬರುತ್ತದೆ. ನಮ್ಮಲ್ಲಿ ಜಾತ್ಯಾತೀತ ವ್ಯವಸ್ಥೆ ಇರುವವರೆಗೂ ನಾವು ಉತ್ತಮ ನಾಯಕರನ್ನು ಜನಪ್ರತಿನಿಧಿಗಳನ್ನಾಗಿಸಿ ಆಡಳಿತದ ಗದ್ದುಗೆಗೆ ಕಳಿಸುತ್ತಿದ್ದೆವು. ಆಗ ನಿಸ್ವಾರ್ಥದ ಮತ್ತು ಪ್ರಜಾತಂತ್ರದ ನೈಜ ಆಡಳಿತ ಸಾಧ್ಯವಾಗುತ್ತಿತ್ತು. ನಾಯಕರು ಅಥವಾ ಪ್ರತಿನಿಧಿಗಳು ಜವಾಬ್ದಾರಿಯುತವಾಗಿ ವರ್ತಿಸುತ್ತಿದ್ದರು. ಅಂತೆಯೇ ಎಂ.ವಿ.ರಾಜಶೇಖರನ್ ಕನಕಪುರದಂತಹ ಕ್ಷೇತ್ರದಲ್ಲಿ ಅಲ್ಪಸಂಖ್ಯಾತವಾದ ಕೋಮಿನಿಂದ ಆಯ್ಕೆಯಾಗುತ್ತಿದ್ದರು. ಆದರೆ ಇಂದಿನ ಚಿತ್ರಣವೇ ಬೇರೆಯಾಗಿದೆ. ಜಾತೀಯತೆಯ ಜಾಡ್ಯ, ಹಣಬಲದ, ತೋಳ್ಬಲದ ಪೀಡೆಗಳು ಪ್ರಸ್ತುತ ಪ್ರಜಾಪ್ರಭುತ್ವವನ್ನು ಕಾಡುತ್ತಿದೆ. ಇದರಿಂದ ರಾಜಕೀಯವನ್ನು ಬೇರ್ಪಡಿಸುವುದು ಸ್ವತಃ

ರಾಜಶೇಖರನ್ ಅವರಂತಹ ನೈಜ ರಾಜನೀತಿ ಚಿಂತಕರಿಗೇ ಸವಾಲಾಗಿದೆ. ಈ ಹಿನ್ನೆಲೆಯಲ್ಲಿಯೇ ಅವರಿಗೆ ರಾಜಕೀಯದ ಪ್ರಮುಖ ಸ್ಥಾನಗಳು ದೊರೆತಿಲ್ಲ. ಅಷ್ಟಲ್ಲದೆ A politician is one, who always thinks about the next election. But a statesman is one, who always thinks about the next generation ಎಂಬ ಮಾತಿಗೆ ಅಪ್ಯಾಯಮಾನವಾದಂತಹ ವ್ಯಕ್ತಿತ್ವ ಅವರದ್ದು. ಸಿಕ್ಕ ಅವಕಾಶಗಳಲ್ಲಿ ಸಮಾಜಕ್ಕೆ, ಜನತೆಗೆ ಒಳಿತಾಗುವಂತೆ ನಿಷ್ಕಾಮ ಕರ್ಮದಲ್ಲಿ ತೊಡಗಿಕೊಂಡಿದ್ದಾರೆ. ಅವರಿಗೆ ಸ್ಥಾನಮಾನಗಳು ದೊರೆಯದಿರುವ ಹಿನ್ನೆಲೆಯಲ್ಲಿ ಅವರಿಗೆ ಯಾವುದೇ ಅತೃಪ್ತಿಯಿಲ್ಲ. ಅವರ ಸುಮಾರು ಐವತ್ತು ದಶಕಗಳ ರಾಜಕೀಯ ಅನುಭವ ಈ ಪಾಠವನ್ನು ಕಲಿಸಿಕೊಟ್ಟಿದೆ.

ಳ

ಶ್ರೀ ಎಂ.ವಿ.ರಾಜಶೇಖರನ್ ಅವರು ರಾಜ್ಯದ ವಿಧಾನ ಮಂಡಲದ ಎರಡೂ ಸದನಗಳನ್ನು ಮತ್ತು ಸಂಸತ್ತಿನ ಉಭಯ ಸದನಗಳನ್ನು ಬೇರೆಬೇರೆ ಅವಧಿಯಲ್ಲಿ ಪ್ರತಿನಿಧಿಸಿದ್ದಾರೆ. ೧೯೬೭ರಲ್ಲಿ ಪ್ರಥಮ ಬಾರಿಗೆ ಸಂಸತ್ತನ್ನು ಪ್ರವೇಶಿಸಿದರು. ೨೦೦೨ರಲ್ಲಿ ಸಂಸತ್ತಿನ ರಾಜ್ಯಸಭೆಯನ್ನು ಪ್ರವೇಶಿಸಿ ಈಗಲೂ ಸಕ್ರಿಯ ಸದಸ್ಯರಾಗಿ ಅತ್ಯುತ್ತಮ ಸಂಸದೀಯ ಪಟುಗಳ ಸಾಲಿನಲ್ಲಿ ನಿಂತಿದ್ದಾರೆ. ೧೯೭೮ರಲ್ಲಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿ ಜನತಾಪಕ್ಷದ ಸದಸ್ಯರಾಗಿ ಕರ್ನಾಟಕ ವಿಧಾನ ಮಂಡಲದ ಕೆಳಮನೆಯನ್ನು ಪ್ರವೇಶಿಸಿದರು. ಆ ಸಂದರ್ಭದಲ್ಲಿ ಇವರೇ ಒಂದರ್ಥ ವಿರೋಧಪಕ್ಷವಾಗಿದ್ದರು. ೧೯೯೯ರಲ್ಲಿ ಮೇಲ್ಮನೆಯನ್ನು ಪ್ರವೇಶಿಸುವ ಮೂಲಕ ಪರಿಪೂರ್ಣ ರಾಜಕೀಯ ಮುತ್ಸದ್ದಿತನದ ಅನುಭವವನ್ನು ಹೊಂದಿದವರು. ಈ ನಾಲ್ಕೂ ಸದನಗಳಲ್ಲಿ ಸತತ ಸಕ್ರಿಯರಾಗಿ ಚರ್ಚೆಗಳಲ್ಲಿ ಪ್ರಶ್ನೋತ್ತರಗಳಲ್ಲಿ ನಿರಂತರವಾಗಿ ಭಾಗವಹಿಸಿ ತಮ್ಮ ಪಟುತ್ವವನ್ನು ಸಾಧಿಸಿಕೊಂಡಿದ್ದಾರೆ. ಅವರು ಕೆಲವು ಸಂಸತ್ತಿನಲ್ಲಿನ ಚರ್ಚೆಗಳಲ್ಲಿ ಮತ್ತು ಕಾರ್ಯಕಲಾಪಗಳಲ್ಲಿ ಭಾಗಿಯಾಗುತ್ತಿದ್ದ ರೀತಿಯಾದರೂ ಅತ್ಯಂತ ಆಶ್ಚರ್ಯ ತರುವಂತಹದ್ದು. ನಿರಂತರ ಸದನದ ಕಲಾಪಗಳಲ್ಲಿ ಭಾಗವಹಿಸಿ, ರಾಜ್ಯದ ಹಿತವನ್ನು, ಆ ಮೂಲಕ ರಾಷ್ಟ್ರದ ಅಖಂಡತೆಯನ್ನು ಸಾಧಿಸಿ ರಾಜಕೀಯ ಪ್ರಬುದ್ಧತೆಯನ್ನು ಸಾಧಿಸಿಕೊಂಡ ಹಲವು ಹನ್ನೊಂದು ನಿದರ್ಶನಗಳನ್ನು ಗಮನಿಸಬಹುದು. ಪ್ರಸ್ತುತ ಅವರು ಸದನಗಳಲ್ಲಿ ಚರ್ಚಿಸಿದ ಕೆಲವು ಮುಖ್ಯ ಉಲ್ಲೇಖಗಳನ್ನು ಪುನರ್‌ಮೌಲ್ಯೀಕರಣಕ್ಕೆ ಒಳಪಡಿಸಿಕೊಳ್ಳಬಹುದು.

**೧. ಸಂಸತ್ತಿನ ಸದನಗಳಲ್ಲಿ ಅವರು ಮಾಡಿದ ಭಾಷಣ, ಚರ್ಚೆ ಮತ್ತು ಇತರ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ ರೀತಿ. (ಸಂಗ್ರಹ)**

***(ಎ) ಎಂ.ವಿ. ರಾಜಶೇಖರನ್ ಅವರ ಲೋಕಸಭೆಯ ಭಾಷಣಗಳಿಂದ....***

**ಭಾರತೀಯ ನೀತಿ**

"... ಈ ರಾಷ್ಟ್ರವನ್ನು ಕಟ್ಟಬೇಕಾದವರು ನಾವು ; ರಷ್ಯಾದವರಾಗಲೀ,

ಅಮೇರಿಕಾದವರಾಗಲಿ ಅಲ್ಲ. ಭಾರತೀಯರಾದ ನಾವು ಆ ಕಾರ್ಯವನ್ನು ಮಾಡಬೇಕು. ಅದಕ್ಕಾಗಿ ನಾವೆಲ್ಲ ಒಟ್ಟಾಗಿ ದುಡಿಯಬೇಕು. ನಾವು ಪಡೆದಿರುವ ವೈಭವಪೂರ್ಣ ಪರಂಪರೆಗೆ ತಕ್ಕಂತೆ ಬಾಳಲು ಪ್ರಯತ್ನಿಸಬೇಕು."

-೪ ಏಪ್ರಿಲ್, ೧೯೬೭

## ವ್ಯವಸಾಯ ಶಿಕ್ಷಣ

"... ವ್ಯವಸಾಯ ಶಿಕ್ಷಣದ ಬಗ್ಗೆ ನಾವು ಅಷ್ಟಾಗಿ ಗಮನ ಕೊಟ್ಟಿಲ್ಲ. ಆದುದರಿಂದ ಸರ್ಕಾರವು ಈ ದಿಸೆಯಲ್ಲಿ ಹೆಚ್ಚು ಸೌಲಭ್ಯಗಳನ್ನು ಒದಗಿಸಿ, ಅದರಲ್ಲೂ ಗ್ರಾಮಾಂತರ ಪ್ರದೇಶದಲ್ಲಿ ಹೆಚ್ಚು ವ್ಯವಸಾಯ ಕಾಲೇಜುಗಳು ಮತ್ತು ಶಾಲೆಗಳನ್ನು ತೆರೆಯಬೇಕು. ಅಂದರೆ, ರೈತರ ಮಕ್ಕಳು ಕೃಷಿಯಲ್ಲಿ ಹೊಸ ತಂತ್ರಗಳನ್ನು ಕಲಿಯಲು ಅನುಕೂಲವಾಗುತ್ತದೆ..."

- ೧ ಜುಲೈ, ೧೯೬೭

## ಯುವಜನ ಯೋಜನೆ

"... ನಮ್ಮ ಯುವಜನಾಂಗದತ್ತ ಹೆಚ್ಚು ಗಮನ ಕೊಟ್ಟಿಲ್ಲ. ಅವರಲ್ಲಿ ಒಂದು ರಾಷ್ಟ್ರೀಯತೆಯನ್ನು ಹುಟ್ಟಿಸಲು ಸರ್ಕಾರವು ಪ್ರಯತ್ನಿಸಬೇಕು. ಅವರಲ್ಲಿ ಒಂದು ಸಾಮಾಜಿಕ ನ್ಯಾಯದ ಮನೋಭಾವನೆ ಮೂಡಬೇಕು. ಇದನ್ನು ಸಾಧಿಸಬೇಕಾದರೆ, ನಾವು ಅವರ ಆಕಾಂಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ಭವಿಷ್ಯದಲ್ಲಿ ಅವರು ಪ್ರಮುಖ ಪಾತ್ರ ವಹಿಸುವಂತೆ ಅವರ ಲಕ್ಷ್ಯವನ್ನು ರೂಪಿಸುವಂತಹ ಯೋಜನೆಗಳನ್ನು ನಾವು ಹಾಕಿಕೊಳ್ಳಬೇಕು."

- ೨೫ ಜುಲೈ, ೧೯೬೭

## ಮಂಚನಬೆಲೆ ಯೋಜನೆ

"... ಗ್ರಾಮಾಂತರ ಪ್ರದೇಶದಿಂದ ಬಂದಿರುವ ನಾನು ಇನ್ನೊಂದು ಯೋಜನೆಯ ಬಗ್ಗೆ ಪ್ರಸ್ತಾಪಿಸದಿದ್ದರೆ ನನ್ನ ಕರ್ತವ್ಯದಲ್ಲಿ ವಿಫಲನಾದಂತಾಗುತ್ತದೆ. ಅದು ನಮ್ಮ ಮಂಚನಬೆಲೆ ಯೋಜನೆ. ಬೆಂಗಳೂರು ಜಿಲ್ಲೆಯಲ್ಲಿ ಪ್ರವಾಹ ನಿಯಂತ್ರಣ ಕ್ರಮವಾಗಿ ಈ ಯೋಜನೆಯನ್ನು ಕಾರ್ಯಗತಗೊಳಿಸಬೇಕಾಗುತ್ತದೆ. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯಕ ಹಣ ಒದಗಿಸುವಂತೆ ಮಾನ್ಯ ಅರ್ಥಸಚಿವರನ್ನು ಪ್ರಾರ್ಥಿಸುತ್ತೇನೆ."

- ೨೫ ಜುಲೈ, ೧೯೬೭

## ರೈತ ಪ್ರಾತಿನಿಧ್ಯ

"... ನಮ್ಮ ವ್ಯವಸಾಯೋತ್ಪನ್ನ ಮೌಲ್ಯ ನಿರ್ಣಯ ಮಂಡಲಿಯು ವ್ಯವಸಾಯದ ವಾಸ್ತವ ಅನುಭವವಿಲ್ಲದ ಕೇವಲ ಪುಸ್ತಕ ಓದುವ ಕೃಷಿ ಅರ್ಥಶಾಸ್ತ್ರಜ್ಞರಿಂದ ಕೂಡಿದೆ. ಈ ಮಂಡಲಿಯು ಮಾಡುವ ಬೆಲೆ ನಿರ್ಣಯದಲ್ಲಿ ಹೆಚ್ಚು ಕಡಿಮೆಗಳಾಗುವುದನ್ನು ನಾವು

ಕಾಣುತ್ತಿದ್ದೇವೆ. ಆ ಮಂಡಲಿಯಲ್ಲಿ ಕಾರ್ಯಶೀಲ ರೈತನಿಲ್ಲದಿರುವುದೇ ಅದಕ್ಕೆ ಕಾರಣ. ಆದುದರಿಂದ ವ್ಯವಸಾಯೋತ್ಪನ್ನ ಮೌಲ್ಯ ನಿರ್ಣಯ ಮಂಡಲಿಯಲ್ಲಿ ವಾಸ್ತವ ರೈತನಿಗೆ ಪ್ರಾತಿನಿಧ್ಯವಿರಬೇಕು."

- ೨೫ ಜುಲೈ, ೧೯೬೭

## ರಾಷ್ಟ್ರೀಯ ನೀತಿ

"... ಭಾರತ ಸರ್ಕಾರವು ನೀರಾವರಿಯ ಬಗ್ಗೆ ಕೂಡಲೆ ಗಮನ ಕೊಡಬೇಕು. ರೈತರ ಪ್ರಯೋಜನಕ್ಕಾಗಿ ನಮ್ಮ ಎಲ್ಲಾ ನೀರಾವರಿ ಸಾಮರ್ಥ್ಯಗಳು ಬಳಕೆಯಾಗುವಂತಹ ಒಂದು ರಾಷ್ಟ್ರೀಯ ನೀತಿಯನ್ನು ರೂಪಿಸಿಕೊಳ್ಳಬೇಕು. ನೀರು ನಮ್ಮ ರೈತರ ಜೀವನ, ಉಸಿರು. ನಾವು ಐದಾರು ವರ್ಷಗಳ ಹಿಂದೆಯೇ ರೈತರಿಗೆ ಸಾಕಷ್ಟು ನೀರಿನ ಸೌಲಭ್ಯ ಒದಗಿಸಿದ್ದರೆ ಇಷ್ಟು ಹೊತ್ತಿಗೆ ಭಾರತವು ಬೇರೆ ದೇಶಗಳಿಗೆ ಬೇಕಾಗುವಷ್ಟು ಆಹಾರವನ್ನು ರಫ್ತು ಮಾಡುವ ಸ್ಥಿತಿಯಲ್ಲಿರುತ್ತಿತ್ತು."

- ೩೦ ಜನವರಿ, ೧೯೬೮

## ರೇಷ್ಮೆ ಉದ್ಯಮ

"... ಮೈಸೂರು ರಾಜ್ಯದಲ್ಲಿ ರೇಷ್ಮೆ ಕೈಗಾರಿಕೆಯು ಒಂದು ಪ್ರಮುಖವಾದ ಮತ್ತು ಪ್ರಗತಿದಾಯಕವಾದ ಕೈಗಾರಿಕೆ. ಅದು ನಮ್ಮ ರಾಜ್ಯದಲ್ಲಿ ಸುಮಾರು ಹತ್ತು ಲಕ್ಷ ಜನರಿಗೆ ಉದ್ಯೋಗ ಒದಗಿಸಿದೆ. ಅಷ್ಟೇ ಅಲ್ಲ, ರಾಷ್ಟ್ರಕ್ಕೆ ಸುಮಾರು ೪.೫ ಕೋಟಿ ರೂ.ಗಳಷ್ಟು ವಿದೇಶಿ ವಿನಿಮಯವನ್ನು ಗಳಿಸಿಕೊಡುತ್ತದೆ. ಆದರೆ ಕೇಂದ್ರ ಸರ್ಕಾರವು ನಮ್ಮ ರೇಷ್ಮೆ ಬೆಳೆಗಾರರನ್ನು ಅಲಕ್ಷಿಸಿದೆ... ಈ ಉದ್ಯಮವನ್ನು ಕೈಗೊಂಡಿರುವ ಲಕ್ಷಾಂತರ ಜನರ ಜೀವನ ಸ್ಥಿತಿಯು ಆದಷ್ಟು ಬೇಗ ಉತ್ತಮಗೊಳ್ಳಲು ಅನುಕೂಲವಾಗುವಂತೆ ಮೈಸೂರು ರಾಜ್ಯ ರೇಷ್ಮೆ ಸಹಕಾರ ಮಾರುಕಟ್ಟೆ ಸಂಸ್ಥೆಯವರು ಕೇಳಿರುವ ೨೦ ಲಕ್ಷ ರೂ. ಸಾಲವನ್ನು ಕೂಡಲೇ ಒದಗಿಸುವಂತೆ ಕೇಂದ್ರ ಸರ್ಕಾರವನ್ನು ಪ್ರಾರ್ಥಿಸುತ್ತೇನೆ."

- ೩೦ ಜನವರಿ, ೧೯೬೮

## ಬ್ಯಾಂಕುಗಳ ನೆರವು

"... ಈಗ ಬ್ಯಾಂಕುಗಳಲ್ಲಿ ಸುಮಾರು ೩,೫೦೦ ಕೋಟಿ ರೂ.ಗಳಷ್ಟು ಠೇವಣಿ ಹಣವಿದೆ. ಇದರಲ್ಲಿ ಬ್ಯಾಂಕುಗಳ ಷೇರು ಬಂಡವಾಳ ಕೇವಲ ೧೦೦ ಕೋಟಿ ರೂ. ಮಾತ್ರ. ಈ ೩,೫೦೦ ಕೋಟಿ ರೂ. ಹಣ ಕೂಡಿರುವುದು ಸಾಮಾನ್ಯ ಜನತೆಯಿಂದ. ಇದರಲ್ಲಿ ಗ್ರಾಮಾಂತರ ಜನರೂ ಸೇರಿದ್ದಾರೆ. ಆದ್ದರಿಂದ ಖಾಸಗಿ ಮತ್ತು ಸಾರ್ವಜನಿಕ

ಎಲ್ಲ ಬ್ಯಾಂಕುಗಳೂ ರೈತನ ನೆರವಿಗೆ ಬರುವಂತೆ ಸಾಧ್ಯವಾದಷ್ಟು ಬೇಗ ಸೂಕ್ತ ಕ್ರಮ ಕೈಗೊಳ್ಳಬೇಕು.

- ೩೦ ಜನವರಿ, ೧೯೬೮

## ಆಡಳಿತ ಯಂತ್ರ

"... ಸರ್ಕಾರದ ಬಹುತೇಕ ವಿಫಲತೆಗಳಿಗೆ ನಮ್ಮಲ್ಲಿರುವ ಅನೇಕ ಅದಕ್ಷ ಹಾಗೂ ಅಧಿಕಾರಶಾಹಿ ಆಡಳಿತ ಯಂತ್ರವೇ ಕಾರಣವೆಂದು ನಾನು ಹೇಳಬಲ್ಲೆ. ನಮ್ಮ ಸಚಿವಾಲಯಗಳಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಸಾಮಾನ್ಯ ಪ್ರಜೆ ತಿಳಿದುಕೊಳ್ಳಲಾಗುತ್ತಿಲ್ಲ. ಆದ್ದರಿಂದ ನಮ್ಮ ಆಡಳಿತಯಂತ್ರವು ದಕ್ಷತೆಯಿಂದ ಕೆಲಸ ನಿರ್ವಹಿಸುವಂತೆ ಮತ್ತು ರೈತ ಹಾಗೂ ಸಾಮಾನ್ಯ ಪ್ರಜೆಗೆ ಅನುಕೂಲವಾಗುವಂತೆ ಮಾಡಲು ಶೀಘ್ರ ಕ್ರಮ ಕೈಗೊಳ್ಳಬೇಕು. ಇಲ್ಲವಾದರೆ, ಅದು ಕಾಂಗ್ರೆಸ್ ಸರ್ಕಾರವೇ ಆಗಿರಲಿ, ಬೇರಾವ ಸರ್ಕಾರವೇ ಅಧಿಕಾರಕ್ಕೆ ಬರಲಿ, ನಮಗೆ ಒಳ್ಳೆಯ ಭವಿಷ್ಯವಿದೆಯೆಂದು ನಾನು ಭಾವಿಸಲಾರೆ."

- ೨೧ ಫೆಬ್ರವರಿ, ೧೯೬೮

## ಗಡಿ ವಿವಾದ

"... ಪ್ರಸ್ತುತ ಪರಿಸ್ಥಿತಿಯಲ್ಲಿ ಗಡಿ ವಿವಾದದ ಬಗ್ಗೆ ಅಂತಿಮ ತೀರ್ಮಾನವನ್ನು ಕೈಗೊಳ್ಳಲು ಮಹಾರಾಷ್ಟ್ರದ ಎಲ್ಲಾ ಚಳುವಳಿ, ಚಟುವಟಿಕೆಗಳನ್ನು ಕೊನೆಗೊಳಿಸಲು ಮತ್ತು ಮಹಾಜನ ಆಯೋಗದ ಶಿಫಾರಸುಗಳು ಸಂಬಂಧಪಟ್ಟ ಪಕ್ಷಗಳಿಗೆ ಒಪ್ಪಿಗೆಯಾಗಲಿ, ಆಗದಿರಲಿ ಅದೊಂದು ಐತೀರ್ಪೆಂದು ಅಂಗೀಕರಿಸಲು ಕೇಂದ್ರ ಸರ್ಕಾರವು ದೃಢ ನಿರ್ಧಾರವನ್ನು ಕೈಗೊಳ್ಳದ ಹೊರತು ಈ ಚಳುವಳಿ ಚಟುವಟಿಕೆಗಳು ಹೆಚ್ಚುತ್ತಲೇ ಹೋಗಿ ಎಲ್ಲ ರೀತಿಯ ಅಶಾಂತಿಗೆ ದಾರಿಯಾಗುತ್ತದೆ."

- ೨೧ ಫೆಬ್ರವರಿ, ೧೯೬೮

## ಯುವಜನ ಮಂಡಳಿ

"... ಸರ್ಕಾರವು ರಾಷ್ಟ್ರೀಯ ಯುವಜನ ಮಂಡಲಿಯೊಂದನ್ನು ಸ್ಥಾಪಿಸುವ ಬಗ್ಗೆ ವಿಚಾರ ಮಾಡುವುದೆಂದು ನಾನು ನಂಬಿದ್ದೇನೆ. ಅಂತಹ ಮಂಡಲಿಯನ್ನು ರಚಿಸಿದ್ದೇ ಆದರೆ ರಾಷ್ಟ್ರೀಯ ನೀತಿಯೊಂದನ್ನು ರೂಪಿಸಲು ಆ ಮೂಲಕ ಯುವಜನರ ಮತ್ತು ವಿದ್ಯಾರ್ಥಿಗಳ ಶಕ್ತಿ ಸಾಮರ್ಥ್ಯಗಳನ್ನು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ರಚನಾತ್ಮಕವಾಗಿ ಬಳಸಿಕೊಳ್ಳಲು ಸಾಧ್ಯವಾಗುತ್ತದೆ.

- ೨೧ ಫೆಬ್ರವರಿ, ೧೯೬೮

## ಕ್ಷೇತ್ರಾಭಿವೃದ್ಧಿ

"... ನಮ್ಮ ಜಿಲ್ಲೆಯಲ್ಲಿ ಅನೇಕ ವರ್ಷಗಳಿಂದ ಆಗದೆ ಉಳಿದಿರುವ ಕೆಲವು ಯೋಜನೆಗಳತ್ತ ಕೇಂದ್ರ ಸರ್ಕಾರವು ಗಮನ ಕೊಡಬೇಕು. ರಾಮನಗರ ತಾಲ್ಲೂಕಿನಲ್ಲಿ ಮಂಚನಬೆಲೆ ಯೋಜನೆ, ಚನ್ನಪಟ್ಟಣ ತಾಲ್ಲೂಕಿನಲ್ಲಿ ಇಗ್ಗಲೂರು ಲಿಫ್ಟ್ ಇರಿಗೇಷನ್ ಯೋಜನೆ, ಕನಕಪುರ ತಾಲ್ಲೂಕಿನಲ್ಲಿ ಅರ್ಕಾವತಿ ಯೋಜನೆ ಮತ್ತು ಆನೇಕಲ್ ತಾಲ್ಲೂಕಿನಲ್ಲಿ ಮುತ್ಯಾಲಮಡು ಯೋಜನೆ - ಇವುಗಳನ್ನು ತ್ವರಿತವಾಗಿ ಕಾರ್ಯಗತಗೊಳಿಸಲು ನೆರವಾಗಬೇಕು."

- ೨೧ ಫೆಬ್ರವರಿ, ೧೯೬೮

## ಆಹಾರ ನೀತಿ

"... ಮತ್ತೊಂದು ದುರದೃಷ್ಟಕರ ಸಂಗತಿಯೆಂದರೆ, ನಮ್ಮ ಇಡೀ ಆಹಾರ ನೀತಿಯು ಸರಿಯಾದ ಹೊಂದಾಣಿಕೆಯ ಆಧಾರದ ಮೇಲೆ ರೂಪಿಸಲ್ಪಟ್ಟಿಲ್ಲ. ನಮಗೆ ಒಂದು ರಾಷ್ಟ್ರೀಯ ಆಹಾರ ನೀತಿ ಇರಬೇಕೆಂದು ಈ ಮಹಾಸಭೆಯಲ್ಲಿ ನಾವು ಒತ್ತಾಯ ಮಾಡುತ್ತಾ ಬಂದಿದ್ದೇವೆ. ಈ ಬಗ್ಗೆ ಕೇಂದ್ರ ಸರ್ಕಾರವು ಶೀಘ್ರ ಗಮನ ಹರಿಸಬೇಕು ಮತ್ತು ನಮ್ಮ ಆಹಾರದ ಅವಶ್ಯಕತೆಯ ಆಧಾರದ ಮೇಲೆ ಹಾಗೂ ಪ್ರತಿವರ್ಷ ನಮ್ಮ ದೇಶವನ್ನು ತೊಂದರೆಗೀಡು ಮಾಡುತ್ತಿರುವ ಅಭಾವದ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ನಮ್ಮ ಮುಂದಿನ ಯೋಜನೆಗಳನ್ನು ರೂಪಿಸಬೇಕೆಂದು ನಾನು ಸೂಚಿಸುತ್ತೇನೆ."

- ೨೮ ಆಗಸ್ಟ್, ೧೯೬೮

## ವಾಣಿಜ್ಯ ಬೆಲೆ

"... ಅಮೇರಿಕಾ ಮತ್ತು ರಷ್ಯಗಳಿಂದ ಸೋಯಾಬೀನ್ ಮತ್ತು ಸೂರ್ಯಕಾಂತಿ ಎಣ್ಣೆಬೀಜಗಳ ಆಮದನ್ನು ನಿಲ್ಲಿಸದಿದ್ದರೆ ನಮ್ಮ ಕಡಲೆಕಾಯಿಯ ಬೆಲೆ ಮತ್ತಷ್ಟು ಕೆಳಗೆ ಹೋಗುತ್ತದೆ. ಪರಿಸ್ಥಿತಿಯು ವಿಪರೀತವಾಗಿ ಈ ಬೆಳೆಯಲ್ಲಿ ತೊಡಗಿರುವ ರೈತರು ನಿರುದ್ಯೋಗಿಗಳಾಗಬೇಕಾಗುತ್ತದೆ. ಆದ್ದರಿಂದ ರಾಷ್ಟ್ರದ ಈ ಪ್ರಮುಖ ವಾಣಿಜ್ಯ ಬೆಳೆಗೆ ಬೆಂಬಲವಾಗುವಂತಹ ಧಾರಣೆಯನ್ನು ನೀಡುವ ನೀತಿಯನ್ನು ಸರ್ಕಾರವು ಅನುಸರಿಸಬೇಕು."

- ೨೬ ನವೆಂಬರ್, ೧೯೬೮

## ಬಾವಿ ತೋಡುವ ಯಂತ್ರಗಳು

"... ನಮ್ಮ ರೈತರಿಗೆ ಆಳವಾದ ಬಾವಿ ತೋಡುವ ಯಂತ್ರಗಳ ನೆರವು ಹೆಚ್ಚಾಗಿ ಬೇಕಾಗಿದೆ. ಇದರಿಂದ ಭೂ ಅಂತರ್ಗತ ಜಲಸಂಪತ್ತಿನ ಪ್ರಯೋಜನ ಪಡೆದುಕೊಳ್ಳಲು ಅನುಕೂಲವಾಗುತ್ತದೆ. ಈ ಯಂತ್ರಗಳನ್ನು ಹೆಚ್ಚು ಸಂಖ್ಯೆಯಲ್ಲಿ ಪಡೆಯಲು ಭಾರತ ಸರ್ಕಾರವು ಸಂಘಟಿತವಾದ ಒಂದು ಯೋಜನೆಯನ್ನು ಹಾಕಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

- ೪ ಡಿಸೆಂಬರ್, ೧೯೬೮

## ಅನವಶ್ಯಕ ವೆಚ್ಚ

"... ಸಾರ್ವಜನಿಕ ಕ್ಷೇತ್ರದಲ್ಲಿ ಸರ್ಕಾರ ಸುಮಾರು ೨,೪೦೦ ಕೋಟಿ ರೂ.ಗಳನ್ನು ವಿನಿಯೋಗಿಸಿ. ಈ ಸಾರ್ವಜನಿಕ ಕ್ಷೇತ್ರವು ಕೆಲವು ದಿನಗಳ ನಂತರ ನಮ್ಮ ರಾಷ್ಟ್ರದ ಉತ್ಪಾದನಾ ವಿಭಾಗದಲ್ಲಿ ಪಾತ್ರ ವಹಿಸುತ್ತದೆಂಬುದು ನಿಜ. ಆದರೆ ಸಧ್ಯದಲ್ಲಿ ಬಹುಪಾಲು ಬಂಡವಾಳವನ್ನು ಅನುತ್ಪಾದನಾ ಕಾರ್ಯಗಳಿಗಾಗಿಯೇ ಖರ್ಚು ಮಾಡಲಾಗುತ್ತಿದೆ. ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳಿಗೆ ಅರಮನೆಯಂತಹ ಕಟ್ಟಡಗಳನ್ನು ಕಟ್ಟಲಿಕ್ಕಾಗಿಯೇ ಸುಮಾರು ೪೦ ಕೋಟಿ ರೂ.ಗಳ ವೆಚ್ಚ ಮಾಡಲಾಗಿದೆ. ಇಂತಹ ವೆಚ್ಚಗಳು ತಪ್ಪಬೇಕು."




೧೨ ಮಾರ್ಚ್, ೧೯೯೯

## ಬೆಂಬಲದ ಬೆಲೆ

"... ಕೃಷಿ ಉತ್ಪನ್ನಗಳಿಗೆ ಸಂಬಂಧಿಸಿದಂತೆ ಸರ್ಕಾರವು ಕೂಡಲೆ ಬೆಲೆ ಬೆಂಬಲ ನೀತಿಯೊಂದನ್ನು ತರಬೇಕು. ಈಗ ದುರದೃಷ್ಟವಶಾತ್, ಏನು ನಡೆದಿದೆಯೆಂದರೆ ನಮ್ಮ ರೈತ ತನ್ನ ಎಲ್ಲ ಶ್ರಮವನ್ನು ಉಪಯೋಗಿಸಿ ತೆಗೆಯುವ ಒಳ್ಳೆಯ ಉತ್ಪನ್ನಕ್ಕೆ ತಕ್ಕ ಬೆಲೆ ಸಿಗುತ್ತಿಲ್ಲ. ಅವನು ದಲ್ಲಾಳಿಗಳಲ್ಲಿ ಸಿಕ್ಕಿದ್ದಾನೆ. ಇದು ತಪ್ಪಬೇಕು. ಇದಕ್ಕಾಗಿ ಸರ್ಕಾರವು ಭದ್ರವಾದ ಮತ್ತು ಭರವಸೆಯ ಬೆಲೆ ನೀತಿಯನ್ನು ಸಾರಿ ರೈತರ ಹಿತವನ್ನು ಕಾಪಾಡಬೇಕು."

- ೧೨ ಮಾರ್ಚ್, ೧೯೯೯

## *(ಬಿ) ಶ್ರೀ ರಾಜಶೇಖರನ್ ಅವರ ರಾಜ್ಯಸಭೆಯ ಭಾಷಣಗಳಿಂದ....*

### ಬೆಂಬಲ ಬೆಲೆಯ ಬಗ್ಗೆ :

"... The second point is, as far as procurement is concerned, the Hon. Minister mentioned that the Food Corporation of India would come to the aid of the farmers. Now, here again, the problem is that the FCI would move slowly, with the result that the farmers would lose everything. By that time, the farmers would already have sold their produce with a distress sale..."

### ತೋಟಗಾರಿಕಾ ಬೆಳೆಗಳ ಬಗ್ಗೆ :

"... Especially, the districts of Bangalore, Chitradurga, Bijapur, Bagalkot, Tumkur, Chickmagalur, Kodagu, Dakshina Kannada and Uttara Kannada regions. The farmers of this are have a engaged in horticulture farming with the help of drip irrigation and lift irrigation. The National Horticulture Board has been assisting these farmers with a

subsidy of 20 percent on the project cost. The farmers have to invest huge amount on horticulture projects.

"... The sudden stoppage of release of subsidy for the on-going projects for the last two months has caused great distress to horticulturies.

The subsidy at present, which has been released and credited to the financing institutions, is not fetching any interest. Therefore, the subsidy amount should be credited to respective loan account of the farmers against their debit balance..."

**ಕರ್ನಾಟಕದಲ್ಲಿ ತಲೆದೋರಿದ ಬರ :**

"... The State of Karnataka is reeling under severe drought. The State Government of Karnataka has, time and again, requested the Central Government to provide assistance, but, untill now, very little assistance has been provided. Therefore, I would like to know, through you, from the Hon. Minister when he is going to act on a war-footing basis to deal with this situation..."

**೨. ವಿಧಾನ ಮಂಡಳದ ಸದನಗಳಲ್ಲಿ ಅವರು ಮಾಡಿದ ಭಾಷಣ ಚರ್ಚೆ ಮತ್ತು ಇತರ ಕಾರ್ಯಕಲಾಪಗಳಲ್ಲಿ ಭಾಗವಹಿಸಿದ ರೀತಿ. (ಸಂಗ್ರಹ)**

***(ಎ) ವಿಧಾನಸಭೆಯಲ್ಲಿ ಮಾಡಿದ ಭಾಷಣಗಳಿಂದ...***

**ಕೊಳಚೆ ಪ್ರದೇಶಗಳಿಗೆ ಕುಡಿಯುವ ನೀರು ಸರಬರಾಜು :**

"... ಆದರೆ ನಗರದ ಬಡಾವಣೆಗಳಿಗೆ ಸೇರಿದಂತೆ ಕೆಲವು ಸ್ಲಮ್‌ಗಳು ಇವೆ. ಅಲ್ಲಿ ವಾಸ ಮಾಡುವ ಜನರ ಸ್ಥಿತಿ ಶೋಚನೀಯವಾಗಿದೆ... ಬನಶಂಕರಿ ಎರಡನೆ ಸ್ಟೇಜ್, ಕೋರಮಂಗಲ, ಪೀಣ್ಯ ಪ್ಲಾಂಟೇಷನ್ ಇಂಥ ಕಡೆ ಸ್ಲಮ್‌ಗಳು ಇವೆ. ಇವುಗಳು ಹೊಸ ಬಡಾವಣೆಗಳಿಗೆ ಸುಮಾರು ೧೦-೧೫ ಅಡಿ ದೂರದಲ್ಲಿರುತ್ತವೆ. ಹೊಸ ಬಡಾವಣೆಗಳಲ್ಲಿ ನೀರಿದ್ದು, ಈ ಸ್ಲಮ್‌ಗಳಿಗೆ ನೀರು ಇಲ್ಲವಾಗಿದೆ... ನಾನು ಪೈಪ್‌ಲೈನ್ ಕೊಡಿ ಎಂದು ಕೇಳುತ್ತಿಲ್ಲ. ನಾನು ಕೇಳುತ್ತಾ ಇರತಕ್ಕದ್ದು ಸ್ಲಮ್ ಪಕ್ಕದಲ್ಲಿರತಕ್ಕ ಬಡಾವಣೆಗಳಿಗೆ ನೀರು ಕೊಟ್ಟಿದ್ದೀರಿ, ಸ್ಲಮ್‌ಗಳಿಗೆ ನೀರು ಕೊಟ್ಟಿಲ್ಲ. ಇದಕ್ಕೆ ನೀರು ಸರಬರಾಜು ಒದಗಿಸಿಕೊಡುತ್ತೀರಾ ಎಂದು ಕೇಳುತ್ತೇನೆ...."

**ಹಳ್ಳಿಗಳ ಅಭಿವೃದ್ಧಿ ಕುರಿತು :**

"... ಸುಮಾರು ೨೬,೮೨೬ ಹಳ್ಳಿಗಳು ನಮ್ಮ ರಾಜ್ಯದಲ್ಲಿ ಇವೆ. ನೂರಕ್ಕೆ ೭೫ ಜನ ಹಳ್ಳಿಗಳಲ್ಲಿ ವಾಸಮಾಡುತ್ತಿದ್ದಾರೆ. ಒಂದು ದುರ್ದೈವದ ಸಂಗತಿ ಎಂದರೆ ರಾಜ್ಯಪಾಲರ ಭಾಷಣದಲ್ಲಿ ಪಟ್ಟಣದ ಜನರಿಗೆ, ಅವರ ಸಮಸ್ಯೆಗಳಿಗೆ ಹೆಚ್ಚಿನ ಗಮನ ಕೊಟ್ಟಿದ್ದಾರೆಂದರೆ

ತಪ್ಪಾಗಲಾರದು. ಇದು ಹೇಗೆ ಇದೆ ಎಂದರೆ ದೇವರ ಮುಂದೆ ನೈವೇದ್ಯ ಇದ್ದಂತೆ ಕೆಲವು ಸ್ಕೀಮುಗಳನ್ನು ಸಭೆಯ ಮುಂದೆ ಇಟ್ಟಿದ್ದಾರೆ. ಇದು ದುರ್ದೈವವೆಂದು ಹೇಳಿದರೆ ತಪ್ಪಾಗಲಾರದು...."

**ರೈತನ ಬೆಳೆಗಳಿಗೆ ಬೆಂಬಲ ಬೆಲೆ :**

"... ಇವತ್ತಿನ ದಿವಸ ನಮ್ಮ ರಾಜ್ಯದಲ್ಲಿ ರೈತ ಬಹಳ ಕಷ್ಟಪಟ್ಟು ಬೆಳೆಯನ್ನು ಬೆಳೆಯುತ್ತಿದ್ದಾನೆ. ಆದರೆ ಇವತ್ತಿನ ದಿವಸ ಅವನ ಸ್ಥಿತಿ ಏನಾಗಿದೆ? ಎಲ್ಲಾ ಪದಾರ್ಥಗಳು ತಾನು ಏನು ಬೆಳೆಯುತ್ತಾನೆ, ಭತ್ತವಾಗಲೀ, ರಾಗಿಯಾಗಲೀ, ಜೋಳವಾಗಲೀ, ಕಬ್ಬು ಆಗಲೀ, ಬೆಲೆಗಳು ಇಳಿಯುತ್ತಿವೆ. ಈ ಬಗ್ಗೆ ಸರ್ಕಾರ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ ಎಂದರೆ ತಪ್ಪಾಗಲಾರದು. ಉದಾಹರಣೆಗೆ ಹೇಳುವುದಾದರೆ ಭತ್ತದ ಬೆಲೆ ಏನು ಇದೆ ಅಂದರೆ ಅದರ ಕಾಸ್ಟ್ ಪ್ರೈಸ್ ಎಷ್ಟಾಗುತ್ತದೆ ಎನ್ನುವುದನ್ನು ಲೆಕ್ಕ ಹಾಕಿದರೆ ಸರ್ಕಾರಕ್ಕೆ ಅದು ಮನದಟ್ಟಾಗಿ ತಿಳಿಯುತ್ತದೆ...."

**ಗ್ರಾಮೀಣ ಅಭಿವೃದ್ಧಿಯ ವಿಚಾರ :**

"... ಅವರಿಗೆ ಇವರ ಬಗ್ಗೆ ಒಂದು ಮನೋಭಾವ ಇರಬೇಕು. ಬರೇ ಸ್ತುತಿ ಮಾಡಿಕೊಳ್ಳುವುದು ಬೇಡ, ಅಧಿಕಾರೀ ವರ್ಗದವರು ಹಳ್ಳಿಹಳ್ಳಿಗೆ ಹೋಗಿ ನೋಡಲಿ, ಅವರಿಗೆ ಬಡಜನರ ಕಷ್ಟ ಏನೆಂಬುದೇ ಗೊತ್ತಿಲ್ಲ. ಅದಕ್ಕೆ ನನ್ನ ಒಂದು ಸಲಹೆ ಏನೆಂದರೆ ನಮ್ಮ ಸರ್ಕಾರದ ಇಲಾಖೆಗಳಲ್ಲಿ ಮುಖ್ಯಾಧಿಕಾರಿಗಳು ಏನು ಇದ್ದಾರೆ ಅವರು ದಯವಿಟ್ಟು ಹಳ್ಳಿಗಳಿಗೆ ಹೋಗಬೇಕು. ಕನಿಷ್ಟ ಪಕ್ಷ ವರ್ಷಕ್ಕೆ ಒಂದು ತಿಂಗಳಾದರೂ ಕೂಡ ಅವರನ್ನು ಹಳ್ಳಿಗಳಲ್ಲಿ ಕೆಲಸ ಮಾಡುವುದಕ್ಕೆ ಕಳುಹಿಸಿ. ಆಗ ಮಾತ್ರ ಹಳ್ಳಿಯವನ ಕಷ್ಟ ಏನೆಂಬುದು ಆ ಅಧಿಕಾರಿಗಳಿಗೆ ಗೊತ್ತಾಗುತ್ತದೆ...."

**ಸರ್ಕಾರದ ಪ್ರಶಂಸೆ :**

"... ಈ ತಿದ್ದುಪಡಿ ಮಸೂದೆಯನ್ನು ತಂದಿರತಕ್ಕಂಥ ಸರ್ಕಾರವನ್ನು ನಾನು ಅಭಿನಂದಿಸುತ್ತೇನೆ. ಈ ಸರ್ಕಾರಕ್ಕೆ ಅಭಿನಂದನೆ ಕೊಡತಕ್ಕಂಥಾದ್ದು ಬಹಳ ವಿರಳ. ಏಕೆಂದರೆ ಯಾವುದೇ ಕೆಲಸವನ್ನು ಮಾಡಿದರೂ ಕೂಡ ಜನತೆಯ ವಿರುದ್ಧ ಮಾಡುತ್ತಿದೆ; ಅಲ್ಲೊಂದು ಇಲ್ಲೊಂದು ಒಳ್ಳೆಯ ಕೆಲಸ ಮಾಡುವುದರಿಂದ ಅಭಿನಂದಿಸುತ್ತೇನೆ. ಈ ತಿದ್ದುಪಡಿ ಮಸೂದೆ ಬಗ್ಗೆ ಮಾತನಾಡುತ್ತಾ ಒಂದೆರಡು ಸಲಹೆಗಳನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ...."

**ಕಾರ್ಮಿಕರಿಗೆ ಪ್ರಾತಿನಿಧ್ಯ :**

"... ಈ ಲೇಬರರ್ಸ್‌ಗೆ ಒಂದು ಸ್ಥಾನವನ್ನು ಕಾರ್ಪೋರೇಷನ್ ಕಲ್ಪಿಸಿಕೊಡುವುದು ಬಹಳ ಮುಖ್ಯ. ಇವತ್ತಿನ ದಿವಸ ಬೆಂಗಳೂರು ಪಟ್ಟಣದಲ್ಲಿ ಸಾಕಷ್ಟು ಪಬ್ಲಿಕ್ ಇಂಡಸ್ಟ್ರೀಸ್ ಸೆಕ್ಟಾರ್ಸ್ ಇದೆ. ಅಲ್ಲದೆ ಬೆಂಗಳೂರು ಸುತ್ತಮುತ್ತ ಸಾಕಷ್ಟು ಪ್ರೈವೇಟ್ ಇಂಡಸ್ಟ್ರೀಸ್ ಕೂಡ

ಇದೆ. ಇಂತಹ ಪಟ್ಟಣದಲ್ಲಿ ಲೇಬರರ್ಸ್‌ಗೆ ಸೆಪರೇಟ್ ರೆಪ್ರಸೆಂಟೇಟಿವ್ ಇಲ್ಲ ಅಂದರೆ ನಿಜವಾಗಿಯೂ ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ.... ಅದಕ್ಕಾಗಿ ಇದನ್ನು ನಿಗದಿ ಮಾಡದೇ ಹೋದರೆ ಲೇಬರ್ ಪಾಪ್ಯುಲೇಷನ್‌ಗೆ ಬಹಳ ಅನ್ಯಾಯ ಮಾಡಿದಂತಾಗುತ್ತದೆ...."

### *(ಬಿ) ಶ್ರೀ ರಾಜಶೇಖರನ್ ಅವರ ವಿಧಾನಪರಿಷತ್ತಿನ ಭಾಷಣಗಳಿಂದ....*

**ಕೇಂದ್ರದ ಜವಾಬ್ದಾರಿ ಹೆಚ್ಚು :**

"... ಕೊಂಚ ಮನಸ್ಸಿಗೆ ಸಮಾಧಾನವಾಗುವ ವಿಷಯವನ್ನು ಹೇಳಬಯಸುತ್ತೇನೆ. ನಮ್ಮ ರೈತನು ಬೆಳೆದ ಎಲ್ಲ ಬೆಳೆಗಳಿಗೂ ಬೆಂಬಲ ಬೆಲೆ ನಿರ್ಧರಿಸಬೇಕೆಂದು ಶಾಸಕರಾದಿಯಾಗಿ ಸಮಾಜದ ಎಲ್ಲ ವರ್ಗಗಳೂ ಒತ್ತಾಯ ತಂದಿರುವ ವಾತಾವರಣ ಈಗ ಸೃಷ್ಟಿಯಾಗಿದೆ. ಕೃಷಿ ತಜ್ಞರೂ, ಆಡಳಿತಗಾರರೂ, ಕೃಷಿ ವಿಶ್ವವಿದ್ಯಾಲಯದ ಉಪಕುಲಪತಿಗಳು ಆದ ಡಾ। ಬಿ.ಬಿಸಿಲಯ್ಯನವರ ಅಧ್ಯಕ್ಷತೆಯಲ್ಲಿ ಕೃಷಿ ಬೆಲೆ ಆಯೋಗ ರಚಿಸಿರುವುದು ಸ್ವಾಗತಾರ್ಹ ಸಂಗತಿ.

ಆಹಾರ ಧಾನ್ಯ ಮತ್ತು ಇತರ ಕೃಷಿ ಉತ್ಪನ್ನಗಳ ಬೆಂಬಲ ಬೆಲೆ ನಿಗದಿ ಮಾಡುವ ವಿಷಯದಲ್ಲಿ ರಾಜ್ಯ ಸರ್ಕಾರಕ್ಕಿಂತಲೂ ಕೇಂದ್ರದ ಜವಾಬ್ದಾರಿ ಹೆಚ್ಚಿದೆ. ಈ ಬಗೆಗೆ ಸಂಘಟಿತವಾಗಿ ಕೇಂದ್ರದ ಮೇಲೆ ಒತ್ತಾಯ ತರುವ ಹೊಣೆಗಾರಿಕೆಯನ್ನು ದೇಶದಲ್ಲಿನ ಎಲ್ಲ ರಾಜ್ಯ ಸರ್ಕಾರಗಳೂ ನಿರ್ವಹಿಸಬೇಕಾಗಿದೆ. ತುರ್ತಾಗಿ ಈ ಕಾರ್ಯ ನಡೆಯಬೇಕಾಗಿದೆ...."

**ರಾಜಕೀಯ ಸ್ಥಿರತೆ :**

"... ಇವತ್ತು ನಮ್ಮ ರಾಷ್ಟ್ರದಲ್ಲಿ ರಾಜಕೀಯ ಸ್ಥಿರತೆ ಇರಬೇಕಾದರೆ ಕಾರಣ ಆಹಾರ ಧಾನ್ಯ ಮಾರುಕಟ್ಟೆಯಲ್ಲಿ ಸಿಗುತ್ತಿದೆ. ಆದರಿಂದ ರಾಜಕೀಯ ಸ್ಥಿರತೆ ಇದೆ. ಇದನ್ನು ನಾವೆಲ್ಲಾ ಅರಿತುಕೊಳ್ಳಬೇಕಾಗುತ್ತದೆ. ಕೆಲವರು ಈಗಾಗಲೇ ಡಬ್ಲ್ಯು.ಟಿ.ಎ. ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ನಮ್ಮ ಗ್ಲೋಬಲೈಸೇಷನ್ ಏನಿದೆ, ಈ ಒಂದು ಪರಿಸ್ಥಿತಿಯಲ್ಲಿ ನಾವು ಅದನ್ನು ದೂರೀಕರಿಸುವ ಹಾಗೂ ಇಲ್ಲ, ಕಡೆಗಣಿಸುವ ಹಾಗೂ ಇಲ್ಲ. ಅದು ಶಾಶ್ವತವಾಗಿ ಈ ರಾಷ್ಟ್ರದಲ್ಲಿ ಮತ್ತು ವಿಶ್ವದಲ್ಲಿ ಉಳಿಯುತ್ತದೆ ಎಂದು ನಾವು ತಿಳಿದುಕೊಳ್ಳಬೇಕಾಗುತ್ತದೆ. ಆದರೆ ಕೆಲವು ಪ್ರೊಡಕ್ಟೀವ್ ಮೆಜರ್ಸ್‌ಗಳನ್ನು ಕೇಂದ್ರ ಸರಕಾರದವರು ಹಾಗೂ ಇಲ್ಲಿನ ಸರಕಾರದವರು ತೆಗೆದುಕೊಳ್ಳಬೇಕಾಗುತ್ತದೆ..."

**ಕೃಷಿಕನ ಕುರಿತು :**

"... ನಮ್ಮ ಹೊಟ್ಟೆಗೆ ಆಹಾರವನ್ನು ಕೊಡುವ ಅನ್ನದಾತ ಇದ್ದಾನೆ. ಅವನ ಬೆವರಿನಿಂದ ಈ ರಾಷ್ಟ್ರದಲ್ಲಿ ಸಂಪತ್ತು ಉತ್ಪಾದನೆ ಆಗಿರುವಂಥಾದ್ದಾಗಿದೆ. ಒಂದು ಸಾವಿರ ಕೋಟಿಯನ್ನು ಖಾಸಗಿ, ರಾಷ್ಟ್ರೀಕೃತ ಬ್ಯಾಂಕುಗಳಿಂದ, ಅದಲ್ಲದೆ ಮಲ್ಟಿ ನ್ಯಾಷನಲ್ ಕಂಪೆನಿಗಳನ್ನು ತಾವು ಏನು ಆಹ್ವಾನ ಮಾಡಿದ್ದೀರಿ ಅವರಿಂದ ವಂತಿಗೆಗಳನ್ನು ವಸೂಲಿ ಮಾಡಿ ಪ್ರೈವೇಟ್

ಅಂಡ್ ಪಬ್ಲಿಕ್ ಸೆಕ್ವಾರ್‌ನವರಿಂದ ಹಣವನ್ನು ವಸೂಲಿ ಮಾಡಿ ಇದರ ಜೊತೆಯಲ್ಲಿ ಲೆವಿಯನ್ನು ಕೂಡ ತೆರಬೇಕೆಂದು ನಾನು ಮಾನ್ಯ ಮುಖ್ಯಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ..."

**ಸದನಕ್ಕೆ ಭರವಸೆ :**

"... ನನ್ನ ಕೈಲಾದಷ್ಟು ಸೇವೆಯನ್ನು ನಿಮ್ಮೆಲ್ಲರ ಸಹಕಾರದಿಂದ, ನಿಮ್ಮೆಲ್ಲರ ಸಲಹೆಯನ್ನು ಪಡೆದು ನಮ್ಮ ರಾಜ್ಯದ ಅಭಿವೃದ್ಧಿಗಾಗಿ ಕೆಲಸ ಮಾಡುವುದಕ್ಕೆ ಪ್ರಯತ್ನಪಡುತ್ತೇನೆ. ರಾಜ್ಯದ ಜ್ವಲಂತ ಸಮಸ್ಯೆಗಳು ಏನಿವೆ ಅವುಗಳನ್ನು ಕೇಂದ್ರ ಸರ್ಕಾರದ ಗಮನಕ್ಕೆ ತಂದು, ಕೇಂದ್ರ ಸರ್ಕಾರದ ನೀತಿ ನಿಯಮಗಳು ನಮ್ಮ ಬಡ ಜನರಿಗೆ ಅದರಲ್ಲೂ ಗ್ರಾಮಾಂತರ ಪ್ರದೇಶದ ಬಡ ರೈತರಿಗೆ ಹೆಚ್ಚಿಗೆ ಅನುಕೂಲವಾಗುವ ರೀತಿಯಲ್ಲಿ ನನ್ನ ಶಕ್ತಿಮೀರಿ ಕೇಂದ್ರ ಸರ್ಕಾರದ ಮೇಲೆ ಒತ್ತಾಯವನ್ನು ತರುತ್ತೇನೆ ಎಂದು ಹೇಳುವುದಕ್ಕೆ ಇಷ್ಟಪಡುತ್ತೇನೆ..."

ಋ

ಅವರ ಈ ನಿದರ್ಶನಗಳನ್ನು ನೋಡಿದರೆ, ಅವರು ರಾಜಕೀಯವಾಗಿ ನಿಸ್ಸಂಶಯವಾಗಿ ಸಂಪೂರ್ಣ ಯಶಸ್ಸು ಸಾಧಿಸಿರುವುದು ತಿಳಿಯುತ್ತದೆ. ಒಬ್ಬ ಪ್ರಬುದ್ಧ ರಾಜಕಾರಣಿ, ಮುತ್ಸದ್ದಿ ರಾಜಕಾರಣಿ ಇದಕ್ಕಿಂತ ಹೆಚ್ಚಿನದೇನನ್ನೂ ಸಾಧಿಸಲಾರ. ಜನಸೇವೆ, ಸಾಮಾಜಿಕ ನ್ಯಾಯ, ರಾಜ್ಯದ ಮತ್ತು ರಾಷ್ಟ್ರದ ಒಳಿತಿಗೆ ಹಿತಚಿಂತನೆ, ನ್ಯಾಯಪರವಾದ, ಸತ್ಯಸಂಧವಾದ ಹೋರಾಟ ಮುಂತಾದವುಗಳೆಲ್ಲವೂ ಅವರ ಈ ವ್ಯಕ್ತಿತ್ವದಲ್ಲಿ ವ್ಯಕ್ತವಾಗುತ್ತವೆ. ಅವರು ಎತ್ತಿಕೊಂಡ ಕಾರ್ಯಕ್ಷೇತ್ರದ ಜೊತೆಜೊತೆಗೆ ಸಮಾಜಕ್ಕೆ ಅಗತ್ಯವಾದ ರಾಜಕೀಯ ಪರಿಕರಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರು ನಡೆದುಬಂದಿರುವ ದಾರಿ, ಹಿಡಿದಿರುವ ಜಾಡು ಸಮಾಜೋಮುಖಿಯಾಗಿದೆ. ಸತ್ಯಸಂಧವಾಗಿದೆ, ನಿಷ್ಕಾಮದ ನಿಸ್ವಾರ್ಥದ ಹೆದ್ದಾರಿಯನ್ನು ಹಿಡಿದಿದ್ದಾರೆ. ಅವರ ಪಾರದರ್ಶಕ ವ್ಯಕ್ತಿತ್ವ, ನಡೆ-ನುಡಿಗಳು, ಮತ್ತವರ ಮನದಾಲೋಚನೆಗಳು ನಿಜ ಪಥದಲ್ಲಿ ಗಮಿಸುತ್ತಿವೆ. ಅವರ ಈ ಆದರ್ಶ - ಅರಿವುಗಳು ಅವರನ್ನು ಮುಂದೊಂದು ದಿನ ಚಿರಾಯುವಾದ ಸ್ಥಾನದಲ್ಲಿ ಪಟ್ಟಗಟ್ಟಲಿವೆ.

ಇಂತಹ ಪ್ರಬುದ್ಧ ಮತ್ತು ಬೌದ್ಧಿಕ ತಿಳಿಗೊಳದ ನೀರು ಶುಭ್ರವಾದದ್ದು, ಸ್ವಚ್ಛವಾದದ್ದು, ಅಮೃತ ಸದೃಶವಾದದ್ದು. ಆ ಅಮೃತದ ಸ್ವಾದಾನುಭವ ಭಾರತೀಯರೆಲ್ಲರಿಗೂ ಸಿಕ್ಕಲಿ. ಇಂತಹ ವ್ಯಕ್ತಿತ್ವದ ಅಮೃತ ಸಿಂಚನ ಭಾರತದ ರಾಜಕಾರಣದ ಮೇಲಾಗಲಿ ಆ ಮೂಲಕ ರಾಜಕಾರಣ ಸ್ವಚ್ಛವಾಗಲಿ, ಶುಬ್ರವಾಗಲಿ, ಅದಕ್ಕೆ ಕವಿದಿದ್ದ ಮಬ್ಬು ಹರಿಯಲಿ - ಆ ಮೂಲಕ ಎಂ.ವಿ.ರಾಜಶೇಖರನ್ ಅವರ ಒಳನೋಟಗಳು ಕಾಯಕಲ್ಪಗೊಳ್ಳಲಿ. ಕಲ್ಯಾಣ ರಾಜ್ಯ ಉದಯವಾಗಲಿ. ಭಾರತದ ಬಹುಮುಖ್ಯ ಜವಾಬ್ದಾರಿಗಳನ್ನು ಅವರು ಹೊಂದುವಂತಾಗಲಿ. ಹಾಗೆ ಆದಾಗಲೇ ಮಾತ್ರ ಭಾರತದಲ್ಲಿ ನೈಜ ಪ್ರಜಾಪ್ರಭುತ್ವ ನೆಲೆಗೊಂಡಿದೆ ಎಂಬ ನಿರ್ಧಾರಕ್ಕೆ ಬಂದು ಸಮಾಧಾನ ತಂದುಕೊಳ್ಳಬಹುದು.

***

# ಜನಪ್ರತಿನಿಧಿಗಳ ಆದರ್ಶ

ಪಿ. ಜಿ. ಆರ್. ಸಿಂಧ್ಯಾ

ಸುಮಾರು ೪೫ ವರ್ಷದ ಹಿಂದಿನ ಮಾತು. ನಮ್ಮ ಊರು ಸಾಧಾರಣ ದೊಡ್ಡ ಊರೇ. ಎಲ್ಲಾ ಜಾತಿಯವರು, ಎಲ್ಲಾ ಧರ್ಮದವರು ಇರುವ ಊರು. ಗ್ರಾಮದ ಹಬ್ಬವನ್ನು ಒಟ್ಟಿಗೆ ಆಚರಿಸುತ್ತಿದ್ದರು. ನಮ್ಮೂರಿನ ಬಸವೇಶ್ವರನ ಕೊಂಡ, ಗ್ರಾಮದೇವತೆ ದೇವರಹಳ್ಳಿ ಅಮ್ಮನವರ ಕೊಂಡ, ತೇರು, ಜಾತ್ರೆಯ ಸಡಗರ, ಶಾಲೆಯ ಆವರಣ, ಶಾಲೆಯ ಪಕ್ಕದಲ್ಲಿ ಹರಿಯುವ ಸಣ್ಣ ಹಳ್ಳ ಇವೆಲ್ಲಾ ಮಾಸದ ನೆನಪುಗಳು. ನನ್ನ ಜೊತೆಯಲ್ಲಿದ್ದವರು ಅನೇಕರು, ಈಗ ಕೆಲವರು ಊರಿನಲ್ಲೇ ಉಳಿದಿದ್ದಾರೆ. ಕೆಲವರು ಕೆಲಸಕ್ಕೆ ಬೆಂಗಳೂರಿಗೆ ಬಂದಿದ್ದಾರೆ. ಆದರೆ, ನಮ್ಮೂರಿನ ಮೇಲಿನ ಪ್ರೀತಿ ಯಾರಿಗೂ ಕಡಿಮೆಯಾಗಿಲ್ಲ. ಈಗಲೂ ಊರಹಬ್ಬ, ಜಾತ್ರೆ ಎಲ್ಲವೂ ನಡೆಯುತ್ತಿವೆ. ಆದರೆ, ಹಿಂದಿನ ಪ್ರೀತಿಯ ವಿಶಾಲವಾದ ಕೊರತೆ ಎದ್ದು ಕಾಣುತ್ತಿದೆ. ಈ ಊರಹಬ್ಬದಲ್ಲಿ ಕೆಲವು ಕುಟುಂಬಗಳಿಗೆ ವಿಶೇಷ ಆದರ ಮತ್ತು ಗೌರವ. ನಮ್ಮೂರಿನ ಪೇಟೆಚಲುವೇಗೌಡರ ಮನೆ, ರಾಜಶೇಖರನ್ ರವರ ಮನೆ, ಆಲಿಮುರ್ತುಜಾರವರ ಮನೆ ಇವರೆಲ್ಲರಿಗೂ ಜಾತ್ರೆ ನಡೆಯುವಾಗ ಒಂದೊಂದು ವಿಶೇಷ ಸ್ಥಾನ. ನಮ್ಮದು ಛೇರ್ಮನ್ ಮನೆ. ನಮ್ಮ ತಂದೆ ಛೇರ್ಮನ್‌ರು. ಅವರಿಗೂ ಒಂದು ಸ್ಥಾನ. ಆಗಲೂ, ಈಗಿನಂತೆಯೇ ಪಾರ್ಟಿ ವೈಷಮ್ಯಗಳು ಇದ್ದವು. ಆದರೆ, ಆ ವೈಷಮ್ಯದಲ್ಲಿ ಒಂದು ಅರ್ಥವಿತ್ತು. ಈಗ ಊರು ಅಭಿವೃದ್ಧಿ ಆಗಿದೆ. ಆಸ್ಪತ್ರೆ, ಹೈಸ್ಕೂಲು, ದನಗಳ ಆಸ್ಪತ್ರೆ, ಹಾಸ್ಟೆಲ್‌ಗಳು ಇವೆಲ್ಲವೂ ಆಗಿವೆ. ಇತ್ತೀಚೆಗಂತೂ, ರಾಜಶೇಖರನ್‌ರವರು ನಮ್ಮೂರು ಎನ್ನುವ ಅಭಿಮಾನದಿಂದ ತಮ್ಮ ನಿಧಿಯಿಂದ ಸಾಕಷ್ಟು ಹಣವನ್ನು ಕೊಟ್ಟಿದ್ದಾರೆ. ಅಭಿವೃದ್ಧಿ ಆಗಿದೆ. ಆದರೆ ಪರಸ್ಪರ ಪ್ರೀತಿ ವಿಶ್ವಾಸ ಕಡಿಮೆ. ಇತ್ತೀಚೆಗೆ ನಮ್ಮೂರಿನ ಒಬ್ಬ ಬಡ ಕುಟುಂಬದ ಮುದುಕಿ ಸತ್ತಳು. ಆ ಸಾವಿಗೆ ರಾಜ್ಯಸಭಾ ಸದಸ್ಯ ಎಂ.ವಿ.ರಾಜಶೇಖರನ್‌ರವರು ಬಂದಿದ್ದರು ಅಂದರೆ ಕೆಲವರಿಗೆ ಆಶ್ಚರ್ಯವೇ ಆಗಬಹುದು. ಆ ಮುದುಕಿ ಬೇರೆ ಯಾರೂ ಅಲ್ಲ, ರಾಜಶೇಖರನ್‌ರವರನ್ನು ಚಿಕ್ಕಂದಿನಿಂದ ನೋಡಿಕೊಂಡ ಪವಿತ್ರ ಹೃದಯ. ಈ ಉದಾಹರಣೆ

ನೆನಪಿಸಿಕೊಳ್ಳಲು ಕಾರಣ ಎಂ.ವಿ.ರಾಜಶೇಖರನ್ ಅವರು ತಮ್ಮ ಹುಟ್ಟೂರು ಬಗ್ಗೆ, ತಮ್ಮವರ ಬಗ್ಗೆ ಇಟ್ಟುಕೊಂಡಿರುವ ಅಭಿಮಾನ.

ನನ್ನ ಮಾಸದ ನೆನಪಿನಲ್ಲಿ ಉಳಿಯುವುದು, ಉಳಿದಿರುವುದು ೧೯೫೮-೫೯ರ ಎಂ.ವಿ.ರಾಜಶೇಖರನ್. ನಮ್ಮ ರೈತರಿಗೆ, ಆಗ ಭತ್ತ ಬೆಳೆಯುವುದು ಒಂದು ದೊಡ್ಡ ಅದ್ಭುತವಾಗಿತ್ತು. ಅದರಲ್ಲೂ ಜಪಾನ್ ಮಾದರಿ ಭತ್ತ ಬೆಳೆಯುವುದು ಅಂದರೆ ಅತಿ ಆಶ್ಚರ್ಯ. ಆಗ ತಾನೇ ಯಾರೋ ನಮ್ಮೂರಿನಲ್ಲಿ ಮಾತನಾಡುತ್ತಿದ್ದರು - ಎಂ.ವಿ. ರಾಜಶೇಖರನ್ ಅವರು ಜಪಾನ್ ದೇಶಕ್ಕೆ ಹೋಗಿ ಬಂದಿದ್ದಾರೆ, ಜಪಾನ್ ದೇಶದಲ್ಲಿ ಇರುವುದು ಬಹಳ ಕಡಿಮೆ ಜಮೀನು, ಭತ್ತದ ಇಳುವರಿ ಜಾಸ್ತಿ, ಅದನ್ನು ಎಂ.ವಿ. ರಾಜಶೇಖರನ್‌ರವರು ನೋಡಿಕೊಂಡು ಬಂದಿದ್ದಾರೆ, ಅದನ್ನು ಹೇಳುತ್ತಾರೆ ಸ್ಕೂಲ್‌ನಲ್ಲಿ ಅಂತಾ ಹೇಳಿದ್ದನ್ನು ನಾನು ಕೇಳಿದ್ದು, ಅವತ್ತು ನಮ್ಮ ಶಾಲೆಯಲ್ಲಿ ಎಂ.ವಿ.ರಾಜಶೇಖರನ್‌ರವರ ಭಾಷಣ. ಜಪಾನ್‌ನಿಂದ ಆಗ ತಾನೇ ಬಂದು ವ್ಯವಸಾಯದ ಬಗ್ಗೆ ಮಾತನಾಡಿದರು. ಕೆಂಪುಮುಖದ ಹಸನ್ಮುಖಿ ೩೦ರ ಸುಮಾರಿನ ನಮ್ಮೂರಿನ ಶ್ರೀಮಂತ ಕುಟುಂಬದ ಯುವಕರಾದ ಎಂ.ವಿ.ರಾಜಶೇಖರನ್ ಅವರನ್ನೂ, ಅವತ್ತಿನ ಭಾಷಣವನ್ನೂ ನಾನು ಇನ್ನೂ ಮರೆತಿಲ್ಲ. ಆ ವ್ಯಕ್ತಿತ್ವವೇ ನನ್ನ ಮನಸ್ಸಿನಲ್ಲಿ ಛಾಪಾಗಿರುವ ಎಂ.ವಿ.ರಾಜಶೇಖರನ್.

೪೪ ವರ್ಷ ಆಗಿದೆ. ಜಪಾನ್ ದೇಶ ಒಂದೇ ಅಲ್ಲ, ಪ್ರಪಂಚದ ಬಹುತೇಕ ದೇಶಗಳನ್ನು ಎಂ.ವಿ.ರಾಜಶೇಖರನ್ ಈಗ ನೋಡಿದ್ದಾರೆ. ಕಷ್ಟಸುಖಗಳನ್ನು ಅನುಭವಿಸಿದ್ದಾರೆ. ರಾಜಕಾರಣದಲ್ಲೂ ಸೋಲು-ಗೆಲುವುಗಳನ್ನು ಅನುಭವಿಸಿದ್ದಾರೆ. ರಾಷ್ಟ್ರ ನಾಯಕರ ಸಂಬಂಧ ಬೆಳೆದಿದೆ. ಮಕ್ಕಳು, ಮೊಮ್ಮಕ್ಕಳೆಲ್ಲಾ ನೆಮ್ಮದಿಯಿಂದಿದ್ದಾರೆ. ರಾಷ್ಟ್ರದ ಪ್ರಜಾಪ್ರಭುತ್ವದ ಬಹುಮುಖ್ಯ ೪ ಮನೆಗಳ ಸದಸ್ಯರಾಗಿದ್ದಾರೆ. ಆದರೆ, ಅವರ ವ್ಯಕ್ತಿತ್ವದಲ್ಲಿ ಮಾತ್ರ ಏನೂ ಬದಲಾವಣೆ ಇಲ್ಲ. ಅದೇ ಹಸನ್ಮುಖ, ಅದೇ ಪ್ರೀತಿ ವಿಶ್ವಾಸ, ಅದೇ ಸರಳತೆ.

ನನ್ನ ವಿದ್ಯಾರ್ಥಿ ದಿಸೆಯಲ್ಲಿ ನಾನು ಕಂಡ ಎಂ.ವಿ.ರಾಜಶೇಖರನ್‌ರನ್ನು ಯುವಕನಾಗಿ ನಾನು ಕಂಡದ್ದು ಮತ್ತೊಂದು ರೀತಿಯಲ್ಲಿ. ಲೋಕಸಭಾ ಸದಸ್ಯರಾಗಿ ಅವರ ಜನಸಂಪರ್ಕ ಇತ್ತೀಚಿನ ಜನಪ್ರತಿನಿಧಿಗಳಿಗೆ ಆದರ್ಶವೇ ಸರಿ. ವಂಶಪಾರಂಪರ್ಯದ ರಾಜಕಾರಣದ ಬಗ್ಗೆ ಇತ್ತೀಚಿನ ದಿನಗಳಲ್ಲಿ ಮಾತನಾಡದಿರುವುದೇ ಲೇಸು. ಎಂ.ವಿ.ರಾಜಶೇಖರನ್ ಶ್ರೀ ನಿಜಲಿಂಗಪ್ಪನವರ ಅಳಿಯಂದಿರಾಗಿ ಯಾವ ರೀತಿ ಇದ್ದರೆನ್ನುವುದು ಇವತ್ತಿನ ರಾಜಕಾರಣಿಗಳ ಸಂಬಂಧಿಕರಿಗೆ ಒಂದು ಆದರ್ಶವಾಗಬೇಕು.

ಎಂ.ವಿ.ರಾಜಶೇಖರನ್‌ರವರು ಲೋಕಸಭಾ ಸದಸ್ಯರಾಗಿದ್ದಾಗ ಮಾಡಿದ ಪ್ರತಿಯೊಂದು ಭಾಷಣದ ಸಾರಾಂಶವನ್ನು ತಮ್ಮ ಕ್ಷೇತ್ರದ ಎಲ್ಲಾ ಮುಖಂಡರಿಗೂ ಪತ್ರದ ಮೂಲಕ ತಿಳಿಸುತ್ತಿದ್ದರು. ನಮ್ಮ ತಂದೆ ಆಗ ಪಂಚಾಯಿತಿ ಅಧ್ಯಕ್ಷರು. ಇವತ್ತಿಗೂ ಎಂ.ವಿ.ರಾಜಶೇಖರನ್ ಅವರು ಲೋಕಸಭಾ ಸದಸ್ಯರಾಗಿ ಮಾಡಿದ ಪತ್ರ ವ್ಯವಹಾರ ನಮ್ಮ ಮನೆ ಕಡತಗಳಲ್ಲಿವೆ.

೧೯೭೧-೭೭ರಲ್ಲಿ ಇಂದಿರಾ ಕಾಂಗ್ರೆಸ್ ಬಿರುಗಾಳಿಯ ಅಲೆಯಲ್ಲಿ ೨ ಲೋಕಸಭಾ ಚುನಾವಣೆಗಳಲ್ಲಿ ಅವರು ಸೋತರೂ ಧೃತಿಗೆಡಲಿಲ್ಲ. ೧೯೭೮ರಲ್ಲಿ ಮತ್ತೆ ವಿಧಾನಸಭೆ ಪ್ರವೇಶಿಸಿದರು. ಆಗಲೂ, ಸಕ್ರಿಯವಾಗಿಯೇ ಜನಸಂಪರ್ಕವನ್ನು ಉಳಿಸಿಕೊಂಡು ಬಂದರು. ೧೯೮೦-೮೨ರಲ್ಲಿ ಎಂ.ವಿ.ರಾಜಶೇಖರನ್ ರಾಜಕೀಯ ಜೀವನದಲ್ಲಿ ಕಷ್ಟದ ದಿನಗಳನ್ನು ಕಂಡರು. ೨೦-೨೫ ವರ್ಷಗಳ ಕಾಲ ಅವರ ಒಡನಾಡಿಗಳಾಗಿದ್ದ ಅನೇಕ ಮುಖಂಡರು ಎಂ.ವಿ.ರಾಜಶೇಖರನ್‌ರವರನ್ನು ಮೂಲೆಗುಂಪು ಮಾಡಲು ಪ್ರಯತ್ನಿಸಿದರು. ಆದರೂ ಅವರು ಧೃತಿಗೆಡಲಿಲ್ಲ. ನಂತರದ ಬೆಳವಣಿಗೆ, ಎಲ್ಲರಿಗೂ ತಿಳಿದಿರುವ ವಿಚಾರ.

ರಾಷ್ಟ್ರದ ರಾಜಕಾರಣಕ್ಕೆ ತಮ್ಮ ೫೦ಕ್ಕೂ ಹೆಚ್ಚು ವರ್ಷಗಳ ಮಾಗಿದ ಅನುಭವದಲ್ಲಿ ಎಂ.ವಿ.ರಾಜಶೇಖರನ್ ಅವರ ಕೊಡುಗೆ ಅಮೂಲ್ಯವಾದದ್ದು, ಬಡತನ ನಿವಾರಣೆ ಬಗ್ಗೆ ಅವರು ಮಾಡಿರುವ ಅಧ್ಯಯನ ಅತ್ಯಂತ ಆಳವಾದದ್ದು. ಅವರು ಕಟ್ಟಿ ಬೆಳೆಸಿರುವ ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಸಮಾಜಕ್ಕೆ ಒಂದು ದೊಡ್ಡ ಕೊಡುಗೆ. ಶತ್ರುಗಳನ್ನು ದ್ವೇಷಿಸದ, ಅಪಕಾರ ಮಾಡಿದವರನ್ನು ಕ್ಷಮಿಸುವ ವಿರಳ ರಾಜಕಾರಣಿ ಹಾಗೂ ಅಪರೂಪದ ರಾಜಕಾರಣಿ ಎಂ.ವಿ.ರಾಜಶೇಖರನ್‌ರವರು. ಕೆಲವೊಮ್ಮೆ ಸಾರ್ವಜನಿಕ ಜೀವನದಲ್ಲಿ ಪ್ರಾಮಾಣಿಕತೆ, ನಿಷ್ಠೆ, ತ್ಯಾಗ ಇವುಗಳಿಗೆ ಬೆಲೆ ಇಲ್ಲವೇನೋ ಅನ್ನಿಸುತ್ತದೆ. ಎಂ.ವಿ.ರಾಜಶೇಖರನ್ ಯಾವತ್ತೋ ಕರ್ನಾಟಕದ ಮುಖ್ಯಮಂತ್ರಿಯಾಗಬೇಕಾಗಿತ್ತು, ಕೇಂದ್ರದ ಮಂತ್ರಿಗಳಾಗಬೇಕಾಗಿತ್ತು. ಈ ಕೊರಗು ಅವರಿಗಿಲ್ಲ. ಆದರೆ, ಸಾರ್ವಜನಿಕ ಜೀವನದಲ್ಲಿ ಕೆಲವಾದರೂ ಮೌಲ್ಯಗಳನ್ನು ಗೌರವಿಸುವಂತಹವರಿಗೆ ಈ ಕೊರಗಿದೆ.

ರಾಷ್ಟ್ರ ಎದುರಿಸುತ್ತಿರುವ ಬಡತನ, ನಿರುದ್ಯೋಗ ನಿವಾರಣೆ, ಗ್ರಾಮೀಣಾಭಿವೃದ್ಧಿಯ ಆಮೆ ವೇಗ ಈ ಸಮಸ್ಯೆಗಳ ಪರಿಹಾರಕ್ಕೆ ಎಂ.ವಿ.ರಾಜಶೇಖರನ್‌ರಂತಹವರ ಕೈಗೆ ಅಧಿಕಾರ ಸಿಗಬೇಕು. ಇಂತಹವರ ಕೈಗೆ ಅಧಿಕಾರ ಸಿಕ್ಕಿದರೆ ಗಾಂಧೀವಾದಕ್ಕೆ ಏನಾದರೂ ಬೆಲೆ ಸಿಕ್ಕೀತು. ಆ ದಿನ ಬೇಗ ಬರಲೆಂದು ಆಶಿಸುತ್ತೇನೆ.

✳✳✳

# ಉದಾತ್ತ ನಾಯಕ

**ಡಾ। ಅಜನಹಳ್ಳಿ ಮಂಜುನಾಥ**

ಶ್ರೀ ರಾಜಶೇಖರನ್‌ರವರು ಸ್ವಾತಂತ್ರ್ಯಪೂರ್ವ ಕಾಂಗ್ರೆಸ್‌ನ ಮೌಲ್ಯವನ್ನು ಪ್ರತಿನಿಧಿಸುವ ಕೆಲವೇ ಕೆಲವು ಮಂದಿಯಲ್ಲಿ ಒಬ್ಬರು. ಅವರಲ್ಲಿರುವ ಪ್ರಾಮಾಣಿಕತೆ, ಶ್ರದ್ಧೆ, ವಿವೇಚನೆ, ಜನರ ಬಗ್ಗೆ ಇರುವ ಪ್ರೀತಿ-ವಿಶ್ವಾಸ, ರಾಷ್ಟ್ರಮಟ್ಟದ ಗಣ್ಯ ವ್ಯಕ್ತಿಗಳ ಪರಿಚಯ ಹಾಗೂ ಅವರೊಡನೆ ಸದಾ ಸಂಪರ್ಕ, ಗ್ರಾಮೀಣಾಭಿವೃದ್ಧಿ, ಕೃಷಿ ಬಗ್ಗೆ ಆಸಕ್ತಿ - ಇವು ಶ್ರೀ ರಾಜಶೇಖರನ್‌ರವನ್ನು ಒಬ್ಬ ಅಪರೂಪದ ವ್ಯಕ್ತಿಯನ್ನಾಗಿಸಿವೆ. ಅವರನ್ನು ಒಮ್ಮೆ ಪರಿಚಯ ಮಾಡಿಕೊಂಡವರು ಅವರಿಂದ ದೂರವಿರಲು ಸಾಧ್ಯವೇ ಇಲ್ಲ.

ಶ್ರೀ ನಿಜಲಿಂಗಪ್ಪನವರ ಶತಮಾನೋತ್ಸವದ ಅಂಗವಾಗಿ ಅಭಿನಂದನ ಗ್ರಂಥ ಹೊರತರುವ ಸಂದರ್ಭದಲ್ಲಿ ಶ್ರೀ ರಾಜಶೇಖರನ್‌ರವರ ಪರಿಚಯ ನನಗಾಯಿತು. ಪ್ರಾಯಶಃ ಅವರು ಗಟ್ಟಿಯಾಗಿ ನಮ್ಮ ಜೊತೆ ನಿಲ್ಲದಿದ್ದರೆ ಆ ಸಂಪುಟಗಳು ಹೊರಬರಲು ಸಾಧ್ಯವಾಗುತ್ತಿರಲಿಲ್ಲವೇನೋ ? ನಮಗೆ ಸಮಸ್ಯೆಯಾದಾಗ ನಾವು ಹೋಗುತ್ತಿದ್ದುದು ಶ್ರೀ ರಾಜಶೇಖರನ್‌ರವರ ಹತ್ತಿರ. ಅವರು ಸಂಬಂಧಪಟ್ಟವರೊಡನೆ ಮಾತನಾಡಿ ನಮಗೆ ದಾರಿ ಸುಗಮವಾಗಿಸುತ್ತಿದ್ದರು. ಅವರು ನಿಜಲಿಂಗಪ್ಪನವರ ಗ್ರಂಥಕ್ಕೆ ಒತ್ತಾಸೆಯಾಗಿ ನಿಂತಿದ್ದು ಅವರು ನಿಜಲಿಂಗಪ್ಪನವರ ಅಳಿಯ ಎಂಬ ಕಾರಣಕ್ಕಲ್ಲ. ಅಂತಹ ಒಬ್ಬ ನಾಯಕನಿಗೆ ಈ ರಾಜ್ಯ ಹಾಗೂ ಈ ದೇಶದಲ್ಲಿ ಸಿಗಬೇಕಾದ ನ್ಯಾಯ ಸಿಗಲಿಲ್ಲ ಎಂಬ ಖೇದದಿಂದ. ನಿಜ ಹೇಳಬೇಕೆಂದರೆ ನಿಜಲಿಂಗಪ್ಪ ನವರಿಂದ ವೈಯಕ್ತಿಕವಾಗಿ ಅವರಿಗೆ ಆದ ಲಾಭಕ್ಕಿಂತ ನಷ್ಟವೇ ಹೆಚ್ಚು. ನಿಜಲಿಂಗಪ್ಪನವರ ಅಳಿಯ ಎಂಬ ಕಾರಣಕ್ಕೆ ಮೊದಲೇ ಕಾಂಗ್ರೆಸ್‌ನಲ್ಲಿ ಒಬ್ಬ ಧೀಮಂತ ನಾಯಕನೆಂದು ಗುರುತಿಸಿಕೊಂಡ ರಾಜಶೇಖರನ್ ರಾಜಕೀಯ ಮುನ್ನಡೆ ಸ್ಥಗಿತಗೊಂಡಿತು. ೧೯೬೨ರಲ್ಲಿ ಕನಕಪುರ ವಿಧಾನಸಭಾ ಸದಸ್ಯರಾಗಬೇಕಾದವರು ೧೯೬೭ರವರೆಗೆ ಕಾದು ರಾಜ್ಯ ರಾಜಕಾರಣ ಬಿಟ್ಟು ಲೋಕಸಭೆ ಪ್ರವೇಶಿಸಬೇಕಾಯಿತು.

ರಾಜಶೇಖರನ್ ದೆಹಲಿಯಲ್ಲಿ ಪರಿಚಿತ ವ್ಯಕ್ತಿ ಶ್ರೀಮತಿ ಇಂದಿರಾಗಾಂಧಿಯವರೊಡನೆಯೂ ಉತ್ತಮ ಸಂಬಂಧ ಹೊಂದಿದವರು. ಎಲ್ಲಾ ನಾಯಕರೊಡನೆಯೂ ಸಂಪರ್ಕ ಇಟ್ಟುಕೊಂಡವರು. ೧೯೬೯ರಲ್ಲಿ ಕಾಂಗ್ರೆಸ್ ಒಡೆಯದಂತೆ ತಡೆಯಲು ಪ್ರಯತ್ನಿಸಬಹುದಿತ್ತು. ಆದರೆ, ಅವರಲ್ಲಿರುವ ಸಂಕೋಚ ಸ್ವಭಾವದಿಂದಾಗಿ ಮುನ್ನುಗ್ಗಲಿಲ್ಲ. ಪ್ರಾಯಶಃ ಅವರು ಹೆಗಲು ಸವರಿಕೊಂಡು ಮುನ್ನುಗ್ಗುವ ನಾಯಕರಾಗಿದ್ದರೆ ಇಂದು ರಾಜಕೀಯದಲ್ಲಿ ಎಲ್ಲೋ ಎತ್ತರದಲ್ಲಿ ನಿಂತಿರುತ್ತಿದ್ದರು. ಕಾಂಗ್ರೆಸ್ ಇಬ್ಭಾಗವಾದಾಗ ಅವರು ನಿಜಲಿಂಗಪ್ಪನವರ ಅಳಿಯ ಅನ್ನುವುದಕ್ಕಿಂತ ಅವರು ಪಾಲಿಸಿಕೊಂಡು ಬಂದ ಸಿದ್ಧಾಂತಗಳಿಂದಾಗಿ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದರು. ತುರ್ತು ಪರಿಸ್ಥಿತಿಯ ನಂತರ ೧೯೭೭ರಲ್ಲಿ ಜನತಾ ಪಕ್ಷದ ಅಭ್ಯರ್ಥಿಯಾಗಿ ಲೋಕಸಭೆಗೆ ಸ್ಪರ್ಧಿಸಿ ಕೇವಲ ಮೂರು ಸಾವಿರದ ಆರುನೂರು ಮತಗಳಿಂದ ಸೋತರು. ಒಂದು ವೇಳೆ ಗೆದ್ದು ಆಗ ಲೋಕಸಭೆ ಪ್ರವೇಶಿಸಿದ್ದರೆ ಕರ್ನಾಟಕದಿಂದ ಒಬ್ಬ ಮಂತ್ರಿಯೂ ಆಗುತ್ತಿದ್ದರೇನೋ ? ಇದನ್ನು ಅರಿತೇ ಪಕ್ಷದ ಕೆಲವರು ಅವರಿಗೆ ತಡೆ ಮಾಡಿದರು. ಹೀಗೆ ರಾಜಶೇಖರನ್‌ರವರ ಒಳ್ಳೆತನವೇ ಅವರಿಗೆ ಮುಳುವಾಯಿತು. ೧೯೭೮ರಲ್ಲಿ ಉತ್ತರಹಳ್ಳಿ ಕ್ಷೇತ್ರವನ್ನು ವಿಧಾನಸಭೆಯಲ್ಲಿ ಪ್ರತಿನಿಧಿಸಿ ಅಲ್ಲಿ ಒಳ್ಳೆಯ ಕೆಲಸ ಮಾಡಿದರೂ, ೧೯೮೩ರಲ್ಲಿ ಅವರಿಗೆ ಆ ಕ್ಷೇತ್ರದ ಟಿಕೆಟ್ ದೊರೆಯದೇ ಇದ್ದುದರಿಂದ ಬೇಸತ್ತು ರಾಜೀನಾಮೆ ನೀಡಿ ೧೯೮೮ರಲ್ಲಿ ಕಾಂಗ್ರೆಸ್ ಸೇರಿದರು. ಇದರ ಹಿನ್ನೆಲೆಯಲ್ಲಿ ಕಾಂಗ್ರೆಸ್ ಪಕ್ಷದ ಮೇಲಿನ ಪ್ರೀತಿಗಿಂತ ಹೆಚ್ಚಾಗಿ ಜನತಾ ಪಕ್ಷದ ನಾಯಕರ ಮೇಲಿನ ಸಿಟ್ಟು ಕಾರಣವಾಗಿತ್ತು. ಇವರು ಜನತಾ ಪಕ್ಷ ತೊರೆದುದು ನಿಜಲಿಂಗಪ್ಪನವರಿಗೆ ನುಂಗಲಾರದ ಬಿಸಿ ತುಪ್ಪವಾಗಿತ್ತು. ಆಘಾತವೂ ಆಗಿತ್ತು. ಅವರು ರಾಜಶೇಖರನ್ ಪಕ್ಷ ತೊರೆಯುವುದನ್ನು ತಡೆಯಲು ಬಹಳ ಪ್ರಯತ್ನಿಸಿದರು, ಸಾಧ್ಯವಾಗಲಿಲ್ಲ. ಅಳಿಯ ಕಾಂಗ್ರೆಸ್ ಸೇರಿದ ನಂತರ ತಮ್ಮನ್ನು ಇತರರು ತಪ್ಪು ತಿಳಿದುಕೊಂಡಾರೆಂದು ತಮಗೆ ಆರೋಗ್ಯ ಸರಿ ಇಲ್ಲದಿದ್ದರೂ ಜನತಾ ಪಕ್ಷದ ಪರವಾಗಿ ಚುನಾವಣಾ ಪ್ರಚಾರಕ್ಕೆ ನಿಜಲಿಂಗಪ್ಪನವರು ಹೋಗುತ್ತಾರೆ. ಈ ದುಗುಡ, ಸಂಕಟಗಳೆನ್ನೆಲ್ಲಾ ನಿಜಲಿಂಗಪ್ಪನವರು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ.

೧೯೮೫ರಲ್ಲಿ ಕಾಂಗ್ರೆಸ್ಸಿನಿಂದ ಕನಕಪುರದಲ್ಲಿ ಸ್ಪರ್ಧಿಸುವ ರಾಜಶೇಖರನ್‌ರವರ ನಿರ್ಧಾರ ಸರಿ ಎಂದು ಕಾಣಿಸುವುದಿಲ್ಲ. ಅವರು ಸಾಕಷ್ಟು ಸಿದ್ಧತೆಗಳು ಮಾಡಿಕೊಳ್ಳದೇ ದಿಢೀರನೆ ನಿರ್ಧಾರ ತೆಗೆದುಕೊಂಡದ್ದು ಅವರ ಸೋಲಿಗೆ ಕಾರಣವಾಯಿತು. ೧೯೮೯ರಲ್ಲಿ ಕಾಂಗ್ರೆಸ ಉಪಾಧ್ಯಕ್ಷರಾದ ರಾಜಶೇಖರನ್‌ರವರಿಗೆ ವೀರೇಂದ್ರ ಪಾಟೀಲ್ ಸ್ನೇಹವಿತ್ತು. ಆದರೆ, ಅವರಿಗೆ ವಿಧಾನಸಭೆಗೆ ಸ್ಪರ್ಧಿಸಲು ಟಿಕೆಟ್ ದೊರೆಯಲಿಲ್ಲ. ೨೦೦೦ದಲ್ಲಿ ವಿಧಾನ ಪರಿಷತ್ತಿಗೆ ಪ್ರವೇಶಿಸುವವರೆಗೂ ಕಾಯಬೇಕಾಯಿತು. ಅಲ್ಲಿಯೂ ಕೂಡ ಸಭಾಪತಿಗಳಾಗುತ್ತಾರೆಂಬ ನಿರೀಕ್ಷೆ, ಕೃಷಿ ಸಚಿವರಾಗುತ್ತಾರೆಂಬ ನಿರೀಕ್ಷೆ ಸುಳ್ಳಾಗಿ ಪುನಃ ರಾಜ್ಯಸಭೆ ಪ್ರವೇಶಿಸುವಂತಾಯಿತು. ವೈಯಕ್ತಿಕವಾಗಿ ರಾಜಶೇಖರನ್‌ರವರಿಗೆ ದೆಹಲಿ ಪ್ರಾಯಶಃ ಬೆಂಗಳೂರಿಗಿಂತ ಹೆಚ್ಚು

ಸುಪರಿಚಿತ. ಆದರೆ ಅವರು ದೆಹಲಿಗೆ ಹೋದದ್ದರಿಂದ ರಾಜ್ಯ ರಾಜಕಾರಣದಲ್ಲಿ ಒಬ್ಬ ಪ್ರಾಮಾಣಿಕ ವ್ಯಕ್ತಿ ಕಡಿಮೆಯಾದಂತೆ ಆಯಿತು. ಇಲ್ಲಿ ಅವರು ಮಂತ್ರಿಗಳಾಗಿದ್ದರೆ ಕೃಷ್ಣ ಸರ್ಕಾರದ ಘನತೆ ಹೆಚ್ಚುತ್ತಿತ್ತು. ವೀರಶೈವರಿಗೂ ಒಬ್ಬ ಹಿರಿಯ ನಾಯಕ ದೊರೆತಂತಾಗುತ್ತಿತ್ತು.

ಪ್ರಾಮಾಣಿಕ, ತತ್ವನಿಷ್ಠ ರಾಜಕಾರಣಿಗಳ ಸಮಸ್ಯೆ ಇದು. ಅವರಾಗೇ ತಮ್ಮ ಛಾಪನ್ನು ಒತ್ತುವುದಿಲ್ಲ. ಸನ್ನಿವೇಶ, ಪರಿಸ್ಥಿತಿ ಅಥವಾ ಇತರರು ಇವರನ್ನು ಮುಂದಕ್ಕೆ ದೂಡಬೇಕು. ಅದು ಇಂದಿನ ಸಂದರ್ಭದಲ್ಲಿ ಸಾಧ್ಯವಿಲ್ಲದ್ದು. ಬೇರೆಯವರನ್ನು ಬದಿಗೆ ನೂಕಿ ತಾವೇ ಮುನ್ನುಗ್ಗಿ ಸ್ಥಾನ ಗಿಟ್ಟಿಸುವ ಜನರು ಹೆಚ್ಚಾಗಿರುವ ಈ ಕಾಲದಲ್ಲಿ ಪ್ರಾಮಾಣಿಕ ತತ್ವನಿಷ್ಠರು ಬದಿಗೆ ಸರಿಯುತ್ತಾರೆ. ಹೀಗಾಗಿ ಇಂದಿನ ರಾಜಕೀಯದಲ್ಲಿ ಜನಬಲ, ತೋಳುಬಲ, ಹಣದ ಬಲದಲ್ಲಿ ಮುಂದೆ ಬಂದು ಸ್ಥಾನ ಗಿಟ್ಟಿಸಿದವರೇ ಹೆಚ್ಚು. ಅಮೃತ ವರ್ಷಕ್ಕೆ ಹೆಜ್ಜೆ ಇಟ್ಟ ರಾಜಶೇಖರನ್ ತಮ್ಮ ಅನುಭವದಿಂದ, ತಮ್ಮ ಸಂಪರ್ಕಗಳಿಂದ ಬಹು ಎತ್ತರದಲ್ಲಿ ನಿಲ್ಲಬಹುದಾದಂತ ವ್ಯಕ್ತಿತ್ವ ಉಳ್ಳವರು. ಅವರ ಒಳ್ಳೆತನವೇ ಅವರಿಗೆ ಮುಳುವಾಗಿದೆ. ಅವರು ಮೈ ಚಳಿ ಬಿಟ್ಟು ಕೊಡವಿ ನಿಂತಲ್ಲಿ ಈಗಲೂ ಏನಾದರೂ ಆಗಬಹುದು. ಆದರೆ ಅದು ಅವರ ಜಾಯಮಾನದಲ್ಲಿ ಬರೆದಿಲ್ಲ. ಕಾಲ ತಾನಾಗಿಯೇ ಇವರನ್ನು ಗುರುತಿಸಬೇಕು ಅಷ್ಟೇ.

ರಾಜಶೇಖರನ್‌ರೊಡನೆ ಒಡನಾಡುವಾಗ ಒಬ್ಬ ಹಿರಿಯ ರಾಜಕಾರಣಿ ಜೊತೆ ಇದ್ದೇವೆಂದು ಅನಿಸುವುದೇ ಇಲ್ಲ. ಅಷ್ಟು ಆತ್ಮೀಯ ಒಡನಾಟ ಅವರದು. ನಾನು ನಿಜಲಿಂಗಪ್ಪನವರ ದಿನಚರಿಯನ್ನು ಸಂಪಾದಿಸುತ್ತಿದ್ದಾಗ ಅಲ್ಲಿ ಬಂದಂತಹ ಅನೇಕ ಘಟನೆಗಳ ಬಗ್ಗೆ ಅವರ ವಿಶೇಷತೆಯನ್ನು ದಾಖಲಿಸುತ್ತಿದ್ದರು. ಜೊತೆಗೆ ಆ ಘಟನಾವಳಿಗೆ ಸಂಬಂಧಿಸಿದ ವ್ಯಕ್ತಿಗಳ ಬಗ್ಗೆ ತಮ್ಮ ವೈಯಕ್ತಿಕ ಅಭಿಪ್ರಾಯವನ್ನು ದಾಖಲಿಸುತ್ತಿದ್ದರು. ಅದರಲ್ಲಿ ಯಾವುದೇ ಮುಚ್ಚುಮರೆ ಇರುತ್ತಿರಲಿಲ್ಲ. ಆ ಸಂಬಂಧವಾಗಿ ರಾಜಶೇಖರನ್‌ರವರ ಅಭಿಪ್ರಾಯ ಕೇಳಿದಾಗ, ಅವರು ನಿಜಲಿಂಗಪ್ಪನವರು ಆ ರೀತಿ ಅಭಿಪ್ರಾಯ ಪಡಲು ಇದ್ದ ಕಾರಣವನ್ನು ವಿವರಿಸುತ್ತಿದ್ದರು. ಹೀಗೆ ಇತಿಹಾಸ ಬೆಳಕು ಕಾಣುತ್ತಿತ್ತು.

ಶ್ರೀ ನಿಜಲಿಂಗಪ್ಪನವರ ಶತಮಾನೋತ್ಸವ ಸಂದರ್ಭದಲ್ಲಿ ಅವರ ಪುತ್ಥಳಿಯನ್ನು ವಿಧಾನಸೌಧದ ಮುಂಭಾಗದಲ್ಲಿ ಸ್ಥಾಪಿಸಬೇಕೆಂದು ತೀರ್ಮಾನಿಸಲಾಯಿತು. ಪುತ್ಥಳಿ ಬಹಳ ಹಿಂದೆಯೇ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ತಯಾರಾಗಿ ಕುಳಿತಿತ್ತು. ನಿಜಲಿಂಗಪ್ಪನವರು ವಿದೇಶ ಪ್ರವಾಸದಲ್ಲಿದ್ದಾಗ, ದೆಹಲಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಾಗೂ ಮುಖ್ಯಮಂತ್ರಿಗಳಾಗಿದ್ದಾಗ ಕೆಲವೊಮ್ಮೆ ಪ್ಯಾಂಟು ಹಾಗೂ ಬಂದ್‌ಗಲಾ ಕೋಟು ಧರಿಸುತ್ತಿದ್ದರು. ಅದು ಬಿಟ್ಟರೆ ಅವರು ಕಚ್ಚೆ ಪಂಚೆ, ಜುಬ್ಬಾ ಹಾಗೂ ಶಾಲು ಹೊದ್ದುಕೊಳ್ಳುತ್ತಿದ್ದುದೇ ಹೆಚ್ಚು. ಹಾಗಾಗಿ ಕರ್ನಾಟಕದ ಜನ ಅವರನ್ನು ಆ ಉಡುಪಿನಲ್ಲೇ ಸಾಮಾನ್ಯವಾಗಿ ಗುರುತಿಸುತ್ತಾರೆ. ಚಿತ್ರಕಲಾ ಪರಿಷತ್ತಿನಲ್ಲಿದ್ದ ನಿಜಲಿಂಗಪ್ಪನವರ ಪುತ್ಥಳಿಯಲ್ಲಿ

ಪ್ಯಾಂಟು, ಬಂದ್‌ಗಲಾ ಕೋಟು ಇತ್ತು. ಇದು ನಿಜಲಿಂಗಪ್ಪನವರು ಎಂದು ಕೆಳಗೆ ಬರೆದಿದ್ದರೆ ಮಾತ್ರ ಅವರದೆಂದು ಗುರುತಿಸಬಹುದಿತ್ತು. ಹಾಗಾಗಿ ಇದನ್ನು ಕರ್ನಾಟಕದ ಜನತೆ ಒಪ್ಪುತ್ತಾರೆಯೇ? ಎಂಬ ಆತಂಕ ನಮಗಿತ್ತು. ನಾವು ರಾಜಶೇಖರನ್‌ರವರನ್ನು ಕರೆದುಕೊಂಡು ಹೋಗಿ ಪುತ್ಥಳಿ ತೋರಿಸಿದೆವು. ಅವರೂ ಆತಂಕಕ್ಕೊಳಗಾದರು. ಕೆಂಗಲ್‌ರವರ ಹಾಗೂ ದೇವರಾಜ್ ಅರಸ್‌ರವರ ಪುತ್ಥಳಿ ಬದಲಾವಣೆಗೆ ಜನ ಆಗ್ರಹಿಸಿದಂತೆ ಇದಕ್ಕೂ ಆಗ್ರಹಿಸಿದರೆ ಏನು ಮಾಡುವುದು ಎಂಬ ಚಿಂತೆಗೆ ಒಳಗಾದೆವು. ಪುತ್ಥಳಿಗೆ ನಿಜಲಿಂಗಪ್ಪನವರ ಮನೆಯುವರೆಲ್ಲರ ಒಪ್ಪಿಗೆ ದೊರೆತಿದೆ ಎಂದು ಚಿತ್ರಕಲಾ ಪರಿಷತ್ತಿನ ಕಾರ್ಯದರ್ಶಿ ಶ್ರೀ ನಂಜುಂಡರಾವ್ ತಿಳಿಸಿದಾಗ ನಾವೂ ಕೂಡ ಏನೂ ತೋಚದೆ ಸುಮ್ಮನಾದೆವು. ರಾಜಶೇಖರನ್‌ರವರ ಹಾಗೂ ನಿಜಲಿಂಗಪ್ಪನವರ ಕುಟುಂಬದ ಬೆಂಬಲ ನಮಗಿದ್ದುದರಿಂದ ನಿಜಲಿಂಗಪ್ಪನವರ ಪುತ್ಥಳಿಯು ಸ್ಥಾಪಿತವಾಯಿತು. ಅದರ ಬಗ್ಗೆ ಅಂತಹ ವಿರೋಧದ ಪ್ರತಿಕ್ರಿಯೆ ಬರಲಿಲ್ಲ.

ರಾಜಶೇಖರನ್ ಇಲ್ಲದಿದ್ದರೆ ನಿಜಲಿಂಗಪ್ಪನವರ ಶತಮಾನೋತ್ಸವಕ್ಕೆ ಉಪರಾಷ್ಟ್ರಪತಿ ಶ್ರೀ ಶೆಖಾವತ್‌ರವರಾಗಲಿ, ಖ್ಯಾತ ಪತ್ರಕರ್ತ ಶ್ರೀ ಕುಲದೀಪ್ ನಯ್ಯರ್‌ರವರಾಗಲಿ ಅತಿಥಿಗಳಾಗಿ ಬರುವುದು ಸಾಧ್ಯವಾಗುತ್ತಿರಲಿಲ್ಲವೇನೋ. ಶ್ರೀ ಶೆಖಾವತ್‌ರವರು ತಮ್ಮ ಭಾಷಣದಲ್ಲಿ ಈ ಮಾತನ್ನು ಮರೆಯದೆ ಹೇಳಿದರು. ಕುಲದೀಪ್ ನಯ್ಯರ್ ಕಾರ್ಯಕ್ರಮಕ್ಕೆ ಬಂದಿದ್ದು ಮಾತ್ರವಲ್ಲ, ಅವರು ನಿಜಲಿಂಗಪ್ಪನವರ ಡೈರಿಯ ಇಂಗ್ಲಿಷ್ ಅವತರಣಿಕೆಗೆ ಮುನ್ನುಡಿಯನ್ನೂ ಬರೆದುಕೊಟ್ಟರು. ನಿಜಲಿಂಗಪ್ಪನವರ ಅಭಿನಂದನ ಗ್ರಂಥಕ್ಕೆ ದೇಶದ ಖ್ಯಾತನಾಮರು ಲೇಖನ ಕಳುಹಿಸಿ ಕೊಟ್ಟುದುದಕ್ಕೆ ರಾಜಶೇಖರನ್‌ರವರೇ ಕಾರಣ. ದೆಹಲಿಯಲ್ಲಿದ್ದ ಗಣ್ಯರನ್ನು ಬಹಳ ಸುಲಭವಾಗಿ ಅವರು ಸಂಪರ್ಕಿಸುತ್ತಿದ್ದರು. ಪ್ರಾಯಶಃ ಅವರಷ್ಟು ಗಣ್ಯರ ಸಂಪರ್ಕ ಹೊಂದಿದ್ದವರು ಬೇರೆ ಯಾರಾದರೂ ಆಗಿದ್ದರೆ ಅದನ್ನು ಬಳಸಿಕೊಂಡು ದೊಡ್ಡ ಹುದ್ದೆಯನ್ನೇ ಪಡೆಯುತ್ತಿದ್ದರು. ಆದರೆ ರಾಜಶೇಖರನ್‌ರವರ ಜಾಯಮಾನ ಅದಲ್ಲ.

ನಿಜಲಿಂಗಪ್ಪನವರ ಶತಮಾನೋತ್ಸವ ಕಾರ್ಯಕ್ರಮವನ್ನು ಆಚರಿಸುವ ಜವಾಬ್ದಾರಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವಹಿಸಿಕೊಂಡಿತು. ಸಾಮಾನ್ಯವಾಗಿ ಸಾಹಿತಿ, ಕಲಾವಿದರ ಹೊರತಾಗಿ ರಾಜಕಾರಣಿಗಳ ಕಾರ್ಯಕ್ರಮ ಈ ಇಲಾಖೆಯ ವ್ಯಾಪ್ತಿಗೆ ಬರುವುದಿಲ್ಲ. ಆದರೆ ನಿಜಲಿಂಗಪ್ಪನವರು ಈ ರಾಜ್ಯಕ್ಕೆ ಸಲ್ಲಿಸಿದ ಸೇವೆಯನ್ನು ಮನಗಂಡು ಸರ್ಕಾರವೇ ಅವರಿಗೆ ಗೌರವ ತೋರಿಸಲು ಮುಂದಾಯಿತು. ಮಾನ್ಯ ಮುಖ್ಯಮಂತ್ರಿಗಳೂ ಇದಕ್ಕೆ ಒಪ್ಪಿದರು. ಮಾನ್ಯ ಅರಣ್ಯ ಸಚಿವರಾದ ಶ್ರೀ ರಂಗನಾಥ್‌ರವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಶತಮಾನೋತ್ಸವ ಸಮಿತಿ ರಚನೆಗೊಂಡಿತು. ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಅಭಿನಂದನ ಗ್ರಂಥಗಳು ಹಾಗೂ ದಿನಚರಿಗಳು, ಚಿತ್ರಸಂಪುಟ, ಸ್ಮರಣ ಸಂಚಿಕೆ ಹೊರಬಂತು. ಇದೇ ಸಂದರ್ಭದಲ್ಲಿ **ಕರ್ನಾಟಕ-ರಾಜಕೀಯ ಚಿಂತನೆ** ಎಂಬ ಸ್ವಾತಂತ್ರ್ಯೋತ್ತರ ಕರ್ನಾಟಕ

ರಾಜಕೀಯ ಪಕ್ಷಗಳ ಹಾಗೂ ರಾಜಕೀಯವನ್ನು ವಿಶ್ಲೇಷಿಸುವ ಬೃಹತ್ ಗ್ರಂಥ ಕೂಡ ಹೊರಬಂತು. ಇದೆಲ್ಲವೂ ಸಾಧ್ಯವಾಗಿಸಲು ರಾಜಶೇಖರನ್‌ರವರ ಶ್ರಮವೇ ಕಾರಣ. ಆದರೆ ಅವರು ಯಾವ ಸಂದರ್ಭದಲ್ಲೂ ಎದುರಿಗೆ ಕಾಣಿಸಿಕೊಳ್ಳಲಿಲ್ಲ. ಶತಮಾನೋತ್ಸವದ ಸಮಾರಂಭದಲ್ಲಿ ವೇದಿಕೆಯನ್ನೂ ಹತ್ತಲಿಲ್ಲ. ಜನ ಸಾಮಾನ್ಯರಂತೆ ಸಭೆಯಲ್ಲಿ ಕುಳಿತಿದ್ದರು. ಇವೆಲ್ಲವೂ ಅವರ ಮೇರು ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

ಇನ್ನೊಂದು ಘಟನೆ ಇಲ್ಲಿ ಉಲ್ಲೇಖನಾರ್ಹ, ಪ್ಲೇವಿನ್ ಲಾಟರಿ ಬಗ್ಗೆ ರಾಜಶೇಖರನ್‌ರವರಿಗೆ ಒಲವಿರಲಿಲ್ಲ. ಕರ್ನಾಟಕ ಸರ್ಕಾರದ ಈ ಕಾರ್ಯಕ್ರಮ ಜನರನ್ನು ನಾಶ ಮಾಡುತ್ತದೆ ಎಂದು ಬಲವಾಗಿ ನಂಬಿದ್ದರು. ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ಮಾನ್ಯ ಮುಖ್ಯಮಂತ್ರಿಗಳಿಗೆ ಪತ್ರ ಬರೆದರು. ಹೀಗೆ ಮಾಡುವುದು ರಾಜಕೀಯವಾಗಿ ಅವರಿಗೆ ತೊಡಕಾಗಬಹುದೆಂದು ಹೇಳಿದಾಗ ಕೂಡ ತಮ್ಮ ರಾಜಕೀಯ ಭವಿಷ್ಯದ ಬಗ್ಗೆ ಚಿಂತಿಸದೆ, ಮುಖ್ಯಮಂತ್ರಿಗಳ ಆತ್ಮೀಯ ಸ್ನೇಹಿತರಾಗಿದ್ದರೂ ಕೂಡ ಅವರಿಗೆ ಪತ್ರ ಬರೆದುದಲ್ಲದೆ, ಕಾಂಗ್ರೆಸ್ ಅಧ್ಯಕ್ಷರಿಗೂ ಈ ಬಗ್ಗೆ ಪತ್ರ ಬರೆದರು. ಈ ಘಟನೆ ರಾಜಶೇಖರನ್ ಮೆದು ವ್ಯಕ್ತಿತ್ವದ ಹಿಂದಿರುವ ದೃಢ ನಿರ್ಧಾರವನ್ನು ತೋರಿಸುತ್ತದೆ. ಅವರು ಮೌಲ್ಯಗಳನ್ನು ಮಾರಿಕೊಳ್ಳುವವರಲ್ಲ ಎಂಬುದು ಇದರಿಂದ ಗೊತ್ತಾಗುತ್ತದೆ.

ರಾಜಶೇಖರನ್‌ರವರು ಮೇಲ್ಮನೆಯ ಸಭಾಪತಿಯಾಗಲು, ರಾಜ್ಯಪಾಲರಾಗಲು ಬೇಕಾದ ವ್ಯಕ್ತಿತ್ವ ಹೊಂದಿದವರು. ಮಂತ್ರಿಗಳಾಗಿ ಉತ್ತಮವಾಗಿ ಕೆಲಸ ಮಾಡುವ ಶಕ್ತಿವಂತರಾಗಿದ್ದರೂ ಇಂದಿನ ವ್ಯವಸ್ಥೆಯಲ್ಲಿ ಅದು ಅವರಿಂದ ಕಷ್ಟವಾಗಬಹುದು. ಇಂತಹ ಉದಾತ್ತ ವ್ಯಕ್ತಿತ್ವದ ನಾಯಕನಿಗೆ ಅವರ ಜೀವನದ ಸಂಜೆ ಹೊತ್ತಿನಲ್ಲಾದರೂ ಉತ್ತಮ ಸ್ಥಾನಮಾನಗಳು ದೊರಕಲಿ ಎಂಬುದು ಅವರ ಅಭಿಮಾನಿಗಳೆಲ್ಲರ ಅಭಿಲಾಷೆ.

❊❊❊

# ಮೌಲ್ಯಾಧಾರಿತ ಪಾರದರ್ಶಕ ವ್ಯಕ್ತಿತ್ವ

**ಆರ್. ಅಶೋಕ**

ಎಂ.ವಿ.ರಾಜಶೇಖರನ್ ನನ್ನ ರಾಜಕೀಯ ಗುರುಗಳು. ಅವರ ಒಳ್ಳೆಯತನ, ಸಜ್ಜನಿಕೆ, ಸರಳತನಗಳು ನನ್ನ ಮೇಲೆ ತುಂಬಾ ಪ್ರಭಾವ ಬೀರಿರುವ ಅಂಶಗಳು. ೧೯೭೮ರಲ್ಲಿ ಉತ್ತರಹಳ್ಳಿ ವಿಧಾನಸಭೆಗೆ ಜನತಾಪಕ್ಷದಿಂದ ಸ್ಪರ್ಧಿಸಿದ್ದಾಗ ನಮ್ಮಿಬ್ಬರ ಪರಿಚಯವಾಯಿತು. ಅವರ ಸಂಘಟನೆ ಮತ್ತು ಜನಸೇವಾ ಮನೋಭಾವಗಳು ನನ್ನನ್ನು ಅವರತ್ತ ಆಕರ್ಷಿಸಿದವು. ನಾನು ಆಗ ಬೆಂಗಳೂರಿನ ವಿಶ್ವೇಶ್ವರಪುರಂ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದೆ. ತುಂಬಾ ಉತ್ಸಾಹದಿಂದ ಅವರಾಡುತ್ತಿದ್ದ ಮಾತು, ಅವರ ವಿಚಾರ ಮಂಡನದ ರೀತಿ ಮತ್ತು ಸಾಮಾಜಿಕ ಬಿಕ್ಕಟ್ಟುಗಳನ್ನು ಅತ್ಯಂತ ಸೂಕ್ಷ್ಮ ನೆಲೆಯಲ್ಲಿ ಬಿಡಿಸಿಕೊಂಡು ಸಾಮಾಜಿಕ ನ್ಯಾಯವನ್ನು ಅನುಸರಿಸುತ್ತಿದ್ದ ಸಂಗತಿಗಳು ನಮ್ಮ ಮೇಲೆ ದಟ್ಟವಾದ ಪ್ರಭಾವವನ್ನು ಉಂಟು ಮಾಡಿರುವುವು. ಭ್ರಷ್ಟಾಚಾರದಂತಹ ಸಾಮಾಜಿಕ ವಿಸಂಗತಿಗಳಿಂದ ಅವರು ಯೋಜನ-ಯೋಜನ ದೂರವೆಂದು ಘಂಟಾಘೋಷವಾಗಿ ನಾನು ಹೇಳಬಲ್ಲೆ. ಮೌಲ್ಯಾಧಾರಿತ ಬದುಕು ಅವರದ್ದು. ರಾಜಕೀಯವೆಂಬ ಪದಕ್ಕೆ ಪವಿತ್ರ ಅರ್ಥವನ್ನು ಉಳಿಸಿಕೊಂಡು ಬಂದಿರುವ ಅವರು ನಮ್ಮ ನಡುವಿನ ಬುದ್ಧಿಜೀವಿ ರಾಜಕಾರಣಿ. ಅವರ ಮಾತು ಮತ್ತು ಕೃತಿಗೆ ಅಂತರವೇ ಇಲ್ಲ. ಎರಡೂ ಒಂದೇ ಆಗಿರುವ ಅದ್ವೈತ ಭಾವ ಅವರದ್ದು. ಇಂತಹ ಪಾರದರ್ಶಕ ವ್ಯಕ್ತಿತ್ವದಿಂದಾಗಿ ಪಕ್ಷಾತೀತವಾಗಿ ಎಲ್ಲರಿಂದಲೂ ಮೆಚ್ಚುಗೆ ಗಳಿಸಿಕೊಂಡಿದ್ದಾರೆ ಎಂಬುದು ಸತ್ಯ.

ಎಂ.ವಿ.ರಾಜಶೇಖರನ್ ೧೯೬೭ರ ಸುಮಾರಿಗೆ ಎಂ.ಪಿ.ಯಾಗಿ ದೇಶದ ಗಮನವನ್ನು ಸೆಳೆದ ಸಂಸದೀಯ ಪಟುವಾಗಿದ್ದರು. ತಾವು ಸಂಸತ್ತಿನಲ್ಲಿ ಎಷ್ಟು ಚಟುವಟಿಕೆಯಿಂದ ಇರುತ್ತೇನೆ ಎಂಬುದಕ್ಕೆ ಅವರು ಮಾಡಿದ ಸಾಧನೆಯನ್ನು ಚಿಕ್ಕ ಬುಕ್‌ಲೆಟ್ ಮಾಡಿ ತಮ್ಮ ಕ್ಷೇತ್ರದ ಎಲ್ಲಾ ಜನಪ್ರತಿನಿಧಿಗಳಿಗೆ ಅದನ್ನು ಕಳಿಸುತ್ತಿದ್ದರು. ಅವರ ನಿಷ್ಠಾವಂತ ಮತ್ತು ಪ್ರಾಮಾಣಿಕ ವ್ಯಕ್ತಿತ್ವ ಇಷ್ಟು ಪಾರದರ್ಶಕವಾಗಿರುತ್ತಿತ್ತು. ಪ್ರಸ್ತುತ ನಾನು

ಉತ್ತರಹಳ್ಳಿ ವಿಧಾನಸಭೆಯನ್ನು ಎರಡನೆಯ ಬಾರಿಗೆ ಪ್ರತಿನಿಧಿಸುತ್ತಿದ್ದೇನೆ. ನನಗೆ ಒಂದು ರೀತಿಯ ಹೆಮ್ಮೆ ಮತ್ತು ಅಭಿಮಾನವಿದೆ. ಏಕೆಂದರೆ ಎಂ.ವಿ.ರಾಜಶೇಖರನ್ ಅವರು ೧೯೭೭ರಲ್ಲಿ ಇದೇ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ಉತ್ತರಹಳ್ಳಿ ಕರ್ನಾಟಕದಲ್ಲಿ ಮಾತ್ರವಲ್ಲ ಭಾರತದಲ್ಲೇ ಅತ್ಯಂತ ದೊಡ್ಡ ವಿಧಾನಸಭಾ ಕ್ಷೇತ್ರವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಂತಹ ಕ್ಷೇತ್ರದಿಂದ ಬಸವಲಿಂಗಪ್ಪನವರು, ವೈ.ರಾಮಕೃಷ್ಣ ಅವರು ಶ್ರೀ ಎಂ.ವಿ. ರಾಜಶೇಖರನ್ ಅವರುಗಳು ಆಯ್ಕೆಯಾಗಿ ಕ್ಷೇತ್ರದಲ್ಲಿ ಅಭಿವೃದ್ಧಿ ಕೆಲಸಗಳನ್ನು ಮಾಡಿ ಹೋಗಿದ್ದಾರೆ. ಅವರು ಹಾಕಿಕೊಟ್ಟ ಸತ್ಸಂಪ್ರದಾಯದಲ್ಲಿಯೇ ನಾನೂ ಮುಂದುವರಿಯುತ್ತಿದ್ದೇನೆ. ಇಷ್ಟೊಂದು ದೊಡ್ಡ ಕ್ಷೇತ್ರವನ್ನು ನಿಭಾಯಿಸುವುದೆಂದರೆ ಸಣ್ಣ ಕೆಲಸವೇನಲ್ಲ. ಮುತ್ಸದ್ದಿತನ, ರಾಜಕೀಯ ಬದ್ಧತೆ, ಚಿಕಿತ್ಸಕ ಬುದ್ಧಿ ಹಾಗೆಯೇ ವಿಲೋಮ - ಅನುಲೋಮಗಳ ಬಗೆಗೆ ತಾತ್ವಿಕ ದೃಷ್ಟಿಕೋನ ಬೇಕಾಗುವುದು. ಶ್ರೀ ಎಂ.ವಿ.ರಾಜಶೇಖರನ್ ಅವರ ಗರಡಿಯಲ್ಲಿ ಪಳಗಿದ ನನಗೆ ಎಂತಹ ಬಿಕ್ಕಟ್ಟುಗಳನ್ನೂ ಯಥೋಚಿತವಾಗಿ ನಿಭಾಯಿಸುವ ಸಾಮರ್ಥ್ಯ ಬಂದಿದೆ. ಇಂತಹ ಸಾಮಾಜಿಕ ನ್ಯಾಯದ ಪರಿಪಾಲನೆಯ ಪಾಠವನ್ನು ನನಗೆ ಹೇಳಿಕೊಟ್ಟವರೇ ಎಂ.ವಿ. ರಾಜಶೇಖರನ್ ಅವರು. ಒಟ್ಟಿನಲ್ಲಿ ಅವರು ನನಗೆ ಒಬ್ಬ ಸಮರ್ಥ ಮಾರ್ಗದರ್ಶಕ ರಾಗಿರುವರು. ಪಕ್ಷ ಯಾವುದಾದರೇನು ? ಜನಸೇವೆಗೆ ಪಕ್ಷ ಬೇಕಾಗುವುದಿಲ್ಲ ಎನ್ನುವ ಧೋರಣೆಯನ್ನು ನನ್ನಲ್ಲಿ ಹುಟ್ಟಿಹಾಕಿದ ಮಹನೀಯರು ಅವರಾಗಿದ್ದಾರೆ.

೧೯೭೭ರ ವಿಧಾನಸಭೆಯ ಚುನಾವಣೆಯಲ್ಲಿ ನಡೆದ ಒಂದು ಘಟನೆಯನ್ನು ತಮ್ಮ ಮುಂದಿಡುತ್ತೇನೆ. ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಸ್ಪರ್ಧಿಸಿದ್ದ ಶ್ರೀ ಎಂ.ವಿ.ರಾಜಶೇಖರನ್ ಸ್ವತಃ ತಾವೇ ಪ್ರಚಾರದ ಸಲುವಾಗಿ ಅತ್ತಿಂದಿತ್ತ ಓಡಾಡುತ್ತಿದ್ದರು. ನಾನಿನ್ನೂ ಆಗ ವಿದ್ಯಾರ್ಥಿ. ಯುವಕರ ಮೇಲೆ ಹೆಚ್ಚು ಭರವಸೆಯಿಟ್ಟಿದ್ದ ಅವರು ನನ್ನನ್ನು ಕರೆದು 'ಅಶೋಕ್ ತೆಗೆದುಕೊಳ್ಳಿ' ಎಂದು ನೂರು ರೂಪಾಯಿಯನ್ನು ನನ್ನ ಕೈಗಿಟ್ಟರು. ನಾನು 'ಇದೇತಕ್ಕೆ ಸಾರ್' ಎಂದು ಕೇಳಿದೆ. ನೀವು ಚುನಾವಣೆಯಂದು ಇಲ್ಲಿ ನೂರು ಬೂತ್‌ಗಳನ್ನು ನೋಡಿಕೊಳ್ಳಬೇಕು ಎಂದರು. ಕಾರ್ಯಕರ್ತರ ಸಾರಿಗೆ, ಟೀ, ಭತ್ಯ ವಗೈರೆ ನೋಡಿಕೊಳ್ಳಲು ಅದನ್ನು ಕೊಟ್ಟಿದ್ದರು. ನಾನು ಅವಾಕ್ಕಾದೆ. 'ಸರಿ ಬಿಡಿ ಸಾರ್! ನಾವು ನೋಡಿಕೊಳ್ಳುತ್ತೇವೆ' ಎಂದೆವು. ಚುನಾವಣೆಗೆ ಅವರಲ್ಲಿ ಕಾಸಿಲ್ಲದಿರುವುದು ನಮಗೂ ತಿಳಿದಿತ್ತು. ಅದಕ್ಕೂ ಮುನ್ನ ೧೯೬೭ರಲ್ಲಿ ಲೋಕಸಭೆಯ ಸದಸ್ಯರಾಗಿದ್ದ ಅವರು ಮನಸ್ಸು ಮಾಡಿದ್ದರೆ ಬೇಕಾದಷ್ಟು ಹಣ ಗಳಿಸಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ಶ್ರೀ ಎಸ್. ನಿಜಲಿಂಗಪ್ಪ ಅವರ ಮಗಳನ್ನು ಮದುವೆಯಾದರಷ್ಟೆ. ಶ್ರೀ ಎಸ್. ನಿಜಲಿಂಗಪ್ಪ ಅವರಿಂದ ಶ್ರೀ ಎಂ.ವಿ.ರಾಜಶೇಖರನ್ ಯಾವುದೇ ಉಪಯೋಗ ತೆಗೆದುಕೊಳ್ಳಲಿಲ್ಲ. ಕರ್ನಾಟಕದ ಜನತೆ ಅವರನ್ನು ಗುರುತಿಸಿ ಅವರಿಗೆ ರಾಜ್ಯದ ನೇತೃತ್ವವನ್ನು ನೀಡಲಿಲ್ಲ. ಇದರಿಂದಾಗಿ ಕರ್ನಾಟಕದ ರಾಜಕಾರಣ ಒಂದು ಮಹತ್ತರ ತಿರುವನ್ನು ಪಡೆದುಕೊಳ್ಳಲಿಲ್ಲವೇನೋ ಎನ್ನಿಸುತ್ತದೆ.

## ನಿಜಬಿಂಬ

ಶ್ರೀ ಎಂ.ವಿ.ರಾಜಶೇಖರನ್ ಅವರ ನಿಷ್ಠಾವಂತಿಕೆ ಮತ್ತು ನಿಸ್ವಾರ್ಥದ ಬದುಕು ಒಂದು ತೆರೆದಿಟ್ಟ ಪುಸ್ತಕವಾಗಿದೆ. ರಾಜಕೀಯದ ಆಳ-ವಿಸ್ತಾರಗಳನ್ನು ಬಲ್ಲ ಅವರು ಸಮಯೋಚಿತ ತೀರ್ಮಾನ ತೆಗೆದುಕೊಳ್ಳುವಲ್ಲಿ ಹಿಂದೇಟು ಹಾಕುತ್ತಾರೆ. ಸುತ್ತಮುತ್ತ ಅವಕಾಶವಾದಿಗಳೇ ಇರುವಾಗ ಇವರು ಸ್ವಚ್ಛ, ಶುಭ್ರ, ದಕ್ಷರಾಗಿದ್ದರೆ ಅವರಿಗೆ ರಾಜಕೀಯದ ನೆಲೆ ಸಿಗುವುದು ಕಷ್ಟ ಎಂಬುದು ನನ್ನ ಅನಿಸಿಕೆ. ಒಂದು ವೇಳೆ ಎಂ.ವಿ.ರಾಜಶೇಖರನ್ ಅವರಿಗೆ ಕರ್ನಾಟಕದ ನೇತೃತ್ವವನ್ನು ನೀಡಿದ್ದರೆ ಮತ್ತೊಬ್ಬ ಎಸ್.ನಿಜಲಿಂಗಪ್ಪನವರೇ ಆಗಿಬಿಡುತ್ತಿದ್ದರು. ಅವರಲ್ಲಿ ಎಲ್ಲಾ ಮುತ್ಸದ್ಧಿ ಗುಣಗಳೂ, ಅತ್ಯುತ್ತಮ ಅಂಶಗಳೂ ಇವೆ. ಉತ್ತರೋತ್ತರ ಅವರು ಕನ್ನಡ ನಾಡಿನ ಮುಖ್ಯಮಂತ್ರಿಗಳಾಗಲಿ. ಅಂತಹುದೇ ರಾಷ್ಟ್ರದ ಉನ್ನತ ಹುದ್ದೆಯನ್ನಲಂಕರಿಸಲಿ ಎಂದೆಲ್ಲಾ ದೇವರಲ್ಲಿ ಪ್ರಾರ್ಥಿಸಿಕೊಳ್ಳುವೆ. ಎಪ್ಪತ್ತೈದನೆಯ ವರ್ಷದ ಈ ಶುಭ ಸಂದರ್ಭದಲ್ಲಿ ಅವರ ಪರಿಪೂರ್ಣ ವ್ಯಕ್ತಿತ್ವಕ್ಕೆ ಪ್ರಣಾಮಗಳನ್ನು ಅರ್ಪಿಸುವೆ.

❊❊❊

# ಪ್ರಗತಿಪರ ಯೋಜನೆಗಳ ಕನಸುಗಾರ

ಡಾ। ಎಚ್. ಪುಟ್ಟದಾಸ್

ಸರಳ, ಸಜ್ಜನಿಕೆ, ಗತ್ತು-ಗಾಂಭೀರ್ಯರಹಿತ ಮುಗ್ಧ ಸ್ವಭಾವದ, ಪ್ರೀತಿ-ವಿಶ್ವಾಸದ ವ್ಯಕ್ತಿತ್ವವುಳ್ಳ ಶ್ರೀ ಎಂ.ವಿ. ರಾಜಶೇಖರನ್ ನನ್ನ ಸ್ನೇಹಿತರೆಂಬುದೇ ನನಗೆ ಹೆಮ್ಮೆ. ೧೯೬೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ಅವರು ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಭ್ಯರ್ಥಿ. ನಾನು ಸಾಹುಕಾರ್ ಚನ್ನಯ್ಯನವರ ನಾಯಕತ್ವದ ಜನತಾ ಪಕ್ಷದಿಂದ ವಿಧಾನಸಭಾ ಅಭ್ಯರ್ಥಿ. ಸ್ನೇಹಿತ ರಾಜಶೇಖರನ್ ಲೋಕಸಭೆಗೆ ಆಯ್ಕೆಯಾದರು. ನಾನು ವಿಧಾನಸಭೆಗೆ ಆಯ್ಕೆಯಾದೆ. ಅವರೊಂದಿಗೆ ನನಗೆಂದೂ ಭಿನ್ನಾಭಿಪ್ರಾಯ ವಾಗಲೀ, ಮನಸ್ತಾಪವಾಗಲೀ ಆದದ್ದಿಲ್ಲ. ಪಕ್ಷಗಳು ಬೇರೆಯಾದರೂ ವೈಯಕ್ತಿಕ ಸ್ನೇಹಕ್ಕೇ ಎಂದೂ ಚ್ಯುತಿ ಬರಲಿಲ್ಲ. ನಾನು ಶಾಸಕನಾಗಿ ಅವರು ಲೋಕಸಭಾ ಸದಸ್ಯರಾಗಿದ್ದಾಗ ನನ್ನ ಕ್ಷೇತ್ರದ ಎಲ್ಲಾ ಅಭಿವೃದ್ಧಿ ಕೆಲಸಗಳಲ್ಲಿ, ಯೋಜನೆಗಳ ಜಾರಿಯಲ್ಲಿ ಸಹಕರಿಸಿದ ಪುಣ್ಯಾತ್ಮರು ಅವರು.

೧೯೬೯ರಲ್ಲಿ ಕಾಂಗ್ರೆಸ್ ಪಕ್ಷದ ವಿಭಜನೆ ಆದಾಗ ಆಡಳಿತ ಕಾಂಗ್ರೆಸ್ ಪಕ್ಷದ ಸಂಗಡ ನಮ್ಮ ಜನತಾ ಪಕ್ಷದ ವಿಲೀನ ಆಯ್ತು. ಅವರು ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದರು. ಆದರೂ ನಮ್ಮಲ್ಲಿ ವೈಯಕ್ತಿಕ ಬಿನ್ನಾಭಿಪ್ರಾಯ ಎಂದೂ ಮೂಡಲೇ ಇಲ್ಲ.

ಅವರೊಬ್ಬ 'ಅಜಾತಶತ್ರು' ಪರಮ ಸ್ನೇಹಮಯಿ. ನನ್ನ ಸ್ನೇಹ ಅವರ ಜೊತೆ ಈ ಕಾರಣಕ್ಕಾಗಿಯೇ ಬೆಳೆಯಿತು. ಮುಂದಿನ ಲೋಕಸಭಾ ಚುನಾವಣೆಯಲ್ಲಿ ಕನಕಪುರದಿಂದ ಚಂದ್ರಶೇಖರಮೂರ್ತಿ ಕಾಂಗ್ರೆಸ್ ಪಕ್ಷದ ಅಭ್ಯರ್ಥಿ ಆದರು. ಕರಿಯಪ್ಪನವರು ರಾಜಶೇಖರನ್ ಅವರ ರಾಜಕೀಯ ಗುರುಗಳು. ಆದ್ದರಿಂದ ಅವರನ್ನು ಬೆಂಬಲಿಸಿದರು. ಅತೀ ಕಡಿಮೆ ಅಂತರದಲ್ಲಿ ರಾಜಶೇಖರನ್ ಸೋತರು. ಆಗ ನಾನು ಆಡಳಿತ ಕಾಂಗ್ರೆಸ್ ಪರ ಪ್ರಚಾರ ಮಾಡಿದೆ.

ರಾಜಶೇಖರನ್ ಕೊಂಚ ಮನಸ್ಸು ಮಾಡಿದ್ದರೂ ರಾಜಕೀಯವಾಗಿ ಕನಕಪುರದ ಅನಭಿಷಿಕ್ತ ದೊರೆಯಾಗಬಹುದಿತ್ತು. ಆ ತರಹದ ವ್ಯಕ್ತಿತ್ವ ಅವರದು.

ಆದರೆ ಅವರ ಮನೋಭಾವ ಕೆಲವೊಮ್ಮೆ,

Willing to wound

Afraid to strike ಎಂಬಂತಿರುತ್ತದೆ.

ಅವರ ನೇರ ಮಾತು, ಬಿಗಿ ಧೋರಣೆ, ಅನಗತ್ಯ ಹಸ್ತ ಕ್ಷೇಪಕ್ಕೆ ಒಪ್ಪದಿರುವುದು, ಸಾಮಾನ್ಯ ಮನುಷ್ಯರಿಗೆ ಕೆಲವೊಮ್ಮೆ ಸಹಾಯ ಮಾಡಲಾರರು ಎಂದು ನನಗೊಂದೊಂದು ಬಾರಿ ಅವರ ಬಗ್ಗೆ ಅನಿಸಿದ್ದುಂಟು. ನೋವಿನಲ್ಲಿರೋ ಮನುಷ್ಯ ತನ್ನ ರಾಜಕೀಯ ನಾಯಕರಿಂದ ತೀವ್ರ ಸ್ಪಂದನದ ಗುಣ ನಿರೀಕ್ಷಿಸುತ್ತಾರೆ. ಅವರಿಗೆ ಕಾನೂನಿನಲ್ಲಿಯೇ ಅವಕಾಶ, ಆಡಳಿತಾಂಗದ ಅಡೆ-ತಡೆ, ಸಂವಿಧಾನ ವಿರೋಧಿ ಎಂಬ ಮಾತು ಆ ಸಮಯದಲ್ಲಿ ಅರ್ಥ ಆಗುವುದಿಲ್ಲ. ಆದರೆ ರಾಜಶೇಖರನ್ ಜನಮಿಳಿತಕ್ಕಿಂತ "ಸಿಂಧುತ್ವ"ಗಳನ್ನೇ ಪ್ರಧಾನವಾಗಿ ಸ್ವೀಕರಿಸುತ್ತಾರೆ. ಸ್ವಲ್ಪ ಅವರ ಈ ನಿಲುವಿನಲ್ಲಿ ಸಡಿಲಿಕೆ ಇದ್ದಿದ್ದರೆ ಯಾರೂ ಕನಕಪುರದಲ್ಲಿ ಅಷ್ಟೇ ಅಲ್ಲ, ಇಡೀ ಬೆಂಗಳೂರು ಜಿಲ್ಲೆಯಲ್ಲಿ ಅವರನ್ನು ಎದುರಿಸುವ ರಾಜಕೀಯ ನಾಯಕರು ಇರುತ್ತಾ ಇರಲಿಲ್ಲ. ಅವರು ಏಕಸ್ವಾಮ್ಯದಿಂದ ಇರಬಹುದಾಗಿತ್ತು. ನಾನು ಮೊದಲೇ ಹೇಳಿದಂತೆ ಅವರೊಬ್ಬ ಸಭ್ಯ, ಸಜ್ಜನ, ಸುಸಂಸ್ಕೃತ ವ್ಯಕ್ತಿ.

ಅವರಲ್ಲಿ ಕೆಲವೊಂದು ಸಾರಿ, "ಸಹಾಯ ಮಾಡೋಕೆ ಇಷ್ಟ, ಕೈ ಹಾಕೋಕೆ ಕಷ್ಟ" ಎಂಬ ದ್ವಂದ್ವ ಭಾವನೆಗಳಿರುತ್ತಿದ್ದವು. ಅವರಲ್ಲಿ ಅಪಾರ ಒಳ್ಳೆಯ ಗುಣ ಇದೆ. ಅವರು ಈ ರಾಜ್ಯದ ಮುಖ್ಯಮಂತ್ರಿಯಾಗ ಬಹುದಿತ್ತು. ಕೆಪಿಸಿಸಿಯ ಅಧ್ಯಕ್ಷ ಪದವಿಯನ್ನೂ ನಿರಾಕರಿಸಿದ್ದರು.

ಮಂಚನಬೆಲೆ ಜಲ ಯೋಜನೆ ಅವರ ಪ್ರಯತ್ನ - ದೂರದೃಷ್ಟಿಯಿಂದಲೇ ಜಾರಿಯಾದದ್ದು. ಜನಸೇವೆ ಮಾಡಬೇಕು, ಆಡಳಿತದಲ್ಲಿ ಶಿಸ್ತು ತರಬೇಕು, ಪ್ರಗತಿಪರ ಯೋಜನೆ ಹಮ್ಮಿಕೊಳ್ಳಬೇಕು ಎಂಬುದು ಅವರ ಅದಮ್ಯ ಆಸೆ. ಆದರೆ ಜನತೆ ಈ ಗುಣವನ್ನು ಗುರುತಿಸಲಿಲ್ಲ. ಇವರು ಅತ್ಯುತ್ತಮ ಲೋಕಸಭಾ ಪ್ರತಿನಿಧಿಯಾಗಿ ತಮ್ಮ ಭಾಷಣಗಳ, ಒತ್ತಾಯಗಳ, ಸಲಹೆ-ಸೂಚನೆಗಳ ಬಗ್ಗೆ ನಿರಂತರ ಮಾಹಿತಿ ರವಾನೆ ಮಾಡುತ್ತಾ 'ಜನಸ್ಪಂದನ' ಕಂಡವರು.

ಅವರು ತಮಗೆ ಸರಿಹೋಗದಿದ್ದರೆ.... ಪೋಲಿಸ್ ಅಧಿಕಾರಿಗಳಿಗೆ, ಕಂದಾಯ ಅಧಿಕಾರಿಗಳಿಗೆ ಸಚಿವರಿಗೆ ತಮ್ಮ ಆಪ್ತ ಸಹಾಯಕನೊಬ್ಬನ ಮೂಲಕ 'ದಿಢೀರ್' ಪರಿಹಾರ ನೀಡುವ ಯೋಜನೆ ಹೊಂದಿದ್ದರೆ ಅವರನ್ನು ಮಣಿಸೋ ನಾಯಕ ಹುಟ್ಟುತ್ತಾ ಇರಲಿಲ್ಲ.

ಅವರೆಂದೂ ಜಾತಿ ಭೇದ, ಮಾಡಿದವರಲ್ಲ. ರಾಜಕೀಯ ನಾಯಕನಾದರೂ ಹಣಕಾಸಿನ ಮುಗ್ಗಟ್ಟಿನ ಜೀವನ ನಡೆಸಿದವರು. ಕೃಷಿಯನ್ನೇ ಕಾಯಕವಾಗಿ ನಂಬಿ ಆಚರಿಸಿದವರು. ಹಣ ಸಂಪಾದನೆ, ಭ್ರಷ್ಟಾಚಾರವನ್ನು ಅವರು ಕನಸಿನಲ್ಲೂ ಕಂಡವರಲ್ಲ! ಆದರೆ ಈಗಿನ "ನವ ನಾಗರೀಕತೆ" ಇದನ್ನು ಅರ್ಥ ಮಾಡಿಕೊಳ್ಳುತ್ತಿಲ್ಲ. ಆಡಂಬರದ, ಅದ್ದೂರಿಯ, ಹಣ ಗಳಿಸಿ

- ಖರ್ಚು ಮಾಡುವ ಧಾರಾಳತನ ಪ್ರದರ್ಶನ ಮಾಡುವ ಜನನಾಯಕರಿಗೆ ಜನರು ಇಂದು ಮಣೆ ಹಾಕುತ್ತಿದ್ದಾರೆ.

ಅವರ ಮಾವ ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಆ ಅಧಿಕಾರದ ದುರುಪಯೋಗ ಮಾಡಿಕೊಂಡವರಲ್ಲ. ಅವರಲ್ಲೆಂದೂ ಗರ್ವ ಸುಳಿಯಲೇ ಇಲ್ಲ. ಅವರ ಮಾವನವರನ್ನೂ ತಮ್ಮ ಅಧಿಕಾರ ಅಂತಸ್ತಿನ ಗ್ರಹಣಕ್ಕೆ ಬಳಸಲೇ ಇಲ್ಲ.

ಅವರೆಂದೂ ಸ್ನೇಹಜೀವಿ. ಅವರ ನಿಲುವೆಂದೂ ಪಕ್ಷಾತೀತ ನಿಲುವು. ಜಾತ್ಯತೀತ ವರ್ತನೆ. ಈಗಿನ ಅಸಂಬಂಧ್ಧ ನಾಯಕತ್ವದಲ್ಲಿ ಇಂಥವರು ಆಶಾಕಿರಣವಾಗಿ ಕಾಣುತ್ತಾರೆ. "ಮದಗಜಕ್ಕೆ ಅಂಕುಶವೇ ಅಸ್ತ್ರ"ವೆಂಬಂತೆ ಅಲ್ಲೊಬ್ಬ ಇಲ್ಲೊಬ್ಬ ಇಂತಹ ನಾಯಕರಿರೋದ್ರಿಂದಲೇ ಸ್ವಲ್ಪವಾದರೂ ಭಯ-ಭಕ್ತಿ ಇದೆ. ಈಗಿನ ಸ್ಥಿತಿ ಎಂದರೆ ರಾಜಕೀಯದಲ್ಲಿರೋರೆಲ್ಲ ಅಯೋಗ್ಯರು! ಅಂತಹ ವಿಚಿತ್ರ ಸಮಾಜ ವ್ಯವಸ್ಥೆಯಲ್ಲಿ ನಾವಿದ್ದೀವಿ. ಆದರೆ ಇಂತಹವರು ಅದಕ್ಕೆ ಅಪವಾದ. ಈಗ ಅವರ ಅಭಿನಂದನ ಸಮಾರಂಭವಿಟ್ಟುಕೊಳ್ಳುವುದು ಅತ್ಯಂತ ಪ್ರಸ್ತುತ. ಇಂತಹ ಮುತ್ಸದ್ದಿಗಳನ್ನು ಗೌರವಿಸಬೇಕು - ಗುರುತಿಸಬೇಕು, ಅಷ್ಟೆ ಅಲ್ಲ ನಾವೆಲ್ಲ ಅವರ ಜತೆ ಗುರ್ತಿಸಿಕೊಳ್ಳಬೇಕು.

❊❊❊

# ನೈತಿಕತೆಯ ಸಾಕಾರ ಮೂರ್ತಿ

ಗಂಗಾಧರ ರು. ಗುರುಮಠ

ನನ್ನ ಸ್ನೇಹಿತರೊಬ್ಬರು ಶಾಂತಕುಮಾರ ದೇಸಾಯಿಯವರ ಕೊಠಡಿಯಲ್ಲಿ ಶ್ರೀಯುತ ಎಂ.ವಿ.ರಾಜಶೇಖರನ್ (ಎಂ.ವಿ.ಆರ್.)ರವರನ್ನು ವಿಧಾನಸೌಧದಲ್ಲಿ ಸುಮಾರು ನಾಲ್ಕು ವರ್ಷಗಳ ಹಿಂದೆ ಪರಿಚಯಿಸಿದ್ದರು. ಅವರನ್ನೊಳಗೊಂಡು ಇತರೇ ೧೦ ಜನ ಎಂ.ಎಲ್.ಸಿ.ಗಳ ಚುನಾವಣೆಯ ಕ್ರಮಬದ್ಧತೆಯನ್ನು ಉಚ್ಚ ನ್ಯಾಯಾಲಯದಲ್ಲಿ ವಾಟಾಳ್ ನಾಗರಾಜ್ ರವರು ಪ್ರಶ್ನಿಸಿದ್ದರು. ಆ ಕೇಸಿನ ವಿಚಾರವಾಗಿ ಅಲ್ಪ ಸ್ವಲ್ಪ ವಿಚಾರ ವಿನಿಮಯ ನನ್ನ ಮತ್ತು ಎಂ.ವಿ.ಆರ್.ರವರ ನಂತರದ ಕೆಲವು ಭೇಟಿಗಳಲ್ಲಿ ಆಗಿದ್ದಷ್ಟೇ.

ಇಂತಹ ಒಂದು ಭೇಟಿಯಲ್ಲಿ ಅವರೊಮ್ಮೆ ಅವರ ಆಸ್ತಿಯ ಖಾತಾ ಬದಲಾವಣೆ ಬಗ್ಗೆ ಪ್ರಸ್ತಾಪಿಸಿ, ನೋಂದಾಯಿತ ಖರೀದಿ ಪತ್ರವಿದ್ದಾಗ್ಯೂ ಮಹಾನಗರ ಪಾಲಿಕೆಯವರು ಖಾತಾ ಬದಲಾವಣೆ ಮಾಡಿಕೊಡುತ್ತಿಲ್ಲ. ೬ ಲಕ್ಷ ರೂ. ಅಭಿವೃದ್ಧಿ ಶುಲ್ಕ ಕೇಳುತ್ತಾರೆ. ಕಾನೂನಿನ ಕ್ರಮವೇನಾದರೂ ಇದ್ದರೆ ತಿಳಿಸಿ ಎಂದು ಕೇಳಿದಾಗ ನನಗೆ ಬಹಳ ಆಶ್ಚರ್ಯವಾಯಿತು. ಏಕೆಂದರೆ, ರಾಜಕಾರಣಿಗಳು ಅದರಲ್ಲೂ ಅಧಿಕಾರ ಸ್ಥಾನ ಹೊಂದಿರುವವರು ಪ್ರಚಲಿತ ವ್ಯವಸ್ಥೆಯಲ್ಲಿ ತಮಗೆ ಅನುಕೂಲವಾಗುವ ಯಾವುದೇ ಕೆಲಸವನ್ನು ತಮಗೆ ಹೇಗೆ ಬೇಕೋ ಹಾಗೆ ಮಾಡಿಸಿಕೊಳ್ಳುವುದನ್ನು ನನ್ನ ವೃತ್ತಿ ಜೀವನದಲ್ಲಿ ಅನೇಕ ಸಲ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದೇನೆ. ಇಂತಹ ಸನ್ನಿವೇಶದಲ್ಲಿ ಖಾತಾ ಬದಲಾವಣೆಯಂತಹ ಚಿಕ್ಕ ವಿಷಯ ಅದೂ ಅವರ ಪಕ್ಷದ್ದೇ ಸರ್ಕಾರವಿರುವಾಗ ದೂರವಾಣಿಯ ಮುಖಾಂತರ ಮಾಡಬಹುದಲ್ಲ. ಆದರೆ ಇವರೇಕೆ ಕಾನೂನಿನ ಕ್ರಮದ ಬಗ್ಗೆ ಮಾತನಾಡುತ್ತಾರೆ.

ಆಗ ನಾನು ಎಂ.ವಿ.ಆರ್.ರವರನ್ನು ಸ್ವಲ್ಪ ಕುತೂಹಲದಿಂದ ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡಿದೆ. ಪರಿಣಾಮವಾಗಿ ವರ್ತಮಾನದ ರಾಜಕೀಯ ಪರಿಸ್ಥಿತಿಯಲ್ಲಿ ಎಂ.ವಿ.ಆರ್. ತರಹದ ವ್ಯಕ್ತಿಯ ಇರುವಿಕೆಯೇ ದಿಗ್ಭ್ರಮೆ ಮೂಡಿಸತೊಡಗಿತು.

ರಾಜಕಾರಣಿಗಳು ಶೂನ್ಯದಿಂದ ಸರ್ವಶಕ್ತತೆಯನ್ನು ಪಡೆಯುತ್ತಿರುವ ಈ ದಿನಗಳಲ್ಲಿ ಚಿಕ್ಕ ವಯಸ್ಸಿನಲ್ಲೇ ಸಂಸತ್ಸದಸ್ಯತ್ವ, ದಿ। ಇಂದಿರಾಗಾಂಧಿಯವರ ಜೊತೆ ಒಡನಾಟ, ರಾಷ್ಟ್ರ ರಾಜಕಾರಣದ ದಿಕ್ಕನ್ನೇ ಬದಲಿಸುವಷ್ಟು ಶಕ್ತಿಶಾಲಿಯಾದದ್ದು. ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳ ಅಳಿಯತನದ ಪರ್ವತಾಕಾರ ಹಿನ್ನೆಲೆ, ಅವರ ಆಪ್ತ ಸ್ನೇಹಿತರು, ಇತರೇ ರಾಜ್ಯಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಮುಖ್ಯಮಂತ್ರಿಗಳಾಗಿರುವ ಪರಿಸ್ಥಿತಿ ಇದೆ, ಅಲ್ಲದೆ ಅವರು ಇಚ್ಛಿಸಿದ್ದರೆ ಎಂದೋ ಮತ್ತು ಇಂದೂ ಕರ್ನಾಟಕದ ಮುಖ್ಯಮಂತ್ರಿಗಳಾಗಬಹುದಾದ ಸಾಧ್ಯತೆ ಇರುವಂತಹ ಎಂ.ವಿ.ಆರ್.ರವರು ತಮ್ಮದೇ ಸಂಸ್ಥೆಯ ಖಾತಾ ಬದಲಾವಣೆಯನ್ನು ಮಾಡಿಸಿಕೊಳ್ಳಲಾರದಷ್ಟು ಅಸಮರ್ಥರೇ ಅಥವಾ ತಮ್ಮ ರಾಜಕೀಯ ಪ್ರಭಾವವನ್ನು ತಮ್ಮ ಸ್ವಂತ ಕೆಲಸಕ್ಕೆ ಉಪಯೋಗಿಸಬಾರದೆಂಬ ಉತ್ಕೃಷ್ಟ ರಾಜಕೀಯ ಸಜ್ಜನಿಕೆಯೇ ಎಂದು ವಿಮರ್ಶಿಸಿದಾಗ - ಎಲ್ಲವೂ ಕಾನೂನಿನ ಪ್ರಕಾರವೇ ನಡೆಯಲಿ ಎಂಬ ಎಂ.ವಿ.ಆರ್.ರವರ ವಿಚಾರಧಾರೆ ಅವರ ಬಗ್ಗೆ ನನಗೆ ಹೇಳತೀರದ ಗೌರವಾದರಗಳನ್ನು ಮೂಡಿಸಿದೆ. ಅವರೊಬ್ಬ ವಿಶಿಷ್ಟ ಆದರ್ಶ ಪುರುಷರು. ವಿಷ ವರ್ತುಲವಾಗಿರುವ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಯಲ್ಲಿ ಅವರ ಜೀವನ ಹಾಗೂ ವಿಚಾರಗಳು ಕೆಲವಾದರೂ ಯುವಪೀಳಿಗೆಯ ರಾಜಕಾರಣಿಗಳಿಗೆ ಮಾದರಿಯಾದರೆ ಒಳ್ಳೆಯದು.

ನನ್ನ ಈ ನಿರ್ಧಾರಕ್ಕೆ ಪೂರಕ ಮತ್ತು ಆಧಾರವಾಗಿ ಸಮಸ್ಯೆಯ ಸಂಗತಿಗಳ ಸ್ಥೂಲ ವಿವರಗಳನ್ನು ಓದುಗರಿಗೆ ವಿವರಿಸುತ್ತೇನೆ.

"ಏಷ್ಯಾ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್" ಎಂಬ ಸರ್ಕಾರೇತರ ಸೇವಾ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿರುವ ಎಂ.ವಿ.ಆರ್.ರವರು ೧೯೯೨ನೇ ಇಸವಿಯಲ್ಲಿ ಸಂಸ್ಥೆಗೆ ರಿಜಿಸ್ಟರ್ ಪತ್ರದ ಮೂಲಕ ಆಸ್ತಿಯೊಂದನ್ನು ಖರೀದಿಸಿ ಅದರ ಖಾತಾ ಬದಲಾವಣೆಗೆ ಬೆಂಗಳೂರು ಮಹಾನಗರ ಪಾಲಿಕೆಗೆ ಅರ್ಜಿಯೊಂದನ್ನು ಸಂಸ್ಥೆಯ ಮೂಲಕ ಸಲ್ಲಿಸಿದಾಗ ಪಾಲಿಕೆಯು ಸಂಸ್ಥೆಯಿಂದ ಆರು ಲಕ್ಷ ರೂ.ಗಳ ಅಭಿವೃದ್ಧಿ ಶುಲ್ಕ ಕಟ್ಟುವಂತೆ ಸೂಚಿಸಿರುತ್ತದೆ.

ಇದರ ಬಗ್ಗೆ ನನ್ನನ್ನು ಕಾನೂನು ಸಲಹೆ ಕೇಳಲಾಗಿ, ಖಾತಾ ಬದಲಾವಣೆಗೆ ಅಭಿವೃದ್ಧಿ ಶುಲ್ಕ ನೀಡುವಂತೆ ಪಾಲಿಕೆ ಕೇಳುವುದು ಕಾನೂನು ಬಾಹಿರ. ಪಾಲಿಕೆಯು ಖಾತಾ ಬದಲಾವಣೆ ಮಾಡಿಕೊಡುವ ಕರ್ತವ್ಯ ಕಡ್ಡಾಯವಾಗಿ ನಿರ್ವಹಿಸಲೇಬೇಕು. ಆದರೂ ಆಯುಕ್ತರನ್ನೊಮ್ಮೆ ಕಂಡು ವಿಷಯ ವಿವರಿಸುವುದಾಗಿ ಒಪ್ಪಿಕೊಂಡು ಅಂದಿನ ಆಯುಕ್ತರಾದ ಅಶೋಕ ದಳವಾಯಿ ಅವರನ್ನು ಅವರ ಸ್ನೇಹಿತರಾದ ಶ್ರೀ ಶಾಂತಕುಮಾರ ದೇಸಾಯಿಯವರ ಜೊತೆಗೆ ಬಹಳ ಪ್ರಯಾಸದಿಂದ ಕಂಡಾಗ, ಕಂತುಗಳಲ್ಲಿ ಆರು ಲಕ್ಷ ರೂ. ಕಟ್ಟುವಂತೆ ಮಾಡಬಹುದೆಂಬ ಸೂಚನೆ ಬಂತು.

ಈ ವಿಷಯವನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಕ್ರ.ಸಂ. ೨೩೨೯೧ ಮತ್ತು ೨೩೯೧೬೯೦೨ರ ಮೂಲಕ ಪ್ರಶ್ನಿಸಿದಾಗ ತಾರೀಖು

೧೨-೧೨-೨೦೦೨ ತೀರ್ಪಿನ ಪ್ರಕಾರ ಯಾವ ಹಣವನ್ನೂ ಕೇಳದಂತೆ ಖಾತಾ ಬದಲಾವಣೆ ಮಾಡಿಕೊಡಲು ಉಚ್ಚನ್ಯಾಯಾಲಯ ಪಾಲಿಕೆಗೆ ನಿರ್ದೇಶನ ನೀಡಿತು.

ಪಾಲಿಕೆಯ ಅಧಿಕಾರಿಗಳು ಎ.ಪಿ.ಆರ್.ಡಿ. ಸಂಸ್ಥೆಯು ಸಾರ್ವಜನಿಕ ರಸ್ತೆಗಳನ್ನು ಒತ್ತುವರಿ ಮಾಡಿಕೊಂಡಿದೆ. ಆದ್ದರಿಂದ ನೋಂದಾಯಿತ ಖರೀದಿ ಪತ್ರದಲ್ಲಿ ಕಾಣಿಸಿದ್ದಕ್ಕಿಂತ ಕಡಿಮೆ ಅಳತೆಗಳಿಗೆ ಖಾತೆ ಮಾಡಿಕೊಡಲು ಪರವಾನಗಿ ಕೊಡುವಂತೆ ಉಚ್ಚ ನ್ಯಾಯಾಲಯಕ್ಕೆ ತಾರೀಖು ೧೮-೪-೨೦೦೩ರಂದು ಅರ್ಜಿಯೊಂದನ್ನು ಸಲ್ಲಿಸಿದ್ದರು. ಈ ಅರ್ಜಿಯನ್ನು ಪಾಲಿಕೆಯು ಸಂಸ್ಥೆಗೆ ಕೇಸನ್ನು ವಿಳಂಬ ಮಾಡುವ ಉದ್ದೇಶದಿಂದ ಸಲ್ಲಿಸಿದ್ದು ಎಂದು ತಾರೀಖು ೧-೯-೨೦೦೩ರಂದು ಉಚ್ಚ ನ್ಯಾಯಾಲಯವು ತೀರ್ಪು ನೀಡಿರುತ್ತದೆ. ಆ ತೀರ್ಪು ಐ.ಎಲ್.ಆರ್. ೨೦೦೩ ಕರ್ನಾಟಕ ೨೩೮೫ ಎಂಬ ಲಾ ಜರ್ನಲ್‌ನಲ್ಲಿ ರಿಪೋರ್ಟ್ ಕೂಡ ಆಗಿದೆ.

ಆದಾಗಿ ಇಷ್ಟು ದಿನಗಳೇ ಗತಿಸಿದರೂ ಒಂದು ಲಕ್ಷ ರೂ. ಲಂಚ ಕೊಡಲಿಲ್ಲ ಎಂಬ ಒಂದೇ ಕಾರಣಕ್ಕಾಗಿ ನಗರ ಪಾಲಿಕೆಯಿಂದ ಖಾತಾ ಬದಲಾವಣೆ ಇನ್ನೂ ಆಗಿಲ್ಲ. ಆದ್ದರಿಂದ ಆಸ್ತಿಯ ಅಭಿವೃದ್ಧಿಯೂ ಸಂಪೂರ್ಣ ಸ್ಥಗಿತಗೊಂಡಿದೆ.

ಇಂದಿನ ರಾಜಕೀಯ ಹಾಗೂ ಸಾರ್ವಜನಿಕ ಜೀವನದ ಚಿಂತನೆಗಳ ಪರಿಭಾಷೆಯಲ್ಲಿ ಎಂ.ವಿ.ಆರ್.ರವರು ಅತ್ಯಂತ ಪ್ರಭಾವೀ ವ್ಯಕ್ತಿ. ಅಂತಹವರಿಗೇ ಉಚ್ಚ ನ್ಯಾಯಾಲಯದ ಆದೇಶವಿದ್ದಾಗ್ಯೂ ಸಹಾಯ ಮಾಡಲಾರದಷ್ಟು ಜಿಡ್ಡುಗಟ್ಟಿರುವ ಸಾರ್ವಜನಿಕ ಆಡಳಿತ ವ್ಯವಸ್ಥೆ ಎಂ.ವಿ.ಆರ್.ರವರ ಪ್ರಭಾವದ ಮೇಲೆ ಬೀರಿರುವ ಕ್ರೂರ ವ್ಯಂಗ್ಯವೆನಿಸುತ್ತದೆ. ಹಾಗೆಯೇ ಜನ ಸಾಮಾನ್ಯನ ಮಟ್ಟಿಗೆ ಘೋರ ದುರಂತವೆನಿಸುತ್ತದೆ.

೫೦ರ ದಶಕದಲ್ಲಿ ಭಾರತಕ್ಕೆ ಅಮೆರಿಕಾದ ರಾಯಭಾರಿಯಾಗಿದ್ದ ಪ್ರೊ। ಗಾಲಬ್ರೈಲ್‌ರವರ ಅಂದಿನ ಭಾರತದ ರಾಜಕೀಯ ಪರಿಸ್ಥಿತಿಯನ್ನು ಕಾರ್ಯನಿರ್ವಹಿಸುವ ಅರಾಜಕತೆ (ಫಂಕ್ಷನಿಂಗ್ ಅನರ್ಕಿ) ಎಂದು ಕರೆದಿದ್ದರು. ದುರ್ದೈವ ವಶಾತ್ ಆದಾಗಿ ೫೦ ವರ್ಷಗಳ ನಂತರವೂ ಅರಾಜಕತೆಯಿಂದ ವಿಭಿನ್ನ ಪರಿಸ್ಥಿತಿ ಉಂಟಾಗಿದೆ ಎಂದು ಧೈರ್ಯವಾಗಿ ಹೇಳಲಾರವೇನೋ ಎನಿಸುತ್ತದೆ.

ಇಂತಹ ದುರಂತಮಯ ರಾಜಕೀಯ ಸನ್ನಿವೇಶದಲ್ಲಿ ಎಂ.ವಿ.ಆರ್.ರವರು ಭಾರತದ ರಾಜಕೀಯ ದಿಗಂತದಲ್ಲಿ ಮಿಂಚಿ ಮಾಯವಾಗುವ ನಕ್ಷತ್ರವಾಗದೇ ಧ್ರುವ ತಾರೆಯಾಗಲಿ ಎಂದು ಆಶಿಸೋಣ.

***

# ರೇಷ್ಮೆ ಉದ್ಯಮದೊಂದಿಗೆ ನಂಟು

ಡಾ। ಶಂಕರ ಬ.ದಂಡಿನ

ರೇಷ್ಮೆ ಭಾರತ ದೇಶದ ಸಂಸ್ಕೃತಿಯಲ್ಲಿ ಹೇಗೆ ಸ್ಥಾನ ಹೊಂದಿದೆಯೋ ಅದೇ ಸ್ಥಾನವನ್ನು ಎಂ.ವಿ.ರಾಜಶೇಖರನ್‌ರವರು ರೇಷ್ಮೆ ಉದ್ಯಮದ ಜೊತೆಗೆ ಹೊಂದಿರುವವರು. ಕನಕಪುರ ತಾಲ್ಲೂಕಿನ ಮರಳವಾಡಿ, ಹಾರೋಹಳ್ಳಿ ಹಾಗೂ ಇಂದಿನ ತಮಿಳುನಾಡಿನಲ್ಲಿರುವ ಥಳಿ ಗ್ರಾಮಗಳಿಗೆ ಸಂಬಂಧ ಕಲ್ಪಿಸುವ ಆಯಕಟ್ಟಿನ ಸ್ಥಳವಾಗಿದ್ದು ಇದರ ಸುತ್ತಲೂ ಬಹಳಷ್ಟು ಜನ ರೈತರು ರೇಷ್ಮೆ ಬೆಳೆಯನ್ನು ತಮ್ಮ ಜೀವನಾಧಾರಕ್ಕೆ ಅವಲಂಬಿಸಿರುವರು. ಇಂತಹ ರೇಷ್ಮೆ ಪರಿಸರದ ಕೃಷಿ ಕುಟುಂಬದಲ್ಲಿ ಜನಿಸಿದ ಶ್ರೀ ರಾಜಶೇಖರನ್‌ರವರಿಗೆ ರೇಷ್ಮೆಯ ಜೊತೆಗೆ ನಂಟು ಸಹಜವಾಗಿ ಬಂದು ಅವರನ್ನು ಜೀವನದುದ್ದಕ್ಕೂ ಬಿಡದೆ ಬಿಗಿಯಾಗಿ ಬಂಧಿಸಿದೆ. ಈ ಸಂಬಂಧ ರಾಜಶೇಖರನ್‌ರವರನ್ನು ಇಂದಿನ ಏಶಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ಕೃಷಿ ವಿಷಯಗಳಲ್ಲದೆ ರೇಷ್ಮೆ ಅಭಿವೃದ್ಧಿ ಸಾಧಿಸಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಸದಾ ರೇಷ್ಮೆ ಉದ್ಯಮದ ಹಲವಾರು ಕ್ಷೇತ್ರಗಳ ಅಭಿವೃದ್ಧಿಗೆ ಚಿಂತನೆ ನಡೆಸಿರುವರು.

ನನಗೆ ರಾಜಶೇಖರನ್‌ರವರ ಪರಿಚಯದ ಸೌಭಾಗ್ಯ ಒದಗಿ ಬಂದಿದ್ದು ೧೯೮೫ನೇ ವರ್ಷ, ಒಂದು ರೇಷ್ಮೆ ವಿಷಯದ ಮೇಲೆ ನಡೆದ ಸಭೆಯಲ್ಲಿ. ಅಂದು ಮಳೆ ಆಶ್ರಿ ತ ಪ್ರದೇಶದಲ್ಲಿ ಹಿಪ್ಪುನೇರಳೆ ಬೇಸಾಯದ ಮೇಲೆ ನನಗೆ ಮಾತನಾಡಲು ಅವಕಾಶ ಸಿಕ್ಕಿತು. ನನ್ನ ಮಾತುಗಳು ಮುಗಿದ ನಂತರ ಅವರು ನನಗೆ ನೇರವಾದ ಒಂದು ಪ್ರಶ್ನೆ ಕೇಳಿದರು. ಅದೇನೆಂದರೆ ನೀರಾವರಿ ಅನುಕೂಲತೆ ಹೊಂದಿದ ತೋಟಗಳಲ್ಲಿ ಬರುವಂತೆ ಹಿಪ್ಪುನೇರಳೆ ಇಳುವರಿಯನ್ನು, ಮಳೆಯಾಶ್ರಯದಲ್ಲಿ ಪಡೆಯಬೇಕಾದರೆ ಅನುಸರಿಸಬೇಕಾದ ಕ್ರಮಗಳ ಬಗ್ಗೆ ನೀವೇನಾದರೂ ಸಂಶೋಧನೆ ನಡೆಸಿದ್ದೀರಾ? ಈ ಪ್ರಶ್ನೆ ಆ ಸಂದರ್ಭದಲ್ಲಿ ನನ್ನನ್ನು ತಬ್ಬಿಬ್ಬಾಗಿಸಿತು. ಆದರೆ ಮುಂದೆ ನಾನು ಚಾಮರಾಜನಗರದ ಮಳೆ ಆಶ್ರಿತ ರೇಷ್ಮೆ ಸಂಶೋಧನಾ ಕೇಂದ್ರಕ್ಕೆ ಹೆಚ್ಚುವರಿ ಜಂಟಿ ನಿರ್ದೇಶಕನಾಗಿ ಅಧಿಕಾರ ವಹಿಸಿಕೊಂಡಾಗ ಈ ಸಮಸ್ಯೆಯ ಆಳದ ಅರಿವುಂಟಾಯಿತು. ಈ ಪ್ರಸಂಗವನ್ನು ಜ್ಞಾಪಿಸಿಕೊಳ್ಳುವ ಉದ್ದೇಶ

ರಾಜಶೇಖರನ್‌ರವರ ವಿಷಯದ ಆಳ ಮತ್ತು ಸಮಸ್ಯೆಯ ಬಗ್ಗೆ ಇವರ ಕಾಳಜಿ. ಅಂದಿನಿಂದ ಅವರ ಮಾರ್ಗದರ್ಶನ, ಚರ್ಚೆ ಮತ್ತು ಅವರ ವಿಚಾರಗಳು ನನ್ನನ್ನು ಅವರಿಗೆ ತೀರ ಹತ್ತಿರ ಕರೆದೊಯ್ದವು. ಅವರ ಬಗ್ಗೆ ನಾನು ಚಿಂತಿಸಿದಾಗ ಇನ್ನೊಂದು ಮಹತ್ತರ ಘಟನೆಯನ್ನು ಹೇಳದೆ ಇರಲಿಕ್ಕಾಗದು. ೧೯೮೯ರಲ್ಲಿ ನಾನು ಕರ್ನಾಟಕ ರಾಜ್ಯ ರೇಷ್ಮೆ ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರ, ಇಲ್ಲಿಯ ನಿರ್ದೇಶಕರ ಹುದ್ದೆಗೆ ಅಭ್ಯರ್ಥಿಯಾಗಿದ್ದಾಗ ಅಂದಿನ ಆ ಸಂಸ್ಥೆಯ ಆಡಳಿತ ಮಂಡಳಿಯ ಅಧ್ಯಕ್ಷರು ಹಾಗೂ ಇಂದಿನ ಕರ್ನಾಟಕ ಸರಕಾರದ ಮುಖ್ಯ ಕಾರ್ಯದರ್ಶಿಯಾಗಿರುವ ಬಿ.ಎಸ್.ಪಾಟೀಲರನ್ನು ಕಾಣಲು ತಿಳಿಸಿದರು. ಇದರ ಉದ್ದೇಶ ಸಂದರ್ಶನದ ದಿನ ನನಗೆ ನಿಗದಿಪಡಿಸಿದ ವಯೋಮಿತಿಗಿಂತ ಎರಡು ತಿಂಗಳು ಕಡಿಮೆ ಇದ್ದುದು. ಈ ವಿಷಯ ಯಾವುದೋ ಒಂದು ಆಕಸ್ಮಿಕವಾದ ಪ್ರಸಂಗದಲ್ಲಿ ರಾಜಶೇಖರನ್‌ರವರ ಗಮನಕ್ಕೆ ಬಂದು ಅದಕ್ಕೆ ಅವರು ನನ್ನ ಪರವಾಗಿ ಮಾತನಾಡಿ ಅದು ಒಂದು ಉತ್ತಮ ಅಳತೆಗೋಲು ಅಲ್ಲ, ಆ ಸಂಸ್ಥೆಗೆ ಇದುವರೆಗೂ ನಿವೃತ್ತಿ ಹೊಂದಿದ ಅಭ್ಯರ್ಥಿಗಳು ನಿರ್ದೇಶಕರಾಗಿ ಬಂದಿರುವುದರಿಂದ ಅಭಿವೃದ್ಧಿ ಅಷ್ಟಾಗಿ ಆಗದೆ ಹೋಗಿದೆ, ಆದ್ದರಿಂದ ಇದನ್ನು ನಿರ್ಲಕ್ಷಿಸಬಾರದೆಂದು ಪ್ರತಿಪಾದಿಸಿ ನನ್ನನ್ನು ಆ ಸಂಸ್ಥೆಯ ನಿರ್ದೇಶಕನನ್ನಾಗಿ ನಿಯೋಜಿಸಲು ಯಾರಿಂದಲೂ ಶಿಫಾರಸ್ಸು ಇಲ್ಲದೆ ಪ್ರತಿಪಾದಿಸಿದ್ದರು. ಇಂತಹ ಹಲವಾರು ವಿಜ್ಞಾನಿಗಳ ಪ್ರತಿಭೆಯನ್ನು ಗುರುತಿಸಿ ಅವರಿಗೆ ಸಹಾಯ ಹಸ್ತ ನೀಡುವುದರಲ್ಲಿ ರಾಜಶೇಖರನ್‌ರವರದು ಎತ್ತಿದ ಕೈ. ಇವರ ಇಂತಹ ಮುಂದಾಲೋಚನೆಯಿಂದ ತಂತ್ರಜ್ಞರು ಹಾಗೂ ವಿಜ್ಞಾನಿಗಳು ಹಲವಾರು ಉನ್ನತ ಹುದ್ದೆಗಳನ್ನು ಅಲಂಕರಿಸುವಂತಾಗಿದೆ. ಅಂದಿನಿಂದ ನನಗೆ ಏನಾದರೂ ತಾಂತ್ರಿಕ ಇಲ್ಲವೆ ಆಡಳಿತಾತ್ಮಕ ಸಮಸ್ಯೆಗಳಿದ್ದರೆ, ಅವರೊಂದಿಗೆ ನೇರವಾಗಿ ಚರ್ಚಿಸಿ ಪರಿಹಾರ ಕಂಡುಹಿಡಿಯುವ ಪರಿಪಾಠ ಹಾಕಿಕೊಂಡೆ. ನನ್ನ ಕಳೆದ ಒಂದೂವರೆ ದಶಕಗಳ ಪರಿಚಯ ಹಾಗೂ ಅನುಭವಗಳ ಆಧಾರದ ಮೇಲೆ ರಾಜಶೇಖರನ್‌ರವರ ರೇಷ್ಮೆ ಉದ್ಯಮದ ಬಗೆಗಿನ ವಿಚಾರಗಳನ್ನು ಇಲ್ಲಿ ಹಂಚಿಕೊಳ್ಳುವ ಪ್ರಯತ್ನ ಮಾಡಿದ್ದೇನೆ.

**ಗ್ರಾಮೀಣ ಅಭಿವೃದ್ಧಿಯಲ್ಲಿ ರೇಷ್ಮೆ ಕೃಷಿಯ ಪಾತ್ರ** : ಕೃಷಿಕರ ಅದರಲ್ಲೂ ಸಣ್ಣ ಹಾಗೂ ಅತಿಸಣ್ಣ ರೇಷ್ಮೆ ಬೆಳೆಗಾರರ ವಾರ್ಷಿಕ ಆದಾಯವನ್ನು ಸ್ಥಿರಗೊಳಿಸುವಲ್ಲಿ ರೇಷ್ಮೆ ವ್ಯವಸಾಯದ ಪಾತ್ರವನ್ನು ಅವರು ಅರಿತುಕೊಂಡು ತಮ್ಮ ಸಂಸ್ಥೆಯ ಮೂಲಕ ಹಲವಾರು ಕಾರ್ಯಗಳನ್ನು ರೂಪಿಸಿದರು. ಕೇಂದ್ರ ಸರಕಾರದ ವಿಜ್ಞಾನ ಹಾಗೂ ತಂತ್ರಜ್ಞಾನ ಇಲಾಖೆಯ ಅಂದಿನ ಮುಖ್ಯಸ್ಥರಾದ ಡಾ। ಜಾನ್, ಡಾ। ಕಮಲಾ ಕುಮಾರ್ ಹಾಗೂ ಡಾ। ಜಾನಿ ಇವರೊಂದಿಗೆ ಚರ್ಚಿಸಿ ರೇಷ್ಮೆ ಕೃಷಿಯಲ್ಲಿನ ಹೊಸ ತಾಂತ್ರಿಕತೆಗಳನ್ನು ಗ್ರಾಮೀಣ ಜನರಿಗೆ ಪರಿಚಯಿಸಲು ವಿಸ್ತರಣಾ ಯೋಜನೆಗಳನ್ನು ರೂಪಿಸಿ ಅವುಗಳಿಗೆ ಸಾಕಷ್ಟು ಹಣ ಸಹಾಯ ಪಡೆದಿರುವರು. ಹೊಸ ತಾಂತ್ರಿಕತೆಗಳನ್ನು ರೈತರಿಗೆ, ಮೊಟ್ಟೆ ತಯಾರಿಕರಿಗೆ, ನೂಲು ಬಿಚ್ಚಾಣಿಕೆದಾರರಿಗೆ ತಿಳಿಸಿಕೊಡುವ ಉದ್ದೇಶದಿಂದ ರಾಷ್ಟ್ರಮಟ್ಟದಲ್ಲಿ ಒಂದು ಬೃಹತ್ ಸಮಾವೇಶವನ್ನು ೧೯೯೩ರಲ್ಲಿ ಆಯೋಜಿಸಿ ಸಾವಿರಾರು ಫಲಾನುಭವಿಗಳಿಗೆ ಅನುಕೂಲತೆ

ಕಲ್ಪಿಸಿಕೊಟ್ಟಿರುವುದು ಉಲ್ಲೇಖನೀಯ. ಈ ಒಂದು ಸಮಾವೇಶವನ್ನು ಆಯೋಜಿಸಲು ನನ್ನನ್ನು ನಿಯೋಜಿಸಿದ್ದ ಕಾಲದಲ್ಲಿ ಅವರ ಕಾರ್ಯತತ್ಪರತೆ, ಮುಂದಾಲೋಚನೆ ಹಾಗೂ ಆಡಳಿತಾತ್ಮಕ ಅನುಭವಗಳ ಬಗ್ಗೆ ನನಗೆ ಅವರಲ್ಲಿ ಅಪಾರ ಗೌರವವನ್ನುಂಟುಮಾಡಿತು. ಎ.ಐ.ಆರ್.ಡಿ.ಯ ಕಾರ್ಯಕಾರಿ ಸಮಿತಿಯಲ್ಲಿ ಸುಮಾರು ೫ ವರ್ಷಗಳ ಅವಧಿಗೆ ನನ್ನನ್ನು ಸದಸ್ಯನನ್ನಾಗಿ ಮಾಡಿ, ರೇಷ್ಮೆ ಕೃಷಿಗೆ ಮಾಡಬೇಕಾದ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಿರುವರು.

**ರಾಜಶೇಖರನ್‌ರವರ ವಿಜ್ಞಾನಿ ಹಾಗೂ ತಂತ್ರಜ್ಞರೊಂದಿಗಿನ ಸಂಬಂಧ** : ರಾಜಶೇಖರನ್ ರವರಿಗೆ ವಿಜ್ಞಾನ ಹಾಗೂ ತಂತ್ರಜ್ಞಾನಗಳ ಬಗೆಗಿನ ಅಪಾರ ಆಸಕ್ತಿ, ಅವರು ಹಿರಿಯ ವಿಜ್ಞಾನಿಗಳೊಂದಿಗೆ ಹೊಂದಿದ ನಿಕಟ ಸಂಪರ್ಕದಿಂದ ವ್ಯಕ್ತವಾಗುತ್ತದೆ. ಕಳೆದ ಸುಮಾರು ೨-೩ ದಶಕಗಳಿಂದ ದೇಶದ ಹಲವಾರು ಕೃಷಿ ವಿಶ್ವವಿದ್ಯಾನಿಲಯದ ಹಾಗೂ ಇತರೆ ಕೃಷಿ ಸಂಬಂಧಿತ ಸಂಸ್ಥೆಯ ಮುಖ್ಯಸ್ಥರೊಂದಿಗೆ ಅವರು ನಿಕಟವಾದ ಸಂಪರ್ಕ ಹೊಂದಿದ್ದಾರಲ್ಲದೆ ಹಲವಾರು ಸಂಸ್ಥೆಗಳ, ಆಡಳಿತ, ಕಾರ್ಯಕಾರಿ ಸಮಿತಿ, ತಾಂತ್ರಿಕ ಸಮಿತಿ ಇತ್ಯಾದಿಗಳಲ್ಲಿ ಹಲವಾರು ಸ್ಥಾನ ಹೊಂದಿ ಪಾಲ್ಗೊಳ್ಳುತ್ತಿದ್ದರು. ಇವರಿಗಿದ್ದ ಹಲವಾರು ಗಣ್ಯರ ಪರಿಚಯ, ಅವರ ಜೊತೆಗೆ ಕೆಲಸ ಮಾಡುತ್ತಿದ್ದ ನನಗೆ ಲಭ್ಯವಾಯಿತು. ಡಾ। ಎಮ್.ಎಸ್.ಸ್ವಾಮಿನಾಥನ್, ಡಾ। ಜಿ.ರಂಗಸ್ವಾಮಿ, ಡಾ। ಕುರಿಯನ್, ಡಾ। ಆಮ್ಲ, ಡಾ। ಎಸ್.ದ್ವಾರಕಿನಾಥ್, ಡಾ। ಎನ್.ಜಿ. ಪೆರೂರ್, ಡಾ। ಡಿ.ಎಂ. ನಂಜುಂಡಪ್ಪ, ಡಾ। ಡಿ.ಸಿ. ಪಾವಟೆ, ಡಾ। ದೇ.ಜವರೇಗೌಡ, ಡಾ। ಎಂ.ಮಹಾದೇವಪ್ಪ, ಡಾ। ರತನಮ್, ಡಾ। ಎಂ.ಎಸ್.ಜಾಲಿ ಮುಂತಾದ ಹಿರಿಯ ಮೇಧಾವಿಗಳು ಶ್ರೀ ಎಂ.ವಿ.ಆರ್. ಅವರನ್ನು ತುಂಬಾ ಗೌರವಿಸುತ್ತಿದ್ದರಲ್ಲದೆ ಅವರ ವಿಚಾರಧಾರೆಗೆ ಹೆಚ್ಚಿನ ಮನ್ನಣೆ ದೊರೆಯುತ್ತಿತ್ತು. ಇವರ ಅನುಭವ ಹಾಗೂ ರೈತವರ್ಗದ ಬಗ್ಗೆ ಇರುವ ಅಪಾರ ಅನುಕಂಪದಿಂದ ಇವರು ಸೂಚಿಸಿದ ಯಾವುದೇ ವಿಷಯಕ್ಕೆ ವಿಶೇಷವಾದ ಮಹತ್ವ ದೊರೆಯುತ್ತಿತ್ತು. ಈ ಒಂದು ವಿಚಾರಧಾರೆ ಎಪ್ಪತ್ತೈದರ ಇಳಿ ಹರೆಯದಲ್ಲೂ ಮುಂದುವರೆಯುತ್ತಿರುವುದು ನಮಗೆಲ್ಲ ಮಾರ್ಗದರ್ಶನದ ವಿಷಯವಾಗಿದೆ. ಹಿರಿಯ ತಂತ್ರಜ್ಞರ ಹಾಗೂ ವಿಜ್ಞಾನಿಗಳ ಬಗ್ಗೆ ರಾಜಶೇಖರನ್ ವಿಶೇಷ ಗೌರವ ತೋರುತ್ತಿದ್ದುದು ಅವರ ಒಂದು ಹಿರಿಯ ಗುಣ. ಹಲವಾರು ಸಾರಿ ಅವರು ಜೈ ವಿಜ್ಞಾನ ಎಂಬ ಪದವನ್ನು ಉದಾಹರಿಸಿ ವಿಜ್ಞಾನದಿಂದ ಮಾತ್ರ ಅಜ್ಞಾನದ ನಿವಾರಣೆ ಸಾಧ್ಯ ಹಾಗೂ ಬಡತನ ನಿರ್ಮೂಲನೆಗೆ ವಿಜ್ಞಾನ ಒಂದು ಮಹತ್ತರವಾದ ಅಸ್ತ್ರ ಎಂದು ಪ್ರತಿಪಾದಿಸುವರು. ಅವರೊಡನೆ ಯಾವುದೇ ಇಂತಹ ಕಾರ್ಯಕ್ರಮಗಳಿಗೆ ನಾನು ತಪ್ಪದೇ ಹೋಗುತ್ತಿದ್ದುದು ಇದೇ ಕಾರಣದಿಂದ.

**ಸರಳ, ಸುಂದರ ಸಹೃದಯಿ** : ಎಂ.ವಿ.ರಾಜಶೇಖರನ್‌ರವರ ಜೊತೆಗೆ ಹಲವಾರು ಸಾರಿ ದೆಹಲಿ ಮತ್ತು ಇತರ ಕಡೆಗೆ ಪ್ರವಾಸ ಮಾಡಿದಾಗ, ಅವರ ಸರಳವಾದ ಜೀವನ,

ನೇರವಾದ ಮತ್ತು ಸ್ಪಷ್ಟವಾದ ವಿಚಾರಧಾರೆ, ವಿಶಾಲವಾದ ಮನೋಭಾವ ನನಗೆ ತುಂಬಾ ಪ್ರಿಯವಾದವು. ಈ ಬಗ್ಗೆ ಚರ್ಚಿಸುವಾಗ ನಾನು ಅವರೊಂದಿಗೆ ಸುಮಾರು ನಾಲ್ಕು ಘಂಟೆಗಳ ಕಾಲ ಜಮ್ಮು ಪ್ರಾಂತ್ಯದ ಶ್ರೀ ವೈಷ್ಣೋದೇವಿ ದೇವಸ್ಥಾನಕ್ಕೆ ಪಾದಯಾತ್ರೆ ಬೆಳೆಸಿದ್ದು ನೆನಪಾಗುತ್ತದೆ. ವಯಸ್ಸಿನಲ್ಲಿ ನನಗಿಂತ ಕಾಲು ಶತಕದಷ್ಟು ಹಿರಿಯರಾದ ಅವರು ಸುಮಾರು ೧೫,೦೦೦ ಅಡಿ ಎತ್ತರವಾದ ಪರ್ವತವನ್ನು ಯಾವುದೇ ಆಯಾಸವಿಲ್ಲದೆ ಏರಿದ್ದು. ಈ ಒಂದು ಸಂದರ್ಭದಲ್ಲಿ ಅವರು ನನಗೆ ಹಲವಾರು ವಿಷಯಗಳನ್ನು ಅಚ್ಚರಿಯೆನಿಸುತ್ತದೆ. ಅದರಲ್ಲೂ ಅವರ ವಿದೇಶಿ ಪ್ರವಾಸಗಳ ಅನುಭವದ ಬಗ್ಗೆ ನಿರೂಪಿಸಿದ್ದು, ಯಾವುದೇ ವಿಷಮ ಪರಿಸ್ಥಿತಿಯಲ್ಲೂ, ಕ್ಲಿಷ್ಟಕರವಾದ ವಾತಾವರಣದಲ್ಲೂ ಅವರು ತಮ್ಮ ಉದ್ದೇಶಗಳನ್ನು ಸಾಧಿಸುತ್ತಿರುವುದು, ಅವರೇ ಹೇಳಿದಂತೆ ಸರಳವಾದ ಹಾಗೂ ನೇರ ನಡೆ-ನುಡಿಗಳು ಯಾರನ್ನೂ, ಯಾರಿಂದಲೂ, ಯಾವುದೇ ಸಂದರ್ಭದಲ್ಲೂ ವಂಚನೆಗೆ ಅವಕಾಶ ಮಾಡಿಕೊಡದಿರುವುದು - ಇದು ಎಲ್ಲಾ ಜನರ ಜೀವನದ ರೀತಿಯಾದರೆ ಎಷ್ಟು ಚೆಂದ. ನಾನು ಅವರ ಕಿರಿಯ ಮಗನ ವಯಸ್ಸಿನವನಾದರೂ ಅವರು ಕಿರಿಯರನ್ನು ಹಿರಿಯರಿಗೆ ಪರಿಚಯಿಸುವ ರೀತಿ, ಯಾರನ್ನೂ ಅವರ ಪ್ರೀತಿ ತುಂಬಿದ ಹೃದಯವಂತಿಕೆಗೆ ಶರಣಾಗಿಸುತ್ತದೆ.

**ಎ.ಐ.ಆರ್.ಡಿ.ಯ ರೇಷ್ಮೆ ತಾಂತ್ರಿಕತಾ ವಿಸ್ತರಣಾ ಕೇಂದ್ರ (ACTTS) :** ಎಂ.ವಿ. ರಾಜಶೇಖರನ್‌ರವರ ಹೊರ ಜಗತ್ತಿನ ಸಂಬಂಧ ಬಹುಶಃ ಯಾವುದೇ ಭಾರತೀಯ ವ್ಯಕ್ತಿಗೆ ಹೋಲಿಸಲಾರದಷ್ಟು ವಿಸ್ತಾರವಾದುದು. ಅವರು ಎಲ್ಲಾ ಏಶಿಯನ್ ರಾಷ್ಟ್ರಗಳು ಅದರಲ್ಲೂ ಅಭಿವೃದ್ಧಿ ಹೊಂದುತ್ತಿರುವ ಬಡ ರಾಷ್ಟ್ರಗಳ ಜೊತೆ ನಿಕಟವಾದ ತಾಂತ್ರಿಕ ಸಂಬಂಧ ಹೊಂದಿದ್ದಾರೆ. ಜನನಿಬಿಡವಾದ ಕೃಷಿ ಆಧಾರಿತ ಎಲ್ಲಾ ಏಶಿಯಾ ದೇಶಗಳು ಎದುರಿಸುತ್ತಿರುವ ಬಡತನದ ಬೇಗೆಯನ್ನು ನೀಗಲು ರೇಷ್ಮೆ ಕೃಷಿಯಿಂದ ಸಾಧ್ಯವೆಂಬ ಬಲವಾದ ನಂಬಿಕೆಯಿಂದ, ಈ ರಾಷ್ಟ್ರಗಳ ರೇಷ್ಮೆ ಕೃಷಿ ಅಭಿವೃದ್ಧಿಗೆ ತಂತ್ರಜ್ಞಾನದ ವರ್ಗಾವಣೆಗೆ ಬಹುಮುಖ್ಯವೆಂದು ಮನಗಂಡು ಇದಕ್ಕಾಗಿಯೇ ೧೯೮೧ ರಷ್ಟು ಮೊದಲೇ ಎ.ಐ.ಆರ್.ಡಿ.ಯ ಒಂದು ಉಪಕೇಂದ್ರವಾಗಿ ರೇಷ್ಮೆ ತಾಂತ್ರಿಕತಾ ವಿಸ್ತರಣಾ ಕೇಂದ್ರವನ್ನು ಪ್ರಾರಂಭಿಸಿದರು. ಈ ಕೇಂದ್ರದಿಂದ ಎಲ್ಲಾ ಏಶಿಯನ್ ಹಾಗೂ ಜಗತ್ತಿನ ಇತರೆ ಬಡರಾಷ್ಟ್ರಗಳಿಗೆ ರೇಷ್ಮೆ ತಾಂತ್ರಿಕತೆಗಳ ಬಗ್ಗೆ ತರಬೇತಿ, ತಾಂತ್ರಿಕ ಸೇವೆ, ಸಲಹಾ ವ್ಯವಸ್ಥೆ, ಸಾಮಾನ್ಯ ಜ್ಞಾನ ನೀಡುವುದು, ಮಾಹಿತಿ ಪ್ರಸಾರ ಇತ್ಯಾದಿ ಕಾರ್ಯಕ್ರಮಗಳನ್ನು ನಡೆಸುತ್ತಿರುವರು. "ನೋಡಿ ತಿಳಿ - ಮಾಡಿ ಕಲಿ" ಎಂಬ ತತ್ವದ ಅನುಕರಣೆಗೆ ಈ ಕೇಂದ್ರದಲ್ಲಿ ರೇಷ್ಮೆ ಬಿತ್ತನೆ ಘಟಕ, ರೇಷ್ಮೆ ತಂತ್ರಜ್ಞಾನ ವಿಸ್ತರಣಾ ಘಟಕ, ಚಾಕಿ ಸಾಕಾಣಿಕಾ ಕೇಂದ್ರ ಹಾಗೂ ಉಷ್ಣವಲಯದ ರೇಷ್ಮೆ ತಾಂತ್ರಿಕತಾ ಸಮಗ್ರ ತರಬೇತಿ ಘಟಕಗಳನ್ನು ನಿರ್ಮಿಸಿ, ಹಲವಾರು ಯೋಜನೆಗಳನ್ನು ನಡೆಸುತ್ತಿರುವುದು ಇವರ ಪರಿಶ್ರಮಕ್ಕೆ ಉದಾಹರಣೆಯಾಗಿದೆ. ಈ ಕೇಂದ್ರದ ಹಲವಾರು ಶಾಖೆಗಳನ್ನು ಏಶಿಯಾದ ಇತರೆ ರಾಷ್ಟ್ರಗಳಲ್ಲೂ ಸ್ಥಾಪಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಶ್ರೀಲಂಕಾ, ಜಿಂಬಾಬ್ವೆ, ಕೀನ್ಯಾ, ಥೈಲ್ಯಾಂಡ್, ನೇಪಾಳ ಇತ್ಯಾದಿ. ಈ

ಕೇಂದ್ರವು ಜಗತ್ತಿನ ಹಲವಾರು ರಾಷ್ಟ್ರಗಳ ಸಮಾನ ಮನಸ್ಕರನ್ನು ಹಾಗೂ ಮೇಧಾವಿಗಳನ್ನು ತನ್ನ ಆಡಳಿತ ಮಂಡಳಿಯಲ್ಲಿ ಹೊಂದಿದ್ದು, ಅನೇಕ ದೇಶಗಳಿಗೆ ರೇಷ್ಮೆ ಜ್ಞಾನ ದಾಸೋಹ ಕೇಂದ್ರವಾಗಿ ಬಹುಮುಖ ಪಾತ್ರ ವಹಿಸುತ್ತ ಸೇವೆ ಸಲ್ಲಿಸುತ್ತಲಿದೆ.

ಈ ಸಂಸ್ಥೆಗೆ ಭೇಟಿ ನೀಡಿದ ಗಣ್ಯರ ಪಟ್ಟಿ ನೋಡಿದವರಿಗೆ ಎಂ.ವಿ.ರಾಜಶೇಖರನ್‌ರವರ ಮಾನವ ಸಂಬಂಧದ ಸರಪಳಿಯ ಆಳಗಲಗಳ ಪರಿಚಯವಾಗುತ್ತದೆ. ಎಫ್.ಎ.ಓ., ಯು.ಎನ್.ಓ., ಸಿಡಾ, ಯುನೆಸ್ಕೊ, ಎಸ್ಕಾಪ್ ಮುಂತಾದ ಜಾಗತಿಕ ಸಂಸ್ಥೆಗಳ ಮುಖಂಡರುಗಳು ಹಾಗೂ ಹಿರಿಯ ಅಧಿಕಾರಿಗಳು ಈ ಸಂಸ್ಥೆಗೆ ಭೇಟಿ ನೀಡಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುವುದು ಈ ಸಂಸ್ಥೆಯ ಕಾರ್ಯಕ್ರಮಗಳ ಉಪಯುಕ್ತತೆಗೆ ಸಾಕ್ಷಿ. ಈ ಸಂಸ್ಥೆ ಹೇಗೆ ಹತ್ತಾರು ರಾಷ್ಟ್ರಗಳ ಪ್ರಮುಖರನ್ನು ತನ್ನತ್ತ ಆಕರ್ಷಿಸುತ್ತದೆಯೋ ಹಾಗೆ ರಾಜಶೇಖರನ್‌ರವರ ಬಹುಮುಖ ಪ್ರತಿಭೆ ಹಾಗೂ ಅಸಾಧಾರಣ ವ್ಯಕ್ತಿತ್ವ ಇವರನ್ನು ಹಲವಾರು ರಾಷ್ಟ್ರಗಳ ಅಭಿವೃದ್ಧಿ ಸಂಸ್ಥೆಗಳು ಅದರಲ್ಲೂ ಕೃಷಿ ಆಧಾರಿತ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳ ಸದಸ್ಯತ್ವ, ಸಲಹೆಗಾರ, ಮುಖ್ಯಸ್ಥರನ್ನಾಗಿಸಿಕೊಂಡು ಇವರ ಅನುಭವದ ಸವಿಯನ್ನು ಸವಿಯುತ್ತಲಿವೆ.

**ಎಂ.ವಿ. ರಾಜಶೇಖರನ್ ಹಾಗೂ ರೇಷ್ಮೆ ಮಹಿಳೆ :** ಕೃಷಿ ಮಹಿಳೆಯರ ಅಭಿವೃದ್ಧಿ ಬಗ್ಗೆ ಅದರಲ್ಲೂ ರೇಷ್ಮೆ ಉದ್ಯಮದಲ್ಲಿ ತೊಡಗಿರುವ ಮಹಿಳೆಯರ ಕ್ಷೇಮಾಭಿವೃದ್ಧಿಯ ಬಗ್ಗೆ ವಿಶೇಷವಾದ ಆಸಕ್ತಿಯ ಕಾರಣದಿಂದಲೇ ರೇಷ್ಮೆ ಉದ್ಯಮದಲ್ಲಿ ಮಹಿಳೆಯರು ನಿರ್ವಹಿಸುತ್ತಿರುವ ಚಟುವಟಿಕೆಗಳು, ಅವರು ಎದುರಿಸುತ್ತಿರುವ ದೈಹಿಕ ಹಾಗೂ ಮಾನಸಿಕ ನೋವುಗಳು ಹಾಗೂ ಅವುಗಳಿಗೆ ಪರಿಹಾರ ಕುರಿತ ಒಂದು ವಿಶೇಷ ಸಮೀಕ್ಷೆಯನ್ನು ಸ್ವತಃ ತಾವೇ ನಡೆಸಿ, ತಜ್ಞರ ಮೂಲಕ ಈ ವಿಷಯಗಳ ಬಗ್ಗೆ ಕೂಲಂಕಷ ಚರ್ಚೆ ನಡೆಸಿದರು. ಈ ಪರಿಶ್ರಮದ ಫಲವೇ ಇಂದು ಮರಳವಾಡಿಯಲ್ಲಿ ಸ್ಥಾಪಿತವಾಗಿರುವ ಮಹಿಳಾ ತರಬೇತಿ ಕೇಂದ್ರ. ರಾಮನಗರ ಹಾಗೂ ಕನಕಪುರಗಳಲ್ಲಿ ರೇಷ್ಮೆ ನೂಲು ಬಿಚ್ಚಾಣಿಕೆದಾರರ ಅದರಲ್ಲೂ ಬಡ ಹೆಣ್ಣುಮಕ್ಕಳು ಎದುರಿಸುತ್ತಿರುವ ಆರೋಗ್ಯ ಸಮಸ್ಯೆಗಳನ್ನು ತಿಳಿದು ಅವರಿಗೆ ನೈರ್ಮಲ್ಯಯುತ ವಾತಾವರಣ ಕಲ್ಪಿಸಲು ಶ್ರಮಿಸಿರುವರು. ರೇಷ್ಮೆ ನೂಲು ಬಿಚ್ಚಾಣಿಕೆ ಘಟಕಗಳಲ್ಲಿ ಸತತವಾಗಿ ದುಡಿಯುತ್ತಿರುವ ಸ್ತ್ರೀಯರು ಎದುರಿಸುತ್ತಿರುವ ದೈಹಿಕ ತೊಂದರೆ ಹಾಗೂ ಅನಾರೋಗ್ಯಗಳ ಬಗ್ಗೆ ಸ್ವತಃ ಅವರೆ ಒಂದು ಸಮೀಕ್ಷೆ ನಡೆಸಿ ಜಿಯಾವುಲ್ಲಾ ಅವರ ಸಹಕಾರದಿಂದ ಹಲವಾರು ಸುಧಾರಣಾ ಕ್ರಮಗಳನ್ನು ಪ್ರಾರಂಭಿಸಿದರು. ಇದೇ ರೀತಿ ತಮ್ಮ ಸ್ವಗ್ರಾಮವಾದ ಮರಳವಾಡಿಯಲ್ಲಿ ಸ್ತ್ರೀಯರಿಗೆ ನೂಲು ಬಿಚ್ಚಾಣಿಕೆಯಲ್ಲಿ ಸುಧಾರಿತ ತಂತ್ರಜ್ಞಾನಗಳ ಬಗ್ಗೆ ತರಬೇತಿ ನೀಡಲು ಒಂದು ಸುಸಜ್ಜಿತ ತರಬೇತಿ ಕೇಂದ್ರವನ್ನು ಸ್ಥಾಪಿಸಿ ಇಂದಿನವರೆಗೆ ಅದನ್ನು ನಡೆಸಿಕೊಂಡು ಬರುತ್ತಿರುವುದು ಅವರಿಗಿರುವ ಕಳಕಳಿಗೆ ಹಿಡಿದ ಕೈಗನ್ನಡಿ. ಇದೇ ರೀತಿ ವಿದೇಶಗಳಲ್ಲೂ ಮಹಿಳಾಪರ ಅಭಿವೃದ್ಧಿಗೆ ವಿಶೇಷವಾದ ಸಲಹೆಗಳನ್ನು

ನೀಡಿ ಅಲ್ಲಿಯೂ ಕೂಡ ಮಹಿಳಾ ಅಭಿವೃದ್ಧಿಯಲ್ಲಿ ಹೆಚ್ಚಿನ ಆಸಕ್ತಿ ಮೂಡುವಂತೆ ಮಾಡುವಲ್ಲಿ ಸಫಲರಾದರು. ಈ ಎಲ್ಲಾ ಕಾರ್ಯಕ್ರಮಗಳಲ್ಲೂ ನನ್ನನ್ನು ಅವರ ಜೊತೆ ತೊಡಗಿಸಿಕೊಂಡು ನನಗೆ ಹಲವಾರು ವಿಷಯಗಳ ಬಗ್ಗೆ ಹೆಚ್ಚಿನ ಆಸಕ್ತಿ ಹಾಗೂ ಪರಿಣತಿ ದೊರೆಯುವಂತೆ ಮಾಡಿದ ಈ ಮಹಾನ್ ಚೇತನಕ್ಕೆ ನಾನು ಎಷ್ಟು ಋಣಿಯಾದರೂ ಅದು ಕಡಿಮೆಯೇ.

ಈ ಲೇಖನದ ಕೊನೆಯಲ್ಲಿ ನಾನು ಒಂದೇ ಒಂದು ವಿಷಯವನ್ನು ಪ್ರತಿಪಾದಿಸಲು ಇಷ್ಟ ಪಡುತ್ತೇನೆ. ಈ ಅಭಿನಂದನ ಸಮಾರಂಭದಲ್ಲಿ ಅವರಿಗೆ ನಿಜವಾದ ಅರ್ಥದಲ್ಲಿ ನಾವು ವಂದನೆ-ಅಭಿನಂದನೆ ಸಲ್ಲಿಸುವಂತಿದ್ದರೆ, ಅವರು ಹಾಕಿಕೊಂಡು ನಡೆಸುತ್ತಿರುವ ರೇಷ್ಮೆಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಸರಕಾರ ಹಾಗೂ ಸರಕಾರೇತರ ಸಂಸ್ಥೆಗಳಿಂದ ಬೆಂಬಲ ನೀಡಿ ಅವುಗಳನ್ನು ಮತ್ತಷ್ಟು ಶಕ್ತಿಶಾಲಿಯನ್ನಾಗಿಸಿ ಗ್ರಾಮೀಣ ಜನತೆಗೆ ಹೆಚ್ಚಿನ ಅನುಕೂಲವಾಗುವತ್ತ ಚಿಂತನೆ ನಡೆಯಬೇಕು. ಇದಲ್ಲದೆ, ಅವರ ಹೆಸರಿನಲ್ಲಿ ಒಂದು ದತ್ತಿ ಸ್ಥಾಪಿಸಿ ಅದನ್ನು ನಡೆಸಿಕೊಂಡು ಬರುವುದು. ಇದಕ್ಕೆ ನಾನು ಹಾಗೂ ನಮ್ಮ ಸಂಸ್ಥೆ ಶ್ರಮಿಸಲು ನನಗೆ ಅತಿ ಆನಂದವಾಗುವುದು.

ಎಂ.ವಿ. ರಾಜಶೇಖರನ್‌ರವರು ಒಬ್ಬ ವ್ಯಕ್ತಿ ಅಲ್ಲ, ಅವರು ಒಂದು ಮಾನವ ಕಲ್ಯಾಣದ ಶಕ್ತಿ, ಇವರು ಒಬ್ಬ ಆದರ್ಶವಾದಿ ಮತ್ತು ಇಂದಿನ ಗಾಂಧಿ ಎಂದು ಹೇಳಿದರೆ ತಪ್ಪಾಗಲಾರದು. ದೇವರು ಅವರಿಗೆ ಹಾಗೂ ಅವರ ಎಲ್ಲಾ ಕುಟುಂಬದವರಿಗೆ ಸಕಲ ಸೌಭಾಗ್ಯ, ಆಯುಷ್ಯ ಹಾಗೂ ಆರೋಗ್ಯ ಕಲ್ಪಿಸಿ ಅವರ ಸಂದೇಶ ಮತ್ತು ಶ್ರಮ ಸಾರ್ವಕಾಲಿಕವಾಗಿ ಉಳಿಯಲಿ ಹಾಗೂ ಬೆಳೆಯಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

***

# ಸಮಾಜದ ಹಿತಚಿಂತಕ

ಬಿ.ಜೆ.ಪುಟ್ಟಸ್ವಾಮಿ

ಸಚ್ಚಾರಿತ್ರ್ಯದ ಕರ್ತವ್ಯನಿಷ್ಠ ಗಾಂಧಿವಾದಿ ಸನ್ಮಾನ್ಯ ಶ್ರೀ ಎಂ.ವಿ. ರಾಜಶೇಖರನ್‌ರವರನ್ನು ಸನ್ಮಾನಿಸುತ್ತಿರುವುದು ತುಂಬಾ ಸ್ವಾಗತಾರ್ಹ ಮತ್ತು ಅತ್ಯಾವಶ್ಯಕ. ಇವರ ಜೀವನ ನಡೆಯು ಮುಖ್ಯವಾಗಿ ಇಂದಿನ ಯುವ ಪೀಳಿಗೆಗೆ ಆದರ್ಶವಾಗುತ್ತದೆ. ಅತಿ ಎತ್ತರದ ವ್ಯಕ್ತಿ ಜೀವನದ ಬಗ್ಗೆ ಬರೆಯಲು ಅತಿ ಕಿರಿಯನಾಗಿ, ಎಂ.ವಿ. ರಾಜಶೇಖರನ್‌ರಲ್ಲಿ ನಾ ಕಂಡ ಕೆಲವು ಗುಣಗಳನ್ನು ಮಾತ್ರ ಬರೆಯುತ್ತಿದ್ದೇನೆ.

ಎಂ.ವಿ.ರಾಜಶೇಖರನ್‌ರವರು ಮಾನವೀಯ ಆದರ್ಶ, ಮೌಲ್ಯಗಳನ್ನು ಪಾಲಿಸಿದವರಲ್ಲಿ ಮುಖ್ಯರು. ರಾಜಕಾರಣಿಗಳು ಸಾರ್ವಜನಿಕ ಜೀವನದಲ್ಲಿ ಪಾಲಿಸಬೇಕಾದ ಕರ್ತವ್ಯ ಪ್ರಜ್ಞೆ, ಪ್ರಾಮಾಣಿಕತೆ, ದಕ್ಷತೆ, ಸಚ್ಚಾರಿತ್ರ್ಯದ ಜೀವನ, ಸರಳತೆ, ಸಾಮಾಜಿಕ ಕಳಕಳಿ ಮತ್ತು ಕೆಟ್ಟದ್ದನ್ನು ನೇರವಾಗಿ ವಿರೋಧಿಸುವಿಕೆ ಇತ್ಯಾದಿ ಮೌಲ್ಯಗಳನ್ನು ಎಂ.ವಿ.ರಾಜಶೇಖರನ್‌ರವರು ತಮ್ಮ ಜೀವನದುದ್ದಕ್ಕೂ ಪಾಲಿಸಿಕೊಂಡು ಬಂದ ವ್ಯಕ್ತಿ. ಇಂದಿನ ಬಹುತೇಕ ರಾಜಕಾರಣಿಗಳಲ್ಲಿ ಈ ಮೌಲ್ಯಗಳು ಸಂಪೂರ್ಣವಾಗಿ ನಾಶವಾಗಿದೆ. ಕರ್ತವ್ಯಲೋಪ, ಅದಕ್ಷತೆ, ಅಪ್ರಮಾಣಿಕತೆಯ ರಾಜಕಾರಣಿಗಳಿಂದ ಪ್ರಜಾತಂತ್ರ ವ್ಯವಸ್ಥೆ ಸಮಾಜಕ್ಕೆ ಮಾರಕವಾಗಿ ಪರಿಣಮಿಸುತ್ತಿದೆ. ದೇಶ ಸಾಲದ ಹೊರೆಯಿಂದ ತತ್ತರಿಸಿ ಅಭಿವೃದ್ಧಿ ಕುಂಠಿತವಾಗುತ್ತಿದೆ. ಅಧಿಕಾರ ಶಾಹಿಗಳ ಕೈ ಮೇಲಾಗುತ್ತಿದೆ.

ಭ್ರಷ್ಟ ಮತ್ತು ಗೂಂಡಾ ರಾಜಕಾರಣಿಗಳು ಹೆಚ್ಚಾಗುತ್ತಿದ್ದು ಅಭಿವೃದ್ಧಿ ಕುಂಠಿತದ ಜೊತೆಗೆ ಸಾರ್ವಜನಿಕರಲ್ಲಿ ಭಯದ ವಾತಾವರಣ ನಿರ್ಮಾಣ ವಾಗುತ್ತಿದೆ. ನ್ಯಾಯಕ್ಕಾಗಿ ಸಜ್ಜನರು ಪರದಾಡಬೇಕಾಗಿದೆ. ಈ ಕ್ಲಿಷ್ಟ ಸಮಯದಲ್ಲಿ ಎಂ.ವಿ. ರಾಜಶೇಖರನ್‌ರವರ ಆದರ್ಶ ಜೀವನ ಆಚಾರ, ವಿಚಾರಗಳ ಪ್ರಚಾರದ ಅವಶ್ಯಕತೆ ಇದೆ.

ಎಂ.ವಿ.ರಾಜಶೇಖರನ್‌ರವರು ಯಾವಾಗಲೂ ದೇಶದ ಮತ್ತು ಸಮಾಜದ ಹಿತಚಿಂತಕರು. ಗ್ರಾಮೀಣ ಜನರ ಬದುಕನ್ನು ಹಸನಾಗಿಸಲು

ಶ್ರಮಿಸುತ್ತಿರುವ ವ್ಯಕ್ತಿ. ಜೀವನದಲ್ಲಿ ಸಿಹಿಕಹಿಗಳನ್ನು ಕಂಡರೂ ತಮ್ಮ ಸಿದ್ಧಾಂತಗಳಿಗೆ ಆದ್ಯತೆ ನೀಡಿದವರು. ಅವರ ಪ್ರತಿಯೊಂದು ಕೆಲಸದಲ್ಲಿ ಸಾರ್ವಜನಿಕರಿಗೆ ಜವಾಬ್ದಾರಾಗಿರಬೇಕೆಂದು ಅವರ ಇಚ್ಛೆ. ಯೋಗ್ಯತೆಗೆ ತಕ್ಕ ಅಧಿಕಾರದ ಅವಕಾಶ ಸಿಗಲಿಲ್ಲ. ರಾಜ್ಯ ಮತ್ತು ರಾಷ್ಟ್ರದ ಅಭಿವೃದ್ಧಿಗಾಗಿ ಉನ್ನತ ಹುದ್ದೆ ಇವರಿಗೆ ಸಿಗಬೇಕು.

ಆರೋಗ್ಯವಂತರಾಗಿ ೭೫ನೇ ವಸಂತಕ್ಕೆ ಕಾಲಿಟ್ಟಿರುವ ಎಂ.ವಿ.ರಾಜಶೇಖರನ್‌ರವರು ಶತಾಯುಷಿಯಾಗಿರಲೆಂದು ದೇವರಲ್ಲಿ ನನ್ನ ಪ್ರಾರ್ಥನೆ. ರಾಷ್ಟ್ರ ಮತ್ತು ರಾಜ್ಯದ ಅಭಿವೃದ್ಧಿಗಾಗಿ ಎಂ.ವಿ.ರಾಜಶೇಖರನ್ ರವರಿಗೆ ಉನ್ನತ ಹುದ್ದೆಯನ್ನು ಅಲಂಕರಿಸಲು ಮತ್ತೊಮ್ಮೆ ದೇವರಲ್ಲಿ ಪ್ರಾರ್ಥನೆ.

***

# ಮಂಚನಬೆಲೆಯ ಕನಸುಗಾರ

**ಶೇಷನಾರಾಯಣ**

ಕನಸು ಕಾಣುವುದು ಮಾನವನ ಸಹಜ ಕ್ರಿಯೆ. ಕನಸೇ ಇಲ್ಲದ ಜೀವನ ಯಾವುದು? ಆದರೆ ಕನಸಿನಲ್ಲಿಯೂ ಬಗೆಬಗೆಯ ವೈವಿಧ್ಯತೆಗಳು ಇವೆ. ಇದು ಕನಸು ಕಾಣುವವರ ವ್ಯಕ್ತಿತ್ವದ ಮೇಲೆ ಅವಲಂಬಿತವಾಗಿರುತ್ತದೆ. ತಿರುಕನ ಕನಸು, 'ತಿರುಕನೋರ್ವ ಊರ ಮುಂದೆ ಮುರುಕು ಧರ್ಮ ಶಾಲೆಯಲ್ಲಿ'... ಆಗಿಬಿಡುತ್ತದೆ. ಆದರೆ ಮಹಾಮೇಧಾವಿಗಳ ಮುತ್ಸದ್ದಿಗಳ ಹಾಗೂ ರಾಷ್ಟ್ರಪ್ರೇಮಿಗಳ ಕನಸು ಬೇರೆ ಬಗೆಯದು. ಇಂಥವರ ಕನಸುಗಳು ಚಿಂತನೆಗಳಾಗಿ ಹರಿದು ರಾಷ್ಟ್ರಕ್ಕೆ ಒಂದು ಮಹತ್ತರವಾದ ಕಾಣಿಕೆಯನ್ನು ನೀಡುತ್ತವೆ. ಅದು ನಾಡಿಗೆ ಶ್ರೇಷ್ಠ ಕೊಡುಗೆಯೂ ಆಗಿರುತ್ತದೆ.

ಬುದ್ಧನ ಕನಸು ಬುದ್ಧನದೇ, ಗಾಂಧೀಜಿಯ ಕನಸು ಗಾಂಧೀಜಿಯದೇ. ಇಂಥವರ ಕನಸುಗಳನ್ನು ಬೇರೆಯವರು ಕಾಣುವುದು ಅಸಾಧ್ಯ

ರಾಜ್ಯಸಭಾ ಸದಸ್ಯ ಎಂ.ವಿ. ರಾಜಶೇಖರನ್ ಅವರು ಇಂಥ ಕನಸುಗಾರರಲ್ಲಿ ಒಬ್ಬರು, ಪ್ರಮುಖರು. ಹೆಚ್ಚು ಕಡಿಮೆ ಮೂವತ್ತು-ಮೂವತ್ತೈದು ವರುಷಗಳ ಹಿಂದೆ ಅವರು ಕಂಡ ಕನಸಿನ ಕುಡಿ, ಕನಸಿನ ಕೂಸು ಈಗ ಪೂರ್ಣಗೊಂಡಿರುವ ಮಂಚನಬೆಲೆ ಪ್ರಾಜೆಕ್ಟ್.

ಹಾಗೆ ನೋಡಿದರೆ, ಇತರೇ ದೊಡ್ಡ ದೊಡ್ಡ ಜಲಾಶಯಗಳಿಗೆ, ಅಣೆಕಟ್ಟುಗಳಿಗೆ ಹೋಲಿಸಿದರೆ, ಮಂಚನಬೆಲೆ ತೀರಾ ಸಣ್ಣದು. ಅರ್ಕಾವತಿ, ಕಾವೇರಿಯ ಇಪ್ಪತ್ತೊಂದು ಉಪನದಿಗಳಲ್ಲಿ ಒಂದು. ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿದುರ್ಗ ಬೆಟ್ಟಸಾಲಿನಲ್ಲಿ ೧೪೮೦ ಮೀಟರ್ ಎತ್ತರದಿಂದ ಇದರ ಉಗಮ. ಇದರ ಉದ್ದ ಕೇವಲ ೧೯೧ ಕಿ.ಮೀ. ಮಾತ್ರ ಇದೆ. ಇಷ್ಟು ಸಣ್ಣ ನದಿಗೆ ಕೆಲವು ಉಪನದಿಗಳೂ ಇವೆ. ಕುಮುದ್ವತಿ, ಮಣಿಹಳ್ಳ, ವೃಷಭಾವತಿ, ಕಟ್ಟೆಹೊಳೆ - ಹೀಗೆ..

ಅರ್ಕಾವತಿಯ ವ್ಯಾಪ್ತಿಯೇ ಒಟ್ಟು ೪೧೫೦ ಚ.ಕಿ.ಮೀಟರ್ ಇದರಲ್ಲಿ ಕರ್ನಾಟಕ ೩೯೮೩ ಚ.ಕಿ.ಮೀ. ಮತ್ತು ತಮಿಳುನಾಡು ೧೬೭ ಚ.ಕಿ.ಮೀ.

ಅರ್ಕಾವತಿಯ ಸ್ಟೋರೇಜ್ ಒಟ್ಟು ೪೪.೯೪. ಸಾಮರ್ಥ್ಯ ೪೦.೮೯ (ಎಂಎಂ.) ಮಂಚನಬೆಲೆ ೩೪.೬೦ ಮತ್ತು ೩೦.೦೪.

ಗಂಗಾ ಕಾವೇರಿ ಮುಂತಾದ ಭಾರೀ ಭಾರೀ ನದಿಗಳ ಹಾಗೂ ಉದ್ದದ ಜೋಡಣೆಗಳ, ನಾಡನ್ನು ದಿವಾಳಿ ಎಬ್ಬಿಸುವ ಎರಡೂವರೆ ಲಕ್ಷ ಕೋಟಿ, ಮೂರು ಲಕ್ಷ ಕೋಟಿ ಇಂಥ ಅಂದಾಜುಗಳು ಇಡೀ ಭರತಖಂಡದ ಪರಿಸರಕ್ಕೆ ಕೊಡಲಿ ಏಟು ಬೀಳಬಹುದಾದಂತಾದ್ದು. ಇಂಥ ಭಾರೀ ಅಪಾಯಕಾರೀ ಯೋಜನೆಗಳಿಂದ ನಾಡು ಎಂಥ ಭೀಕರ ವಿಪತ್ತಿಗೆ ಸಿಲುಕಿಕೊಳ್ಳುತ್ತದೆಯೋ ಎಂದು ಚಿಂತಕರೂ ಪರಿಸರ ಪ್ರೇಮಿಗಳೂ ದಿಗಿಲು ಬೀಳುವ ಈ ಸಮಯದಲ್ಲಿ ಇಂಥ ಯಾವ ಒಂದು ಪರಿಪಾಟಲೂ ಇಲ್ಲದೆ ಸಣ್ಣ ಸಣ್ಣ ಯೋಜನೆಗಳಿಂದ ಅವುಗಳ ಬಳಕೆಯಿಂದಲೇ ನಾಡನ್ನು ಅಭಿವೃದ್ಧಿಗೊಳಿಸಲು ಸಾಧ್ಯ ಎಂದು ಕನಸು ಕಂಡವರಲ್ಲಿ ರಾಜಶೇಖರನ್ ಸ್ಮರಣೀಯರಾದವರು. ಮಂಚನಬೆಲೆ ಯೋಜನೆ ಅವರಲ್ಲಿ ಕುಡಿಯೊಡೆದದ್ದು ಹೀಗೆಯೇ.

ಆದರೆ ಇಂಥ ಸಣ್ಣ ಪುಟ್ಟ ಯೋಜನೆಗಳಿಗೂ ಭಾರೀ ಸವಾಲುಗಳು ಅಥವಾ ವಿಘ್ನಗಳು ಆಗ ಎದುರಾಗುತ್ತ ಇದ್ದವು. ಕರ್ನಾಟಕಕ್ಕೆ ಆಗ ಶನಿಕಾಟ. ಎಲ್ಲಿ ನ್ಯಾಯಾಲಯದ ಮೆಟ್ಟಿಲನ್ನು ಹತ್ತಬೇಕಾಗುತ್ತದೆಯೋ ಎಂಬ ಭಯ.

೧೯೨೪ರ ಕಾವೇರಿ ಒಪ್ಪಂದ ಎನ್ನುವ ದೊಡ್ಡ ಪೆಡಂಭೂತ ಒಂದು ಸಣ್ಣ ನದಿ ಇರಲಿ, ಒಂದು ಸಣ್ಣ ಹಳ್ಳಕೊಳ್ಳದ ನೀರನ್ನು ಉಪಯೋಗಿಸಲು ಕರ್ನಾಟಕಕ್ಕೆ ತೊಡಕಾಗಿದ್ದ ಸಂದರ್ಭ ಅದು. ಈ ಅನ್ಯಾಯದ ಒಪ್ಪಂದ ಎನ್ನುವುದು ೧೯೭೪ಕ್ಕೆ ಕಾಲಾವಧಿ ಆಗುವುದಕ್ಕೆ ಮೊದಲೇ, ಇಂಥ ತೊಡಕುಗಳು ಇದ್ದ ಸಂದರ್ಭದಲ್ಲಿಯೇ ರಾಜಶೇಖರನ್‌ರವರು ಅರ್ಕಾವತಿಯ, ಮಂಚನಬೆಲೆಯ ಕನಸು ಕಂಡವರು. ಇದು ಮುಖ್ಯವಾದ ಒಂದು ಸಂಗತಿ.

ಇಂದು ಮಾಗಡಿ, ಕನಕಪುರ, ರಾಮನಗರ ಅಲ್ಲದೆ ಬೆಂಗಳೂರು ನಗರಕ್ಕೂ ಈ ಸಣ್ಣ ನದಿ ಅರ್ಕಾವತಿ ಕುಡಿಯುವ ನೀರನ್ನು ಒದಗಿಸುತ್ತ ಇದೆ. ಹಾಗೆ ನೋಡಿದರೆ ಬೆಂಗಳೂರು ನಗರಕ್ಕೂ ಅರ್ಕಾವತಿಗೂ ನಿಕಟ ಸಂಬಂಧ. ಅರ್ಕಾವತಿಯನ್ನು ಬೆಂಗಳೂರು ಮರೆಯುವ ಹಾಗೆಯೇ ಇಲ್ಲ. ಇಂದು ಕಾವೇರಿಯ ನೀರು ಬೆಂಗಳೂರು ನಗರಕ್ಕೆ ಸರಬರಾಜು ಆಗುತ್ತ ಇದೆ, ನಿಜ. ಆದರೆ ಒಂದು ಕಾಲದಲ್ಲಿ ಕಾವೇರಿಯ ಕನಸನ್ನೂ ಕಾಣದಿದ್ದ ಅಥವಾ ತಿಳಿಯದಿದ್ದ ಬೆಂಗಳೂರಿನ ನಿವಾಸಿಗಳಿಗೆ ಅರ್ಕಾವತಿಯೇ ನೀರನ್ನು ಉಣಿಸುತ್ತ ಇತ್ತು. ನಿಧಾನವಾಗಿ ಕುಡಿಯಿರಿ ಎಂದು ಹೇಳುತ್ತಿತ್ತು. ಬಾಯಾರಿಕೆಯನ್ನು ಹಿಂಗಿಸುತ್ತಿತ್ತು. ಬೆಂಗಳೂರಿಗೆ ಅರ್ಕಾವತಿಯ ಸಂಬಂಧ ಒಂದು ಶತಮಾನಕ್ಕೂ ಹಿಂದಿನದು.

ಹಳೆಯ ದಿನಗಳಿಗೆ ಹೋಗೋಣವೆ ?

೧೮೯೬ರಲ್ಲಿ ಮೈಸೂರು ಸಂಸ್ಥಾನಕ್ಕೆ ಕೆ.ಶೇಷಾದ್ರಿ ಅಯ್ಯರ್ ದಿವಾನರು ಆಗಿದ್ದರು.

ಆಗ ಬೆಂಗಳೂರಿನ ಜನಸಂಖ್ಯೆ ಎಷ್ಟಿತ್ತು ಗೊತ್ತೆ? ೧,೮೦,೩೬೬ ಎಂದರೆ ಎರಡು ಲಕ್ಷಕ್ಕೂ ಕಡಿಮೆ. ಇಂದಿನ ಬೆಂಗಳೂರಿನ ಜನಸಂಖ್ಯೆ ಹತ್ತಿರ ಹತ್ತಿರ ಎಪ್ಪತ್ತು ಲಕ್ಷಗಳು.

ಆಗ ಬೆಂಗಳೂರಿನ ಸಮೀಪವೇ ಹರಿಯುತ್ತ ಇದ್ದ ಅರ್ಕಾವತಿ ನದಿಗೆ ಅಡ್ಡವಾಗಿ ಹೆಸರಘಟ್ಟದ ಕೆರೆಯಿಂದ ನೀರನ್ನು ಒದಗಿಸಬೇಕು ಎನ್ನುವ ಒಂದು ಯೋಜನೆ. ಈ ಯೋಜನೆಯಿಂದ ಎರಡು ಲಕ್ಷ ಜನರಿಗೆ ದಿನಕ್ಕೆ ಒಬ್ಬರಿಗೆ ಹತ್ತು ಗ್ಯಾಲನ್‌ಗಳಂತೆ ಇಪ್ಪತ್ತು ಲಕ್ಷ ಗ್ಯಾಲನ್ ಶೋಧಿಸಿದ ನೀರು. ಒಂದು ಗ್ಯಾಲನ್ ಎಂದರೆ ೪.೫೪೬ ಲೀಟರುಗಳು. ಒಂದು ಲೀಟರಿಗೆ ೦.೨೨೦ ಗ್ಯಾಲನ್‌ಗಳು.

ಮುಂದೆ ಬೆಂಗಳೂರಿನ ಜನಸಂಖ್ಯೆ ಇನ್ನೂ ಹೆಚ್ಚಿತು, ಎಂದರೆ ಎರಡೂವರೆ ಲಕ್ಷ ಆಗಿಬಿಟ್ಟಿತು. ಆಗಿನ ಪ್ರಭುತ್ವ ನಡೆಸುತ್ತ ಇದ್ದವರಿಗೆ ಇದೂ ಭಾರೀ ಪ್ರಶ್ನೆಯಾಗಿಬಿಟ್ಟಿತು. ವಿಷಯಗಳು ಸ್ವಾರಸ್ಯವಾಗಿದೆ ಅಲ್ಲವೆ?

ಎರಡೂವರೆ ಲಕ್ಷದ ಜನಸಂಖ್ಯೆಯೇ ಬೆಂಗಳೂರಿಗೆ ಆಗ ಕುಡಿಯುವ ನೀರಿಗೆ ಪ್ರಶ್ನೆಯಾಗುತ್ತಲೇ ೧೯೨೯ರಲ್ಲಿ ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಒಂದು ತಜ್ಞರ ಸಭೆ ನಡೆಯಿತು. ಆಗ ವಿಶ್ವೇಶ್ವರಯ್ಯನವರು ದಿವಾನ್ ಪದವಿಯಿಂದ ನಿವೃತ್ತರಾಗಿದ್ದರು. ಒಂಬತ್ತು ವರ್ಷಗಳ ಕಾಲ ಅವರು ಮೈಸೂರು ಸಂಸ್ಥಾನಕ್ಕೆ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದರು.

ಈ ತಜ್ಞರ ಸಲಹೆಯಂತೆ ಮೂರು ಲಕ್ಷ ಜನರಿಗೆ ಒಂದು ದಿನಕ್ಕೆ ಒಬ್ಬರಿಗೆ ಇಪ್ಪತ್ತು ಗ್ಯಾಲನ್‌ಗಳಂತೆ ಅರವತ್ತು ಲಕ್ಷ ಗ್ಯಾಲನ್ ನೀರು. ಸರಿ, ಕಟ್ಟೆಯನ್ನು ಕಟ್ಟಿದ್ದು ಆಯಿತು. ಆದರೆ?

ಒಂದು ಬಿರುಕು ಕಟ್ಟೆಯಲ್ಲಿ ಕ್ರಮೇಣ ಕಾಣಿಸಿಕೊಂಡು ಬಿಟ್ಟಿತು. ದಿನದಿನಕ್ಕೆ ಬಿರುಕು ಅಗಲ ಅಗಲವಾಯಿತು. ಹುಣ್ಣಿಮೆಯ ಪೂರ್ಣಚಂದ್ರ ಆಗಿಬಿಟ್ಟಿತು.

ವಿಶ್ವೇಶ್ವರಯ್ಯನವರು ಆಗ ಅಧಿಕಾರದಲ್ಲಿ ಇಲ್ಲದೆ ಬರೇ ಸಲಹೆಗಾರರು ಮಾತ್ರ ಆಗಿದ್ದರಿಂದ, ಅವರ ಸಲಹೆ ಸೂಚನೆಗಳನ್ನು ಆಗಿನ ಅಧಿಕಾರಿಗಳು ಸರಿಯಾಗಿ ಗಮನಕ್ಕೆ ತೆಗೆದುಕೊಳ್ಳದೆ ಅಥವಾ ಪಾಲಿಸದೆ ಇದ್ದುದರಿಂದ, ನಿರ್ಲಕ್ಷಿಸಿದ್ದರಿಂದ ಆ ವರ್ಷ ಜೋರು ಮಳೆ ಬಂದು ಪ್ರವಾಹ ಉಕ್ಕಿ ಕಟ್ಟೆ ಒಡೆದುಹೋಯಿತು. ವಿಶ್ವೇಶ್ವರಯ್ಯನವರು ಅಧಿಕಾರದಲ್ಲಿ ಇದ್ದಿದ್ದರೆ ಅಂಥ ಕಟ್ಟೆ ಕನಸಿನಲ್ಲಾದರೂ ಒಡೆಯಲು ಸಾಧ್ಯವಿರುತ್ತಿತ್ತೇ?

ಈಗ ಭಾರಿ ಭಾರಿ ಜಲಾಶಯಗಳ ಸೇತುವೆಗಳಲ್ಲಿ ಬಿರುಕು ಕಾಣಿಸಿಕೊಂಡು ನೀರು ಸೋರಿಹೋಗುವುದು ಮಾಮೂಲಿ ಲೋಕೋಪಯೋಗಿ ಸಂಗತಿಗಳಾಗಿ ಬಿಟ್ಟಿವೆ.

ಸರಿ, ಮತ್ತೆ ಇದನ್ನು ರಿಪೇರಿ ಮಾಡಿ ೧೯೩೩ ಮಾರ್ಚ್ ತಿಂಗಳಿನಿಂದ ಬೆಂಗಳೂರಿಗೆ ಈ ಜಲಾಶಯದಿಂದ ನೀರನ್ನು ಸರಬರಾಜು ಮಾಡುವುದು ಪ್ರಾರಂಭವಾಯಿತು.

ಇದರಲ್ಲಿ ಮುಖ್ಯವಾದ ಒಂದು ಸಂಗತಿಯನ್ನು ನಾವು ನೆನಪಿನಲ್ಲಿ ಇಡಬೇಕು. ಕೃಷ್ಣರಾಜಸಾಗರ ನಿರ್ಮಾಣ ಪೂರ್ತಿಗೊಂಡ ಇಸವಿ ೧೯೩೨. ಎಂದರೆ ಕಾವೇರಿಯ ನೀರನ್ನು ಬೆಂಗಳೂರು ವಾಸಿಗಳು ರುಚಿ ನೋಡುವುದಕ್ಕೆ ಮೊದಲೇ ಅರ್ಕಾವತಿ ಅಂಥ ಸವಿಯನ್ನು ನೀಡಿತ್ತು ಎನ್ನುವುದು ಇಲ್ಲಿನ ಮುಖ್ಯ ವಿಚಾರ.

ಇಂದು ಮಂಚನಬೆಲೆ ಜಲ ಯೋಜನೆಯಿಂದ ೨೦೦೦ ಎಕರೆಗಳು ನೀರಾವರಿ ವ್ಯಾಪ್ತಿಗೆ ಒಳಪಟ್ಟಿದೆ. ೧೯೭೯ರಿಂದ ಇದರ ಕೆಲಸ-ಕಾರ್ಯಗಳು ಪ್ರಾರಂಭವಾಗಿ ೧೯೯೧ಕ್ಕೆ ಮುಕ್ತಾಯವಾಗಿದೆ. ೯೦ ಕೋಟಿ ಹಣ ಖರ್ಚಾಗಿದೆ, ಎಂದರೆ ಈ ಯೋಜನೆ ಪೂರ್ಣಗೊಳ್ಳಲು ೨೨ ವರ್ಷಗಳು ತೆಗೆದುಕೊಂಡಿದೆ. ಬೃಹತ್ ಕೆಲಸವಾದ ಕನ್ನಂಬಾಡಿ ಅಥವಾ ಕೃಷ್ಣರಾಜ ಸಾಗರ ೧೯೧೧ರಲ್ಲಿ ಪ್ರಾರಂಭವಾಗಿ ೧೯೩೨ಕ್ಕೆ ಮುಗಿದಿದೆ. ಎಂದರೆ ಹೆಜ್ಜೆ ಹೆಜ್ಜೆಗೂ ತಮಿಳುನಾಡಿನವರ ಪ್ರತಿರೋಧದಿಂದ ೨೧ ವರ್ಷಗಳು ತೆಗೆದುಕೊಂಡಿದೆ. ಆದರೆ ಮೆಟ್ಟೂರು ೧೯೨೮ರಲ್ಲಿ ಪ್ರಾರಂಭವಾಗಿ ಆರೇ ವರುಷದಲ್ಲಿ ಎಂದರೆ ೧೯೩೪ರಲ್ಲಿ ಅದರ ಕೆಲಸ ಮುಗಿದಿದೆ.

ಒಂದು ನೋಟಕ್ಕೆ ಕೆ.ಆರ್.ಸಾಗರ ೮೬೦೦ ಅಡಿ ಉದ್ದ, ಮೆಟ್ಟೂರು [illegible] ಅಡಿ ಉದ್ದ ಎಂದಿದ್ದರೂ ಎತ್ತರ ಕೆ.ಆರ್.ಸಾಗರ ೧೩೪ ಅಡಿಗಳು, ಮೆಟ್ಟೂರು [illegible] ಅಡಿ.

ಹೀಗಾಗಿ ನೀರಿನ ಶೇಖರಣೆ ಕೃಷ್ಣರಾಜಸಾಗರದಲ್ಲಿ [illegible] ಘನ ಅಡಿಗಳಾದರೆ, ಮೆಟ್ಟೂರಿನಲ್ಲಿ ೯೩೫೦ ಘನ ಅಡಿ ನೀರು.



ಹೀಗೆ ನೀರಾವರಿ ಬಳಕೆಯಲ್ಲಿ ಕರ್ನಾಟಕಕ್ಕೆ ಪ್ರಭುತ್ವದಿಂದ ಪಕ್ಷಪಾತವೂ, ರಾಜಕೀಯದ ಆಘಾತಗಳೂ ಆಗಿ ಈ ನಮ್ಮ ನಾಡು ತಲೆ ಎತ್ತಿ ಕಣ್ಣು ಮಿಟುಕಿಸಲು ಸಾಧ್ಯವಿಲ್ಲದಂಥ ದಾರುಣ ಪರಿಸ್ಥಿತಿ.

ದಕ್ಷಿಣ ಕರ್ನಾಟಕದ ಕಥೆ ಈ ರೀತಿಯದಾದರೆ ಉತ್ತರ ಕರ್ನಾಟಕದ ಕಥೆ ಬೇರೆ ಬಗೆಯದು. ಆ ಪ್ರಾಂತ್ಯವನ್ನು ಯಾರೂ ಹೇಳುವವರೂ ಇಲ್ಲ, ಕೇಳುವವರೂ ಇಲ್ಲ, ಅಂಥ ಪರಿಸ್ಥಿತಿ. ನಿಜವಾಗಿಯೂ ಉತ್ತರ ಕರ್ನಾಟಕ ತಬ್ಬಲಿ ಕೂಸು. ಆ ಭಾಗದ ಜಿಲ್ಲೆಗಳು ಮುಂಬಯಿ ಪ್ರಾಂತ್ಯಕ್ಕೂ ಹೈದರಾಬಾದಿಗೂ ಸೇರಿಬಿಟ್ಟಿದ್ದವು.

ಮೈಸೂರಿನಲ್ಲಾದರೆ ಮಹಾರಾಜರು ಮತ್ತು ಕ್ರಿಯಾಶೀಲ ದಿವಾನರುಗಳಿಂದ ನೀರಾವರಿ ಚಟುವಟಿಕೆಗಳು ಆಗಾಗ್ಗೆ ಅಷ್ಟಿಷ್ಟು ಉದ್ದಕ್ಕೂ ನಡೆದುಕೊಂಡಿದ್ದರೂ ಉತ್ತರ ಕರ್ನಾಟಕ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಕೃಷ್ಣಾ, ತುಂಗಭದ್ರಾ ಇಂಥ ನದಿಗಳು ಗಾಢ ನಿದ್ದೆಯನ್ನು ಅಪ್ಪಿಬಿಟ್ಟಿದ್ದವು. ಇಲ್ಲವೇ ಮೌನವಾಗಿ ಕಣ್ಣೀರು ಸುರಿಸುತ್ತಾ ಇದ್ದವು.

ಭಾರತದಲ್ಲಿ ನೀರಾವರಿ ಕೆಲಸ ಕಾರ್ಯಗಳನ್ನು ವಿಜಯನಗರದ ಅರಸರಷ್ಟು ಮಾಡಿದವರು

ಬೇರೆ ಯಾರೂ ಇಲ್ಲ ಎನ್ನುವ ಹಾಗೆ ಹಿಂದೆ ನಡೆದಿದ್ದು, ಈಗ ವಿಜಯನಗರ ಹೇಳ ಹೆಸರಿಲ್ಲದಂತಾಗಿ ಹಾಳುಹಂಪೆ ಎಂದು ಕರೆಸಿಕೊಂಡುಬಿಟ್ಟಿತು.

ದೇಶಕ್ಕೆ ಸ್ವಾತಂತ್ರ್ಯ ಬಂತು. ನಮ್ಮ ನಾಡು ತನ್ನ ಸಂಕೋಲೆಗಳನ್ನು ಕಳಚಿಕೊಂಡ ಮೇಲೆಯೇ, ಕನ್ನಡನಾಡು ಒಂದುಗೂಡಿದ ಮೇಲೆಯೇ ಎಂದರೆ ಏಕೀಕರಣ ಆದ ಮೇಲಷ್ಟೆ ನಮ್ಮ ನೀರಾವರಿಯ ಕೆಲಸ ಕಾರ್ಯಗಳು ಚುರುಕಾಗಿ ನಡೆಯತೊಡಗಿದವು. ಕರ್ನಾಟಕದ ಕೆಲವು ಭಾಗಗಳ ಎಂದರೆ ಪ್ರತ್ಯೇಕ ಕರ್ನಾಟಕದ ಕೂಗನ್ನು ಮೊಳಗಿಸುತ್ತ ಇರುವ ಸ್ವಾರ್ಥ ರಾಜಕೀಯ ಧುರೀಣರು ಈ ವಿಚಾರವನ್ನು ಜನತೆಯ ಮುಂದೆ ಎತ್ತಿಡಬೇಕಾಗುತ್ತದೆ. ಏಕೀಕರಣಕ್ಕೆ ಮೊದಲು ನಮ್ಮ ನೀರಾವರಿಯ ಕೆಲಸಗಳು ಹೇಗಿದ್ದವು. ಆಮೇಲೆ ಚಟುವಟಿಕೆ ಹೇಗಾಯಿತು - ಎನ್ನುವುದನ್ನು ಈ ಕೆಟ್ಟ ರಾಜಕಾರಣಿಗಳು ಜನತೆಗೆ ವಿವರಿಸಬೇಕಾಗಿದೆ.

ಕೃಷ್ಣಾ, ತುಂಗಭದ್ರಾ, ಮಲಪ್ರಭಾ, ಘಟಪ್ರಭಾ - ಮುಂತಾದ ನದಿಗಳು ಮತ್ತೆ ಜುಳು ಜುಳು ಜುಳು ಎನ್ನುವಂತಾದದ್ದು ಏಕೀಕರಣ ಆದ ಮೇಲೆಯೇ ಎನ್ನುವ ಸಂಗತಿಯನ್ನು ಎಲ್ಲರೂ ಬಲ್ಲರು. ಮುಖವಾಡ ಹಾಕುವವರನ್ನು ಜನ ತಿರಸ್ಕರಿಸಬೇಕು.

ಬೃಹತ್ ಯೋಜನೆಗಳು ದೀರ್ಘ ಕಾಲಾವಧಿಯನ್ನು ತೆಗೆದುಕೊಳ್ಳುತ್ತವೆ. ಕೋಟಿ ಕೋಟಿ ಖರ್ಚಾಗುತ್ತವೆ. ಆದರೆ ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಆಸುಪಾಸಿನಲ್ಲಿ ಹರಿದೋಡುವ ಸಣ್ಣ ಸಣ್ಣ ನೀರಿನ ತಾಣಗಳನ್ನು ಕೆರೆ-ಕಟ್ಟೆ ಕಾಲುವೆಗಳನ್ನು ಸುರಕ್ಷಿತಗೊಳಿಸಿದರೆ, ಅಂತಂಥ ಪ್ರದೇಶಗಳು ಅಭಿವೃದ್ಧಿಯನ್ನು ಹೊಂದುತ್ತವೆ ಎನ್ನುವುದು ಬಹುಪಾಲು ತಜ್ಞರ ಅಭಿಪ್ರಾಯ. ಮಂಚನಬೆಲೆಯ ಕನಸುಗಾರ ರಾಜಶೇಖರನ್‌ರವರು ಕನಸು ಕಂಡದ್ದು ಇದನ್ನೇ.

ವ್ಯವಸಾಯದಲ್ಲಿ ಬಹಳ ಅಭಿವೃದ್ಧಿ ಸಾಧಿಸಿರುವ ಜಪಾನಿನಲ್ಲಿ ಉದ್ದದ ನದಿಗಳೇ ಇಲ್ಲ. ನಮ್ಮ ಹಾಗೆ ಪ್ರಾಕೃತಿಕ ಸಂಪತ್ತು ಕಡಿಮೆ. ಕಾಡು ಬೆಟ್ಟಗಳೂ ನೀರಿನ ಸೆಲೆಗಳೂ ನಮಗಿಂತ ತುಂಬಾ ಕಡಿಮೆ.

ಜಪಾನ್ ಇರುವುದೇ ಒಂದು ಬಾಲದ ಹಾಗೆ. ಅದರಲ್ಲೂ ಹಲವು ದ್ವೀಪಗಳು. ಈ ದ್ವೀಪಗಳಲ್ಲಿ ಕೆಲವು ಅನೇಕ ಸಲ ಬೆಂಕಿಯನ್ನು ಉಗುಳಿಕೊಂಡಿರುತ್ತವೆ. ಹಾಗಿದ್ದೂ ಆ ನಾಡು ತಾಂತ್ರಿಕತೆಯಲ್ಲಿ, ಕೈಗಾರಿಕೆಯಲ್ಲಿ ಈಗ ಸಿಕ್ಕಸಿಕ್ಕವರೆಲ್ಲರೂ ಕಿವಿಗೆ ಹಚ್ಚಿಕೊಳ್ಳುವ ಮೊಬೈಲ್ ತಯಾರಿಕೆಯಲ್ಲಿ ಮಾತ್ರ ಅಲ್ಲ, ವ್ಯವಸಾಯದಲ್ಲಿಯೂ ತುಂಬಾ ಅಭಿವೃದ್ಧಿಯನ್ನು ಸಾಧಿಸಿದೆ. ವ್ಯವಸಾಯದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಅಲ್ಲಿನ ವ್ಯವಸಾಯ ತಜ್ಞರು ಮಾಡುತ್ತಾರೆ. ಅದರಲ್ಲಿ ಸಾರ್ಥಕತೆಯನ್ನು ಪಡೆಯುತ್ತಾರೆ. ಜಪಾನ್ ಸಾಧನೆ ಬೆರಗುಗೊಳ್ಳುವಂಥಾದ್ದು. ಇದಕ್ಕೆ ಮುಖ್ಯ ಕಾರಣ ಅಲ್ಲಿನ ಸಣ್ಣ ಸಣ್ಣ ನೀರಾವರಿ ಯೋಜನೆಗಳೇ.

ರಾಜಶೇಖರನ್‌ರವರು ರಾಜಕೀಯದಲ್ಲಿ ಹಲವು ಏಳು-ಬೀಳುಗಳನ್ನು ಕಂಡಿದ್ದಾರೆ.

ಪ್ರಸ್ತುತ ರಾಜ್ಯಸಭೆಯ ಸದಸ್ಯರೂ ಆಗಿದ್ದಾರೆ. ಅಂತೆಯೇ ಸಣ್ಣ ಯೋಜನೆಗಳಿಂದ ಪರಿಣಾಮಕಾರೀ ಪ್ರಯೋಜನಗಳನ್ನು ಪಡೆಯಬಹುದು ಎನ್ನುವ ಚಿಂತನೆ ಅವರಿಗೆ ಮೊಳಕೆಯೊಡೆಯಲು ಅವರ ಹುಟ್ಟು, ವಿದ್ಯಾಭ್ಯಾಸ-ಇಂಥವುಗಳ ಹಿನ್ನೆಲೆಯೂ ಮುಖ್ಯ ಕಾರಣವಾಗಿರುತ್ತದೆ.

ಶ್ರೀಯುತರು ಕೃಷಿಕರ ಮನೆತನದಲ್ಲಿಯೇ ಜನಿಸಿದವರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮರಳವಾಡಿ ಎನ್ನುವ ಪುಟ್ಟ ಊರು ಅವರ ಜನ್ಮಸ್ಥಳ.

ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ಪತ್ರಿಕೋದ್ಯಮ - ಮುಂತಾದವುಗಳಲ್ಲಿ ಅವರು ಪದವಿ ಗಳಿಸಿದರೂ ಅವರ ಮುಖ್ಯವಾದ ಆಸಕ್ತಿ ಕೃಷಿ ಕ್ಷೇತ್ರವೇ. ಇಂದು ಮಣ್ಣಿನಮಗ, ಗಾಂಧಿ, ಅಂಬೇಡ್ಕರ್ - ಇಂಥ ಹೆಸರುಗಳು ಓಟು ಗಳಿಕೆಯ ಒಂದು ಭಿಕ್ಷಾಪಾತ್ರೆಯೇ ಆಗಿರುತ್ತದೆ. ನಾನು ಮಣ್ಣಿನ ಮಗ ಎಂದು ಮಣ್ಣನ್ನೇ ನೋಡದವರೂ ಹೇಳುತ್ತ ಇದ್ದಾರೆ. ಯಾರು ಮಣ್ಣಿನ ಮಗ ಎನ್ನುವುದೇ ಪ್ರಶ್ನೆಯಾಗಿ ಬಿಟ್ಟಿದೆ. ಮಣ್ಣು ಎಂದರೆ ಏನು ಎಂದು ಕೇಳುವಂತೆಯೂ ಆಗಿಬಿಟ್ಟಿದೆ.

ಆದರೆ, ಒಂದು ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದು ರೈತ ಮಗನಾಗಿ ರೈತರೊಂದಿಗೆ ಒಡನಾಡುತ್ತಾ ರಾಜಶೇಖರನ್‌ರವರು ನಿಜವಾದ ಮಣ್ಣಿನ ಮಗನೇ ಆಗಿದ್ದಾರೆ ಎನ್ನುವುದಕ್ಕೆ ಹಲವು ನಿದರ್ಶನಗಳನ್ನು ನಾವು ಕೊಡಬಹುದು. ಇವುಗಳಲ್ಲಿ ಮುಖ್ಯವಾದದ್ದು ಅವರು ಅಮೆರಿಕ ಸಂಯುಕ್ತ ಸಂಸ್ಥಾನಗಳ ಮಿಸ್ಸೋರಿ ವಿಶ್ವವಿದ್ಯಾನಿಲಯದಲ್ಲಿ ಕೃಷಿ ತರಬೇತಿ, ಕೃಷಿ ವಿಸ್ತರಣೆ, ಕೃಷಿ ಕ್ರಯವಿಕ್ರಯ - ಮುಂತಾದ ವಿಷಯಗಳಲ್ಲಿಯೇ ಪದವಿ ಗಳಿಸಿದರು. ಕ್ಯಾನಸಾಸ್ ರಾಜ್ಯ ವಿಶ್ವವಿದ್ಯಾನಿಲಯದಿಂದ ಇಂಥ ವಿಷಯಗಳಿಗಾಗಿಯೇ ತರಬೇತಿಯನ್ನು ಪಡೆದುಕೊಂಡರು. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಯಲ್ಲಿ ಪ್ರಭುತ್ವವನ್ನು ಸಾಧಿಸಿಕೊಂಡರು. ಮಂಚನಬೆಲೆಯ ಯೋಜನೆ ಅವರಲ್ಲಿ ರೂಪುಗೊಂಡದ್ದು ಹೀಗಾಗಿಯೇ. ಇದು ಎಲ್ಲರೂ ಒಪ್ಪಿಕೊಳ್ಳುವಂಥ ಸತ್ಯಸಂಗತಿ.

ಶ್ರೀಯುತರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದು, ಜೈಲು ಸೇರಿದ್ದು, ರಾಷ್ಟ್ರನಾಯಕರಾದ ನಿಜಲಿಂಗಪ್ಪನವರ ಅಳಿಯಂದಿರಲ್ಲಿ ಒಬ್ಬರಾದದ್ದು - ಇವೆಲ್ಲವೂ ಎಲ್ಲರಿಗೂ ತಿಳಿದ ವಿಚಾರಗಳೇ. ಆ ಕಾಲದಲ್ಲಿ ಎಲ್ಲ ರಾಜಕೀಯ ಧುರೀಣರೂ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿದ್ದವರೇ. ಗಾಂಧಿ ಮಾರ್ಗವನ್ನು ಒಪ್ಪಿಕೊಂಡವರೇ. ಅಂತೆಯೇ ರಾಜಶೇಖರನ್‌ರವರು ಸಹ ಗಾಂಧೀಜಿಯವರ ರಚನಾತ್ಮಕ ಕೆಲಸಗಳಿಗೆ ಮಾರು ಹೋಗಿದ್ದುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಆದರೆ ಅನೇಕ ಮುಖಂಡರು, ಇವರು ರಾಜಕೀಯ ಧುರೀಣರಾಗಿರಲಿ ಬೇರೆ ಕ್ಷೇತ್ರಗಳ ತಜ್ಞರೇ ಆಗಿರಲಿ - ಶಾಶ್ವತವಾದ ಒಂದು ಕೆಲಸವನ್ನು ಮಾಡಿರುತ್ತಾರೆ. ಅದು ಜನಪರವಾಗಿ ಎಂದಿಗೂ ಉಳಿದುಕೊಳ್ಳುತ್ತದೆ. ಆ ವಿಚಾರ ಬಹಳ ಮುಖ್ಯವಾದದ್ದು.

ತಮ್ಮ ವಿದ್ಯೆ ಅಂಥಾದ್ದು ಇಂಥಾದ್ದು, ಇವುಗಳೊಂದಿಗೆ ಲೋಕಾನುಭವವೂ ಸೇರಿಕೊಂಡರೆ ಆಗ ಸಿದ್ಧಿಗೆ ನಾಲ್ಕು ಹಂತ ಜಿಗಿತ - ರಾಜಶೇಖರನ್‌ರವರ ಲೋಕಾನುಭವ ವಿಸ್ತೃತವಾದದ್ದು. ಹೀಗೆಯೇ ಅವರು ಹೆಚ್ಚು ಕಡಿಮೆ ಈ ಜಗತ್ತಿನ ಎಲ್ಲ ಕಡೆ ಸುತ್ತು ಹಾಕಿ ಬಂದಿದ್ದಾರೆ. ಬಹುಶಃ ಅವರು ಜಗತ್ತಿನ ಎಲ್ಲ ಪ್ರಮುಖ ನಾಡನ್ನೂ ನೋಡಿದ್ದಾರೆ. ತಮ್ಮ ಆಸಕ್ತಿಯ ವಿಷಯಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಆಯಾಯ ನಾಡಿನ ಪ್ರಗತಿಯನ್ನು ಕಣ್ಣಾರೆ ನೋಡಿ ತಮ್ಮ ಜ್ಞಾನ ಸಂಪತ್ತನ್ನು ವೃದ್ಧಿಸಿಕೊಂಡಿದ್ದಾರೆ. ಹೀಗಾಗಿ ವ್ಯಾಪಕ ಅನುಭವ ಅವರಿಗೆ ದೊರಕಿದೆ.

ಇಂದು ವಿಧಾನಸೌಧ ಭವ್ಯವಾಗಿ ತಲೆ ಎತ್ತಿ ನಿಂತಿದೆ, ನಿಜ. ಅದು ಬೆಂಗಳೂರಿನ ತಲೆಯ ಮೇಲಣ ಕಿರೀಟವೂ ಆಗಿದೆ, ಸರಿಯೇ. ಅದನ್ನು ಪ್ರಾರಂಭಿಸಿ ಮುಗಿಸುವಷ್ಟರಲ್ಲಿ ಭಾರೀ ಆಪಾದನೆಗಳು ಕೇಳಿ ಬಂದದ್ದೂ ನಿಜವೇ. ಇದೂ ಸಹ ಒಂದು ಹಳೆಯ ವಿಚಾರವೇ.

ಆರೆ ಇಂದು ವಿಧಾನಸೌಧದಲ್ಲಿ ನೂರಾರು ಇಲಾಖೆಗಳು ಕೆಲಸ ಮಾಡಿಕೊಂಡಿವೆ. ಒಂದೇ ಛತ್ರಿಯಡಿ ಸೇರಿಕೊಳ್ಳಲು ಸಹಾಯಕವಾಗಿವೆ. ಅಷ್ಟಕ್ಕೂ ಈ ಭವ್ಯ ಕಟ್ಟಡ ಸ್ಥಳವನ್ನು ಒದಗಿಸಿಕೊಟ್ಟಿದೆ. ನಮ್ಮ ಎಂ.ಎಲ್.ಎ., ಎಂ.ಎಲ್.ಸಿ.ಗಳಿಗೆ ವಿಧಾನಸೌಧ ಆಡುಂ ಬೊಲವೂ ಅಖಾಡವೂ ಆಗಿರುವುದು ಸತ್ಯಸ್ಯ ಸತ್ಯ.

ಹಾಗೆಯೇ ವಿಧಾನಸೌಧ ಎಂದಾಗ ಕೆಂಗಲ್ ಹನುಮಂತಯ್ಯನವರು ನಮ್ಮ ಕಣ್ಣ ಮುಂದೆ ತೇಲಿ ಬರುತ್ತಾರೆ. ಕನ್ನಂಬಾಡಿ ಎಂದಾಗ ಕಾವೇರಿ ನೀರಿನೊಂದಿಗೆ ವಿಶ್ವೇಶ್ವರಯ್ಯನವರು ಮಿಂಚುತ್ತಾರೆ, ನುಲಿಯುತ್ತಾರೆ. ಹಾಗೆಯೇ ಮಂಚನಬೆಲೆ ಎಂದಾಗ ರಾಜಶೇಖರನ್‌ರವರ ಚಿತ್ರ ಮೂಡಲೇಬೇಕು. ಇದು ಎಂದೂ ಉಳಿಯುವ ಒಂದು ಶಾಶ್ವತವಾದ ಕೆಲಸವಷ್ಟೆ.

ಮಂಚನಬೆಲೆ ಯೋಜನೆ ರೂಪುಗೊಂಡಾಗ ರಾಜಶೇಖರನ್ ಲೋಕಸಭಾ ಸದಸ್ಯರಾಗಿದ್ದರು. ಆಗ ಕೇಂದ್ರದಲ್ಲಿ ಡಾ। ಕೆ.ಎಲ್.ರಾವ್ ನೀರಾವರಿ ಮಂತ್ರಿ, ಗಂಗಾ-ಕಾವೇರಿ ಬಿತ್ತನೆ ಪ್ರಾರಂಭ ಆದದ್ದು ಇವರಿಂದಲೇ. ರಾಜ್ಯದಲ್ಲಿ ವೀರೇಂದ್ರ ಪಾಟೀಲರು ಲೋಕೋಪಯೋಗಿ ಮಂತ್ರಿ, ನಿಜಲಿಂಗಪ್ಪನವರು ಮುಖ್ಯಮಂತ್ರಿ.

ಆ ಕಾಲದಲ್ಲಿ ರಾಜಶೇಖರನ್‌ರವರು ಮಂಚನಬೆಲೆಯ ಯೋಜನೆ, ಸ್ಥಳ ಪರಿಶೀಲನೆ - ಮುಂತಾದವುಗಳಿಗಾಗಿ ಅಹರ್ನಿಶಿ ದುಡಿದದ್ದು ಇಂದಿನ ಪೀಳಿಗೆಯವರಿಗೆ ಹೇಗೆ ತಿಳಿಯಲು ಸಾಧ್ಯ?

ಆಗ ಕೇಂದ್ರದ ನೀರಾವರಿ ಸಚಿವರಾಗಿದ್ದ ಡಾ। ಕೆ.ಎಲ್. ರಾವ್‌ರವರು ಸಮರ್ಥ ಇಂಜಿನಿಯರೂ ಆಗಿದ್ದರು. ೧೯೬೩ರಲ್ಲಿ ಪದ್ಮಭೂಷಣ ಪ್ರಶಸ್ತಿಯೂ ಅವರಿಗೆ ಲಭಿಸಿದೆ.

ಅಂಥ ರಾವ್‌ರವರೊಂದಿಗೆ ತಮ್ಮ ಯೋಜನೆಯ ನೀಲಿನಕ್ಷೆ, ಈ ಯೋಜನೆಯಿಂದ

ಆಗಲಿರುವ ಲಾಭಾಂಶಗಳು, ರೈತ ಮಕ್ಕಳಿಗೆ ಇದರಿಂದ ದೊರಕಲಿರುವ ಪ್ರಯೋಜನ ಇಂಥವೆಲ್ಲವನ್ನು ಮನದಟ್ಟು ಮಾಡಿಕೊಡುವುದು ಮುಂತಾದವು ಆ ಕಾಲದಲ್ಲಿ ಸಾಹಸದ ಕೆಲಸಗಳೇ ಆಗಿದ್ದವು. ಯಾಕೆಂದರೆ ಕೇಂದ್ರ ಮಂತ್ರಿ ಬರೇ ನೀರಾವರಿ ಮಂತ್ರಿ ಮಾತ್ರವಲ್ಲ, ಆತ ಸಮರ್ಥ ನೀರಾವರಿ ತಜ್ಞನೂ ಹೌದು. ನೀರಿನ ಬಗ್ಗೆ ಸಾಕಷ್ಟು ಅನುಭವವನ್ನು ಗಳಿಸಿಕೊಂಡಿರುವ ಧುರೀಣನೂ ಹೌದು.

ಇಂಥವರನ್ನು ಕರೆಸಿಕೊಳ್ಳುವದು, ಸ್ಥಳ ಪರಿಶೀಲನೆ, ಅವರ ತಲೆಯೊಳಗೆ ತಮ್ಮ ಯೋಜನೆಗಳನ್ನು ತುಂಬುವುದು - ಇಂಥವನ್ನೆಲ್ಲ ಮಾಡಬೇಕಾದರೆ ಅಂಥವನೂ ಸಾಮರ್ಥ್ಯಶಾಲಿಯೇ ಆಗಿರಬೇಕು. ಕೆ.ಎಲ್.ರಾವ್ ಇಲ್ಲಿಗೆ ಬಂದಾಗ ಅವರಿಗೆ ಅದ್ದೂರಿಯ ಸ್ವಾಗತ, ಗ್ರಾಮ ಗ್ರಾಮಗಳ ಜನರಿಂದ ಡೋಲು ತಮಟೆಗಳ ಕೋಲಾಹಲ - ಇವೆಲ್ಲವೂ ಭಾರೀ ರೋಚಕ ಕತೆಗಳೇ ಆಗಿವೆ. ರಾಜಶೇಖರನ್‌ರವರು ಕೇಂದ್ರದೊಡನೆ ನಡೆಸಿದ ಪತ್ರ ವ್ಯವಹಾರಗಳು ಬೆಟ್ಟದಷ್ಟು ಇವೆ.

ಮತ್ತೊಂದು ಮುಖ್ಯ ವಿಚಾರವೂ ಇದೆ. ಅರ್ಕಾವತಿ ಸಣ್ಣ ನದಿಯಾದರೂ ಕೆಲವು ಸಮಯ ಅದು ಲಿಂಗಧೀರ ಆಗುವುದೂ ಉಂಟು. ಕೆಲವು ಸಲ ಅದರಲ್ಲಿ ಅರ್ಧ ಸಿಎಂಟಿಎಫ್‌ಟಿ ನೀರು ಹರಿದರೆ, ಮತ್ತೆ ಕೆಲವು ಸಲ ಆರು ಸಿಎಂಟಿಎಫ್‌ಟಿ ನೀರು ಹೀಗೆ ಹುಚ್ಚು ಹುಚ್ಚು.

ಈ ರೀತಿ ಪ್ರವಾಹ ಉಕ್ಕಿದಾಗ ಏನು ಮಾಡಬೇಕು, ಅದರ ನಿಯಂತ್ರಣ, ಹಾಗೆಯೇ ಈ ನದೀ ಕಣಿವೆಯಲ್ಲಿ ಅಪಾರವಾಗಿ ಕೃಷಿ ಮಾಡುವ ಹಿಪ್ಪನೇರಳೆಯ ರಕ್ಷಣೆ - ಇವುಗಳು ಎಲ್ಲದಕ್ಕೂ ಪರಿಹಾರ ಸೂಚಿಸಬೇಕಾಗಿತ್ತು. ಕೇಂದ್ರದ ಮಂತ್ರಿಗಳಿಗೆ ಸೂಕ್ತ ರೀತಿಯಲ್ಲಿ ಸಮಜಾಯಿಷಿಕೊಡಬೇಕಾಗುತ್ತಿತ್ತು. ಯಾಕೆಂದರೆ ಈ ನದೀ ಬಯಲಿನಲ್ಲಿ ಹತ್ತು ಲಕ್ಷ ಜನ ರೇಷ್ಮೆ ಬೆಳೆಯಿಂದ ಅವಲಂಬಿತರಾಗಿದ್ದರು. ಅವರ ರಕ್ಷಣೆಯೂ ಮುಖ್ಯವಾದ ವಿಷಯವಾಗಿತ್ತು.

ಅಷ್ಟಲ್ಲದೆ ಈ ನದಿಯ ಹುಚ್ಚು ಪ್ರವಾಹದಿಂದ ರಾಮನಗರಕ್ಕೆ ಆಗುತ್ತ ಇದ್ದ ಅನರ್ಥವನ್ನು ತಪ್ಪಿಸುವುದೂ ಮಂಚನಬೆಲೆಯ ಮುಖ್ಯ ಉದ್ದೇಶ ಎನ್ನುವುದನ್ನು ಸಹ ಕೇಂದ್ರಕ್ಕೆ ಮನದಟ್ಟು ಮಾಡಿಕೊಡಬೇಕಾಗಿತ್ತು.

ಮಳೆಗಾಲದಲ್ಲಿ ಉಕ್ಕುವ ಅರ್ಕಾವತಿಯ ಪ್ರವಾಹದಿಂದ ಬಹಳ ಹಾನಿಯಾಗುತ್ತದೆ ಎನ್ನುವುದೂ, ಉಪ್ಪುನೇರಳೆ ಗಿಡಗಳು ನಾಶವಾಗುವ ವಿಷಯವೂ ತಮಗೆ ತಿಳಿಯದು ಎಂದೂ, ಹಾಗಾಗಿ ಈ ನದಿಗೆ ಕಡಿವಾಣ ಹಾಕಬೇಕಾದುದು ಅತ್ಯಗತ್ಯ ಎಂದೂ ನೀರಾವರಿ ಸಚಿವ ಡಾ। ಕೆ.ಎಲ್.ರಾವ್‌ರವರೇ ಹೇಳಿಬಿಟ್ಟರು.

ಹೀಗಾಗಿ ಮಂಚನಬೆಲೆ ಪ್ರಾಜೆಕ್ಟಿಗೆ ೧೯೬೯ರ ಅಕ್ಟೋಬರ್ ೨೫ನೆಯ ತಾರೀಖು ಶಿಲಾನ್ಯಾಸ ಮಾಡಲಾಯಿತು.

ಒಟ್ಟು, ಮೊತ್ತವಾಗಿ ಹೇಳಬೇಕಾದುದು ಇಷ್ಟು ಕರ್ನಾಟಕದಲ್ಲಿ ರೈತ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ ಮತ್ತು ಯುವಜನ ಸೇವಾ ಇಲಾಖೆ ಮುಂತಾದವು ಪ್ರಾರಂಭ ಆದದ್ದು ರಾಜಶೇಖರನ್ ಅವರಿಂದಲೇ. ಈ ವಿಚಾರ ಅನೇಕರಿಗೆ ತಿಳಿದಿಲ್ಲ. ತಿಳಿದುಕೊಳ್ಳಬೇಕಾದದ್ದು ನಮ್ಮ ಮುಖ್ಯ ಕರ್ತವ್ಯಗಳಲ್ಲಿ ಒಂದು. ಬೆಂಗಳೂರಿನಲ್ಲಿರುವ ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಕಳೆದ ಇಪ್ಪತ್ತೈದು ವರುಷಗಳಿಂದಲೂ ಕ್ರಿಯಾಶೀಲವಾಗಿ ಕೆಲಸ ಮಾಡುತ್ತಾ ಇದೆ. ಇದು ಅಂತರರಾಷ್ಟ್ರೀಯ ತರಬೇತಿ ಸಂಸ್ಥೆಯೂ ಹೌದು. ಏಷ್ಯಾ ಖಂಡದ ಎಲ್ಲಾ ನಾಡುಗಳ ಪ್ರತಿನಿಧಿಗಳೂ ಈ ಸಂಸ್ಥೆಯಲ್ಲಿ ಇದ್ದಾರೆ. ಈ ಸಂಸ್ಥೆಗೆ ರಾಜಶೇಖರನ್ ಮಾರ್ಗದರ್ಶಿತ್ವ ಬಹಳ ಅಮೂಲ್ಯವಾದದ್ದು.

ಅದು ಸರಿ, ಮಂಚನಬೆಲೆ ಎನ್ನುವ ಹೆಸರಿನ ಹುಟ್ಟು ಹೇಗೆ? ಮಂಚನಬೆಲೆ ಮಾಗಡಿ ತಾಲ್ಲೂಕಿನಲ್ಲಿ ಇರುವ ರಾಮನಗರಕ್ಕೆ ಇಪ್ಪತ್ತು ಕಿಲೋ ಮೀಟರ್ ದೂರದ ಒಂದು ಪುಟ್ಟಹಳ್ಳಿ. ಮಂಚ ಎನ್ನುವವನು ಆ ಊರಿನ ಹುಟ್ಟಿಗೆ ಕಾರಣನೋ? ಆತ ಜನಾನುರಾಗಿಯಾಗಿದ್ದು ಊರಿನ ಜನರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡಿದ್ದನೋ ಹೇಗೆ? ಹೀಗಾಗಿ ಅವನ ಹೆಸರಿನಿಂದ ಆ ಊರವರು ಅವನ ಮೇಲಣ ಗೌರವ ಸೂಚಿಸುವುದಕ್ಕಾಗಿ ಆ ಗ್ರಾಮಕ್ಕೆ ಅವನ ಹೆಸರನ್ನಿಟ್ಟರೋ?

ಇದು ಸಂಶೋಧಕರಿಗೆ ಬಿಟ್ಟ ವಿಚಾರ.

***

# ಸೇವಾ ರತ್ನ

ಸಿ. ಸೋಮಶೇಖರ

ಕರ್ನಾಟಕ ಪವಿತ್ರ ಭೂಮಿ. ಧರ್ಮಕರ್ಮಗಳ ಸಮನ್ವಯದ ಭೂಮಿ. ಸಂತರ ದಾರ್ಶನಿಕರ ತಪಸ್ವಿಗಳ ಪುಣ್ಯಭೂಮಿ. ಅನೇಕ ಸೇವಾ ಚೇತನಗಳಿಗೆ ಜನ್ಮ ಕೊಟ್ಟ ಹಿರಿಮೆ ಕನ್ನಡನಾಡಿನದು.

ಸಾರ್ವಜನಿಕ ಬದುಕೆಂದರೆ ಅದು ಶಿವನನ್ನು ಒಲಿಸುವ ಕಾಯಕ ಕ್ಷೇತ್ರ ಎಂದೇ ಭಾವಿಸಿದ ಒಂದು ಅನನ್ಯ ಚೇತನ ಸನ್ಮಾನ್ಯ ಶ್ರೀ ಎಂ.ವಿ. ರಾಜಶೇಖರನ್.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಮರಳವಾಡಿಯಲ್ಲಿ ಶ್ರೀ ಸಿ.ವೀರಶೆಟ್ಟಯ್ಯ ಮತ್ತು ಶ್ರೀಮತಿ ಬಸಮ್ಮನವರ ಹೆಮ್ಮೆಯ ಪುತ್ರರಾಗಿ ದಿನಾಂಕ ೧೨ನೇ ಸೆಪ್ಟೆಂಬರ್ ೧೯೨೮ರಲ್ಲಿ ಜನಿಸಿದ ರಾಜಶೇಖರನ್ ಮುಡುಕುತೊರೆಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ವರಪ್ರಸಾದವೆಂದೇ ಎಲ್ಲರ ನಂಬಿಕೆ.

ಮೈಸೂರು ವಿಶ್ವವಿದ್ಯಾನಿಲಯದಿಂದ ಅರ್ಥಶಾಸ್ತ್ರ, ರಾಜಕೀಯಶಾಸ್ತ್ರ ಹಾಗು ಪತ್ರಿಕೋದ್ಯಮ ಪದವಿಗಳ ಪ್ರಾಪ್ತಿ. ಅಮೇರಿಕಾದ ಮಿಸ್ಸೋರಿ ವಿಶ್ವವಿದ್ಯಾನಿಲಯದಿಂದ ಕೃಷಿ ಹಾಗೂ ಸಹಕಾರ ಕ್ಷೇತ್ರಕ್ಕೆ ಸಂಬಂಧಿಸಿದಂತೆ ತರಬೇತಿ. ಅಮೇರಿಕಾ ವಿಶ್ವವಿದ್ಯಾನಿಲಯವೊಂದರಿಂದ ಆರೋಗ್ಯ, ಶಿಕ್ಷಣ ವಿಸ್ತರಣಾ ಕ್ಷೇತ್ರದಲ್ಲೂ ವಿಶೇಷ ತರಬೇತಿ. ಗ್ರಾಮೀಣ ಅಭಿವೃದ್ಧಿ ಹಾಗು ಕೃಷಿ ವಿಜ್ಞಾನ ಅವರ ಬದುಕಿನ ಉಸಿರು.

ಚಿಕ್ಕ ವಯಸ್ಸಿನಲ್ಲಿಯೇ ರಾಜಕಾರಣದ ಮೂಲಕ ಸೇವಾಕ್ಷೇತ್ರದ ನಂಟು. ಕಾಂಗ್ರೆಸ್ ಪಕ್ಷದಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಕೆ. ಕರ್ನಾಟಕ ಸರ್ಕಾರದಲ್ಲಿ ಯುವಜನ ಸೇವಾ ಇಲಾಖೆಯ ಸ್ಥಾಪನೆಯ ದಿಸೆಯಲ್ಲಿ ಇವರದು ಬಹುಮುಖ್ಯ ಪಾತ್ರ. ಸೈದ್ಧಾಂತಿಕ ನೆಲೆಯಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ಯಾವುದೇ ಆಮಿಷಕ್ಕೆ ಒಳಗಾಗದ ದಿಟ್ಟತನ. ಕರ್ನಾಟಕ ಕಾಂಗ್ರೆಸ್ ಪಕ್ಷದೊಂದಿಗೆ ವಿಶೇಷ ಸಂಬಂಧ. ಸಿದ್ಧಾಂತ, ಶಿಸ್ತು ಸಂಯಮಕ್ಕೆ ಪರ್ಯಾಯ ಹೆಸರೇ ಶ್ರೀ ಎಂ.ವಿ.ರಾಜಶೇಖರನ್.

## ನಿಜಬಿಂಬ

ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ವ್ಯಕ್ತಿತ್ವದಿಂದ ವಿಶೇಷವಾಗಿ ಪ್ರಭಾವಿತರಾದ ಅವರದು ಮೈಸೂರು ಚಲೋ ಆಂದೋಲನದಲ್ಲಿ ಕ್ರಿಯಾಶೀಲ ಪಾತ್ರ. ೧೯೬೭ರಲ್ಲಿ ಕನಕಪುರದಿಂದ ಲೋಕಸಭೆಗೆ ಆಯ್ಕೆ. ಪಾರ್ಲಿಮೆಂಟ್‌ನ ವಿವಿಧ ಸಮಿತಿಗಳಲ್ಲಿ ಕೆಲಸ ನಿರ್ವಹಿಸಿದ ಅನುಭವ. ಕೇಂದ್ರ ರೇಷ್ಮೆ ಮಂಡಳಿಯೊಂದಿಗೆ ಅಂದಿನಿಂದ ಇಂದಿನವರೆವಿಗೂ ನಿಕಟ ಸಂಪರ್ಕ. ರಾಷ್ಟ್ರದ, ರಾಜ್ಯದ ಕೃಷಿ ಕ್ಷೇತ್ರದಲ್ಲಿನ ಸುಧಾರಣೆಗಳ ಹರಿಕಾರ. ಏಷಿಯನ್-ಗ್ರಾಮೀಣಾಭಿವೃದ್ಧಿ ಸಂಸ್ಥೆಯಂತಹ ವಿನೂತನ ಸಂಸ್ಥೆಯ ವಿಶ್ವಸ್ಥ ಮಂಡಳಿಯನ್ನು ಸಂಸ್ಥಾಪಿಸಿ ಮಾಡಿದ ಸಾರ್ಥಕ ಚೇತನ. ಕರ್ನಾಟಕ ವಿಧಾನಸಭೆಗೂ, ವಿಧಾನಪರಿಷತ್ತಿಗೂ ಸದಸ್ಯರಾಗಿ ಮೇಲ್ಮನೆ, ಕೆಳಮನೆಗಳಿಗೆ ಶೋಭೆ ತಂದುಕೊಟ್ಟ ಮೇಧಾವಿ. ಕೃಷಿ, ಆಹಾರ, ಗ್ರಾಮೀಣಾಭಿವೃದ್ಧಿ ವಿಷಯಗಳಿಗೆ ಸಂಬಂಧಿಸಿದಂತೆ ವಿಶ್ವದಾದ್ಯಂತ ನಡೆದ ನೂರಾರು ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ ಮಹಾನ್ ವಿದ್ವನ್ಮಣಿ. ಭಾರತ ದೇಶದ ಸಂಸ್ಕೃತಿ ಸಂಸ್ಕಾರಗಳ ನೈಜ ಪ್ರತಿನಿಧಿ. ಹಲವಾರು ದೇಶ ವಿದೇಶಗಳ ಸಂಘ-ಸಂಸ್ಥೆಗಳಿಂದ ಸನ್ಮಾನ ಗೌರವಗಳಿಗೆ ಪಾತ್ರರಾಗಿ ನಾಡು, ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದ "ಗ್ರಾಮೀಣ ವಿಕಾಸದ ವಕ್ತಾರ" ಎಂಬ ಬಿರುದಿಗೆ ಪಾತ್ರ.

ರಾಷ್ಟ್ರನಾಯಕ, ಕರ್ನಾಟಕ ಭಾಗ್ಯಶಿಲ್ಪಿ ಕರ್ನಾಟಕ ಏಕೀಕರಣದ ಸೇನಾನಿ ಎಸ್.ನಿಜಲಿಂಗಪ್ಪನವರ ಪುತ್ರಿ ಕುಮಾರಿ ಗಿರಿಜಾದೇವಿಯ ಕೈಹಿಡಿದು, ಎಸ್.ನಿಜಲಿಂಗಪ್ಪ ಅವರು ಪ್ರತಿಪಾದಿಸಿದ ರಾಜಕೀಯ ಮೌಲ್ಯಗಳ ಸಂರಕ್ಷಕರಾಗಿ ಅವರ ಪ್ರೀತಿ ಗೌರವಗಳಿಗೆ ಪಾತ್ರರಾಗುವ ಮೂಲಕ ನಿಜಲಿಂಗಪ್ಪನವರ ವ್ಯಕ್ತಿತ್ವದ ಛಾಪನ್ನು ತಮ್ಮ ಬದುಕಿನಲ್ಲಿ ಮೂಡಿಸಿಕೊಂಡ ಅನನ್ಯ ವ್ಯಕ್ತಿ ಸನ್ಮಾನ್ಯ ಶ್ರೀ ಎಂ.ವಿ.ರಾಜಶೇಖರನ್.

ಸದಾ ಮುಗುಳ್ನಗೆಯ ಸಂತೃಪ್ತಭಾವದ ನಿಷ್ಕಪಟ ಮನಸ್ಸಿನ, ಉದಾತ್ತ ಚಿಂತನೆಯ, ನೋಡಿದೊಡನೆಯೇ ಕೈಮುಗಿಯಬೇಕೆಂಬ ಭಾವಕ್ಕೆ ಪ್ರೇರಣೆ ನೀಡುವ ಒಬ್ಬ ಆದರ್ಶ ವ್ಯಕ್ತಿ ಎಂ.ವಿ.ರಾಜಶೇಖರನ್.

**ನುಡಿದಡೆ ಮುತ್ತಿನ ಹಾರದಂತಿರಬೇಕು.**
**ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು.**
**ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು.**
**ನುಡಿದಡೆ ಲಿಂಗ ಮೆಚ್ಚಿ ಅಹುದಹುದನಬೇಕು**
**ನುಡಿಯೊಳಗಾಗಿ ನಡೆಯದಿದ್ದಡೆ,**
**ಕೂಡಲಸಂಗಮದೇವನೆಂತೊಲಿವನಯ್ಯಾ?**

ಎಂಬ ಬಸವಣ್ಣನವರ ವಾಣಿಯಂತೆ ಅವರದು ಮುತ್ತಿನಂತಹ ಮಾತು. ಯಾರ ಮನಸ್ಸನ್ನು ನೋಯಿಸದ ಮೃದುಭಾಷಿ. ಎನಗಿಂತ ಕಿರಿಯರಿಲ್ಲ ಎಂಬ ಅನನ್ಯ ಭಾವ.

ನೊಂದ ಬೆಂದವರ ಪಾಲಿಗೆ ದಯೆಯ ಅನುಕಂಪದ ಮಹಾಪೂರವನ್ನೇ ಹರಿಸುವ ಪ್ರೀತಿಯ ಮಹಾಸಾಗರವಾಗಿ, ಸದಾಕಾಲ ನೊಂದವರ, ದೀನದಲಿತರ ಕಲ್ಯಾಣದ

ಚಿಂತನೆಯಲ್ಲಿಯೇ ತಮ್ಮ ಬದುಕನ್ನು ತೊಡಗಿಸಿಕೊಂಡಿರುವ ಸೇವಾಯೋಗಿಗಳು ಶ್ರೀ ಎಂ.ವಿ. ರಾಜಶೇಖರನ್.

**ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ.**
**ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದಿನಿಸಯ್ಯಾ.**
**ಕೂಡಲಸಂಗಮದೇವಾ**
**ನಿಮ್ಮ ಮನೆಯ ಮಗನೆಂದೆನಿಸಯ್ಯಾ.**

ಎಂಬ ಅಣ್ಣನವರ ವಚನದಂತೆ ಜಾತಿ, ಮತ, ಪಂಗಡಗಳ ಸಂಕುಚಿತ ಸೋಂಕಿಲ್ಲದ ವಿಶಾಲ ಹೃದಯ ಅವರದು.

ಯುವಕರು ದೇಶದ ಆಸ್ತಿ. ಯುವ ಸಮುದಾಯವೇ ದೇಶದ ಆಶಾಕಿರಣ ಎಂದು ಸದಾಕಾಲ ಯುವ ಸಮುದಾಯವನ್ನು ಪ್ರೋತ್ಸಾಹಿಸುತ್ತ ಬಂದಿರುವ ಯುವ ಪ್ರೇಮಿಯಾದ ಅವರು ಯುವ ಸಮುದಾಯಕ್ಕೇ ಒಂದು ಆದರ್ಶದ ಪ್ರತಿರೂಪ, ಪ್ರತಿಬಿಂಬ.

ಯಾರೂ ಸೋಮಾರಿಗಳಾಗಬಾರದು. ಕಠಿಣ ಪರಿಶ್ರಮದಿಂದ ದುಡಿಯಬೇಕು. ದುಡಿಮೆಯಿಂದಲೇ ದೇಶದ ಪ್ರಗತಿ ಸಾಧ್ಯ ಎಂಬ ಕಾಯಕ ತತ್ವದಲ್ಲಿ ಅಪರೂಪದ ನಂಬಿಕೆ ಇಟ್ಟಿರುವ ಶ್ರೀ ಎಂ.ವಿ.ರಾಜಶೇಖರನ್ ಒಬ್ಬ ಮಹಾಕಾಯಕ ಯೋಗಿಗಳು.

ಸದಾಕಾಲ ಖಾದಿ ವಸ್ತ್ರ ಧರಿಸುವ ಮೂಲಕ ಸರಳತೆಯ ಸಂದೇಶವನ್ನು ಸಾರುತ್ತಾ ಬಂದಿರುವ ಅವರ ವಸ್ತ್ರವಿನ್ಯಾಸ ಶಿಸ್ತಿನ ಸಂಕೇತ. ಸದಾಕಾಲ ಸರಳ ವಸ್ತ್ರಧಾರಿಗಳಾದರೂ ಅದರಲ್ಲೊಂದು ವಿಶೇಷ ಆಕರ್ಷಣೆ.

**ಹೆಣ್ಣಿಗಾಗಿ ಸತ್ತವರು ಕೋಟಿ**
**ಹೊನ್ನಿಗಾಗಿ ಸತ್ತವರು ಕೋಟಿ**
**ಮಣ್ಣಿಗಾಗಿ ಸತ್ತವರು ಕೋಟಿ**
**ನಿನಗಾಗಿ ಸತ್ತವರಾರನು ಕಾಣೆ**

ಎಂಬ ಶರಣರ ವಾಣಿಯನ್ನು ಸುಳ್ಳಾಗಿಸಿದವರು ಶ್ರೀ ಎಂ.ವಿ.ರಾಜಶೇಖರನ್‌ರವರು. ಎಂದೂ ಅವರು ತಮಗಾಗಿ ತಮ್ಮ ಕುಟುಂಬಕ್ಕಾಗಿ ಹಂಬಲಿಸಿದವರಲ್ಲ. ತಮಗಾಗಿ ಎಂದೂ ಬೇಡಿದವರಲ್ಲ. ಹೆಣ್ಣು, ಹೊನ್ನು, ಮಣ್ಣುಗಳ ಆಸೆ ಎಂದೂ ಅವರನ್ನು ಕಾಡಲಿಲ್ಲ. ಈ ವಿಷಯದಲ್ಲಿ ಅವರೊಬ್ಬ ಸಂತರಿದ್ದಂತೆ.

ತನುವಿನಲಿ ನಿರ್ಮೋಹ
ಮನದಲಿ ನಿರಹಂಕಾರ
ಪ್ರಾಣದಲಿ ನಿರ್ಭಯ
ಚಿತ್ತದಲಿ ನಿರಪೇಕ್ಷೆ
ವಿಷಯದಲಿ ಉದಾಸೀನ
ಭಾವದಲಿ ದಿಗಂಬರ
ಜ್ಞಾನದಲಿ ಪರಮಾನಂದ ನೆಡೆಗೊಂದ ಬಳಿಕ

**ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗವು**
**ಬೇರಿಲ್ಲ ಕಾಣಿರೊ.**

ಶರಣರ ಆದಯ್ಯನ ಈ ವಚನಕ್ಕೆ ಸಾಕ್ಷಿಭೂತವಾಗಿ ತಮ್ಮ ಬದುಕನ್ನು ರೂಪಿಸಿಕೊಂಡ ಒಬ್ಬ ಮಹಾನ್ ಕರ್ಮಯೋಗಿ ಶ್ರೀ ಎಂ.ವಿ.ರಾಜಶೇಖರನ್ ಅವರು.

ರಾಷ್ಟ್ರದ ಉನ್ನತ ಹುದ್ದೆಯೊಂದು ತಾನೇ ಹುಡುಕಿಕೊಂಡು ಬಂದರೂ ತಾವು ನಂಬಿದ ಮೌಲ್ಯಗಳಿಗಾಗಿ ಅಂತಹ ಪ್ರಲೋಭನೆಯನ್ನು ನಿರಾಕರಿಸಿ ಉನ್ನತ ಆದರ್ಶಗಳನ್ನು ಮೆರೆದ ಧೀಮಂತ ಮಾವನಿಗೆ ತಕ್ಕ ಧೀಮಂತ ಅಳಿಯ ಶ್ರೀ ಎಂ.ವಿ.ರಾಜಶೇಖರನ್‌ರವರು.

ಎಪ್ಪತ್ತೈದರ ವಯಸ್ಸಿನಲ್ಲಿಯೂ ಇಪ್ಪತ್ತೈದರ ಯುವಕರನ್ನು ನಾಚಿಸುವ ಕ್ರಿಯಾಶೀಲತೆ, ಕರ್ತವ್ಯಶಕ್ತಿ ಹಾಗೂ ಸದಾಕಾಲ ಚಟುವಟಿಕೆಯ ಚೈತನ್ಯಶೀಲ ವ್ಯಕ್ತಿ ಎಂ.ವಿ.ರಾಜಶೇಖರನ್ ಅವರು ಸ್ಫೂರ್ತಿಯ ಚಿಲುಮೆಯಿದ್ದಂತೆ.

**ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು**
**ಕಲ್ಲಾಗು ಕಷ್ಟಗಳ ವಿಧಿ ಮಳೆ ಸುರಿಯೆ**
**ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ**
**ಎಲ್ಲರೊಳಗೊಂದಾಗು ಮಂಕುತಿಮ್ಮ**

ಎಂಬ ಕವಿ ವಾಣಿಯಂತೆ ಜನ್ಮ ಕೊಟ್ಟ ನಾಡಿಗೆ ತಮ್ಮ ಸೇವಾ ಪರಿಮಳದಿಂದ ಸುವಾಸನೆ ಬೀರುವ ಮಲ್ಲಿಗೆಯಾಗಿರುವ ಶ್ರೀ ಎಂ.ವಿ.ರಾಜಶೇಖರನ್ ಅವರು ದೀನದುರ್ಬಲರಿಗೆ ಬೆಲ್ಲಸಕ್ಕರೆಯಾದವರು. ಬಹುಮುಖ ವ್ಯಕ್ತಿತ್ವದ ಅವರು ಗಾಂಧಿಯುಗದ ಒಂದು ಪ್ರಬಲ ಕೊಂಡಿಯಾಗಿದ್ದಾರೆ.

ರಾಷ್ಟ್ರದ ಲೋಕಸಭೆ, ರಾಜ್ಯಸಭೆ, ರಾಜ್ಯದ ವಿಧಾನಸಭೆ, ವಿಧಾನ ಪರಿಷತ್ - ಹೀಗೆ ಪ್ರಜಾಪ್ರಭುತ್ವ ವ್ಯವಸ್ಥೆಯ ನಾಲ್ಕು ಪ್ರಮುಖ ಸಭೆಗಳಿಗೆ ಸದಸ್ಯರಾಗುವ ಮೂಲಕ ಶ್ರೀ ಎಂ.ವಿ.ರಾಜಶೇಖರನ್ ಅವರು ಒಂದು ಇತಿಹಾಸವನ್ನೇ ಸೃಷ್ಟಿಸಿದ್ದಾರೆ. ಸಾಮಾನ್ಯವಾಗಿ ರಾಷ್ಟ್ರದ, ರಾಜ್ಯದ ಮೇಲ್ಮನೆ ಕೆಳಮನೆಗಳಿಗೆ ಸದಸ್ಯರಾಗುವ ಪುಣ್ಯ, ಎಷ್ಟು ಜನರಿಗುಂಟು? ಇದು ಎಂ.ವಿ.ರಾಜಶೇಖರನ್ ಅವರ ಜನಪ್ರಿಯತೆಯ, ಜನಾನುರಾಗದ ಸಂಕೇತ.

"ಹೊಗಳಿ ಹೊಗಳಿ ಎನ್ನ ಹೊನ್ನ ಶೂಲಕ್ಕೇರಿಸದಿರಯ್ಯ" ಎಂಬ ಬಸವಣ್ಣನವರ ಮಾತಿನಂತೆ ಎಂದೂ ಎಂ.ವಿ.ರಾಜಶೇಖರನ್ ಅವರು ಹೊಗಳಿಕೆಯನ್ನು ಪ್ರೀತಿಸಿದವರೇ ಅಲ್ಲ. ತಮ್ಮನ್ನು ಯಾರಾದರೂ ಹೊಗಳುತ್ತಿದ್ದರೆ ಕೂಡಲೇ ಅದನ್ನು ಪ್ರತಿಭಟಿಸುವಷ್ಟು ಸರಳ ಹಾಗು ನಿರಂಹಕಾರಿ. ಕಂಡದ್ದನ್ನು ಕಂಡಂತೆಯೇ ಹೇಳುವ ನೇರ ಮಾತಿನ ನಿಷ್ಠುರವಾದಿ. ತಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬರುವಂತಹ ಯಾವುದೇ ಘಟನೆಯನ್ನು ಆತ್ಮಸ್ಥೈರ್ಯದಿಂದ ಎದುರಿಸಬಲ್ಲ ಮಹಾನ್ ಛಲವಾದಿ. ಯಾರೊಬ್ಬರನ್ನು ಏಕವಚನದಲ್ಲಿ ಎಂದೂ ಸಂಬೋಧಿಸಿದವರಲ್ಲ. ಸಾಮಾನ್ಯ ವ್ಯಕ್ತಿಯನ್ನೂ ಆದರ ಅಭಿಮಾನದಿಂದ ಕಾಣುವಂತಹ ಮಾನವೀಯ ಅನುಕಂಪ ಅವರದು.

# ನಿಜಬಿಂಬ

ಪ್ರತಿಭಾ ಪಕ್ಷಪಾತಿಯಾದ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ಪ್ರತಿಭಾವಂತರನ್ನು ಕಂಡರೆ ಎಲ್ಲಿಲ್ಲದ ಗೌರವ. ಅವರಿಗಾಗಿ ಎಂತಹ ತ್ಯಾಗಕ್ಕೂ ಸಿದ್ಧ. ತಮ್ಮ ಮನಸ್ಸಿಗೆ ಆತ್ಮಸಾಕ್ಷಿಗೆ ವಿರುದ್ಧವಾಗಿ ಎಂದೂ ನಡೆದುಕೊಂಡವರಲ್ಲ. ತಮ್ಮನ್ನು ನಂಬಿ ಬಂದವರಿಗೆ ಕಾಮಧೇನು, ಕಲ್ಪವೃಕ್ಷವಾಗಿ ಅವರ ನೋವು ನಲಿವುಗಳಿಗೆ ಪ್ರಾಮಾಣಿಕವಾಗಿ ಸ್ಪಂದಿಸುವ ಮೂಲಕ ಸರ್ವರಿಂದಲೂ ಅಜಾತಶತ್ರು ಎಂಬ ಬಿರುದಿಗೆ ಪಾತ್ರರಾದವರು. ಜೀವನಾನುಭವ, ಲೋಕಾನುಭವಗಳ ಒಂದು ದೊಡ್ಡ ಜ್ಞಾನದ ಗಣಿಯಾಗಿರುವ ಎಂ.ವಿ.ರಾಜಶೇಖರನ್ ಅವರು ಬದುಕಿನ ಯಾವುದೇ ವಿಷಯದ ಬಗ್ಗೆಯೂ ಬೆಳಕು ಚೆಲ್ಲುವಂತಹ ಅನುಭವಿಗಳು. ಅವರ ಅಧಿಕಾರ ಅವರ ಅಂತಸ್ತು ಎಂದೂ ಅವರನ್ನು ವಾಸ್ತವ ಪ್ರಪಂಚದಿಂದ ದೂರ ಮಾಡಲೇ ಇಲ್ಲ. ಬದಲಿಗೆ ತಾವು ಹುಟ್ಟಿದ, ಬಾಳಿದ ಪರಿಸರದ ಸಂಬಂಧವನ್ನು ಮತ್ತಷ್ಟು ಗಾಢಮಾಡಿಕೊಳ್ಳುತ್ತಾ ಬಂದ ಇವರು ನಿಜವಾದ ಅರ್ಥದಲ್ಲಿ ಮಣ್ಣಿನ ಮಗ. ಎಷ್ಟೇ ದೊಡ್ಡ ಸ್ಥಾನದಲ್ಲಿದ್ದರೂ ಇವರದು ಮುಗ್ಧ ಮಗುವಿನ ಮನಸ್ಸು. ರಾಜಕೀಯ ಹಾಗು ಸಾರ್ವಜನಿಕ ಬದುಕಿನಲ್ಲಿ ಸಚ್ಚಾರಿತ್ರ್ಯ, ಪಾರದರ್ಶಕತೆ ಹಾಗೂ ಪ್ರಾಮಾಣಿಕತೆಯ ಸಾಕಾರ ಮೂರ್ತಿಯಂತಿರುವ ಎಂ.ವಿ.ರಾಜಶೇಖರನ್ ಅವರು ಆಧ್ಯಾತ್ಮಿಕ ವಿಷಯದ ಬಗ್ಗೆ ಗುರು-ಹಿರಿಯರ ಬಗ್ಗೆ ಅಪಾರವಾದ ಭಕ್ತಿ ಗೌರವ ಬೆಳೆಸಿಕೊಂಡವರು. ಇವರು ಡಾಂಭಿಕತೆಯನ್ನು ಎಂದೂ ಸಹಿಸಿದವರಲ್ಲ. ತಮ್ಮ ಇಡೀ ಜೀವನದಲ್ಲಿ ಸದಾಕಾಲ ಎಲ್ಲರನ್ನೂ ಪ್ರೀತಿಸುತ್ತಾ ಅವರ ದುಃಖ ದುಮ್ಮಾನಗಳಿಗೆ ಸ್ಪಂದಿಸುತ್ತಾ ಬಂದಿರುವ ಒಬ್ಬ ಅಪರೂಪದ ಮಾನವತಾವಾದಿ ಎಂ.ವಿ.ರಾಜಶೇಖರನ್ ಅವರು.

ಕರ್ಮಯೋಗಿ, ಕಾಯಕನಿಷ್ಠೆ, ದಾಸೋಹ ಪ್ರೇಮಿ, ದುರ್ಬಲರ ಧ್ವನಿ, ಉನ್ನತ ಮೌಲ್ಯಗಳ ಸಾಕಾರ ಮೂರ್ತಿ, ಸರಳತೆ ಸಜ್ಜನಿಕೆ ಸೌಜನ್ಯಗಳ ಪ್ರೇಮಮೂರ್ತಿ, ಎಲ್ಲಕ್ಕಿಂತ ಮಿಗಿಲಾಗಿ ಸದಾಕಾಲ ದೇಶದ ಒಳಿತಿನ ಬಗ್ಗೆ ಯುವ ಸಮುದಾಯದ ಭವಿಷ್ಯದ ಬಗ್ಗೆ ಚಿಂತನೆ ಮಾಡುವ ಮಹಾ ರಾಷ್ಟ್ರಚಿಂತಕ, ದೇಶಾಭಿಮಾನಿ. ಸ್ವಾಭಿಮಾನದ ಸಂಕೇತ ಎಂ.ವಿ.ರಾಜಶೇಖರನ್ ಅವರು.

ನಾಡಿನ, ದೇಶದ ಸಾರ್ವಜನಿಕ ಬದುಕನ್ನು ತಮ್ಮ ಪ್ರಾಮಾಣಿಕತೆ ಹಾಗು ಸೇವಾ ಮನೋಧರ್ಮದಿಂದ ಸಮೃದ್ಧಗೊಳಿಸಿದ ಸೇವಾರತ್ನ ಶ್ರೀ ಎಂ.ವಿ.ರಾಜಶೇಖರನ್ ಅವರು ಶರಣರ ಅನುಭಾವದ ಚಿಂತನೆಗಳನ್ನು ತಮ್ಮ ಬದುಕಿನಲ್ಲಿ ಮೈಗೂಡಿಸಿಕೊಂಡು ಗಾಂಧೀಜಿ ಪ್ರತಿಪಾದಿಸಿದ ಮೌಲ್ಯಗಳನ್ನು ತಮ್ಮ ಬದುಕಿನ ಉಸಿರಾಗಿಸಿಕೊಂಡು ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದಾರೆ. ಅವರ ಬದುಕು ಸತ್ಯದೊಡನೆ ನಡೆಯುತ್ತಿರುವ ಅನುಸಂಧಾನದ ಒಂದು ನಿಜಬಿಂಬ. ಸತ್ಯ ಶುದ್ಧ ಸಾಮಾಜಿಕ ಬದುಕಿನ ಪ್ರತಿಬಿಂಬ.

❊❊❊

# ರಾಜಕಾರಣದ ವಿಶೇಷ ವ್ಯಕ್ತಿ

● ರವಿಪ್ರಸಾದ್

ಸೈದ್ಧಾಂತಿಕ ನೆಲಗಟ್ಟಿನಲ್ಲಿ ವೈಚಾರಿಕ ಮನೋಭಾವ ಹೊಂದಿರುವ ಎಂ.ವಿ. ರಾಜಶೇಖರನ್ ರಾಜ್ಯದ ಸಂಭಾವಿತ ರಾಜಕಾರಣಿಗಳ ಪಂಕ್ತಿಯಲ್ಲಿ ಪ್ರಮುಖರು.

ಗ್ರಾಮೀಣಾಭಿವೃದ್ಧಿ ಹಾಗೂ ಕೃಷಿ ನಿರ್ವಹಣಾ ಕ್ಷೇತ್ರಗಳಲ್ಲಿ ಸಮಾಲೋಚಕರಾಗಿ ವಿಶೇಷ ಕೊಡುಗೆ ಸಲ್ಲಿಸಿರುವ ರಾಜಶೇಖರನ್ ಸ್ವಾತಂತ್ರ್ಯ ಹೋರಾಟಗಾರರೂ ಹೌದು. ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ "ಮೈಸೂರು ರಾಜ್ಯ" ವಿಲೀನವಾಗಬೇಕೆಂಬ ಚಳುವಳಿಗೆ ಬೆಂಬಲವಾಗಿ ಹಾಗೂ ಚಳುವಳಿಯ ಬೆನ್ನೆಲುಬಾಗಿ ಶ್ರಮಿಸಿದ ರಾಜಶೇಖರನ್ ರಾಜ್ಯ ಕಂಡ ಪ್ರಜ್ಞಾವಂತ ನೇತಾರ ಕೂಡಾ. ಎಪ್ಪತ್ತೈದರ ಇಳಿ ವಯಸ್ಸಿನಲ್ಲೂ ನವಯುವಕನ ಉತ್ಸಾಹದ ಚಿಲುಮೆಯಂತೆ ಲವಲವಿಕೆಯಿಂದ ಚಿಂತನ-ಮಂಥನ ನಡೆಸುತ್ತಾರೆ.

ರಾಜಕಾರಣದ ಎಲ್ಲಾ ಆಯಾಮಗಳನ್ನು ಕಂಡಿದ್ದರೂ "ರಾಜಕಾರಣಿ" ಯಂತೆ ವರ್ತಿಸದೆ ಸಮಾಜ ವಿಜ್ಞಾನಿಯಂತೆ ಕಾಣುವ ರಾಜಶೇಖರನ್ ನಗರೀಕರಣದ ಅತ್ಯಾಧುನಿಕ ನಾಗರೀಕತೆ ಹಾಗೂ ಗ್ರಾಮೀಣ ಪರಿಸರದ ಸಜ್ಜನಿಕೆಯ ಸಾಂಸ್ಕೃತಿಕ ಸೊಗಡು- ಇವರೆಡನ್ನೂ ಅಳವಡಿಸಿಕೊಂಡಿದ್ದಾರೆ.

ಕಾಂಗ್ರೆಸ್ ಪಕ್ಷದ ಕಟ್ಟಾ ಅನುಯಾಯಿಯಾಗಿದ್ದ ರಾಜಶೇಖರನ್ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಜನತಾಪಕ್ಷದತ್ತ ಪ್ರಯಾಣ ಬೆಳೆಸಿ, ಮತ್ತೆ ಕಾಂಗ್ರೆಸ್‌ಗೆ ಸೇರ್ಪಡೆಯಾಗಿ ತವರಿಗೆ ಬಂದ ಅನುಭವ ಪಡೆದವರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ೧೯೬೭ರಲ್ಲಿ ಕನಕಪುರ ಲೋಕಸಭಾ ಸದಸ್ಯರಾಗಿ ಹಾಗೂ ೧೯೭೮ರಲ್ಲಿ ಜನತಾ ಪಕ್ಷದ ಅಭ್ಯರ್ಥಿಯಾಗಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದ ರಾಜಶೇಖರನ್ ೨೦೦೦ನೇ ಇಸವಿಯಲ್ಲಿ ರಾಜ್ಯ ವಿಧಾನ ಪರಿಷತ್ ಹಾಗೂ ೨೦೦೨ರಲ್ಲಿ ರಾಜ್ಯಸಭೆ ಪ್ರವೇಶಿಸಿದರು.

ಮೊದಲು ಲೋಕಸಭಾ ಸದಸ್ಯರಾಗಿ, ನಂತರ ವಿಧಾನಸಭಾ ಸದಸ್ಯರಾಗಿ, ತದನಂತರ ವಿಧಾನ ಪರಿಷತ್ ಸದಸ್ಯರಾಗಿ ಹಾಗೂ ಪ್ರಸ್ತುತದಲ್ಲಿ ರಾಜಸಭಾ ಸದಸ್ಯರಾಗಿ ಸಾರ್ವಜನಿಕ ಜೀವನದ ಎಲ್ಲಾ ಪ್ರಾಕಾರಗಳನ್ನೂ ಕಂಡಿರುವ ರಾಜಶೇಖರನ್ ಭಾರತದಲ್ಲಿಯೇ ಪ್ರಪ್ರಥಮ ಎನ್ನಲಾದ ಯುವಕ ಕೇಂದ್ರದ ಸಂಸ್ಥಾಪಕರು. ರಾಜ್ಯ ಸರ್ಕಾರದಲ್ಲಿ ಯುವಜನ ಸೇವಾ ಇಲಾಖೆ ಸೃಜಿಸಲು ಕಾರಣರಾದ ರಾಜಶೇಖರನ್ ಆಫ್ರಿಕಾ ಖಂಡದ ಬೊಕಿನೋ ಫಾಸೋ, ಕ್ಯಾಮರೂನ್, ಕೆನ್ಯಾ, ಸೆನೆಗಲ್ ಮತ್ತು ಜಿಂಬಾಬ್ವೆ, ಏಷ್ಯಾ ಖಂಡದ ಬಾಂಗ್ಲಾದೇಶ, ಚೀನಾ, ಸೈಪ್ರಸ್, ಹಾಂಗ್‌ಕಾಂಗ್, ಇರಾಕ್, ಲೆಬನಾನ್, ನೇಪಾಳ, ಜಪಾನ್, ಮಲೇಷಿಯಾ, ಪಾಕಿಸ್ತಾನ್, ಫಿಲಿಫೈನ್ಸ್, ಸಿಂಗಾಪೂರ, ಸಿರಿಯಾ, ಶ್ರೀಲಂಕಾ, ತೈವಾನ್, ಥಾಯ್‌ಲ್ಯಾಂಡ್ ಮತ್ತು ಇಂಡೋನೇಷಿಯಾ, ಯೂರೋಪ್‌ನ, ಬೆಲ್ಜಿಯಂ, ಡೆನ್ಮಾರ್ಕ್, ಫಿನ್‌ಲ್ಯಾಂಡ್, ಫ್ರಾನ್ಸ್, ಜರ್ಮನಿ, ಇಟಲಿ, ನೆದರ್‌ಲ್ಯಾಂಡ್ಸ್, ಉತ್ತರ ಅಮೇರಿಕಾದ ಅಮೇರಿಕಾ ಸಂಯುಕ್ತ ಸಂಸ್ಥಾನ, ಕೆನಡಾ, ಲ್ಯಾಟಿನ್ ಅಮೇರಿಕಾದ ಬ್ರೆಜಿಲ್ ರಾಷ್ಟ್ರಗಳಿಗೆ ಭೇಟಿ ನೀಡಿ, ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳಿಗೆ ಸಂಬಂಧಿಸಿದ ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡು ವಿಶ್ವದರ್ಶನ ಮಾಡಿದ್ದಾರೆ. ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಹೊಸ ಆಯಾಮ ತೋರಿರುವ ರಾಜಶೇಖರನ್ ಸ್ವಯಂಸೇವಾ ಸಂಸ್ಥೆ ಹಾಗೂ ಸರ್ಕಾರೇತರ ಸಂಘ-ಸಂಸ್ಥೆಗಳ ಸಹಭಾಗಿತ್ವದಿಂದ ಸರ್ಕಾರಿ ಯೋಜನೆಗಳ ಚಾಲನೆಗೆ ಸಹಕಾರ ದೊರೆಯಲು ಕಾರಣರಾಗಿದ್ದಾರೆ.

ರಾಜ್ಯದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿಯತ್ತ ಶ್ರಮವಹಿಸಿ ದುಡಿದಿರುವ ರಾಜಶೇಖರನ್ ರೇಷ್ಮೆಯಷ್ಟೇ ಮೃದುಸ್ವಭಾವದವರು. ಹಲವು ವೇದಿಕೆಗಳಲ್ಲಿ ತಮ್ಮ ವಿಚಾರಧಾರೆಗಳ ಹಂಚಿಕೊಂಡಿರುವ ರಾಜಶೇಖರನ್ ರಾಜ್ಯದ ಅಭಿವೃದ್ಧಿಯ ಬಗ್ಗೆ ಆಶಾಗೋಪುರದಷ್ಟು ಕನಸು ಕಂಡಿದ್ದಾರೆ. ಹಣಕ್ಕಿಂತಲೂ ಹೆಚ್ಚಾಗಿ ಹೆಸರು ಗಳಿಸಿದ್ದಾರೆ. ರಾಜಕಾರಣದಲ್ಲೇ ವಿಶೇಷ ವ್ಯಕ್ತಿ ಎನಿಸಿದ್ದಾರೆ.



# ಸರಳಜೀವಿ

ಎಂ. ಕೃಷ್ಣಪ್ಪ

ಶ್ರೀ ಎಂ.ವಿ.ರಾಜಶೇಖರನ್ ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಲೋಕಸಭಾ ಸದಸ್ಯರಾಗಿದ್ದವರು. ಸಹಜವಾಗಿಯೇ ಅತ್ಯಂತ ಹಿರಿಯರು. ಸದಾ ಹಸನ್ಮುಖ ಅಭಿವ್ಯಕ್ತಿಯ ಮೂಲಕ ಜನಮನವನ್ನು ಗೆಲ್ಲುವವರು. ಯಾವುದಕ್ಕೂ ಆಸೆಪಡದ ನಿರ್ವಿಕಾರ ವ್ಯಕ್ತಿ. ಸ್ನೇಹಿತರಿಗೆ, ಹಿತೈಷಿಗಳಿಗೆ ಮಾರ್ಗದರ್ಶನ ಮಾಡುತ್ತಾ, ಉತ್ತಮ ರಾಜಕೀಯದ ಪರಿಕಲ್ಪನೆ ನೀಡುತ್ತಾ, ಕಷ್ಟ-ಸುಖ ವಿಚಾರಿಸುತ್ತಾ, ಎಲ್ಲರೊಂದಿಗೆ ಸ್ನೇಹಮಯಿಯಾಗಿ ಕಹಿಯುಂಡು, ಸಿಹಿ ಹಂಚಿದವರು.

ಈಗಿನ ರಾಜಕೀಯ ವ್ಯವಸ್ಥೆಯಲ್ಲಿ ಶಿಥಿಲವಾಗುತ್ತಿರುವ ಸಜ್ಜನಿಕೆ, ಸರಳತೆ, ಪ್ರಾಮಾಣಿಕತೆಯನ್ನು ಇನ್ನೂ ಉಳಿಸಿಕೊಂಡು ಸ್ವಾತಂತ್ರ್ಯಪೂರ್ವದ ಜನನಾಯಕರ ನಾಯಕತ್ವದ ಗುಣಗಳನ್ನು ಪಾಲಿಸಿ - ಪೋಷಿಸಿಕೊಂಡು ಬಂದವರು. ಶ್ರೀ ಎಂ.ವಿ.ರಾಜಶೇಖರನ್ ಹುಟ್ಟಾ ಶ್ರೀಮಂತರು, ದೊಡ್ಡ ಜಮೀನುದಾರರು. ಆದರೂ ಗರ್ವಿಯಾಗದೆ ಬಡಜನರ ಜೊತೆ ನಿರಂತರ ಸಂಪರ್ಕಹೊಂದಿ ಜನಮನಕ್ಕೆ ಸ್ಪಂದಿಸಿದವರು. ಸರಳ ಜೀವನವನ್ನು ಇಂದಿಗೂ ಪಾಲಿಸಿಕೊಂಡು ಬಂದವರು.

ಶ್ರೀ ಸಾಮಾನ್ಯನ ಹಿತಾಸಕ್ತಿಯನ್ನು ಕಾಪಾಡುತ್ತಾ ಶ್ರೀ ಎಂ.ವಿ.ರಾಜಶೇಖರನ್ ತಮ್ಮ ಕಾಲ ಮತ್ತು ವಿಷಯಬದ್ಧತೆಯನ್ನು ತೀವ್ರವಾಗಿ ತೋರಿದವರು. ಲೋಕಸಭೆ, ವಿಧಾನಸಭೆ, ವಿಧಾನಪರಿಷತ್ ಮತ್ತು ರಾಜ್ಯಸಭೆಯ ಪ್ರಜಾತಂತ್ರ ವೇದಿಕೆಗಳ ಮೂಲಕ ಶ್ರೀ ಸಾಮಾನ್ಯನ ಮತ್ತು ಗ್ರಾಮೀಣಾಭಿವೃದ್ಧಿಗಳ ವಿಷಯಗಳ ಬಗ್ಗೆ ಸರ್ಕಾರಗಳ ಗಮನ ಸೆಳೆದವರು. ಏಷಿಯನ್ ರೂರಲ್ ಡೆವಲಪ್‌ಮೆಂಟ್ ಆರ್ಗನೈಸೇಷನ್ ಮೂಲಕ ಗ್ರಾಮಾಂತರ ಪ್ರದೇಶಗಳ ಜೀವನ ನಿರ್ವಹಣೆ ಮತ್ತು ಅಭಿವೃದ್ಧಿಗೆ ಕಳಕಳಿಯಿಂದ ದುಡಿದವರು.

ಭಾರತೀಯ ಸಂಸತ್ತಿನ ಉಭಯ ಸದನಗಳು ಮತ್ತು ರಾಜ್ಯ ಶಾಸಕಾಂಗದ ಎರಡೂ ಸದನಗಳ ಸದಸ್ಯರಾಗಿ ಸೇವೆ ಸಲ್ಲಿಸಿದ ಅತಿ ವಿರಳರಲ್ಲಿ ಒಬ್ಬರಾದ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ನನ್ನ ಹೃತ್ಪೂರ್ವಕ ಶುಭಾಶಯಗಳು.



# ನಮ್ಮ ನಡುವೆಯೇ ಇರುವ ಒಂದು 'ಲೆಜಂಡ್'!

ಡಾ। ಎಚ್.ಎಂ. ಮರುಳಸಿದ್ಧಯ್ಯ

ನೀರೊಳಗಿದ್ದೂ ನೀರು ಕುಡಿಯದ ಪ್ರಾಣಿಯ ಬಗ್ಗೆ, ಕೆಸರಿನಲ್ಲಿ ಹುಟ್ಟಿ ವಿಕಸಗೊಂಡ ಗಿಡದ ಎಲೆಯ ಮೇಲೆ ಇದ್ದೂ ಆ ಎಲೆಗೆ ಅಂಟಿಕೊಂಡಿರದ ಜಲಬಿಂದುವಿನ ಬಗ್ಗೆ, ಇಂತಹುದೇ ಹಲವಾರು ಉದಾಹರಣೆಗಳನ್ನು ನೀಡಿ ಮನುಷ್ಯ ಹೀಗಿರಬೇಕು ಎಂದು ಉಪನ್ಯಾಸಕರು ಹೇಳುವುದುಂಟು. ಆದರೆ, ವಾಸ್ತವದಲ್ಲಿ ಹಾಗೆ ಇರಲು ಸಾಧ್ಯವೆ? ಹನ್ನೆರಡನೆಯ ಶತಮಾನದ ಶರಣರು ದಾರಿಯಲ್ಲಿ ಬಿದ್ದಿದ್ದ ನಾಣ್ಯಗಳನ್ನು ತಮ್ಮದಲ್ಲ, ಅದನ್ನು ಎತ್ತಿಕೊಂಡು ಬಳಸುವುದು ಹಾಗಿರಲಿ, ಅವುಗಳನ್ನು ಮುಟ್ಟಲೂ ಕೂಡದು ಎಂಬ ವೀರ ವ್ರತಿಗಳಾಗಿದ್ದರು ಎಂಬುದುಂಟು. ಚಿನ್ನದ ಗಟ್ಟಿಯೊಂದು ಹೊಳೆಯುತ್ತ ನಮ್ಮ ಹಾದಿಯಲ್ಲಿ ಇಂದು ಬಿದ್ದಿದ್ದರೆ ನಾವು ಅದರ ಕಡೆ ಅಸಡ್ಡೆ ತೋರಿ ಹಾಗೆಯೇ ಹೋಗುತ್ತಿದ್ದೆವೆಯೆ? ಇಂಥ ಪ್ರಶ್ನೆಗಳು ಮೂಡಿ ಅವುಗಳಿಗೆ ಇತ್ಯಾತ್ಮಕ ಉತ್ತರ ದೊರೆಯುತ್ತಿರುವುದು ಮಾನ್ಯ ಎಂ.ವಿ.ರಾಜಶೇಖರನ್ ಅವರನ್ನು ನೆನೆದಾಗಲೆಲ್ಲಾ ಮತ್ತು ಅವರನ್ನು ಕಂಡು ಸಂಭಾಷಿಸುತ್ತಿರುವಾಗ ಲೆಲ್ಲಾ.

ತುಂಗಭದ್ರೆಯ ತಡಿಯಲ್ಲಿ ಹುಟ್ಟಿ ಬೆಳೆದು ಶ್ರೇಷ್ಠ ರಾಜಕಾರಣಿ ಮಾತ್ರವೇ ಅಲ್ಲ, ಮನುಕುಲದ ಕೀರ್ತಿ ಕಳಸವಾಗಿದ್ದ ಕರ್ನಾಟಕ ಶಿಲ್ಪಿ ಸಿದ್ಧವನಹಳ್ಳಿ ನಿಜಲಿಂಗಪ್ಪನವರು, ಕಾವೇರಿ ಸಮೀಪ ಹುಟ್ಟಿ ಬೆಳೆದು ಯುವ ಮುಂದಾಳಾಗಿ, ಕೃಷಿಕರ ಕಷ್ಟ ನಷ್ಟಗಳಿಗೆ ತೀವ್ರವಾಗಿ ಸ್ಪಂದಿಸುತ್ತಿರುವ, ಜಾರುಬಂಡೆಯನ್ನೇರಿ ಉರುಳುತ್ತಿರುವ ನೈತಿಕ ಅಧಃಪತನವನ್ನು ಕಂಡು ಕಣ್ಣೀರಿಡುತ್ತಿರುವ, ಸುತ್ತಲೂ ಆಕ್ಟೋಪಸ್‌ನಂತೆ ಜನಶೋಷಣೆಯನ್ನು ನೋಡಿ ಕಿಡಿಕಿಡಿಯಾಗುತ್ತಿರುವ ರಾಜಶೇಖರನ್ - ಈ ಇಬ್ಬರು ಮಾವ-ಅಳಿಯಂದಿ ರಾದದ್ದು ಹೇಳಿ ಮಾಡಿಸಿದ ಜೋಡಿ. 'ಮಾವನಿಗೆ ತಕ್ಕ ಅಳಿಯ' ಎಂದು ಎಲ್ಲರೂ ಉದ್ಗರಿಸುವಂತಹ ವ್ಯಕ್ತಿ ರಾಜಶೇಖರನ್.

ದಕ್ಷಿಣ ಕರ್ನಾಟಕದ ಕನಕಪುರ ತಾಲ್ಲೂಕಿನ ದೊಡ್ಡ ಮರಳವಾಡಿಯಲ್ಲಿ ಎಪ್ಪತ್ತೈದು ವರ್ಷಗಳ ಹಿಂದೆ ಹುಟ್ಟಿದ ರಾಜಶೇಖರನ್ ಅವರದ್ದು ವಿಶಿಷ್ಟ

ವ್ಯಕ್ತಿತ್ವ. ರಾಜಕೀಯದ ಬಗ್ಗಡದ ನೀರಿನಲ್ಲಿದ್ದೂ ಅದನ್ನು ಕುಡಿಯದ, ಜನಪ್ರತಿನಿಧಿಯಾಗಿದ್ದರೂ (ಹಿಂದೆ ರಾಜ್ಯದ ವಿಧಾನಸಭೆ, ವಿಧಾನ ಪರಿಷತ್ತು ಹಾಗೂ ಕೇಂದ್ರದ ಲೋಕಸಭೆ, ಇಂದು ಕೇಂದ್ರದ ರಾಜ್ಯಸಭೆಯ ಸದಸ್ಯತ್ವ) ಎಲೆಯ ಮೇಲಣ ಜಲಬಿಂದುವಿನಂತೆ ಪದವಿಗಳಿಗೆ ಅಂಟಿಕೊಂಡಿರದ ರಾಜಶೇಖರನ್ ಸದಾ ಚಿಂತಿಸುತ್ತಿರುವುದು ಜನ ಕಲ್ಯಾಣದ ಬಗ್ಗೆ, ಅದರಲ್ಲೂ ಗ್ರಾಮೀಣ ಅಭ್ಯುದಯದ ಬಗ್ಗೆ, ಅದರಲ್ಲೂ ರೈತಾಪಿ ಜನರ ಪ್ರಗತಿಯ ಬಗ್ಗೆ.

ರಾಜಶೇಖರನ್ ಅವರದ್ದು ಕಲುಷಿತಗೊಂಡಿರದ, ಕಲುಷಿತಗೊಳ್ಳದ ಮನಸ್ಸು; ಸುತ್ತಲೂ ಬೆಟ್ಟದಂತೆ ಬೆಳೆದು ಭಯವನ್ನು ಹುಟ್ಟಿಸುತ್ತಿರುವ ಮಾನವ ಸಮಸ್ಯೆಗಳನ್ನು ಪರಿಹರಿಸಲೇ ಬೇಕೆಂಬ ಹಠ; ತಾವು ಕೈಗೊಂಡ ಕಾರ್ಯಗಳಲ್ಲಿ ಆಗೀಗ ಸೋಲನ್ನು ಅನುಭವಿಸಿದರೂ ಹೋರಾಟವನ್ನು ಮುಂದುವರಿಸಿರುವ ಸಾಹಸ ಪ್ರವೃತ್ತಿ; ಪ್ರಪಂಚದ ಬಹುಶಃ ಎಲ್ಲ ರಾಷ್ಟ್ರಗಳನ್ನು, ಹಲವಾರು ಸಲ ಸಂದರ್ಶಿಸಿ ಅವುಗಳಲ್ಲಿನ ಕೊಳಕನ್ನು ಅನುಕಂಪೆಯಿಂದ ಅರಿತುಕೊಳ್ಳುತ್ತಲೇ ಅವುಗಳಲ್ಲಿ ಕಂಡ ಮಾನವೋತ್ಸಾಹವನ್ನು ಮೆಚ್ಚುವ ಚಿಕಿತ್ಸಕ - ವಿಶಾಲ ದೃಷ್ಟಿಯ ಎಲ್ಲ ದಿಕ್ಕುಗಳಿಂದಲೂ ಬರುವ ಪ್ರಗತಿಯ ಶುದ್ಧ ಗಾಳಿಯನ್ನು ಭಾರತೀಯರು ಸೇವಿಸಿ ಮುನ್ನಡೆಯಬೇಕೆಂಬ ಹಂಬಲವುಳ್ಳ, ದೈಹಿಕ ದೌರ್ಬಲ್ಯಗಳನ್ನು ಮೆಟ್ಟಿ ಮಾನಸಿಕ **ಶಕ್ತಿಯಿಂದ** ಜನಕಲ್ಯಾಣದ ಕಾರ್ಯದಲ್ಲಿ ತೊಡಗಿರುವ ಚೈತನ್ಯಮೂರ್ತಿ ರಾಜಶೇಖರನ್.

ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರೂ ತಾವೂ ಇದ್ದ ಕಾಂಗ್ರೆಸ್ ಪಕ್ಷ ಇಬ್ಭಾಗವಾದಾಗ ಶ್ರೀಮತಿ ಇಂದಿರಾ ಗಾಂಧಿಯವರು ಕರ್ನಾಟಕದ ಮುಖ್ಯಮಂತ್ರಿಯ ಚಿನ್ನದ ಸ್ಥಾನದ ಆಮಿಷದ ಗಾಳವನ್ನು ಬೀಸಿ ತಮ್ಮ ಪಕ್ಷದ ಕಡೆ ಸೆಳೆದುಕೊಳ್ಳಲು ತೊಡಗಿದ್ದಾಗ ಶರಣರ ನಿಲುವಿನಿಂದ ಅದನ್ನು ಕಡೆಗಣಿಸಿ, ಸತ್ಯದ ಪಕ್ಷದಲ್ಲೇ ಉಳಿದು ಸಾಮಾನ್ಯ ಕಾರ್ಯಕರ್ತನಾಗಿ ಮುಂದುವರಿದ ಧೀರೋದಾತ್ತರೇ ರಾಜಶೇಖರನ್. ರಾಜಕಾರಣವು ಜನರ ಶೋಷಣೆಗೆ ಇರುವ ರಾಕ್ಷಸ ಶಕ್ತಿಯಲ್ಲ, ಬದಲಿಗೆ ಅವರ ಒಳಿತನ್ನು ಸಾಧಿಸುವ ಪ್ರಬಲ ಸಾತ್ವಿಕ ಶಕ್ತಿ ಎಂದು ದೃಢವಾಗಿ ನಂಬಿರುವ ರಾಜಶೇಖರನ್ ಹಾಗೆಯೇ ಕಾರ್ಯತತ್ಪರರಾಗಿದ್ದಾರೆ.

ಏಷಿಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿ, ಏಷಿಯಾ ರಾಷ್ಟ್ರಗಳ ಉನ್ನತ ಮಟ್ಟದ, ಅನುಭವಪೂರ್ಣ ತಜ್ಞರನ್ನು ಈ ಸಂಸ್ಥೆಯ ದೃಢತೆಗೆ ಪಾಲುಗಾರರನ್ನಾಗಿ ಮಾಡಿ ತಮ್ಮ ಸಂಸ್ಥೆಯನ್ನು ಬಾವಿಕಪ್ಪೆಯಾಗಿಸದೆ ಸಾಗರದ ತಿಮಿಂಗಿಲವನ್ನಾಗಿಸಿದ್ದಾರೆ. ಈ ಸಂಸ್ಥೆಯ ಮೂಲಕ ಸಾಮಾಜಿಕ ಸಂಶೋಧನೆ, ರಚನಾತ್ಮಕ ಕಾರ್ಯಕ್ರಮ ಜನರ ಪ್ರಜ್ಞೆಯನ್ನು ಕುದುರಿಸುವ ಸಾಹಿತ್ಯ ಪ್ರಕಟಣೆ, ನವ ಸಮಾಜ ನಿರ್ಮಾಣಕ್ಕೆ ಸಮರ್ಥ ವ್ಯಕ್ತಿ-ಶಕ್ತಿಗಳನ್ನು ಖಂಡರಿಸಲು ಸೂಕ್ತ ತರಬೇತಿ ಕಮ್ಮಟಗಳ ವ್ಯವಸ್ಥೆ, ಪ್ರಪಂಚದ ರಾಷ್ಟ್ರಗಳನ್ನು ಅದರಲ್ಲೂ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಒಂದುಗೂಡಿಸಿ ಅವುಗಳ ಅನುಭವಗಳನ್ನು ಪಾರಸ್ಪರಿಕವಾಗಿ ಹಂಚಿಕೊಂಡು ಬೆಳೆಯಲು ತಕ್ಕ ಪರಿಸರ ನಿರ್ಮಾಣ, ಪ್ರಪಂಚದ ಯಾವ ಮೂಲೆಯಲ್ಲೇ ಇರಲಿ ಅಲ್ಲಿನ ಪ್ರತಿಭಾವಂತರನ್ನು ಗುರುತಿಸಿ ಅವರ ಸಾಮರ್ಥ್ಯವನ್ನು ಸದುಪಯೋಗಪಡಿಸಿಕೊಳ್ಳುವ

ದೂರಾಲೋಚನೆಯ ಕಾರ್ಯಕ್ರಮಗಳ ರೂಪಣೆ ಇತ್ಯಾದಿಗಳನ್ನು ಕೈಗೊಂಡ ಅಪರೂಪದ ವ್ಯಕ್ತಿತ್ವ ರಾಜಶೇಖರನ್.

ರಾಜಶೇಖರನ್ ಅವರನ್ನು ಹತ್ತಿರದಿಂದ ನೋಡಿದ್ದೇನೆ; ಅವರು ಹಮ್ಮಿಕೊಳ್ಳುವ ಹಲವಾರು ಸಮಾಜ ಕಾರ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದೇನೆ; ಅವರ ಸತತಾಭ್ಯಾಸದ, ಬಿಡುವಿರದ ಚಟುವಟಿಕೆಗಳ, ಲೆಕ್ಕವಿಲ್ಲದ ವಿಶ್ವಪರ್ಯಟನೆಯ ವರದಿಗಳನ್ನು ಆಲಿಸಿದ್ದೇನೆ; ಅವರ ಮನಸ್ಸನ್ನು ಅವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿದ್ದೇನೆ; ಅವರ ವಿನಯಶೀಲ ನಡತೆಯನ್ನು ಕಣ್ಣಾರೆ ಕಂಡಿದ್ದೇನೆ. ಅವರ ಅಭಿಪ್ರಾಯದಲ್ಲಿ ಭಾರತದ ಪ್ರಗತಿಯು ಗ್ರಾಮೀಣ ಪ್ರಗತಿಯಲ್ಲಿದೆ; ಗ್ರಾಮದ ಪ್ರಗತಿಗೆ ಗಾಂಧಿಮಾರ್ಗವೇ ಏಕೈಕ ಮಾರ್ಗ. ಶರಣರ ಕಾಯಕ-ದಾಸೋಹವೇ ಮನುಕುಲದ ಒಳಿತಿಗೆ ದಿವ್ಯಸೂತ್ರ - ಹೀಗೆ ಸಾಗುತ್ತದೆ ಅವರ ಚಿಂತನೆಯ ಪ್ರವಾಹ.

ಯಾವುದೇ ಸಭೆಯಿರಲಿ ಅದು ಮುಗಿದೊಡನೆ, ಯಾರೇ ಸಂದರ್ಶನಕ್ಕೆ ಬಂದಿರಲಿ ಸಂದರ್ಶನ ಮುಗಿದೊಡನೆ ಅಲ್ಲಿಗೆ ಬಂದು ಪಾಲ್ಗೊಂಡವರು ಹೊರಟಾಗ ಅವರೊಡನೆ ಬಾಗಿಲವರೆಗೆ, ಹಲವೊಮ್ಮೆ ವಾಹನದಲ್ಲಿ ಕುಳಿತುಕೊಳ್ಳುವವರೆಗೂ ಹೋಗಿ ಅವರನ್ನು ನಗುಮುಖದಿಂದ ಬೀಳ್ಕೊಡುವುದು ರಾಜಶೇಖರನ್ ಶೈಲಿ.

ಸ್ವಹಿತಕ್ಕಿಂತ ಲೋಕದ ಹಿತವನ್ನೇ ತಮ್ಮ ಬಾಳ ಧ್ಯೇಯವನ್ನಾಗಿ ಉಳ್ಳ, ನಮ್ಮ ನಡುವೆಯೇ ಇರುವ ರಾಜಶೇಖರನ್ ಒಂದು ಲೆಜಂಡ್.

***

# ಗುಣಾದರ್ಶಗಳ ಗಣಿ

ಕೆ.ಎಲ್. ಶಿವಲಿಂಗೇಗೌಡ

ನನ್ನ ಗೆಳೆಯ ಶ್ರೀ ಎಂ.ವಿ. ರಾಜಶೇಖರನ್ ಒಬ್ಬ ಸಂಭಾವಿತ ವ್ಯಕ್ತಿ. ೧೯೪೫-೪೬ನೇ ವರ್ಷದಿಂದ ನಾನವರನ್ನು ನೋಡುತ್ತಲೇ ಬಂದಿದ್ದೇನೆ. ಅವರ ಒಟ್ಟು ಜೀವನ ಸಮಷ್ಟಿಯನ್ನು ಗ್ರಹಿಸಿದಾಗ ಒಳ್ಳೆಯತನವೆಂದರೆ ಏನೆಂಬುದು ಅರ್ಥವಾಗುತ್ತದೆ. ಮೃದು ಸ್ವಭಾವದವರು. ಜನಸೇವೆಯೇ ತನ್ನ ಪರಮ ಗುರಿ ಎಂದು ತಿಳಿದವರು ಅವರಾಗಿದ್ದಾರೆ. ಕೆಲಕಾಲ ನನ್ನ ಸಹಪಾಠಿ ಯಾಗಿದ್ದವರೂ ನನಗಿಂತ ಉನ್ನತಮಟ್ಟಕ್ಕೇರಿದವರೂ ಅವರಾಗಿದ್ದಾರೆ. ಯಾವುದೇ ಹಂತದಲ್ಲೂ ನಾನು ಕಂಡಂತೆ ಅವರು ಧಾರ್ಷ್ಟ್ಯತನದ ಸ್ವಭಾವವನ್ನು ಹೊಂದಿಲ್ಲ. ಅವರ ವ್ಯಕ್ತಿತ್ವ ಏರಿಳಿತಗಳ ವಕ್ರವಕ್ರ ರೇಖೆಯಲ್ಲ, ಅದೊಂದು ಕೊನೆಯಿರಲಾರದ ಸರಳರೇಖೆ. ಅಂಕು-ಡೊಂಕುಗಳನ್ನು ಕಂಡದ್ದಲ್ಲ, ಮುಂದೆಯೂ ಕಾಣಲಾರದು ಕೂಡಾ. ಇಂತಹವರು ನನಗೆ ಬಾಲ್ಯದಿಂದಲೂ ಈವರೆಗೂ ಸನ್ಮಿತ್ರರು ಎಂದು ಹೇಳಲಿಕ್ಕೆ ಹೆಮ್ಮೆ ಎನ್ನಿಸುತ್ತದೆ, ಅಭಿಮಾನವೆನ್ನಿಸುತ್ತದೆ.

ರಾಜಶೇಖರನ್ ಅವರ ಬದುಕನ್ನು ನಾನು ಅತ್ಯಂತ ನಿಕಟವಾಗಿ ಬಲ್ಲೆ. ವಿದ್ಯಾರ್ಥಿ ದಿಶೆಯಲ್ಲಿಯೇ ಅವರಲ್ಲಿ ರಾಜಕೀಯ ಮುತ್ಸದ್ದಿ ಗುಣಗಳು ಬೆಳೆದಿದ್ದವು. ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹುರುಪಿನಿಂದ ತೊಡಗಿಕೊಂಡು ಇಡೀ ಯುವ ಸಮುದಾಯವನ್ನು ಉತ್ಸಾಹದಿಂದ ಚಳುವಳಿಯಲ್ಲಿ ಭಾಗವಹಿಸುವಂತೆ ಮಾಡುತ್ತಿದ್ದುದು ನನಗಿನ್ನೂ ನೆನಪಿದೆ. ಅವರ ದೇಶಪ್ರೇಮ, ಸ್ವಾತಂತ್ರ್ಯದ ಕಾಳಜಿಗಳನ್ನು ನೆನೆದರೆ ಇಂದಿಗೂ ನನ್ನ ಮೈಯಲ್ಲಿ ರೋಮಾಂಚನ ಉಂಟಾಗುತ್ತದೆ. ವಿದ್ಯಾರ್ಥಿ ಸಮುದಾಯವನ್ನೆಲ್ಲಾ ಸೇರಿಸಿಕೊಂಡು ಸ್ವಾತಂತ್ರ್ಯ ಪಡೆದುಕೊಳ್ಳಲಿಕ್ಕೆ ನಾವು ಏನು ಮಾಡಬೇಕು? ಮುಂದೆ ನಮ್ಮ ದೇಶದ ಭವಿಷ್ಯವೇನು ? ಮುಂತಾದ ಪ್ರಶ್ನೆಗಳನ್ನು ಚರ್ಚೆಯ ವಿಷಯವಾಗಿ ಎತ್ತಿಕೊಳ್ಳುತ್ತಿದ್ದರು. ನಾನು ಆಗ ಕನಕಪುರ ಗ್ರಾಮೀಣ ಪ್ರೌಢಶಾಲೆಯಲ್ಲಿ ಓದುತ್ತಿದ್ದೆನು. ಅದೇ ಶಾಲೆಯ ಹಾಸ್ಟೆಲ್‌ನಲ್ಲಿಯೇ ನಮ್ಮ ವಸತಿ. ಎಂ.ವಿ. ರಾಜಶೇಖರನ್ ದೇಗುಲಮಠ ದಿಂದ ಶಾಲೆಗೆ ಬರುತ್ತಿದ್ದರು. ಆ ಸಂದರ್ಭದಲ್ಲಿ ದಿನವೂ ಬೆರೆಯುತ್ತಿದ್ದೆವು.

೧೯೪೭ರಲ್ಲಿ ನಾನು ಶಾಲೆ ಬಿಟ್ಟು ಊರು ಸೇರಿದೆ. ನಮ್ಮ ಮನೆಯ ಜವಾಬ್ದಾರಿಯೆಲ್ಲಾ ನನ್ನ ಮೇಲೆ ಬಿತ್ತು. ಆಗ ಎಂ.ವಿ. ರಾಜಶೇಖರನ್ ವಾರಕ್ಕೊಂದರಂತೆ ಪತ್ರ ಬರೆಯುತ್ತಿದ್ದರು. ಅವರು ಮೈಸೂರು ಸಂಸ್ಥಾನವನ್ನು ಜವಾಬ್ದಾರಿ ಸರ್ಕಾರದ ಒಕ್ಕೂಟದಡಿಯಲ್ಲಿ ತರಲು 'ಮೈಸೂರು ಚಲೋ' ಚಳುವಳಿಯನ್ನು ಹಮ್ಮಿಕೊಂಡರು. ಆ ಸಂದರ್ಭದಲ್ಲಿ ಕನಕಪುರದವರೇ ಆದ ಶ್ರೀ ರಾಮಚಂದ್ರ ಅವರು ರಾಜಶೇಖರನ್ ಅವರ ಈ ಚಳುವಳಿಯಲ್ಲಿ ಶ್ರದ್ಧೆಯಿಂದ ಜನ ಸಂಘಟನೆ ಮಾಡಿದರು. ಕನಕಪುರದಿಂದ ಮೈಸೂರಿಗೆ ಕಾಲ್ನಡಿಗೆಯ ಜಾಥಾವನ್ನೂ ಆಯೋಜಿಸಿದರು. ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಂತೂ ಅವರ ಸಂಭ್ರಮ ಹೇಳತೀರದು. ಕನಕಪುರದಲ್ಲಿ ಅತ್ಯಂತ ವಿಜೃಂಭಣೆಯಿಂದ ಸ್ವಾತಂತ್ರ್ಯದ ಹಬ್ಬವನ್ನೂ ಆಚರಿಸಿದರು. ಆ ಸಂದರ್ಭದಲ್ಲಿ ಅವರು ಎಸ್ಸೆಸ್ಸೆಲ್ಸಿ (ಮೆಟ್ರಿಕ್) ಓದುತ್ತಿದ್ದರು. ೧೯೬೧ರಲ್ಲಿ ನಾನು ಮತ್ತು ರಾಜಶೇಖರನ್ ಇಬ್ಬರೂ ತಾಲ್ಲೂಕು ಅಭಿವೃದ್ಧಿ ಮಂಡಳಿ ಚುನಾವಣೆಗೆ ಸ್ಪರ್ಧಿಸಿದ್ದೆವು. ಇದರೊಂದಿಗೆ ನಮ್ಮಿಬ್ಬರ ರಾಜಕೀಯ ರಂಗದ ಪ್ರವೇಶ ಅಧಿಕೃತವಾಗಿ ಆಯಿತು. ಆದರೆ 'ಪ್ರಥಮ ಚುಂಬನಂ ದಂತಭಗ್ನಂ' ಎಂಬಂತೆ ಇಬ್ಬರೂ ಸೋತೆವು. ನಮ್ಮ ಭಾಗದ ಅಂದಿನ ರಾಜಕೀಯ ಹಿರಿಯರಾದ ಶ್ರೀ ಕರಿಯಪ್ಪನವರ ಪ್ರೇರಣೆ, ಮಾರ್ಗದರ್ಶನಗಳು ನಮ್ಮ ಮುಂದಿನ ರಾಜಕೀಯ ಭವಿಷ್ಯವನ್ನು ಉಜ್ವಲಗೊಳಿಸಿದವು ಎನ್ನುವುದು ನನ್ನ ಅನಿಸಿಕೆ. ನಾನು ೧೯೬೨ರಲ್ಲಿ ವಿರೂಪಾಕ್ಷಪುರ ಕ್ಷೇತ್ರ (ಇಂದು ಅದು ಸಾತನೂರು ಕ್ಷೇತ್ರವಾಗಿದೆ) ವಿಧಾನಸಭೆ ಚುನಾವಣೆಗೆ ಸ್ಪರ್ಧಿಸಿದೆ. ಈ ಸಂದರ್ಭದಲ್ಲಿ ಎಂ.ವಿ. ರಾಜಶೇಖರನ್ ಅವರು ತುಂಬ ಸಹಕಾರ ಕೊಟ್ಟರು. ಅವರು ನನ್ನ ಗೆಲುವಿಗೆ ನೆರವಾದ ಕಾರಣಕರ್ತರಲ್ಲಿ ಒಬ್ಬರಾದರೆಂದರೆ ಅತಿಶಯೋಕ್ತಿಯೇನಲ್ಲ. ೧೯೬೭ರಲ್ಲಿ ಸಾತನೂರು ಕ್ಷೇತ್ರವನ್ನು ಮೀಸಲು ಕ್ಷೇತ್ರವೆಂದು ಘೋಷಿಸಲಾಯಿತು. ಆ ಸಂದರ್ಭದಲ್ಲಿ ನಾನು ಚುನಾವಣೆಗೆ ಸ್ಪರ್ಧಿಸಲಾಗಲಿಲ್ಲ. ಅದೇ ಸಂದರ್ಭದಲ್ಲಿ ಎಂ.ವಿ. ರಾಜಶೇಖರನ್ ಅವರು ಲೋಕಸಭೆಗೆ ಸ್ಪರ್ಧಿಸಿದರು, ಅವರು-ನಾನು ಒಟ್ಟಿಗೆ ಚುನಾವಣಾ ಪ್ರಚಾರಕ್ಕೆ ಹೋಗುತ್ತಿದ್ದೆವು.

ಕ್ಷೇತ್ರ ಸುತ್ತುವುದು ನಮ್ಮಿಬ್ಬರಿಗೂ ಅಭ್ಯಾಸವೇ ಆಗಿಹೋಗಿತ್ತು. ಗ್ರಾಮೀಣ ಪ್ರದೇಶಗಳಿಗೆ ಹೋಗಿ ಅಲ್ಲಿನ ಕೃಷಿ, ಇತರ ಉದ್ಯೋಗಗಳನ್ನು ಅಧ್ಯಯನ ಮಾಡುತ್ತಿದ್ದೆವು. ಜನಗಳಿಗೆ ಆ ಗ್ರಾಮಕ್ಕೆ ಇರುವ ಅಗತ್ಯವನ್ನು ತಿಳಿದುಕೊಂಡು ಬರುತ್ತಿದ್ದೆವು. ಕೃಷಿ ಮತ್ತು ಗ್ರಾಮೀಣ ಬದುಕನ್ನು ಸುಧಾರಿಸುವಲ್ಲಿ ನನ್ನ ಗೆಳೆಯನದು ಅವಿರತ ಪ್ರಯತ್ನ. ಅದಕ್ಕಾಗಿ ಹಲವು ಸಂಸ್ಥೆಗಳನ್ನೂ ಹುಟ್ಟುಹಾಕಿರುವರು. ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕಾರ್ಯಾಗಾರಗಳನ್ನೂ ಆಯೋಜಿಸಿದವರು. ದೇಶ-ವಿದೇಶಗಳನ್ನ ಸುತ್ತಿ ಕೃಷಿ ಸುಧಾರಣೆಯ ವಿವಿಧ ಆಯಾಮಗಳನ್ನು ಕಂಡುಕೊಂಡು ಅನುಷ್ಠಾನಕ್ಕೆ ತಂದುಕೊಂಡಿರುವವರು ಅವರಾಗಿದ್ದಾರೆ.

೧೯೭೭ರ ಪಾರ್ಲಿಮೆಂಟ್ ಚುನಾವಣೆಯಲ್ಲಿ ಎಂ.ವಿ. ರಾಜಶೇಖರನ್ ಅವರು

ರಾಜಕೀಯ ಹಿನ್ನಡೆಯನ್ನೂ ಅನುಭವಿಸಿದರು. ಆ ಸಂದರ್ಭದಲ್ಲಿ ಇವರು ಜಯಗಳಿಸಿದ್ದರೆ ಅವರಿಗೆ ರಾಷ್ಟ್ರದ ಉನ್ನತ ಹುದ್ದೆ ಪ್ರಾಪ್ತವಾಗುತ್ತಿದ್ದುದರಲ್ಲಿ ಎರಡು ಮಾತಿಲ್ಲ. ಆಗಿನ ಜನತಾ ಪಕ್ಷದ ಅಧ್ಯಕ್ಷರಾಗಿದ್ದ ಶ್ರೀ ಹೆಚ್.ಡಿ. ದೇವೇಗೌಡರ ನೇತೃತ್ವದಲ್ಲಿ ರಾಜ್ಯದಲ್ಲಿ ಮೊರಾರ್ಜಿ ದೇಸಾಯಿಯವರನ್ನು ಪ್ರಧಾನಿ ಅಭ್ಯರ್ಥಿಯನ್ನಾಗಿ ಬೆಂಬಲಿಸಿ ನಡೆದ ಚುನಾವಣೆ ಅದಾಗಿತ್ತು. ಸಾತನೂರು ಘಟನೆಯ ಹಿನ್ನೆಲೆಯಲ್ಲಿಯೂ ರಾಜಶೇಖರನ್ ಗೆಲುವು ಖಚಿತವೆಂದೇ ಭಾವಿಸಿದ್ದೆವು. ಆದರೆ ರಾಜಶೇಖರನ್ ಚುನಾವಣೆಯಲ್ಲಿ ಸೋತುಹೋದರು. ಅದು ನಮಗೆಲ್ಲಾ ಬೇಸರ ತಂದಿತು. ಆಗ ಕೇವಲ ಮೂರೂವರೆ ಸಾವಿರ ಮತಗಳ ಅಂತರದಿಂದ ಸೋತಿದ್ದರು. ರಾಜಶೇಖರನ್ ಸೋಲಿಗೆ ಮುಖ್ಯವಾದ ಕಾರಣವೆಂದರೆ ನನ್ನ ಅಭಿಪ್ರಾಯದಲ್ಲಿ ಅವರು ಹಣವನ್ನು ಖರ್ಚುಮಾಡಲಿಲ್ಲ. ಅಲ್ಲದೆ ಖರ್ಚುಮಾಡಲು ಅವರಲ್ಲಿ ಹಣವೂ ಇರಲಿಲ್ಲ. ಅನ್ಯ ಪಕ್ಷದವರು ಹಣವನ್ನು ನೀರಿನಂತೆ ಹಂಚಿದ್ದರು. ಅದೇ ಚುನಾವಣೆಯಲ್ಲಿ ಶ್ರೀಮತಿ ಇಂದಿರಾಗಾಂಧಿ ಹಾಗೂ ಅವರ ಪುತ್ರರಾದ ಸಂಜಯ ಗಾಂಧಿ ಇಬ್ಬರೂ ಸೋಲುಂಡ ಸಂಗತಿಯನ್ನು ಕೇಳಿ ತುಸು ಸಮಾಧಾನ ಪಟ್ಟುಕೊಂಡೆವು. ಆದರೆ ೧೯೭೮ರ ವಿಧಾನಸಭೆ ಚುನಾವಣೆಯಲ್ಲಿ ರಾಜಶೇಖರನ್ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದಲೂ ನಾನು ಸಾತನೂರು ವಿಧಾನಸಭಾ ಕ್ಷೇತ್ರದಿಂದಲೂ ಆಯ್ಕೆಯಾಗಿ ಇಬ್ಬರೂ ಜೊತೆ ಜೊತೆಗೇ ವಿಧಾನಸೌಧದ ಮೆಟ್ಟಿಲನ್ನು ಹತ್ತಿದೆವು. ಅಂದಿನ ಸಂಭ್ರಮ ಉತ್ಸಾಹಗಳನ್ನು ನೆನಸಿಕೊಂಡರೆ ಈಗಲೂ ಮೈ ಪುಳಕವೇಳುತ್ತದೆ.

ಆನಂತರ, ರಾಜಶೇಖರನ್ ಜನತಾಪಕ್ಷವನ್ನು ತೊರೆದು ಕಾಂಗ್ರೆಸ್ ಪಕ್ಷವನ್ನು ಸೇರಿಕೊಂಡರು. ಇದರಿಂದಾಗಿ ಅವರು ರಾಜಕೀಯವಾಗಿ ಕೇವಲ ಪಕ್ಷ ಸಂಘಟನೆಯಲ್ಲಿ ದುಡಿಯತೊಡಗಿದರು. ೧೯೯೯ರ ವರೆಗೂ ಅವರು ಇದೇ ಹಿನ್ನೆಲೆಯ ಹುದ್ದೆಗಳಲ್ಲಿದ್ದರು. ವಿಧಾನ ಪರಿಷತ್ತಿಗೆ ಮತ್ತೆ ಆಯ್ಕೆಯಾಗುವ ಮೂಲಕ ಅವರ ರಾಜಕಾರಣದ ಎರಡನೆಯ ಮನ್ವಂತರವೊಂದನ್ನು ಕಂಡುಕೊಂಡರು. ಪ್ರಕೃತ ಸಂಸದರಾಗಿ ಅರ್ಥಪೂರ್ಣ ಕಾರ್ಯವೆಸಗುತ್ತಿದ್ದಾರೆ. ಅವರ ಶಿಸ್ತು, ವಿನಯ ಶೀಲತೆ, ಸಜ್ಜನಿಕೆಗಳಿಂದ ಅಧಿಕಾರಿಗಳ ಮತ್ತು ಮಂತ್ರಿಗಳ ಗಮನ ಸೆಳೆದು ರಾಜ್ಯಕ್ಕೆ ಬರಬೇಕಾದ ಎಲ್ಲಾ ಯೋಜನೆಗಳನ್ನು ತಂದುಕೊಡುತ್ತಿದ್ದಾರೆ.

ಮುಂದೆ ಕೂಡಾ ಅವರು ರಾಜಕೀಯವಾಗಿ ಉನ್ನತ ಹುದ್ದೆಯನ್ನು ಹೊಂದಲಿ. ಎಪ್ಪತ್ತೈದರ ಹರೆಯದಲ್ಲಿ ಇಪ್ಪತ್ತೈದರ ತರುಣತನ ಅವರಲ್ಲಿ ಕಾಣುತ್ತಿದೆ. ಇಂತಹ ಉತ್ಸಾಹ ಅವರಲ್ಲಿ ಸದಾ ಇರಲಿ. ಮಂಚನಬೆಲೆ ವಿವಿಧೋದ್ದೇಶ ಯೋಜನೆ, ಕೃಷಿಕ ಸಮಾಜ ಮುಂತಾದ ವಿದಾಯಿ ಕಾರ್ಯಕ್ರಮಗಳಿಂದಾಗಿ ಈಗಾಗಲೇ ಕನ್ನಡ ನಾಡಿನ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿದ್ದಾರೆ. ಇನ್ನೂ ಅವರು ಉನ್ನತವಾದ ಹುದ್ದೆಗಳನ್ನು ಹೊಂದಲಿ, ಅವರ ಅಪೇಕ್ಷೆಯಂತೆ ಸರ್ವವೂ ನೆರವೇರಲಿ ಎನ್ನುವುದು ನನ್ನ ಹಾರೈಕೆ. ಅವರ ನಿಸ್ವಾರ್ಥ ಜನಸೇವೆ, ಅವರ ನಿರಂತರ ಕ್ರಿಯಾಶೀಲತೆ, ಜೀವನದಲ್ಲಿ ಅಳವಡಿಸಿಕೊಂಡ ಶಿಸ್ತು, ರಾಜಕೀಯ ಬದ್ಧತೆಗಳು ಮುಂದಿನ ಪೀಳಿಗೆಗೆ ಆದರ್ಶಪ್ರಾಯವಾದವುಗಳು.

***

# ಅಜಾತಶತ್ರು

◆ ಶ. ಅ. ಪಾಟೀಲ

ಮಹಾನ್ ವ್ಯಕ್ತಿಗಳ ಘನತೆ ಗುರುತಿಸಿ ಗೌರವ ನೀಡುವುದು ನಮ್ಮ ನಾಡಿನಲ್ಲಿ ನಡೆದು ಬಂದ ಒಂದು ಸಂಸ್ಕೃತಿ. ಒಂದಿಲ್ಲೊಂದು ರೀತಿಯಲ್ಲಿ ಇಂತಹ ಮಹಾನ್ ವ್ಯಕ್ತಿಗಳ ಸೇವೆ ಪಡೆದು ನಂತರ ಋಣ ತೀರಿಸುವುದು ಸಮಾಜದ ಕರ್ತವ್ಯ. ಎಲೆ ಮರೆಯ ಕಾಯಂತೆ ೭೫ ವರ್ಷ ತುಂಬು ಬಾಳು ಸವೆಸಿದ ಸ್ಮರಣೀಯ ನಾಯಕ. ಆಧ್ಯಾತ್ಮಿಕ ಸತ್ಯ ಶೀಲವಂತರಾದ ಶ್ರೀ ಎಂ.ವಿ.ರಾಜಶೇಖರನ್ ಹೆಸರನ್ನು ಕೇಳದವರಿಲ್ಲ. ಸಮಾಜ ಅವರ ಭೌತಿಕ ಸಂಪತ್ತನ್ನು ಹಂಚಿಕೊಂಡಂತೆ ಹೃದಯ ಶ್ರೀಮಂತಿಕೆಯನ್ನೂ ಮೆಚ್ಚಿ ಹರಸಿರುವುದು ನಿತ್ಯ ಸಂಗತಿ. ಮಾನವೀಯ ವ್ಯಕ್ತಿತ್ವವನ್ನು ತೋರಿ ಗೌರವ ನೀಡಿ ಸನ್ಮಾನಿಸುವುದು ಸಮಾಜದ ಆದ್ಯ ಕರ್ತವ್ಯ. ಶ್ರೀಮಾನ್ ರಾಜಶೇಖರನ್‌ರವರ ಸನ್ಮಾನ ಸಮಾರಂಭ ಜರುಗುವ ಪ್ರಸಂಗ ನಾಡಿನ ಸಂತಸದ ಪ್ರತೀಕ.

ಅರವತ್ತೆರಡು ವರ್ಷಗಳ ಅವರ ಸಮಾಜಸೇವೆ ವೈವಿಧ್ಯ ಮಯವಾದುದು. ಕೇವಲ ೧೪ ವರ್ಷದವರಿದ್ದಾಗಲೇ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ನಾಡಿನ ಬಗೆಗಿನ ತಮ್ಮ ಅಭಿಮಾನ ಹಾಗೂ ಕಳಕಳಿಯನ್ನು ತೋರಿಸಿದ ಧೀಮಂತ ವ್ಯಕ್ತಿ ಅವರು. ಇಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಮರಳವಾಡಿಯಲ್ಲಿ ಶ್ರೀಮತಿ ಹಾಗೂ ಶ್ರೀ ವೀರಶೆಟ್ಟಯ್ಯನವರ ಸುಪುತ್ರರಾಗಿ ೧೯೨೮ ಸೆಪ್ಟೆಂಬರ್ ೧೨ ರಂದು ಜನಿಸಿದ ಶ್ರೀ ರಾಜಶೇಖರನ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಬಿ.ಎ. ಪದವೀಧರರು. ದೆಹಲಿ ವಿಶ್ವವಿದ್ಯಾಲಯದಿಂದ ಕಾನೂನು ಅಭ್ಯಾಸ ಮಾಡಿದವರು. ಅಮೇರಿಕಾ ದೇಶದ ಮಿಸ್ಸೋರಿ ವಿಶ್ವವಿದ್ಯಾಲಯದಲ್ಲಿ ಕೃಷಿ ತರಬೇತಿ ಪೂರೈಸಿ ಸುಸ್ಥಿರ ಕೃಷಿ, ಕೃಷಿ ವಿಸ್ತರಣೆ, ಸಹಕಾರಿ ತತ್ವದ ಅಡಿಯಲ್ಲಿ ಮಾರಾಟ ಹಾಗೂ ಖರೀದಿ ಸಾಲ ಹಾಗೂ ಸೌಲಭ್ಯ ಕುರಿತು ಅಮೇರಿಕಾದಲ್ಲಿ ತರಬೇತಿ ಪಡೆದರು.

ಬಹುಶಃ ಕರ್ನಾಟಕ ರಾಜ್ಯದ ರಾಜಕೀಯದಲ್ಲಿ ಸಂಸತ್ತು ಹಾಗೂ ವಿಧಾನಮಂಡಲದ ಎರಡೂ ಸದನಗಳ ಸದಸ್ಯರಾಗಿ ಸೇವೆ

ಸಲ್ಲಿಸುತ್ತಿರುವವರಲ್ಲಿ ಶ್ರೀ ಎಂ.ವಿ. ರಾಜಶೇಖರನ್ ಪ್ರಮುಖರು. ಸಧ್ಯದ ಮಾಹಿತಿ ಪ್ರಕಾರ ಈ ಹಿರಿಮೆ ಇರುವುದು ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣರವರಿಗೆ ಮಾತ್ರ. ಆಗರ್ಭ ಶ್ರೀಮಂತ ಮನೆತನದಲ್ಲಿ ಜನಿಸಿದ್ದರೂ ಕಿಂಚಿತ್ತೂ ಗರ್ವ ಅವರ ಬಳಿ ಇಲ್ಲ. ಅವರು ಸಾಮಾನ್ಯರಲ್ಲಿ ಸಾಮಾನ್ಯರು. ತಂದೆ-ತಾಯಿಗಳಿಂದ ಅತ್ಯುತ್ತಮ ಸಂಸ್ಕಾರ ಪಡೆದಿರುವ ಅವರು ಇಡೀ ಸಮಾಜಕ್ಕೆ ಮಾದರಿಯಾಗಿ ಬೆಳೆದಿದ್ದಾರೆ. ಇವರು ತಮ್ಮ ಜೀವನದಲ್ಲಿ ಏನೆಲ್ಲಾ ಸಾಧಿಸಿದ್ದರೂ ಅದು ಸ್ವಂತ ಪ್ರತಿಭೆ ಹಾಗೂ ಸಂಸ್ಕಾರಗಳಿಂದ ಮಾತ್ರ. ಕರ್ನಾಟಕದ ಶಿಲ್ಪಿ ಎಂದೇ ಪರಿಗಣಿಸಲ್ಪಡುವ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರ ಅಳಿಯಂದಿರಾಗಿದ್ದರೂ ಎಂದೂ ತಮ್ಮ ಬೆಳವಣಿಗೆಗೆ ಅವರ ಅಧಿಕಾರ ಬಳಸಿಕೊಂಡವರಲ್ಲ. ಆದರೆ, ನಿಜಲಿಂಗಪ್ಪನವರ ಉದಾತ್ತ ಗುಣಗಳು, ಸಮಾಜದ ಬಗ್ಗೆ ಕಳಕಳಿ ಹಾಗೂ ನಿಷ್ಠುರ ಸ್ವಭಾವಗಳನ್ನು ತಮ್ಮ ಇಡೀ ಜೀವನದಲ್ಲಿ ಅಳವಡಿಸಿಕೊಂಡು ಬಾಳಿದ್ದಾರೆ.

ಯಾವುದೇ ವಿಷಯ ಇದ್ದರೂ ಅದನ್ನು ಸಂಪೂರ್ಣವಾಗಿ ಅರ್ಥೈಸಿಕೊಳ್ಳುವ ಸ್ವಭಾವ ಅವರದು. ವಿಷಯ ತಿಳಿದವರಿಂದ, ಅವರು ತಮಗಿಂತ ಎಷ್ಟೇ ಕಿರಿಯರಾಗಿದ್ದರೂ, ವಿದ್ಯಾರ್ಥಿಯಂತೆ ಅವರೊಂದಿಗೆ ಸಮಾಲೋಚನೆ, ಚರ್ಚೆ ನಡೆಸಿ ಅದನ್ನು ತಿಳಿದುಕೊಂಡು ಕಾರ್ಯಪ್ರವೃತ್ತರಾಗುವ ಸ್ವಭಾವ ಅವರದು. ಪ್ರಪಂಚದ ಆರು ಖಂಡಗಳಲ್ಲಿರುವ ಪ್ರಮುಖ ದೇಶಗಳನ್ನು ಸಂದರ್ಶಿಸಿ, ಅನುಭವದ ಆಗರ ಆಗಿರುವ ಅವರು ತಮ್ಮ ಅನುಭವಗಳನ್ನು ಇತರರೊಂದಿಗೆ ಬಿಚ್ಚು ಮನಸ್ಸಿನಿಂದ ಹಂಚಿಕೊಳ್ಳುವ ಸಹೃದಯಿ. ಬೆಂಗಳೂರಿನಲ್ಲಿ ಅವರು ಸ್ಥಾಪಿಸಿರುವ ಏಶಿಯಾ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್ ಹಾಗೂ ಇನ್ನಿತರ ಸಂಘ-ಸಂಸ್ಥೆಗಳು ಅವರ ಬಹುಮುಖ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿವೆ. ಶ್ರೀ ಎಂ.ವಿ. ರಾಜಶೇಖರನ್ ಗ್ರಾಮೀಣ ಜನತೆಗೆ ಅತೀ ಸಮೀಪದವರು.

ತಮ್ಮ ರಾಜಕೀಯ ಜೀವನದಲ್ಲಿ ಹಲವಾರು ಏಳು-ಬೀಳುಗಳನ್ನು ಕಂಡಿರುವ ಶ್ರೀ ರಾಜಶೇಖರನ್, ಗೆದ್ದಾಗಾಗಲೀ-ಸೋತಾಗಾಗಲೀ - ಸ್ಥಿತಪ್ರಜ್ಞರಾಗಿ ಬದುಕಿ, ಆದರ್ಶ ಪ್ರಾಯರಾಗಿದ್ದಾರೆ. ಕೇವಲ ೧೪ ವರ್ಷದವರಿದ್ದಾಗಲೇ ವಿದ್ಯಾರ್ಥಿ ಕಾಂಗ್ರೆಸ್ಸಿನ ಕ್ರಿಯಾಶೀಲ ಸದಸ್ಯರಾಗಿ ತನ್ಮೂಲಕ ಭಾರತ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದ ಹಿರಿಮೆ ಅವರದು. ತಮ್ಮ ಸಮರ್ಪಣಾ ಭಾವನೆಯ ಕಾರ್ಯಗಳಿಂದ ಕಾಂಗ್ರೆಸ್ ಪಕ್ಷದ ಶಿಸ್ತಿನ ಸಿಪಾಯಿಯಾಗಿ ಬೆಳೆಯುತ್ತ ಹೋಬಳಿ, ತಾಲ್ಲೂಕು, ಜಿಲ್ಲಾ, ರಾಜ್ಯ ಹಾಗೂ ರಾಷ್ಟ್ರಮಟ್ಟದ ಧುರೀಣರಾಗಿ ಹೊರಹೊಮ್ಮಿದ್ದಾರೆ. ಹೊಸ ಪೀಳಿಗೆಯ ರಾಜಕಾರಣಿಗಳಿಗೆ ಅವರು ಮಾದರಿಯ ವ್ಯಕ್ತಿ. ಅವರದು ಯಾವಾಗಲೂ ಪ್ರಗತಿಶೀಲ ಚಿಂತನ. ಹುಟ್ಟು ಕಾಂಗ್ರೆಸ್ಸಿಗರಾದ ಅವರು ೧೯೭೭ರ ತುರ್ತು ಸ್ಥಿತಿಯ ಕಾರಣಗಳಿಂದ ರಾಷ್ಟ್ರ ರಾಜಕಾರಣದಲ್ಲಿ ಉಂಟಾದ ತೀವ್ರ ಸ್ಥಿತ್ಯಂತರಗಳಿಂದಾಗಿ ಕಾಂಗ್ರೆಸ್ಸಿನಿಂದ ೬-೭ ವರ್ಷಗಳ ಕಾಲ ದೂರ ಇದ್ದು, ಆಗಿನ ಜನತಾ ಪಕ್ಷದ ಪದಾಧಿಕಾರಿಯಾಗಿ ಕಾರ್ಯನಿರ್ವಹಿಸಿದರು. ಆದರೆ ಅವರಲ್ಲಿ ರಕ್ತಗತವಾಗಿದ್ದ ಕಾಂಗ್ರೆಸ್ ತತ್ವಗಳು, ಪುನಃ ಅವರನ್ನು ೧೯೮೪ರಲ್ಲಿ ಭಾರತೀಯ ರಾಷ್ಟ್ರೀಯ

ಕಾಂಗ್ರೆಸ್ಸಿಗೆ ಸೇರುವಂತೆ ಮಾಡಿದವು.

ಪ್ರಥಮವಾಗಿ ಅವರು ೧೯೬೭-೧೯೭೦ ರವರೆಗೆ ಲೋಕಸಭಾ ಸದಸ್ಯರಾಗಿ ಕನಕಪುರದಿಂದ ಚುನಾಯಿತರಾಗಿ ಸಂಸತ್ತಿಗೆ ಹೋದರು. ಕೇಂದ್ರ ಸರ್ಕಾರದ ಹಲವಾರು ಸಚಿವ ಖಾತೆಗೆ ಹೊಂದಿಕೊಂಡು ಹಲವಾರು ಸಂಸದೀಯ ಸಮಿತಿಗಳ ಸದಸ್ಯರಾಗಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಿದರು. ರೇಷ್ಮೆ ಮಂಡಳಿಯ ಸದಸ್ಯರಾಗಿಯೂ ಅವರು ಕಾರ್ಯ ನಿರ್ವಹಿಸಿದ್ದಾರೆ.

೧೯೭೮ರಿಂದ ೧೯೮೨ ರ ಅವಧಿಯಲ್ಲಿ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ಸದಸ್ಯರಾಗಿ ಆಯ್ಕೆಯಾಗಿ ಅತ್ಯಂತ ಸಮರ್ಪಕ ರೀತಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ.

ಕರ್ನಾಟಕ ರಾಜ್ಯದ ಮೇಲ್ಮನೆಯೆಂದೇ ಪ್ರತೀತಿ ಇರುವ ರಾಜ್ಯ ವಿಧಾನ ಪರಿಷತ್ತಿಗೆ ೨೦೦೧ ರಲ್ಲಿ ವಿಧಾನ ಪರಿಷತ್ ಸದಸ್ಯರಾಗಿ, ವಿಧಾನಸಭೆಯಿಂದ ಆಯ್ಕೆಯಾಗಿ ಸೇವೆ ಸಲ್ಲಿಸುತ್ತಿರುವಾಗಲೇ ಅವರು, ಸಂಸತ್ತಿನ ಮೇಲ್ಮನೆ ಎಂದು ಪ್ರತೀತಿ ಇರುವ ರಾಜ್ಯಸಭೆಗೆ ಕರ್ನಾಟಕದ ವಿಧಾನ ಮಂಡಲದಿಂದ ಆಯ್ಕೆಯಾಗಿ ಹೋದರು. ಕರ್ನಾಟಕ ರಾಜ್ಯದ ಸಚಿವ ಸಂಪುಟದಲ್ಲಿ ಕ್ಯಾಬಿನೆಟ್ ಸಚಿವರಾಗಿ ಸೇರುವ ಬಗ್ಗೆ ಖಚಿತ ಸುಳಿವು ಬಂದ ಕೆಲ-ಕ್ಷಣಗಳಲ್ಲೇ ಅವರ ಸೇವೆಯನ್ನು ರಾಜ್ಯಸಭೆಯಲ್ಲಿ ಬಳಸಿಕೊಳ್ಳುವ ಕಾಂಗ್ರೆಸ್ ಪಕ್ಷದ ನಿರ್ಣಯ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿಯವರು ತೆಗೆದುಕೊಂಡಾಗ, ಅವರು ಹೈಕಮಾಂಡ್ ಆದೇಶವನ್ನು ವಿನಮ್ರವಾಗಿ ಪಾಲಿಸಿ ಇಂದು ರಾಜ್ಯಸಭೆಯಲ್ಲಿ ಕಾಂಗ್ರೆಸ್ ಸದಸ್ಯರಾಗಿ ಕ್ರಿಯಾಶೀಲ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀ ಎಂ.ವಿ. ರಾಜಶೇಖರನ್ ಸಮಾಜದಲ್ಲಿ ಪ್ರಾಮಾಣಿಕವಾಗಿ ಸೇವೆ ಸಲ್ಲಿಸುವ ಜನರು ಯಾವುದೇ ಮಟ್ಟದಲ್ಲಿದ್ದರೂ ಅಂಥ ಜನರನ್ನು ಬಹುವಾಗಿ ಮೆಚ್ಚಿಕೊಂಡು ಅವರ ಉನ್ನತಿಗಾಗಿ ತಮ್ಮ ವೈಯಕ್ತಿಕ ಪ್ರಭಾವ ಬೆಳೆಸುವಂಥ ಸಹೃದಯಿ. ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳ ಕಾರ್ಯಗಳ ಬಗ್ಗೆ ಅಪಾರ ಆಸಕ್ತಿ ಹೊಂದಿದ್ದು ರಾಷ್ಟ್ರದಾದ್ಯಂತ ಹತ್ತು-ಹಲವಾರು ಸಂಘ-ಸಂಸ್ಥೆಗಳೊಂದಿಗೆ ಸುಮಧುರ ಸಂಬಂಧ ಇರಿಸಿಕೊಂಡು ಆ ಸಂಸ್ಥೆಗಳಿಗೆ ತಮ್ಮ ವಿಚಾರಧಾರೆಗಳನ್ನು ನೀಡುತ್ತಾ ಅವುಗಳ ಪ್ರಗತಿಗೂ ಕಾರಣೀಭೂತರಾಗಿದ್ದಾರೆ.

ತಮ್ಮ ವೈಯಕ್ತಿಕ ಸಂಪರ್ಕದಲ್ಲಿ ಬರುವ ಎಂಥದೇ ವ್ಯಕ್ತಿ ಇದ್ದರೂ ಅವರನ್ನು ಸೂಜಿಗಲ್ಲಿನಂತೆ ಆಕರ್ಷಿಸುವ ಶಕ್ತಿ ಎಂ.ವಿ. ರಾಜಶೇಖರನ್ ಅವರಿಗಿದೆ. ಇನ್ನಿತರರಲ್ಲಿಯೂ ಒಳ್ಳೆಯ ಗುಣಗಳನ್ನು ಮೆಚ್ಚುವ ದೊಡ್ಡತನ ಅವರದು. ವಿನಾಕಾರಣ ಎಂದೂ ಯಾರನ್ನೂ ಟೀಕಿಸುವ ಗೋಜಿಗೆ ಹೋಗುವವರಲ್ಲ. ತಮ್ಮಿಂದ ಸಹಾಯ-ಸಹಕಾರ ಅಪೇಕ್ಷಿಸಿ ಬರುವ ಯಾರನ್ನೂ ಅವರು ಉಪೇಕ್ಷಿಸುವವರಲ್ಲ. ಅತ್ಯಂತ ತಾಳ್ಮೆಯಿಂದ ಎಲ್ಲರೊಂದಿಗೂ ಬೆರೆತು ತಮ್ಮ ಛಾಪು ಮೂಡಿಸುವ ಶಕ್ತಿ ಅವರಲ್ಲಿದೆ.

ರಾಜಕೀಯ ಅವರ ಜೀವನದ ಒಂದು ಅಂಗ ಮಾತ್ರ. ಮೂಲತಃ ಅವರು ಕೃಷಿಕರು

ಕೃಷಿ ಕ್ಷೇತ್ರದಲ್ಲಿ ಅವರಿಗಿರುವ ಅನುಪಮ ಕಳಕಳಿ ಅನುಕರಣೀಯ. ಭಾರತದಲ್ಲಿಯ ಕೃಷಿ ಕ್ಷೇತ್ರದ ಅಭ್ಯದಯಕ್ಕಾಗಿ ತಮ್ಮದೇ ಆದ ಹಲವಾರು ಸಿದ್ಧಾಂತ ಹೊಂದಿರುವ ಅವರು ತಾವು ಸ್ಥಾಪಿಸಿರುವ ಸಂಘ-ಸಂಸ್ಥೆಗಳ ಮೂಲಕ ತಮ್ಮ ಸಿದ್ಧಾಂತಗಳನ್ನು ಕಾರ್ಯಗತಗೊಳಿಸುವ ಪ್ರಯತ್ನಶೀಲ ವ್ಯಕ್ತಿ. ದೇಶದ ತುಂಬ ಉತ್ತಮ ಸ್ನೇಹಿತರನ್ನು ಹೊಂದಿರುವ ಅವರಿಗೆ ಎಲ್ಲ ಕ್ಷೇತ್ರಗಳು ಸುಪರಿಚಿತ. ಸಂಸತ್ತಿನ ವಿವಿಧ ಸಲಹಾ-ಸಮಿತಿಗಳ ಸದಸ್ಯರಾಗಿ ರಾಷ್ಟ್ರದ ಹಲವಾರು ರಾಜ್ಯಗಳ ಪ್ರವಾಸ ಕೈಗೊಂಡು ಅಲ್ಲಿನ ಜನಜೀವನ, ಸಂಸ್ಕೃತಿ ಹಾಗೂ ಜನತೆಯ ಕಷ್ಟಕಾರ್ಪಣ್ಯಗಳ ಬಗ್ಗೆ ಪ್ರತ್ಯಕ್ಷ ಮಾಹಿತಿ ಸಂಗ್ರಹಿಸಿ ಅಂಥ ಜನರೊಡನೆ ಸಕ್ರಿಯವಾಗಿ ಬೆರೆತು ತಮ್ಮ ಭಾವನೆಗಳನ್ನು ಅವರೊಂದಿಗೆ ಹಂಚಿಕೊಂಡಿದ್ದಾರೆ.

ಕೃಷಿ ವಿಶ್ವವಿದ್ಯಾಲಯ, ಧಾರವಾಡ ಎಂದರೆ ಅವರಿಗೆ ತುಂಬಾ ಇಷ್ಟ. ಉತ್ತರ ಕರ್ನಾಟಕದ ಪ್ರತಿಷ್ಠಿತ ಸಂಸ್ಥೆಯಾದ ಈ ವಿಶ್ವವಿದ್ಯಾಲಯಕ್ಕೆ ಅವರು ಹಲವಾರು ಬಾರಿ ಭೇಟಿ ಕೊಟ್ಟಿದ್ದಾರೆ. ಆದರೆ, ನಾನು ಮೊದಲ ಅವಧಿಗೆ ಕುಲಪತಿಯಾಗಿದ್ದಾಗ ಅವರು ಎರಡು ಸಲ ಈ ಕೃಷಿ ವಿಶ್ವವಿದ್ಯಾಲಯಕ್ಕೆ ಭೇಟಿ ಕೊಟ್ಟಾಗ ಆದ ಅನುಭವ ಅವಿಸ್ಮರಣೀಯವಾದುದು. ಇಲ್ಲಿ ನೋಡಿದ ಮತ್ತು ಭೇಟಿ ಕೊಟ್ಟ ರೈತ ಸೇವಾ ಕೇಂದ್ರ ಆಗಿರಬಹುದು, ಜೈವಿಕ ತಂತ್ರಜ್ಞಾನ ಸಂಸ್ಥೆ ಆಗಿರಬಹುದು ಮತ್ತು ಪಾಲ್ಗೊಂಡ ಕ್ಷೇತ್ರ ಸಮಿತಿ ಸಭೆ ಆಗಿರಬಹುದು, ಅಲ್ಲದೇ ಅದು ಬೀಜ ಘಟಕದ ಕಾರ್ಯಕ್ರಮ ಆಗಿರಬಹುದು. ಅವುಗಳನ್ನೆಲ್ಲಾ ವೀಕ್ಷಿಸಿ, ಕೂಲಂಕಷವಾಗಿ ಪರಿಶೀಲಿಸಿ, ಇಲ್ಲಿನ ಕನ್ನಡ ಸಂಘದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಕೃಷಿ ವಿಶ್ವವಿದ್ಯಾಲಯ, ಧಾರವಾಡವು ನನ್ನ ಮುಂದಾಳತ್ವದಲ್ಲಿ ಮಾಡುತ್ತಿರುವ ಕೆಲಸಗಳಿಗೆ ಅತೀವ ಮೆಚ್ಚುಗೆ ವ್ಯಕ್ತಪಡಿಸಿ, ಇಂತಹ ಕೆಲಸ ಇಲ್ಲಿ ನಡೆದಿದೆ ಎನ್ನುವುದನ್ನು ನಮ್ಮ ಬಹಳಷ್ಟು ಶಾಸಕರು, ಮಂತ್ರಿಗಳು ಬಂದು ನೋಡದೇ ಇರುವುದು ತುಂಬಾ ವಿಷಾದನೀಯ ಎನ್ನುವ ವಿಚಾರವನ್ನು ವ್ಯಕ್ತಪಡಿಸಿ ವೈಯಕ್ತಿಕವಾಗಿ ನನ್ನ ಕೆಲಸದ ಬಗ್ಗೆ ತುಂಬಾ ಮೆಚ್ಚುಗೆ ವ್ಯಕ್ತಪಡಿಸಿ ಇನ್ನು ಮುಂದೆಯೂ ನೀವೇ ಎರಡನೇ ಅವಧಿಗೂ ಕುಲಪತಿಯಾಗಬೇಕೆಂದು ಹರಸಿದುದಲ್ಲದೇ ಅದನ್ನು ಕಾರ್ಯಗತ ಮಾಡಲೂ ಅವರು ಬಿಡಲೇ ಮುಂದಾದುದನ್ನು ಇಲ್ಲಿ ನೆನೆಸಿಕೊಂಡರೆ ಅದು ತಪ್ಪಾಗಲಿಕ್ಕಿಲ್ಲ.

ಅಜಾತಶತ್ರುಗಳಾದ ಶ್ರೀ ಎಂ.ವಿ. ರಾಜಶೇಖರನ್ ಅವರನ್ನು ಸನ್ಮಾನಿಸುವ ಸಮಾರಂಭವೊಂದು ಜರುಗಲಿರುವನ್ನು ತಿಳಿದೊಡನೆ ನನ್ನ ತತ್‌ಕ್ಷಣದ ಅನಿಸಿಕೆ ಎಂದರೆ, ಈ ಕಾರ್ಯ ತಡವಾಯಿತೆಂದು.

ಇಂದಿನ ಯುವ ಪೀಳಿಗೆಗೆ ಕತ್ತಲೆ ಆವರಿಸಿರುವಾಗ ಮುಂದಿನ ದಾರಿ ತೋರಿಸಬಲ್ಲ ಅತ್ಯಂತ ಯೋಗ್ಯ ವ್ಯಕ್ತಿಗಳೆನಿಸಿರುವ ಶ್ರೀ ರಾಜಶೇಖರನ್‌ರನ್ನು ಸನ್ಮಾನಿಸಲು ಈ ಸಮಾರಂಭ ನಡೆಯುತ್ತಿರುವುದರಿಂದ ಅವರ ಸಂಪರ್ಕದಲ್ಲಿ ಬಾರದೆ ಇರುವ ಅನೇಕರು, ಅವರ ಬಗ್ಗೆ ತಿಳಿದವರ ಮತ್ತು ನಿಕಟವರ್ತಿಗಳ ಅನುಭವ ಕೇಳಿ ಈಗಿನ ಕಾಲದಲ್ಲಿಯೂ ಇಂಥ ವ್ಯಕ್ತಿಗಳು

ಇದ್ದಾರೆಯೇ ಎಂದು ಪ್ರಶ್ನಿಸಿಕೊಳ್ಳುವಂತಾಗುತ್ತದೆ.

ಜೀವನದಲ್ಲಿ ಅನೇಕರು ನಮಗೆ ಭೇಟ್ಟಿಯಾಗುತ್ತಾರೆ. ಆದರೆ ಎಂ.ವಿ. ರಾಜಶೇಖರನ್ ಎಂದೂ ಮರೆಯಲಾಗದ ವ್ಯಕ್ತಿ. ಅನೇಕರು ಉಪದೇಶಿಸುತ್ತಾರೆ ಆದರೆ ಅದರಂತೆ ನಡೆದು ಕೊಳ್ಳುವುದರಲ್ಲಿ ಎಂ.ವಿ. ರಾಜಶೇಖರನ್ ಅವರದು ನಡೆ-ನುಡಿ ಒಂದಾಗಿರುವ ಬದುಕು. ಅವರ ನಡವಳಿಕೆಯ ಪರಿಣಾಮ ಎಂತಹುದು ಎಂಬುದು ಮತ್ತು ಎಂ.ವಿ. ರಾಜಶೇಖರನ್ ಅವರೊಂದಿಗೆ ಕೆಲವೇ ಕ್ಷಣಗಳ ಒಡನಾಟದ ಫಲದ ಸವಿಯು ಏನೆಂಬುದು ಸವಿದವರಿಗೇ ಗೊತ್ತು.

ಆತ್ಮಬಲವಿರುವ ನಿಷ್ಕಲ್ಮಷ ಮನಸ್ಸಿನ ವ್ಯಕ್ತಿಗಳ ಹಾರೈಕೆಗಳು ವ್ಯರ್ಥವಾಗುವುದಿಲ್ಲ. ಅವರು ಕಟ್ಟಿದ ಕನಸುಗಳು ನನಸಾಗುವುದರಲ್ಲಿ ಸಂದೇಹವಿಲ್ಲ ಎಂಬುದಕ್ಕೆ ಅವರು ಶ್ರೀಕಾರ ಹಾಕಿದ ಅನೇಕ ಸಂಸ್ಥೆಗಳು ಅಭಿವೃದ್ಧಿ ಹೊಂದಿ, ಭವ್ಯ ವೃಕ್ಷಗಳಾಗಿರುವುದೇ ಒಂದು ನಿದರ್ಶನ. ಭಾರತದಲ್ಲಿಯೇ ಒಂದು ಆದರ್ಶ ಸರ್ಕಾರೇತರ ಸಂಸ್ಥೆಯಾಗಿರುವ ಏಷ್ಯಾ ಇನ್‌ಸ್ಟಿಟ್ಯೂಟ್ ಆಫ್ ರೂರಲ್ ಡೆವಲಪಮೆಂಟ್ ಸಂಸ್ಥೆಯನ್ನು ಬೆಳಸಿ, ಪ್ರೌಢಾವಸ್ಥೆಗೆ ತಂದುಕೊಟ್ಟಿರುವುದು ಒಂದು ಉದಾಹರಣೆ ಮಾತ್ರ.

ಎಂ. ವಿ. ರಾಜಶೇಖರನ್ ಅವರು ಅಪ್ಪಟ ಚಿನ್ನವಿದ್ದಂತೆ. ಈ ಚಿತ್ರವನ್ನು ಪ್ರಯೋಗಿಸಿ-ಉಪಯೋಗಿಸಿ ಕರ್ನಾಟಕ ಮಾತೆಯ ಮುಕುಟವನ್ನಾಗಿಸದೇ ಇದ್ದರೆ ಅಕ್ಕಸಾಲಿಗರ ತಪ್ಪಲ್ಲದೇ ಚಿನ್ನದ ತಪ್ಪಲ್ಲ. ಅವರು ನೂರಾರು ವರ್ಷಗಳ ತುಂಬು ಜೀವನ ನಡೆಸಿ ಸಮಾಜದಲ್ಲಿ ಸ್ಫೂರ್ತಿಯ ಸೆಲೆಯಾಗಲಿ ಎಂದು ಹಾರೈಸುತ್ತೇನೆ.

***

# ಪತ್ರ ವ್ಯವಹಾರಿ

ಎಸ್.ನಂಜುಂಡಸ್ವಾಮಿ

ಪತ್ರಲೇಖನ ಅತ್ಯಂತ ಪ್ರಾಚೀನ ಹವ್ಯಾಸ. ಮಾನವನ ನಾಗರಿಕತೆಯನ್ನು ಬೆಳೆಸಿದ ಪ್ರಮುಖ ಜ್ಞಾನಶಾಖೆ. ಇದೊಂದು ಕಲಾತ್ಮಕ ಹವ್ಯಾಸ. ಪತ್ರಗಳು - ವ್ಯಕ್ತಿಯೊಬ್ಬ ಬರೆದ, ಅವನಿಗೆ ಬಂದ - ಆ ಕಾಲದ ಆರ್ಥಿಕ, ಸಾಮಾಜಿಕ, ರಾಜಕೀಯ ಬೆಳವಣಿಗೆಗಳ ಬಗ್ಗೆ ಕ್ಷಕಿರಣವನ್ನು ಬೀರಬಲ್ಲವು. ಮಹಾತ್ಮಗಾಂಧಿ, ಜವಹರಲಾಲ್ ನೆಹರು, ವಲ್ಲಭಬಾಯಿ ಪಟೇಲ್, ಸುಭಾಷ್‌ಚಂದ್ರ ಬೋಸ್, ಇಂದಿರಾಗಾಂಧಿ ಇನ್ನೂ ಮುಂತಾದವರ ಪತ್ರಗಳು ಆಧುನಿಕ ಭಾರತದಲ್ಲಿ ಪ್ರಖ್ಯಾತಿಯನ್ನು ಗಳಿಸಿವೆ. ಈ ಪತ್ರಗಳು ಸ್ವಾತಂತ್ರ್ಯದ ಸಂಧಿಕಾಲ ಹಾಗೂ ಸ್ವಾತಂತ್ರ್ಯೋತ್ತರ ಭಾರತದ ಯುವಕ ಪರಂಪರೆಯ ಮೇಲೆ ಪ್ರಭಾವ ಬೀರಿವೆ.

ಆದರೆ ರಾಜಶೇಖರನ್‌ರವರಿಗೆ ಪತ್ರವ್ಯವಹಾರ ಒಂದು ಕರ್ತವ್ಯ ಪಾಲನೆಯ ಸಹಜವಾಗಿತ್ತು. ಪತ್ರಗಳನ್ನು ಬರೆಯುವುದು ಅವರ ದಿನಚರಿಗಳಲ್ಲಿ ಒಂದಾಗಿತ್ತು. ತಮಗೆ ಬಂದ ಪತ್ರಗಳನ್ನು ಓದುವುದು, ಅವುಗಳ ಅಂತರಾರ್ಥವನ್ನು ಗಂಭೀರವಾಗಿ ಗಮನಿಸುವುದು, ಅಷ್ಟೇ ಗಂಭೀರತೆಯಿಂದ ಪತ್ರಗಳನ್ನು ಬರೆಯುವುದು ರಾಜಶೇಖರನ್‌ರವರ ನಿತ್ಯ ಕಾರ್ಯಗಳಲ್ಲಿ ಒಂದಾಗಿದ್ದಂತೆ, ಅವರಲ್ಲಿರುವ ನೂರಾರು ಪತ್ರಗಳನ್ನು ಅಭ್ಯಾಸ ಮಾಡಿದಾಗ ಕಂಡುಬರುತ್ತದೆ. ಅವರಿಗೆ ಬಂದಿರತಕ್ಕ ಪತ್ರಗಳನ್ನು ಪರಿಶೀಲಿಸಿದಾಗ, ರಾಜಶೇಖರನ್‌ರವರ ಬಹುಮುಖ ಚಿಂತನೆ, ವ್ಯಕ್ತಿತ್ವ, ಅವರಿಗಿದ್ದ ಕಳಕಳಿಗಳು ಒಡಮೂಡಿ ಬರುತ್ತವೆ.

ರಾಜಶೇಖರನ್‌ರವರಿಗೆ ಬಂದಿರತಕ್ಕ ಪತ್ರಗಳನ್ನು ಅಭಿವೃದ್ಧಿ ವಿಚಾರಕ್ಕೆ ಸಂಬಂಧಿಸಿದವು, ಪ್ರತಿಷ್ಠಿತ ಸಭೆ ಸಮ್ಮೆಳನಗಳಿಗೆ ಅವರು ಆಯ್ಕೆಯಾದುದಕ್ಕೆ ಸಂಬಂಧಿಸಿದವು, ಹೊಸ ವರ್ಷ, ಹಬ್ಬ ಹರಿದಿನಗಳಿಗೆ ಶುಭ ಕೋರಿ ಬಂದಂಥವು, ವೈಯಕ್ತಿಕ ಕ್ಷೇಮಸಮಾಚಾರವನ್ನು ವಿಚಾರಿಸುವುದಕ್ಕೆ ಸಂಬಂಧಿಸಿದವು-ಎಂದು ಹಲವು ಮುಖಗಳಿಂದ ಅಭ್ಯಸಿಸಿ ವಿಶ್ಲೇಷಣೆ ಮಾಡಬಹುದು.

ರಾಜಶೇಖರನ್ ಯಾವಾಗಲೂ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೆಚ್ಚು ಕಳಕಳಿ ಉಳ್ಳವರು. ಇದು ಇಂದಿಗೂ ಅವರ ವ್ಯಕ್ತಿತ್ವದ ಪ್ರಮುಖ ಅವಿಭಾಜ್ಯ ಅಂಗವೆನಿಸಿದೆ. ೧೯೬೭ರಿಂದ ೭೦ರವರೆಗೂ ಅವರು ಕನಕಪುರ ಲೋಕಸಭಾ ಕ್ಷೇತ್ರದ ಸದಸ್ಯರಾಗಿದ್ದರಷ್ಟೆ. ಆಗ ಅವರು ಮರಳವಾಡಿ - ಸೀತಳವಾಡಿ ನಡುವೆ ಐದು ಮೈಲಿಗಳ ದೂರದ ತಾಲ್ಲೂಕು ಬೋರ್ಡ್ ರಸ್ತೆ ನಿರ್ಮಿಸುವ ಬಗ್ಗೆ ಸರ್ಕಾರಕ್ಕೆ ಪತ್ರ ಬರೆದು ಒತ್ತಾಯಿಸಿದ್ದರು. ಆಗ ಮುಖ್ಯಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲರು ಮರಳವಾಡಿ-ಸೀತಳವಾಡಿ ನಡುವೆ ತಾಲ್ಲೂಕು ಬೋರ್ಡ್ ರಸ್ತೆ ನಿರ್ಮಾಣದ ಯೋಜನೆಯನ್ನು ಸರ್ಕಾರ ಕೈಗೆತ್ತಿಕೊಂಡು ಅದನ್ನು ರಸ್ತೆ ನಿರ್ಮಾಣದ ಕಾಯ್ದಿರಿಸಿದ ಪಟ್ಟಿಯಲ್ಲಿ ಸೇರಿಸಲಾಗಿದೆ ಎಂದು ದಿನಾಂಕ ೨೩.೧೧.೬೭ರಂದು ಪತ್ರ ಬರೆಯುತ್ತಾರೆ.

ಮರಳವಾಡಿ ಹೋಬಳಿಯ ಕಲ್ಲಸಕುಪ್ಪೆ, ಸೀತಳವಾಡಿ ಮುಂತಾದ ಗ್ರಾಮಗಳ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಬಗ್ಗೆ ರಾಜಶೇಖರನ್ ತೀವ್ರವಾಗಿ ಪ್ರಯತ್ನಿಸುತ್ತಿದ್ದರು. ದಿನಾಂಕ ೨೨.೧೨.೧೯೬೭ರಂದು ಅಂದು ಮೈಸೂರು ವಿದ್ಯುಚ್ಛಕ್ತಿ ಮಂಡಲಿಯ ಅಧ್ಯಕ್ಷರಾಗಿದ್ದ ಶ್ರೀ ಸಾಂಬಶಿವಯ್ಯನವರು ಪತ್ರ ಬರೆದು ಈ ಗ್ರಾಮಗಳ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಮಂಡಳಿ ಸಿದ್ಧವಾಗಿದೆ. ರೈತರು ಪಂಪ್‌ಹೌಸ್‌ಗಳನ್ನು ಕಟ್ಟಿ ನೀರಾವರಿ ಪಂಪ್‌ಸೆಟ್‌ಗಳನ್ನು ಜೋಡಿಸಿಟ್ಟುಕೊಂಡು ಸಿದ್ಧರಾಗಿರುವಂತೆ ರೈತರಿಗೆ ತಿಳಿಸಬೇಕೆಂದು ರಾಜಶೇಖರನ್‌ರವರಿಗೆ ಪತ್ರದ ಮೂಲಕ ತಿಳಿಸುತ್ತಾರೆ. ಈ ವಿಚಾರದಲ್ಲಿ ಮೂರು ನಾಲ್ಕು ಪತ್ರ ವ್ಯವಹಾರ ಆಗಿರುವುದು ಕಂಡುಬರುತ್ತದೆ.

ರಾಮನಗರ ತಾಲ್ಲೂಕಿನ ಒಂದು ಗ್ರಾಮವನ್ನು ಯಾವುದೋ ಯೋಜನೆ ಅಡಿ ಸಮಗ್ರ ಗ್ರಾಮೀಣ ಅಭಿವೃದ್ಧಿಗೆ ಆಯ್ಕೆ ಮಾಡಬೇಕಾಗಿತ್ತು. ಈ ಬಗ್ಗೆ ರಾಜಶೇಖರನ್ ಗ್ರಾಮದ ಹೆಸರನ್ನು ಸೂಚಿಸುವಂತೆ ಅಲ್ಲಿನ ತಾಲ್ಲೂಕು ಅಭಿವೃದ್ಧಿ ಮಂಡಲಿ ಅಧ್ಯಕ್ಷರಾಗಿದ್ದ ಶ್ರೀ ಸಿ.ಬೋರಯ್ಯನವರಿಗೆ ಪತ್ರ ಬರೆದಿದ್ದರೆಂದು ಕಾಣುತ್ತದೆ. ದಿನಾಂಕ ೨೧.೧.೧೯೭೦ರಂದು ಶ್ರೀ ಬೋರಯ್ಯನವರು ರಾಜಶೇಖರನ್‌ರವರಿಗೆ ಪತ್ರ ಬರೆದು ಕೂಟಗಲ್ ಹೋಬಳಿ, ಅಕ್ಕೂರು ಗ್ರಾಮವನ್ನು ಆಯ್ಕೆಮಾಡುವಂತೆ ಕೋರಿರುವುದು ತಿಳಿದುಬರುತ್ತದೆ.

ರಾಮನಗರ ಹಾಗೂ ಕನಕಪುರ ತಾಲ್ಲೂಕಿನ ರೈತಾಪಿ ಜನತೆಗೆ ಅನುಕೂಲ ಕಲ್ಪಿಸುವ ಮಂಚನಬೆಲೆ ಸಣ್ಣ ನೀರಾವರಿ ಯೋಜನೆ ರಾಜಶೇಖರನ್‌ರವರ ಮಹತ್ವಾಕಾಂಕ್ಷೆಯ ಪ್ರಯತ್ನದ ಫಲ ಎಂದರೆ ಅತಿಶಯೋಕ್ತಿ ಏನಲ್ಲ. ಈ ಬಗ್ಗೆ ಅವರು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳೊಡನೆ ಅನೇಕ ಪತ್ರ ವ್ಯವಹಾರಗಳನ್ನು ಮಾಡಿದರು. ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿಯೂ ಆದರು.

ಮಂಚನಬೆಲೆ ನೀರಾವರಿ ಯೋಜನೆಗೆ ಒಂದು ಪ್ರತ್ಯೇಕ ಉಪ ವಿಭಾಗವನ್ನು

ಸಂಸ್ಥಾಪಿಸುವಲ್ಲಿ ಇವರ ಪಾತ್ರ ಹಿರಿದು. ಈ ಬಗ್ಗೆ ಸರ್ಕಾರ ೨೨.೧.೧೯೭೦ರಲ್ಲಿ ಸರ್ಕಾರಿ ಆದೇಶವನ್ನು ಹೊರಡಿಸಿದ್ದು, ಈ ಸರ್ಕಾರಿ ಆದೇಶದ ಪ್ರತಿಯಲ್ಲಿ ರಾಜಶೇಖರನ್‌ರವರ ಹೆಸರನ್ನು ನಮೂದಿಸಿರುವುದು ಇದಕ್ಕೆ ಸಾಕ್ಷಿಯಾದ ದಾಖಲೆಯಾಗಿ ನಿಂತಿದೆ.

ರೇಷ್ಮೆ ವ್ಯವಸಾಯ ಈ ಭಾಗದ ರೈತರ ಪ್ರಮುಖ ಅವಲಂಬನೆ. ತಲಘಟ್ಟಪುರದ ಸಿಲ್ಕ್ ಫಾರಂನಲ್ಲಿ ಕೇಂದ್ರ ರೇಷ್ಮೆ ಮಂಡಲಿ ವತಿಯಿಂದ ಒಂದು ಗ್ರೈನೇಜ್ ಪ್ರಾರಂಭಿಸುವಲ್ಲಿ ರಾಜಶೇಖರನ್‌ರವರ ಪಾತ್ರ ಪ್ರಮುಖವಾದುದು. ಇದಕ್ಕಾಗಿ ಅವರು ಕೇಂದ್ರ ರೇಷ್ಮೆ ಮಂಡಲಿಯೊಡನೆ ಅನೇಕ ಪತ್ರ ವ್ಯವಹಾರ ಮಾಡಿರುವುದು ಕಂಡುಬರುತ್ತದೆ. ಕೊನೆಗೆ ೨೨.೧.೧೯೭೦ರಲ್ಲಿ ಕೇಂದ್ರ ರೇಷ್ಮೆ ಮಂಡಲಿಯ ನಿರ್ದೇಶಕರು ರಾಜಶೇಖರನ್‌ರವರಿಗೆ ಪತ್ರ ಬರೆದು ತಲಘಟ್ಟಪುರದಲ್ಲಿ ರೇಷ್ಮೆ ಗ್ರೈನೇಜ್ ಪ್ರಾರಂಭಿಸುವ ಬಗ್ಗೆ ಸಧ್ಯದಲ್ಲಿಯೇ ನಿರ್ಣಯ ಕೈಗೊಳ್ಳುವ ಸುದ್ದಿಯನ್ನು ತಿಳಿಸುತ್ತಾರೆ.

ಸಣ್ಣ ಹಾಗೂ ಅತಿ ಸಣ್ಣ ರೈತರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ (Small Farmers Development Agency) ಗಳನ್ನು ರಾಜ್ಯ ಸರ್ಕಾರದ ಸಹಯೋಗದೊಡನೆ ಸ್ಥಾಪಿಸುವ ಯೋಜನೆಯನ್ನು ೧೯೭೦ರ ದಶಕದಲ್ಲಿ ಹಾಕಿತ್ತು. ಈ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆಯ ಸ್ಥಾಪನೆ ಯೋಜನೆಗೆ ಬೆಂಗಳೂರು ಜಿಲ್ಲೆಯನ್ನು ಸೇರಿಸಬೇಕೆಂಬುದು ಶ್ರೀ ರಾಜಶೇಖರನ್‌ರವರ ಆಕಾಂಕ್ಷೆ. ಈ ಬಗ್ಗೆ ಇವರು ಕೇಂದ್ರ ಹಾಗೂ ರಾಜ್ಯ ಸರ್ಕಾರದೊಡನೆ ಅನೇಕ ಪತ್ರ ವ್ಯವಹಾರ ಮಾಡಿರುವುದು ಕಂಡುಬರುತ್ತದೆ. ಈ ಬಗ್ಗೆ ಅಂದಿನ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರು ದಿನಾಂಕ ೧೯-೯-೧೯೭೦ ರಂದು ರಾಜಶೇಖರನ್‌ರವರಿಗೆ ಸುದೀರ್ಘ ಪತ್ರವನ್ನು ಬರೆದು ಈ ಸಂಸ್ಥೆಯನ್ನು ಮೈಸೂರು, ಬೀದರ್ ಜಿಲ್ಲೆಗಳಲ್ಲಿ ಪ್ರಾರಂಭಿಸಲಾಗಿದೆ. ಕೇಂದ್ರದಿಂದ ನಿರೀಕ್ಷಿತ ನೆರವು ಬಂದು ಕೂಡಲೇ ಉತ್ತರ ಕನ್ನಡ ಹಾಗೂ ಬೆಂಗಳೂರು ಜಿಲ್ಲೆಗಳಲ್ಲಿಯೂ ಕೂಡ ಈ ಸಂಸ್ಥೆಯನ್ನು ಸ್ಥಾಪಿಸಲಾಗುವುದು ಎಂಬ ಭರವಸೆ ನೀಡುತ್ತಾರೆ. ಸಮಗ್ರ ಗ್ರಾಮೀಣ ಕ್ರಿಯಾ ಯೋಜನೆಯನ್ನು ಬಿಜಾಪುರದ ೭, ಚಿತ್ರದುರ್ಗದ ೫ ತಾಲ್ಲೂಕುಗಳಲ್ಲಿ ಪ್ರಾರಂಭಿಸಿದೆ. ರಾಜ್ಯದ ಇನ್ನೂ ಅನೇಕ ತಾಲ್ಲೂಕುಗಳಲ್ಲಿ ಇದನ್ನು ಪ್ರಾರಂಭಿಸುವ ಬಗ್ಗೆ ವಿಶ್ವಬ್ಯಾಂಕ್ ನೆರವು ಪಡೆಯಲು ರಾಜ್ಯ ಸರ್ಕಾರ ಪ್ರಯತ್ನಿಸುತ್ತಿದ್ದು ಈ ವಿಚಾರ ಕೇಂದ್ರ ಸರ್ಕಾರದ ಮುಂದೆ ಬಾಕಿ ಇದೆ. ಈ ಬಗ್ಗೆ ತಾವು ಪ್ರಯತ್ನಿಸಿ ಎಂದು ಹೇಳಿ ರಾಜ್ಯವು ಈ ಬಗ್ಗೆ ಸಲ್ಲಿಸಿದ ವರದಿಯ ಪ್ರತಿಯನ್ನು ಅವರಿಗೆ ಕಳುಹಿಸುತ್ತಾರೆ.

ರಾಜಶೇಖರನ್‌ರ ಲೋಕಸಭಾ ಸದಸ್ಯತ್ವ ಅವಧಿ ಮುಗಿದ ನಂತರವೂ ಅವರು ಬೆಂಗಳೂರು ಜಿಲ್ಲೆಯಲ್ಲಿ ಎಸ್.ಎಫ್.ಡಿ.ಎ. ಸ್ಥಾಪಿಸುವ ಪ್ರಯತ್ನ ಬಿಟ್ಟಿರಲಿಲ್ಲ. ೨೭.೧.೭೧ರಲ್ಲಿಯೂ ಮತ್ತೆ ವೀರೇಂದ್ರರು ರಾಜಶೇಖರನ್‌ರವರಿಗೆ ಪತ್ರ ಬರೆದು, ಈ ಬಗ್ಗೆ ಕೇಂದ್ರ ಸಹಕಾರ ಸಚಿವರಿಗೆ ಒತ್ತಾಯಿಸಲಾಗುತ್ತಿದೆ ಎಂದು ಪತ್ರ ಬರೆಯುತ್ತಾರೆ.

ರಾಜಶೇಖರನ್ ಸೌಹಾರ್ದ ಮನೋಭಾವನೆಯ ರಾಜಕೀಯ ನಾಯಕರಾಗಿದ್ದಾರೆ. ಅದಕ್ಕಿಂತ ಹೆಚ್ಚಾಗಿ ಒಬ್ಬ ವ್ಯಕ್ತಿ ಆಗಿದ್ದಾರೆ. ೧೯೬೮ರಲ್ಲಿ ರಾಮನಗರದಲ್ಲಿ ಕೋಮುಗಲಭೆಗಳಾದಾಗ ಅಲ್ಲಿಗೆ ಖುದ್ದಾಗಿ ಭೇಟಿ ನೀಡಿ ಎರಡೂ ಕೋಮಿನ ಜನರಲ್ಲಿ ಸಾಮರಸ್ಯ ಮೂಡಿಸಲು, ಶಾಂತಿಯನ್ನು ಕಾಪಾಡಲು ಯತ್ನಿಸಿದ್ದರು. ಈ ಬಗ್ಗೆ ಉರ್ದು ಪತ್ರಿಕೆಗೆ ಒಂದು ಲೇಖನವನ್ನು ಕಳುಹಿದ್ದರು. ಈ ಅತ್ಯಂತ ಮಹತ್ವಪೂರ್ಣವಾದ ವಿಚಾರ ನಮಗೆ ಬೆಂಗಳೂರಿನ ದಿ ಡೈಲಿ ಸಾಲಾರ್ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಮಹಮದ್ ಅಯಾಜ್ ಅವರ ದಿನಾಂಕ ೮.೪.೬೮ರ ಪತ್ರದಿಂದ ತಿಳಿದುಬರುತ್ತದೆ.

“ನಿಮ್ಮ ಲೇಖನ ಅತ್ಯಂತ ಉತ್ತಮ ಮಟ್ಟದ ಲೇಖನ. ಇದನ್ನು ನನ್ನ ಡೈಲಿ ಸಾಲಾರ್ ಪತ್ರಿಕೆಯಲ್ಲಿ ಎರಡು ಮೂರು ಕಂತುಗಳಲ್ಲಿ ಪ್ರಕಟಿಸುತ್ತೇನೆ. ನೀವು ರಾಮನಗರಕ್ಕೆ ಭೇಟಿ ನೀಡಿ ಸಾಮರಸ್ಯ ಮೂಡಿಸಲು, ಮಾಡಿದ ಕೆಲಸ ಉಲ್ಲೇಖನಾರ್ಹ ಹಾಗೂ ಸ್ತುತ್ಯರ್ಹ. ಈ ರೀತಿಯಾಗಿ ಮುಸಲ್ಮಾನೇತರ ನಾಯಕರು ಮುಂದಾದಾಗ ಮಾತ್ರ ಸಾಮರಸ್ಯ ಮೂಡಿಸಲು ಸಾಧ್ಯ. ಇದು ಅಲ್ಪಸಂಖ್ಯಾತರಲ್ಲಿ ನಾವು ಅನಾಥರಲ್ಲ ಎಂಬ ಭಾವನೆ ಮೂಡಿಸುತ್ತದೆ. ಅವರಲ್ಲಿ ಧೈರ್ಯ, ವಿಶ್ವಾಸ ಮೂಡಿಸುತ್ತದೆ. ಚಿಕ್ಕಮಗಳೂರಿನಲ್ಲಿ ಶ್ರೀ ಎಸ್.ಗೋಪಾಲಗೌಡರು ಈ ರೀತಿಯಾಗಿ ಕೋಮು ಅಶಾಂತಿಯನ್ನು ಶಮನ ಮಾಡವಲ್ಲಿ ಹಾಗೂ ಅಲ್ಪಸಂಖ್ಯಾತರಲ್ಲಿ ಧೈರ್ಯ ವಿಶ್ವಾಸ ಮೂಡಿಸುವಲ್ಲಿ ವಹಿಸಿದ ಪಾತ್ರ ಕೂಡಾ ಉಲ್ಲೇಖನಾರ್ಹ ಎಂದು ಹೇಳಿದ್ದಾರೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಈ ಪತ್ರ ಎಷ್ಟು ಮಹತ್ವ ಪಡೆದಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ವತಿಯಿಂದ ಶ್ರೀ ಎಂ.ವಿ.ರಾಜಶೇಖರನ್‌ರವರು ೧೯೬೮ರ ಅಕ್ಟೋಬರ್-ನವೆಂಬರ್‌ನಲ್ಲಿ ಅಥವಾ ೧೯೬೯ರ ದಿನಾಂಕ ೨೩.೧೦.೬೮ರಂದು ಪತ್ರ ಬರೆದರು. ವಿಚಾರ ಸಂಕಿರಣವನ್ನು ಜನವರಿ ೬೯ಕ್ಕೆ ಮುಂದೂಡಿದಾಗ ಬರುತ್ತೇನೆ, ಈ ಬಗ್ಗೆ ಚರ್ಚಿಸೋಣ ಎಂದು ಬರೆದರು.

ಸುಪ್ರಸಿದ್ಧ ಗಾಂಧೀವಾದಿ ಮನೂಭಾಯಿ ಶಹಾರವರು ಮೊದಲು ಭಾಗವಹಿಸಲು ಆಗುವುದಿಲ್ಲ ಎಂದು ಬರೆದರು. ನಂತರ ಜನವರಿಗೆ ಮುಂದೂಡಿದಾಗ ೨೪.೧೦.೬೮ರಲ್ಲಿ ಖಂಡಿತಾ ನಾನು ಭಾಗವಹಿಸುತ್ತೇನೆ, ಅದರಲ್ಲಿ ನೀವು ತಿಳಿಸುವ ಯಾವುದೇ ಪಾತ್ರವನ್ನು ವಹಿಸಲು ಸಿದ್ಧನಿದ್ದೇನೆ ಎಂದು ಬರೆದರು.

ಅಂದು ಕೇಂದ್ರ ಸಂಸದೀಯ ವ್ಯವಹಾರ ಹಾಗೂ ಸಂಪರ್ಕ ಖಾತೆ ಸಚಿವರಾಗಿದ್ದ ಶ್ರೀ ಐ.ಕೆ. ಗುಜ್ರಾಲ್‌ರವರು ಪಾರ್ಲಿಮೆಂಟ್ ಅಧಿವೇಶನ ಆದ ನಂತರ ಏರ್ಪಡಿಸಿ, ನಾನು ಬರುತ್ತೇನೆ ಎಂದು ೨೪.೧೦.೬೮ರಂದು ಪತ್ರ ಬರೆದರು.

ಅಂದು ಯೋಜನಾ ಆಯೋಗದ ಸದಸ್ಯರಾಗಿದ್ದ ಶ್ರೀ ಆರ್.ವೆಂಕಟರಾಮನ್ ಭಾಗವಹಿಸಲು ಸಾಧ್ಯವಿಲ್ಲವೆಂದು ಬರೆದರು.

ಅಂದು ಕೇಂದ್ರ ರಕ್ಷಣಾ ರಾಜ್ಯ ಸಚಿವರಾಗಿದ್ದ ಶ್ರೀ ಎಲ್.ಎಸ್.ಮಿಶ್ರಾರವರು ಕಾಂಗ್ರೆಸ್ ಅಧಿವೇಶನ ಸೇರದೇ ಇದ್ದರೆ ಬರುತ್ತೇನೆ ಎಂದು ಬರೆದರು. ಜನವರಿಯಲ್ಲಿ ನಾಲ್ಕನೇ ಪಂಚವಾರ್ಷಿಕ ಯೋಜನೆ ಸಂಬಂಧಿಸಿದಂತೆ "An approach to the fourth plan" ಎಂಬ ವಿಚಾರವಾಗಿ ಸಂದಿಬೆಟ್ಟದಲ್ಲಿ ಎರಡು ದಿನಗಳ ಒಂದು ರಾಷ್ಟ್ರೀಯ ವಿಚಾರ ಸಂಕಿರಣವನ್ನು ಏರ್ಪಡಿಸಲು ಪ್ರಯತ್ನಿಸಿದ್ದರು. ಇದೊಂದು ರಾಜಕೀಯಾತೀತ ಅಭಿವೃದ್ಧಿಪರ ವಿಚಾರದ ಸಂಗತಿಯಾಗಿತ್ತು. ಈ ಸಮ್ಮೇಳನದಲ್ಲಿ ಪಾಲ್ಗೊಳ್ಳುವಂತೆ ಅವರು ರಾಷ್ಟ್ರಮಟ್ಟದ ಅನೇಕ ಉದ್ಯಮ ನಾಯಕರುಗಳಿಗೆ ಪತ್ರ ಬರೆದರು. ರಾಷ್ಟ್ರಮಟ್ಟದ ನಾಯಕರೆಂದರೆ ಕೇಳಬೇಕೆ. ಕೆಲವರು ಬರುತ್ತೇನೆ, ಕೆಲವರು ಬರುವುದಿಲ್ಲ ಎಂದು ಪತ್ರ ಬರೆದರೆ, ಇನ್ನು ಕೆಲವರು ಸದರಿ ವಿಚಾರ ಸಂಕಿರಣವನ್ನು ಮುಂದಕ್ಕೆ ಹಾಕಿದರೆ ಬರುತ್ತೇವೆ ಎಂದು ಪತ್ರ ಬರೆದರು. ಈ ಸಮಯದಲ್ಲಿ ರಾಜಶೇಖರನ್‌ರವರು ಮಾಡಿರುವ ಪತ್ರ ವ್ಯವಹಾರ ಅತ್ಯಂತ ಹೆಚ್ಚಿನ ತಾಳ್ಮೆಯನ್ನು ಮುತ್ಸದ್ದಿತನವನ್ನು ಬಯಸುತ್ತದೆಂದು ಬೇರೆ ಹೇಳಬೇಕಾದ್ದಿಲ್ಲ.

ಅಂದು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ಶ್ರೀ ನಿಜಲಿಂಗಪ್ಪಾಜಿಯವರು ಗೋವಾದಲ್ಲಿ ಎ.ಐ.ಸಿ.ಸಿ. ಅಧಿವೇಶನ ಇದೆ, ಬರಲು ಆಗುವುದಿಲ್ಲ ಎಂದು, ಕೇಂದ್ರ ಕೈಗಾರಿಕಾ ಅಭಿವೃದ್ಧಿ ಮತ್ತು ಕಂಪನಿ ವ್ಯವಹಾರ ಸಚಿವ ಶ್ರೀ ರಘುನಾಥರೆಡ್ಡಿ, ಭಾಗವಹಿಸುತ್ತೇನೆಂದು ಬರೆದರು.

ಅಂದು ಅರಣ್ಯ ಮುಖ್ಯಮಂತ್ರಿಗಳಾಗಿದ್ದ ಬನ್ಸಿಲಾಲ್, ಪಂಜಾಬ್ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ಜೈಲ್‌ಸಿಂಗ್ ಬರಲು ಸಾಧ್ಯವಿಲ್ಲವೆಂದು ಬರೆದರು.

ಆಂಧ್ರಪ್ರದೇಶ ಸರ್ಕಾರದ ಕಂದಾಯ ಹಾಗೂ ನಾಗರಿಕ ಪೂರೈಕೆ ಮಂತ್ರಿ ವಿ.ಬಿ.ರಾಜು ಬರುತ್ತೇನೆಂದು ಬರೆದರು. ಹಿಮಾಚಲ ಪ್ರದೇಶದ ಅರ್ಥ ಸಚಿವ ಶ್ರೀ ಕರಮಸಿಂಗ್ ಕೂಡಾ ಬರುತ್ತೇನೆಂದು ಬರೆದರು.

ಪತ್ರ ಬರೆದ ಎಲ್ಲರೂ ರಾಜಶೇಖರನ್‌ರವರು ನಾಲ್ಕನೇ ಪಂಚವಾರ್ಷಿಕ ಯೋಜನೆ ವಿಚಾರದಲ್ಲಿ ಹೊಂದಿದ್ದ ದೂರದೃಷ್ಟಿಯನ್ನು ಶ್ಲಾಘಿಸಿದ್ದರು. ಈ ರೀತಿಯಾಗಿ ಅಭಿವೃದ್ಧಿ ವಿಚಾರದಲ್ಲಿ ರಾಷ್ಟ್ರಮಟ್ಟದ ಸಮ್ಮೇಳನವನ್ನು ಏರ್ಪಡಿಸಿ ಗಣ್ಯರನ್ನು ಆಹ್ವಾನಿಸಿ ವ್ಯವಸ್ಥೆ ಮಾಡುವುದು ಎಷ್ಟು ಕಷ್ಟ ಎಂಬುದು ಅದನ್ನು ಮಾಡಿದವರಿಗೆ ತಿಳಿಯುವ ವಿಚಾರ. ರಾಜಶೇಖರನ್ ಇಂತಹ ವಿಚಾರಗಳಲ್ಲಿ ಮುತ್ಸದ್ದಿತನವನ್ನು ತೋರಿಸುತ್ತಿದ್ದರು. ಹಾಗೂ ಈ ಕೆಲವು ಪತ್ರಗಳು ಅವರು ರಾಷ್ಟ್ರಮಟ್ಟದಲ್ಲಿ ಇಟ್ಟುಕೊಂಡಿರುವ ಹಿರಿಯ ನಾಯಕರ ಸಂಪರ್ಕವನ್ನು ಸೂಚಿಸುವ ಸಾಧನಗಳಾಗಿವೆ. ಕೆಲವರಂತೂ ಕೈ ಬರಹದಲ್ಲೇ ತಮ್ಮ ಪತ್ರ ಬರೆದಿದ್ದಾರೆ.

ರಾಜಶೇಖರನ್‌ರವರು ಅಭಿವೃದ್ಧಿಪರ ಚಿಂತನಾ ಮನೋಭಾವನೆ ಉಳ್ಳವರು. ಪಕ್ಷ ರಾಜಕೀಯದಿಂದ ಹೊರತಾಗಿ, ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಿಂದ ಹೊರತಾಗಿ, ಸರ್ಕಾರೇತರ ಸಂಸ್ಥೆಗಳ (Non-Governmental Organisations) ಮೂಲಕ ಈ ಅಭಿವೃದ್ಧಿ ಕಾರ್ಯ ನಡೆಯುತ್ತಲೇ ಇರಬೇಕೆಂಬುದು ಅವರ ಅಭೀಪ್ಸೆ. ಅದಕ್ಕಾಗಿಯೇ ಅವರು ರಾಜಕೀಯ ಹಾಗೂ ಸರ್ಕಾರಿ ರಂಗಕ್ಕಿಂತ ಈ ಸರ್ಕಾರೇತರ ರಂಗದಲ್ಲಿ ಕ್ರಿಯಾಶೀಲರಾಗಿದ್ದಾರೆ ಎಂದು ತೋರುತ್ತದೆ.

೧೯೫೮ರಲ್ಲಿಯೇ ಶ್ರೀ ರಾಜಶೇಖರನ್ ಅವರನ್ನು ಕೊಲಂಬೋದಲ್ಲಿ ನಡೆದ ALOK ಎಂಬ ರೈತಪರವಾದ ಅಭಿವೃದ್ಧಿ ಸಮ್ಮೇಳನಕ್ಕೆ ಮೈಸೂರು ಯಂಗ್ ಫಾರ್ಮರ್ಸ್ ಅಸೋಸಿಯೇಷನ್ ಪ್ರತಿನಿಧಿಯಾಗಿ ಆಯ್ಕೆ ಮಾಡಲಾಗಿತ್ತು. ಈ ವಿಚಾರದಲ್ಲಿ ಯಂಗ್ ಫಾರ್ಮರ್ಸ್ ಅಸೋಸಿಯೇಷನ್‌ನ ನಿರ್ಮಲೇಂದು ಬಸು ಅವರು ದಿನಾಂಕ ೧೪.೧.೧೯೫೮ರಲ್ಲಿ ಬರೆದ ಪತ್ರ ರಾಜಶೇಖರನ್‌ರವರ ಬಗ್ಗೆ ಕೆಲವು ಕುತೂಹಲಕರ ಅಂಶಗಳನ್ನು ಹೊರಗೆಡವುತ್ತದೆ. ಈ ಸಮ್ಮೇಳನಕ್ಕೆ ರಾಜಶೇಖರನ್‌ರವರನ್ನು ಆಯ್ಕೆ ಮಾಡುವಂತೆ, ಮೈಸೂರು ಯಂಗ್ ಫಾರ್ಮರ್ಸ್ ಅಸೋಸಿಯೇಷನ್‌ನ ಅಧ್ಯಕ್ಷರಾಗಿದ್ದ ಶ್ರೀ ಎಚ್.ಎಸ್.ರುದ್ರಪ್ಪ (ರೈತ ಮುಖಂಡರು ಹಾಗೂ ವಿಧಾನಸಭೆ ಅಧ್ಯಕ್ಷರಾಗಿದ್ದವರು) ಶಿಫಾರಸ್ಸು ಮಾಡಿದ್ದರಂತೆ. ಅದನ್ನು ರಾಷ್ಟ್ರಮಟ್ಟದ ಅಧ್ಯಕ್ಷ ಡಾ। ಪಿ.ಎಸ್.ದೇಶಮುಖ್ ಅನುಮೋದಿಸಿದ್ದರು ಎಂಬ ವಿಚಾರ ತಿಳಿಯುತ್ತದೆ. ಇದು ರಾಜಶೇಖರನ್‌ರವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವ ಪತ್ರವಾಗಿದೆ. ಮೊದಲನೆಯದಾಗಿ ಅವರು ಕೃಷಿ ವಿಚಾರದಲ್ಲಿ, ರೈತರ ವಿಚಾರದಲ್ಲಿ ಅಂದಿನ ದಿನಗಳಲ್ಲಿಯೇ ಅಪಾರ ತಿಳುವಳಿಕೆ ಉಳ್ಳವರಾಗಿದ್ದರು ಎಂಬುದು. ಎರಡನೆಯದು, ಅವರು ಆಯ್ಕೆಯಾಗಿ ಯಾವುದೇ ವಶೀಲಿ ಬಾಜಿ ಇಲ್ಲವೆ ಅರ್ಹತೆ ಮೇಲೆ ಆಯ್ಕೆ ಆಗಿದ್ದರು ಎಂಬುದು ಮುಖ್ಯವಾದ ಅಂಶಗಳು. ೧೯೭೦, ಜೂನ್ ತಿಂಗಳಲ್ಲಿ ನೆದರ್‌ಲ್ಯಾಂಡ್‌ನ ಹೇಗ್‌ನಲ್ಲಿ ನಡೆದ ಎರಡನೇ ವಿಶ್ವ ಆಹಾರ ಕಾಂಗ್ರೆಸ್‌ಗೆ ರಾಜಶೇಖರನ್‌ರವರನ್ನು ವರ್ಲ್ಡ್ ಅಸೆಂಬ್ಲಿ ಆಫ್ ಯೂಥ್ಸ್‌ನವರು ಆಯ್ಕೆ ಮಾಡಿದ ಬಗ್ಗೆ, ಸದರಿ ಸಂಸ್ಥೆಯ ಜನರಲ್ ಸೆಕ್ರೆಟರಿ ಜ್ಯೋತಿಶಂಕರ್ ಸಿಂಗ್‌ರವರು ದಿನಾಂಕ ೪.೫.೧೯೭೦ರಂದು ಪತ್ರ ಬರೆಯುತ್ತಾರೆ. ಈ ವರ್ಲ್ಡ್ ಫುಡ್ ಕಾಂಗ್ರೆಸ್‌ನ ಡೈರೆಕ್ಟರ್ ಜನರಲ್ ಎ.ಎಚ್.ಬೊಯೆರ್ಮಾರವರೂ ಕೂಡಾ ರಾಜಶೇಖರನ್‌ರವರಿಗೆ ವಿಶೇಷವಾಗಿ ಇದೇ ತಿಂಗಳಲ್ಲಿ ಪತ್ರ ಬರೆಯುತ್ತಾರೆ.

ಭಾರತೀಯ ಕೃಷಿ ಅನುಸಂಧಾನ ಸಂಸ್ಥೆಯ (I.C.A.R.) ಸದಸ್ಯರಾಗಿ ಶ್ರೀ ರಾಜಶೇಖರನ್ ನಾಮಕರಣವಾದ ಬಗ್ಗೆ ಕೇಂದ್ರ ಸರ್ಕಾರದ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿ ಶ್ರೀ ಎಸ್.ಭಕ್ಷಿ ೨೧.೪.೧೯೭೦ರಲ್ಲಿ ಪತ್ರ ಬರೆಯುತ್ತಾರೆ. ಮೊದಲ ಬಾರಿಗೆ ಎಂ.ಪಿ. ಆದವರಿಗೆ ಈ ರೀತಿಯಾಗಿ ಈ ಸಂಸ್ಥೆಯ ಸದಸ್ಯತ್ವ ಸಿಗುವುದು ಕಷ್ಟ. ಆದರೂ ರಾಜಶೇಖರನ್‌ರವರ

ಪ್ರತಿಭೆ ಆಸಕ್ತಿಯನ್ನು ಗಮನಿಸಿ ಅವರಿಗೆ ಸದಸ್ಯತ್ವ ನೀಡಲಾಯಿತು ಎಂಬುದು ಗಮನಾರ್ಹ. ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಎ.ಆರ್.ಅಂತುಳೆ ಅವರು ೭.೨.೧೯೯೪ರಲ್ಲಿ ನಾನೂ ಕೂಡಾ ಈ ಸರ್ಕಾರೇತರ ದತ್ತಿ ಸಂಸ್ಥೆಗಳ ಬಗ್ಗೆ ಅಪಾರ ಆಸಕ್ತಿ ಹೊಂದಿದ್ದೇನೆ. ಪ್ರಪಂಚದಾದ್ಯಂತ ನೀವು ಯಾವ ಯಾವ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳೊಡನೆ ಸಂಪರ್ಕ ಹೊಂದಿದ್ದೀರಿ, ಅವುಗಳ ವಿವರ ನೀಡಿ ಎಂದು ರಾಜಶೇಖರನ್‌ರವರಿಗೆ ಪತ್ರ ಬರೆಯುತ್ತಾರೆ.

ಎಲ್ಲಕ್ಕಿಂತ ಮಿಗಿಲಾಗಿ ಏಷ್ಯಾ ದೇಶಗಳ ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳ ಒಕ್ಕೂಟದ ಅಧ್ಯಕ್ಷರಾಗಿ ಎಂ.ವಿ.ರಾಜಶೇಖರನ್ ಅವಿರೋಧವಾಗಿ ಆಯ್ಕೆಯಾದ ವಿಚಾರ Asian N.G.O. Co-Alition ಸಂಸ್ಥೆಯ ಎಕ್ಸಿಕ್ಯುಟೀವ್ ಡೈರೆಕ್ಟರ್ ಎಲ್ ರಾವನೆರಾ ಅವರ ದಿನಾಂಕ ೧೦.೧೧.೧೯೯೯ರ ಪತ್ರದಿಂದ ತಿಳಿಯುತ್ತದೆ.

ಈ ಯಾವುದರ ಬಗ್ಗೆಯೂ ರಾಜಶೇಖರನ್ ಪ್ರಚಾರ ಬಯಸಿದವರಲ್ಲ. ಆದರೆ ಈ ಪತ್ರಗಳಿಂದ ಅವರು ಈ ಸರ್ಕಾರೇತರ ಸ್ವಯಂ ಸೇವಾಸಂಸ್ಥೆಗಳ ಕ್ಷೇತ್ರದಲ್ಲಿ ಎಂತಹ ಪ್ರಭಾವ ಹೊಂದಿದ್ದಾರೆ, ಎಷ್ಟೊಂದು ಪರಿಶ್ರಮ ಹೊಂದಿದ್ದಾರೆ ಎಂಬುದು ತಿಳಿದುಬರುತ್ತದೆ.

ಹೊಸ ವರ್ಷ, ಹುಟ್ಟುಹಬ್ಬದಿನ, ಸಚಿವ ಸ್ಥಾನಕ್ಕೆ ಆಯ್ಕೆ ಮುಂತಾದ ಸಂದರ್ಭಗಳಲ್ಲಿ ಪಕ್ಷಾತೀತವಾಗಿ ವೈಯಕ್ತಿಕ ನೆಲೆಯಲ್ಲಿ ಶುಭಾಶಯಗಳನ್ನು ಕೋರುವುದು ರಾಜಶೇಖರನ್‌ರವರ ಹವ್ಯಾಸ. ರಾಜಶೇಖರನ್ ಈ ರೀತಿ ಶುಭಾಶಯ ಕೋರಿದಾಗ ಅನೇಕ ಮಹನೀಯರು ಮತ್ತೆ ಪತ್ರ ಬರೆದು ರಾಜಶೇಖರನ್‌ರವರಿಗೆ ಶುಭ ಕೋರಿದ್ದಾರೆ, ಶ್ರೀ ಎಸ್.ನಿಜಲಿಂಗಪ್ಪನವರ ಹಾಗೂ ಅವರ ಮನೆಮಂದಿಯ ಯೋಗಕ್ಷೇಮ ವಿಚಾರಿಸಿದ್ದಾರೆ. ಇಂತಹ ನೂರಾರು ಪತ್ರಗಳು ಅವರ ಸಂಗ್ರಹದಲ್ಲಿವೆ. ಶುಭ ಕೋರುವ ಸಂದರ್ಭದಲ್ಲಿ ಕೆಲವು ಮಹನೀಯರು ಕೈ ಬರಹದಲ್ಲಿಯೇ ತಮ್ಮ ಪತ್ರ ಬರೆದಿರುವುದು ಅವರು ರಾಜಶೇಖರನ್ ಅವರೊಂದಿಗೆ ಹೊಂದಿದ್ದ ಆತ್ಮೀಯತೆಯನ್ನು ತೋರಿಸುತ್ತದೆ.

ಈ ಮಹನೀಯರಲ್ಲಿ ಸೋನಿಯಾಗಾಂಧಿ, ಜಿ.ಎಸ್.ಧಿಲ್ಲೋನ್, ಅಶೋಕ್ ಮೆಹ್ತಾ, ಡಾ। ರಾಮ ಸುಭಾಷ್ ಸಿಂಗ್, ಚಂದ್ರಭಾನು ಗುಪ್ತಾ, ಎಸ್.ಕೆ.ಪಾಟೀಲ್, ಚಂದ್ರಶೇಖರ್, ಮಣಿಶಂಕರ್ ಅಯ್ಯರ್, ರಾಜೇಶ್ ಪೈಲಟ್, ಎನ್.ಎಂ. ಜಾಕೋಬ್, ಎ.ಕೆ.ಆಂಟೋನಿ, ಕೆ.ಕಾಮರಾಜ್ ನಾಡಾರ್, ಮೊರಾರ್ಜಿ ದೇಸಾಯಿ, ಅತುಲ್ಯ ಘೋಷ್, ಶರದ್‌ಪವಾರ್, ಜಿ.ವೆಂಕಟಸುಬ್ಬಯ್ಯ, ದಿನೇಶ್‌ಸಿಂಗ್ ಮುಂತಾದ ಅನೇಕ ನಾಯಕರು ಇದ್ದಾರೆ. ಇವರೆಲ್ಲಾ ಅನೇಕ ಬಾರಿ ವೈಯಕ್ತಿಕ ಕುಶಲ ಸಮಾಚಾರ ವಿಚಾರಿಸಿ ರಾಜಶೇಖರನ್‌ಗೆ ಸ್ವಂತಹಸ್ತಾಕ್ಷರದಲ್ಲಿ ಪತ್ರ ಬರೆದಿದ್ದಾರೆ. ರಾಜಶೇಖರನ್‌ರವರು ಈ ಮಹನೀಯರನೇಕರಿಗೆ ರಾಜಕೀಯ ರಹಿತವಾದ ರೀತಿ, ವೈಯಕ್ತಿಕ ಯೋಗಕ್ಷೇಮ ವಿಚಾರಿಸಿ ಪತ್ರ ಬರೆದಿದ್ದ ವಿಚಾರವೂ ಇವರು ಬರೆದಿರುವ ಪತ್ರಗಳಿಂದ ತಿಳಿದುಬರುತ್ತದೆ. ಅಷ್ಟರಮಟ್ಟಿಗೆ ವೈಯಕ್ತಿಕ ನೆಲೆಯಲ್ಲಿ ಈ ನಾಯಕರೊಂದಿಗೆ

ಅವರು ಸಂಬಂಧ ಉಳಿಸಿಕೊಂಡು ಬಂದಿರುವುದನ್ನೂ ಅವರೊಂದಿಗೆ ಹೊಂದಿರುವ ಆತ್ಮೀಯತೆಯನ್ನೂ ಈ ಪತ್ರಗಳು ತೋರಿಸುತ್ತವೆ.

ಇನ್ನು ರಾಜಕೀಯ ರಂಗದಲ್ಲಿಯೂ ಸಕ್ರಿಯರಾಗಿದ್ದ ರಾಜಶೇಖರನ್‌ರವರು ಈ ವಿಚಾರದಲ್ಲಿ ನಿರ್ಭಿಡೆಯಿಂದ ನೇರವಾಗಿ ರಾಜಕೀಯ ಮುಖಂಡರಿಗೆ ಪತ್ರ ಬರೆಯುತ್ತಿದ್ದುದು, ಆ ಮುಖಂಡರುಗಳೂ ಕೂಡಾ ಅದಕ್ಕೆ ಪ್ರತಿಯಾಗಿ ಇವರಿಗೆ ಪತ್ರ ಬರೆಯುತ್ತಿದ್ದುದು ಇವರ ಪತ್ರ ಸಂಗ್ರಹದಲ್ಲಿ ಕಂಡುಬರುತ್ತದೆ. ೧೯೫೮ರಲ್ಲಿಯೇ ರಾಜಶೇಖರನ್ ಬೆಂಗಳೂರು ಜಿಲ್ಲೆಯ ರಾಜಕೀಯದಲ್ಲಿ ಸಕ್ರಿಯರಾಗಿದ್ದರು. ಅವರು ಯಾವುದೋ ತರಬೇತಿಗೆ ಹೋಗಿದ್ದಾಗ ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿ ಸಭೆ ಸೇರಿ, ಶ್ರೀ ಪಿಳ್ಳಾರೆಡ್ಡಿಯವರನ್ನು ಡಿಸಿಸಿ ಕಾರ್ಯದರ್ಶಿಯಾಗಿ ನೇಮಿಸಲಾಯಿತೆಂದು, ಬೆಂಗಳೂರಿನ ಮಾಜಿ ಮೇಯರ್ ಆಗಿದ್ದ ಎಚ್.ಸೀತಾರಾಮ್‌ರವರು ೭.೩.೧೯೫೮ರಲ್ಲಿಯೇ ರಾಜಶೇಖರನ್‌ಗೆ ಪತ್ರ ಬರೆಯುತ್ತಾರೆ. ಈ ಬಗ್ಗೆ ಬೇಸರಪಡಬೇಕಾಗಿಲ್ಲವೆಂದು ಅವರು ರಾಜಶೇಖರನ್‌ಗೆ ತಿಳಿಸುತ್ತಾರೆ.

ರಾಜಶೇಖರನ್ ಸಂಸ್ಥಾ ಕಾಂಗ್ರೆಸ್ ಮೂಲಕ ಜನತಾಪಕ್ಷಕ್ಕೆ ಹೋಗಿದ್ದರು. ೧೯೭೮ರಲ್ಲಿ ಈ ಪಕ್ಷದ ಒಳಜಗಳ ತಾರಕಕ್ಕೇರಿತ್ತು. ಇದರಿಂದ ನೊಂದು ರಾಜಶೇಖರನ್‌ರವರು ತಮ್ಮ ಆತ್ಮೀಯ ಮಿತ್ರ ದಿನೇಶ್‌ಸಿಂಗ್‌ಗೆ ವಿವರವಾದ ಪತ್ರ ಬರೆದು ಇದನ್ನು ಪರಿಹರಿಸಲು ಕೆಲವು ಸಲಹೆ ಸೂಚನೆಗಳನ್ನು ನೀಡಿದ್ದರು. ಆಗ ದಿನಾಂಕ ೪.೪.೧೯೭೮ರಂದು ದಿನೇಶ್‌ಸಿಂಗ್‌ರವರು ರಾಜಶೇಖರನ್‌ರವರಿಗೆ ಪತ್ರ ಬರೆದು "ನಾನು ಜಯಪ್ರಕಾಶ್ ನಾರಾಯಣ್‌ರವರೊಡನೆ ಈ ವಿಚಾರದಲ್ಲಿ ಚರ್ಚೆ ಮಾಡಿರುತ್ತೇನೆ. ಚರ್ಚೆ ಆಶಾದಾಯಕವಾಗಿದೆ. ಸಧ್ಯದಲ್ಲಿಯೇ ಕೆಲವು ಬದಲಾವಣೆಗಳಾಗಬಹುದು. ನೀವು ಯಾವಾಗ ಬೇಕಾದರೂ ದೆಹಲಿಗೆ ಬಂದು ನನ್ನನ್ನು ಭೇಟಿಯಾಗಿ" ಎಂದು ತಿಳಿಸಿದ್ದಾರೆ.

೧೯೮೨ರ ಹೊತ್ತಿಗೆ ದೇಶದ ರಾಜಕೀಯ ಪರಿಸ್ಥಿತಿ ಹಾಗೂ ಸಾಮಾನ್ಯ ಪರಿಸ್ಥಿತಿ ಅಯೋಮಯವಾಗಿತ್ತು. ಇದರಿಂದ ತೀವ್ರವಾಗಿ ನೊಂದ ಸಭ್ಯ ರಾಜಕಾರಣಿ ರಾಜಶೇಖರನ್ ತಾವು ರಾಜಕೀಯದಿಂದಲೇ ನಿವೃತ್ತರಾಗುವುದಾಗಿ ಅಂದು ಜನತಾಪಕ್ಷದ ಅಧ್ಯಕ್ಷರಾಗಿದ್ದ ಶ್ರೀ ಎಸ್.ಆರ್.ಬೊಮ್ಮಾಯಿಯವರಿಗೆ ಪತ್ರ ಬರೆದಿದ್ದರು ಹಾಗೂ ಅವರೊಡನೆ ಚರ್ಚಿಸಿ ಬಂದಿದ್ದರು. ದಿನಾಂಕ ೨.೪.೮೨ರ ತಮ್ಮ ಮರುಪತ್ರದಲ್ಲಿ ಶ್ರೀಮಾನ್ ಬೊಮ್ಮಾಯಿಯವರು, "ರಾಜಕೀಯ ಪಕ್ಷಗಳು ಅದರ ನಾಯಕರುಗಳ ವರ್ತನೆ, ದೇಶದ ಕಾರ್ಯಾಂಗ, ನ್ಯಾಯಾಂಗ, ಪತ್ರಿಕಾರಂಗಗಳಲ್ಲಿ ಮೌಲ್ಯಗಳ ಪತನವಾಗಿ ಅವು ಅಪ್ರಸ್ತುತವಾಗಿರುವುದು, ಇವುಗಳ ಬಗ್ಗೆ ತಾವು ಜಿಗುಪ್ಸೆ ವ್ಯಕ್ತಪಡಿಸಿ ಸಕ್ರಿಯ ರಾಜಕಾರಣದಿಂದ ನಿವೃತ್ತರಾಗುವುದಾಗಿ ತಿಳಿಸಿದ್ದೀರಿ. ಆದರೆ ಇದರಿಂದ ನಾವು ಪಲಾಯನ ಮಾಡಲು ಸಾಧ್ಯವಾಗುವುದಿಲ್ಲ. ನಾವೆಲ್ಲರೂ ಮತ್ತು ನಿಮ್ಮಂತಹ ವ್ಯಕ್ತಿಗಳು ಒಟ್ಟಾರೆಯಾಗಿ ಹಾಗೂ ವೈಯಕ್ತಿಕ ನೆಲೆಯಲ್ಲಿ ಇಂತಹ ಪರಿಸ್ಥಿತಿಯನ್ನು ಎದುರಿಸಬೇಕು, ಸುಧಾರಣೆಗೆ ಯತ್ನಿಸಬೇಕು, ವ್ಯವಸ್ಥೆ ಸೂಕ್ತವಾದ ವ್ಯಕ್ತಿಗಳ ಕೈಗೆ ಹೋಗುವವರೆಗೂ ಹೋರಾಡಬೇಕು. ನೀವು ಸಭ್ಯರು, ಪರಿಣಾಮಕಾರಿ ನಾಯಕತ್ವದ ಗುಣ

ಉಳ್ಳವರು, ನಿಮ್ಮಿಂದ ಪಕ್ಷಕ್ಕೆ ಹಾಗೂ ದೇಶಕ್ಕೆ ಅಪಾರವಾದ ಸೇವೆಯ ಅಗತ್ಯವಿದೆ. ನಿಮ್ಮಿಂದ ಪಕ್ಷಕ್ಕೆ ಮಾರ್ಗದರ್ಶನ ಬೇಕಾಗಿದೆ-ದಯಮಾಡಿ ರಾಜಕೀಯದಿಂದ ನಿವೃತ್ತರಾಗುವ ಯೋಚನೆಯನ್ನು ಕೈಬಿಡಿ" ಎಂದು ಹೇಳುತ್ತಾರೆ.

ಇದು ರಾಜಶೇಖರನ್‌ರವರು ಅನುಭವಿಸಿದ ತಳಮಳ ಹಾಗೂ ರಾಜಕೀಯ ರಂಗಕ್ಕೆ ಅಂತಹವರ ಅಗತ್ಯತೆಗಳ ಬಗ್ಗೆ ಸೂಚ್ಯವಾಗಿ ತಿಳಿಸುವ ಪತ್ರವಾಗಿದೆ. ಆ ನಂತರ ಜನತಾಪಕ್ಷದ ಅವಸ್ಥೆಯಿಂದಾಗಿ ರಾಜಶೇಖರನ್‌ರವರು ೧೯೮೪ ಡಿಸೆಂಬರ್‌ನಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಬರಬೇಕಾಯಿತು.

ಆಗಲೂ ಕೂಡಾ ಅವರು ಎಂದಿನಂತೆ, ವಿಶಾಲ ತಳಹದಿಯ ಮೇಲೆ ಪಕ್ಷವನ್ನು ಕಟ್ಟುವ ವಿಚಾರದಲ್ಲಿ ತಮ್ಮ ಸಲಹೆಗಳನ್ನು ನೀಡಿ ಪಕ್ಷದ ಮುಖಂಡರಿಗೆ ಪತ್ರಗಳನ್ನು ಬರೆಯುತ್ತಿದ್ದ ವಿಚಾರ ತಿಳಿಯುತ್ತದೆ.

ಅಂದು ವಿರೋಧ ಪಕ್ಷದ ನಾಯಕರಾಗಿದ್ದ ಎನ್.ಡಿ.ತಿವಾರಿಯವರು ೨೦.೪.೯೦ರಂದು ರಾಜಶೇಖರನ್‌ರವರಿಗೆ ಪತ್ರ ಬರೆಯುತ್ತಾ, "ಪಕ್ಷವನ್ನು ಪುನಶ್ಚೇತನಗೊಳಿಸುವ ಹಾಗೂ ಪುನರ್ ವ್ಯವಸ್ಥೆಗೊಳಿಸುವ ವಿಚಾರದಲ್ಲಿ ತಾವು ಬರೆದ ಪತ್ರ ತಲುಪಿದೆ. ತಮ್ಮ ಸಲಹೆ ಸೂಚನೆಗಳನ್ನು ಸಂಪೂರ್ಣವಾಗಿ ಸ್ವಾಗತಿಸುತ್ತೇನೆ. ನಾನು ಮೇ ತಿಂಗಳಲ್ಲಿ ಬೆಂಗಳೂರಿಗೆ ಬರಲಿದ್ದೇನೆ. ಆಗ ತಮ್ಮೊಡನೆ ಈ ವಿಚಾರದಲ್ಲಿ ಸುದೀರ್ಘವಾಗಿ ಚರ್ಚಿಸುತ್ತೇನೆ" ಎಂದು ತಿಳಿಸುತ್ತಾರೆ.

೧೯೯೦ ಅಕ್ಟೋಬರ್‌ವರೆಗೆ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಗಳಾಗಿದ್ದರು. ಆ ನಂತರ ರಾಜಕೀಯ ಸ್ಥಿತ್ಯಂತರಗಳಾಗಿ ಶ್ರೀ ಬಂಗಾರಪ್ಪ, ಶ್ರೀ ವೀರಪ್ಪ ಮೊಯಿಲಿ ಮುಖ್ಯಮಂತ್ರಿಗಳಾದರು. ಆ ಸಮಯದಲ್ಲಿ ೧೯೯೧ ಮೇ ತಿಂಗಳಲ್ಲಿ ಲೋಕಸಭಾ ಚುನಾವಣೆಗಳು ನಡೆಯಿತು. ಲೋಕಸಭಾ ಚುನಾವಣೆಗಳಿಗೆ ಟಿಕೆಟ್ ಹಂಚಿಕೆ ವಿಚಾರದಲ್ಲಿ ವೀರೇಂದ್ರ ಪಾಟೀಲರೊಡನೆ ಸಂಪರ್ಕ ಹೊಂದಿದ್ದ ನಾಯಕರುಗಳಿಗೆ, ಕಾರ್ಯಕರ್ತರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳಬೇಕೆಂದು ಎ.ಐ.ಸಿ.ಸಿ. ಮುಖಂಡರಿಗೆ ಪತ್ರ ಬರೆಯುವ ಧಾರ್ಷ್ಟ್ಯತೆಯನ್ನು ರಾಜಶೇಖರನ್ ತೋರಿಸಿದರು ಎಂಬುದು ಗಮನಾರ್ಹ. ಈ ಬಗ್ಗೆ ದಿನಾಂಕ ೨೮.೪.೧೯೯೧ರಂದು ಪತ್ರ ಬರೆಯುತ್ತಾ ಕಾಂಗ್ರೆಸ್ ಹಿರಿಯ ನಾಯಕ ಹಾಗೂ ಟಿಕೆಟ್ ಹಂಚಿಕೆ ಸಮಿತಿ ಸದಸ್ಯರಾಗಿದದ ಶ್ರೀ ದಿನೇಶ್ ಸಿಂಗ್ "ಅಭ್ಯರ್ಥಿಗಳ ಆಯ್ಕೆಯಲ್ಲಿ ವೀರೇಂದ್ರರ ಜೊತೆ ಸಂಪರ್ಕ ಹೊಂದಿದವರಿಗೆ, ಹೊಂದಿರುವವರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳಲಾಗುವುದೆಂದು" ತಿಳಿಸಿದರು. ಈ ಬಗ್ಗೆ ದೂರವಾಣಿಯ ಮೂಲಕ ಮಾತನಾಡಲೂ ಸೂಚನೆ ನೀಡಿದ್ದರು. ಅಂದರೆ ರಾಜಶೇಖರನ್‌ರವರು ಪಕ್ಷದಲ್ಲಿ ಗುಂಪುಗಾರಿಕೆಗೆ ವಿರುದ್ಧವಾಗಿದ್ದರು ಹಾಗೂ ಪಕ್ಷ ವ್ಯವಸ್ಥಿತವಾಗಿ ಗೆಲ್ಲುವ ದೃಷ್ಟಿಯನ್ನು

ಇಟ್ಟುಕೊಂಡು ಸಮರ್ಥರಾದ ಅಭ್ಯರ್ಥಿಗಳಿಗೆ ಟಿಕೆಟ್ ನೀಡುವುದು ಉಚಿತ ಎಂಬ ಅಭಿಪ್ರಾಯವನ್ನು ಹೊಂದಿದ್ದರು ಎಂಬುದು ಇದರಿಂದ ತಿಳಿದುಬರುತ್ತದೆ.

ಮುಂದೆ ಇವರು ೧೯೯೯ರಲ್ಲಿ ರಾಜ್ಯ ಕಾಂಗ್ರೆಸ್ ಪಕ್ಷದಲ್ಲಿ ವಿಧಾನಸಭಾ ಚುನಾವಣೆಯ ನೀತಿ ನಿರೂಪಣಾ ಸಮಿತಿಯ ಸದಸ್ಯರಾಗಿ ನೇಮಕವಾದ ಬಗ್ಗೆ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಹಸನಬ್ಬ ೧೭.೫.೯೯ರಲ್ಲಿ ಪತ್ರ ಬರೆದರು.

೨೦.೩.೨೦೦೦ರಲ್ಲಿ ಅಂದು ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದ ಶ್ರೀ ಎಸ್.ಎಂ.ಕೃಷ್ಣರವರು ಶ್ರೀ ರಾಜಶೇಖರನ್‌ರವರನ್ನು ಪಕ್ಷದ ಶಿಸ್ತು ಸಮಿತಿ ಸದಸ್ಯರನ್ನಾಗಿ ನೇಮಿಸಿ ಪತ್ರ ಬರೆಯುತ್ತಾರೆ.

ಹೀಗೆ ರಾಜಶೇಖರನ್‌ರವರ ಪತ್ರ ಸಂಗ್ರಹ ಅನೇಕ ಕೌತುಕವಾದ ಸಂಗತಿಗಳನ್ನು ಒಳಗೊಂಡಿದೆ. ಅನೇಕ ನಾಯಕರ ಕೈಬರಹ ಹಾಗೂ ಹಸ್ತಾಕ್ಷರವನ್ನು ನೋಡುವುದೂ ಕೂಡಾ ಈ ಪತ್ರ ಸಂಗ್ರಹದ ಆಸಕ್ತಿದಾಯಕ ವಿಚಾರವಾಗಿದೆ.

ಅಭಿವೃದ್ಧಿ ವಿಚಾರ, ವೈಯಕ್ತಿಕ ಯೋಗಕ್ಷೇಮ ವಿಚಾರ, ಸಾಮಾಜಿಕ ವಿಚಾರ, ರಾಜಕೀಯ ವಿಚಾರ ಈ ರೀತಿ ವಿವಿಧ ಕ್ಷೇತ್ರಗಳಲ್ಲಿ ಸತತವಾಗಿ ಪತ್ರ ವ್ಯವಹಾರ ಮಾಡುವ ಮೂಲಕ ರಾಜಶೇಖರನ್ ತಮ್ಮ ಜೀವನೋತ್ಸಾಹ ಹಾಗೂ ಆಸಕ್ತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ತಮ್ಮ ವಿಚಾರಗಳನ್ನು ಪತ್ರಗಳ ಮೂಲಕ ಹೊರಹಾಕುವುದರೊಂದಿಗೆ, ಒಂದು ಸ್ಥಿಮಿತತೆಯನ್ನು, ತಾಳ್ಮೆಯ ಗುಣವನ್ನು ಕಾಪಾಡಿಕೊಂಡಿದ್ದಾರೆ. ಅನೇಕ ಹಿರಿಯರ ಸಂಪರ್ಕ, ಮಾರ್ಗದರ್ಶನ ಪಡೆದಿದ್ದಾರೆ ಎಂಬುದನ್ನು ಈ ಪತ್ರ ಸಂಗ್ರಹದ ಪರಿಶೀಲನೆಯ ಮೂಲಕ ಅರಿಯಬಹುದಾಗಿದೆ.

***

# ರೈತನಿಗೆ "ಬೆಂಬಲ ಬೆಲೆ" ಕೊಡಿಸಲು ಹೋರಾಡಿದವರು

ಸಂಗ್ರಹ : ಶೇಷಣ್ಣ

ಸಮಾಜಕ್ಕೆ ಹಿರಿಯ ರಾಜಕಾರಣಿಗಳಾಗಲೀ,
ಮುತ್ಸದ್ದಿಗಳಾಗಲೀ ಏನು ಕೊಡುಗೆ ನೀಡಿದ್ದಾರೆ?
ಅವರ ತತ್ತ್ವಬದ್ಧತೆ ಏನು? ಕರ್ತವ್ಯ ಪ್ರಜ್ಞೆ ಎಂತು?
- ಈ ವಿಷಯಗಳನ್ನು ಅವಲೋಕಿಸುವ ಸಂದರ್ಭ
ಬಂದಾಗ ಸಹಜವಾಗಿ ಒಂದು ಪ್ರಶ್ನೆ ಎದುರಾಗುತ್ತದೆ.

ಚುನಾಯಿತ ಪ್ರತಿನಿಧಿಯಾಗಿ, ಇಲ್ಲವೇ ಜನಾಭಿಪ್ರಾಯ
ಮುಂದಾಳುವಾಗಿ, ಅಥವಾ ಬುದ್ಧಿಜೀವಿಯಾಗಿ
ಈತ ಯಾವ ವಿಷಯದ ಬಗೆಗೆ ಹೋರಾಟ ನಡೆಸಿದ್ದಾನೆ?
ಈತನ ಹೋರಾಟ ಪ್ರಾಮಾಣಿಕವೇ?

ನಾಡಿನ ಸಂಸದೀಯ ಕ್ಷೇತ್ರದಲ್ಲಿ ಸುಮಾರು
ಐದು ದಶಕಗಳಿಗೂ ಹೆಚ್ಚು ಕಾಲ ಸೇವೆ ಸಲ್ಲಿಸಿದ
ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ಅನ್ವಯಿಸುವಂತೆ
ಈ ಪ್ರಶ್ನೆ ಕೇಳಲಾಯಿತು ಎಂದು ಭಾವಿಸೋಣ.

ಕರ್ನಾಟಕ ವಿಧಾನ ಮಂಡಲದ ಕಲಾಪಗಳ ಇತಿಹಾಸ
ಈ ಪ್ರಶ್ನೆಗೆ ಸಮರ್ಪಕವಾದ ಉತ್ತರ ನೀಡುತ್ತದೆ.

ಲೋಕಸಭೆ ಸದಸ್ಯರಾಗಿ, ಕರ್ನಾಟಕ ವಿಧಾನ ಮಂಡಲದ
ಉಭಯ ಸದನಗಳಲ್ಲಿ ಶಾಸಕರಾಗಿ, ಈಗಲೂ
ರಾಜ್ಯಸಭೆಯ ಸಂಸದರಾಗಿ ಶ್ರೀಯುತರು ಹಲವಾರು
ಸಾರ್ವಜನಿಕ ಕಾರಣಗಳಿಗಾಗಿ ಅವಿಶ್ರಾಂತ ಹೋರಾಟ
ನಡೆಸಿಕೊಂಡು ಬಂದಿದ್ದಾರೆ.

ಈ ಪೈಕಿ ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ಇರಲಿ ಎಂಬುದು
ಹಾಗೂ ರೈತನು ಬೆಳೆದ ಪದಾರ್ಥಗಳಿಗೆ ಸೂಕ್ತ ಬೆಲೆ
ಸಿಗಲಿ ಎಂಬುದು ಶ್ರೀ ರಾಜಶೇಖರನ್‌ರವರು ನಡೆಸಿರುವ
ಪ್ರಮುಖ ಹೋರಾಟ.
'ಬೆಂಬಲ ಬೆಲೆ'ಗಾಗಿ ಶ್ರೀಯುತರು ನಡೆಸಿದ ಹೋರಾಟಗಳ
ಒಂದೆರಡು ದೃಶ್ಯ ಇಲ್ಲಿದೆ.

## "ಸಪೋರ್ಟಿಂಗ್ ಪ್ರೈಸ್" ಹೇಗಿದ್ದರೆ ಚೆನ್ನ?

ಮಾನ್ಯ ಅಧ್ಯಕ್ಷರೇ,

ಇದೀಗ ಸದನದಲ್ಲಿ ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸುವ ಚರ್ಚೆ ನಡೆದಿದೆ. ಭಾಷಣದಲ್ಲಿ ಹಲವಾರು ವಿಷಯಗಳ ಪ್ರಸ್ತಾಪವಿದೆ. ಆದರೆ ನನಗೆ ಎಲ್ಲಕ್ಕಿಂತ ಹೆಚ್ಚು ಪ್ರಧಾನವಾಗಿ ಕಾಣುತ್ತಿರುವುದು ನಮ್ಮ ರೈತನ ಬವಣೆ. ಬಹು ವಿಷಾದದಿಂದ ಹೇಳುತ್ತಿದ್ದೇನೆ.

ಬಾಷಣದ ಎರಡನೆಯ ಪುಟದಲ್ಲಿ ರಾಜ್ಯಪಾಲರ ಬಾಯಿಂದ "ರೀಸನಬಲ್ ಸಪೋರ್ಟಿಂಗ್ ಪ್ರೈಸ್" ಎನ್ನುವ ಪದವೇನೋ ಬಂದಿದೆ. ಆದರೆ ವಸ್ತುಸ್ಥಿತಿ ಏನು ಗೊತ್ತೆ?

ಸದನದಲ್ಲಿ ನಾವು ಏನೇ ಹೇಳಿದರೂ ಸಹಿತ ವಾಸ್ತವವಾಗಿ ರೈತನಿಗೆ ಯಾವುದೇ ರೀತಿಯಲ್ಲಿ ಅನುಕೂಲವಾಗಿಲ್ಲ, ಕಬ್ಬು, ಭತ್ತ, ರಾಗಿ, ಜೋಳ - ಯಾವುದೇ ಬೆಳೆ ಬೆಳೆದ ರೈತನೂ ಕನಿಷ್ಠ ಲಾಭ ಸಿಗುವುದಿರಲಿ ಅಸಲೇ ಕೈಗೆ ಹತ್ತುತ್ತಿಲ್ಲ.

ನಿಜವಾಗಿಯೂ ಸತ್ಯಕ್ಕೆ ದೂರವಾದ ವಿಷಯಗಳನ್ನು ನಾವು ಚರ್ಚಿಸುತ್ತಿದ್ದೇವೆಯೋ ಏನೋ ಎಂಬ ವ್ಯಸನ ನನಗಾಗುತ್ತದೆ.

ಒಂದೇ ಒಂದು ಉದಾಹರಣೆ ಹೇಳುತ್ತೇನೆ. ಭತ್ತದ ವಿಷಯ, ಭತ್ತಕ್ಕೆ ಒಂದು ಕ್ವಿಂಟಲ್‌ಗೆ ಬೆಳೆಯ ಖರ್ಚು ೯೧ ರೂಪಾಯಿ ೨೫ ಪೈಸೆ. ಸರ್ಕಾರ ಲೆವಿ ಕೊಳ್ಳುವುದು ಒಳ್ಳೆಯ ಭತ್ತವಾದರೆ ೮೧ ರಿಂದ ೮೨ ರೂಪಾಯಿ ಎರಡನೇ ಗ್ರೇಡ್ ೭೪ ಅಥವಾ ೭೫.

ಇದು ವಾಸ್ತವಿಕ ಚಿತ್ರ.

ಎಂ.ವಿ.ರಾಜಶೇಖರನ್
ವಿಧಾನಸಭೆ, ಏಪ್ರಿಲ್ ೩, ೧೯೭೮

## ಉತ್ಪಾದನೆ ವೆಚ್ಚ ಗಮನದಲ್ಲಿರಲಿ

ಮಾನ್ಯ ಅಧ್ಯಕ್ಷರೇ,

ರೈತನ ಧಾನ್ಯಗಳಿಗೆ ಬೆಂಬಲ ಬೆಲೆ ಕೊಡಲು ಸರ್ಕಾರ ಮುಂದೆ ಬರುತ್ತದೆ ಎಂದೇ ಇಟ್ಟುಕೊಳ್ಳೋಣ. ಆಗ ಸರ್ಕಾರ ಗಮನದಲ್ಲಿಡಬೇಕಾದ ಒಂದೆರಡು ಪ್ರಾಥಮಿಕ ಅಂಶಗಳ ಬಗೆಗೆ ಸದನದ ಗಮನ ಸೆಳೆಯಲು ಅಪೇಕ್ಷಿಸುತ್ತೇವೆ.

ಸರ್ಕಾರ ಸಪೋರ್ಟಿಂಗ್ ಪ್ರೈಸ್ ಕೊಡುವಾಗ ಬಹುತೇಕ ಸಂದರ್ಭಗಳಲ್ಲಿ ಮುಕ್ತ ಮಾರುಕಟ್ಟೆಯಲ್ಲಿ ಅಂತಹ ಆಹಾರ ಧಾನ್ಯಕ್ಕೆ ಇರುವ ಬೆಲೆಗಿಂತ ಕಡಿಮೆ ಬೆಂಬಲ ಬೆಲೆ ನಿರ್ಧರಿಸುತ್ತದೆ. ಇದು ಬೆಂಬಲ ಬೆಲೆಯ ಮೂಲ ಅರ್ಥಕ್ಕೆ ಕುಂದು ತರುವ ಅಂಶ. ಹೀಗಾಗಬಾರದು. ಭತ್ತಕ್ಕೆ ಓಪನ್ ಮಾರ್ಕೆಟ್ಟಿನಲ್ಲಿ ೧೦೫ ರಿಂದ ೧೧೦ ರೂಪಾಯಿಗಳಿವೆ ಎಂದು ಇಟ್ಟುಕೊಳ್ಳೋಣ. ರೈತನ ಮಾಲಿಗೆ ಈ ಬೆಲೆ ತೀರಾ ಕಡಿಮೆಯಾಗಿರುತ್ತದೆ. ಸರ್ಕಾರ ರೈತನನ್ನು ಬೆಂಬಲಿಸುವ ಬದಲಾಗಿ ೮೫ ರೂಪಾಯಿಗೆ ಸಪೋರ್ಟಿಂಗ್ ಪ್ರೈಸ್ ಕೊಟ್ಟರೆ ಪರಿಸ್ಥಿತಿ ಏನು? ಇದು ಸರಿಯೇ?

You have to take in to consideration the cost of production and the margin of profit which the farmers should get. These are the two things that the government should consider while fixing the supporting price to the farmer produce.

ಜುಲೈ ೨೫, ೧೯೭೮

**ರೈತರ ಬಗೆಗೆ ಪ್ರಾಮಾಣಿಕ ಕಾಳಜಿ ಬೇಕು**

ಮಾನ್ಯ ಅಧ್ಯಕ್ಷರೇ,

(ಇಂಗ್ಲೀಷಿನಲ್ಲಿ) ನಾವು ಭಾಷಣದಲ್ಲಿ ಹೇಳುವುದೇ ಒಂದು, ಕೃತಿಯಲ್ಲಿ ನಡೆದುಕೊಳ್ಳುವುದೇ ಮತ್ತೊಂದು ಆಗಬಾರದು ಎಂದು ಎಚ್ಚರಿಸಲು ಈ ಪ್ರಸ್ತಾಪ ಮಾಡುತ್ತಿದ್ದೇನೆ.

ಇಂತಹ ದುರಾದೃಷ್ಟದ ಒಂದು ಘಟನೆ ಅಂದರೆ ಮಾನ್ಯ ಮುಖ್ಯಮಂತ್ರಿಗಳು (ಶ್ರೀ ದೇವರಾಜ ಅರಸರು) ಮೊನ್ನೆ ಮದರಾಸಿನಲ್ಲಿ ನಡೆದ ಮುಖ್ಯಮಂತ್ರಿಗಳ ಸಮ್ಮೇಳನದಲ್ಲಿ ಕಬ್ಬು ಬೆಳೆಯುವ ರೈತರಿಗೆ ಸೂಕ್ತ ಬೆಲೆ ಸಿಗಬೇಕೆಂದು ಅಗ್ರಹಪೂರ್ವಕವಾಗಿ ಒತ್ತಾಯಿಸಿದುದನ್ನು ನಾವೆಲ್ಲಾ ಓದಿದೆವು.

ಇಷ್ಟು ಹೇಳಿದ ಮುಖ್ಯಮಂತ್ರಿಗಳು ರಾಜ್ಯಕ್ಕೆ ವಾಪಸಾದ ಬಳಿಕ ನೀರಾವರಿ ಪ್ರದೇಶದಲ್ಲಿ ಕಬ್ಬು ಬೆಳೆಗಾರರ ನೀರಿಗೆ ಕೊಡಬೇಕಾದ ದರವನ್ನು ಹೆಚ್ಚಿಸಿರುವುದು ಸರಿಯೇ?

ಮುಖ್ಯಮಂತ್ರಿಯವರ ಹೇಳಿಕೆಯಲ್ಲಿ ಮತ್ತೊಂದು ಅಂಶ ಗಮನಿಸಿದೆ. ಕಬ್ಬಿನ ಬೆಲೆ ಎಕರೆಯೊಂದಕ್ಕೆ ೨೫೦ ರೂ.ಗಳಿಗೆ ಬರುವಂತೆ ದರದ ನಿರ್ಣಯವಾಗಿದೆ. ಇದು ನಮ್ಮ ರೈತರಿಗೆ ಸಂಪೂರ್ಣ ಅನಾನುಕೂಲ ಪರಿಸ್ಥಿತಿಗೆ ಕಾರಣವಾಗಿದೆ. ಹೀಗಿರುವಾಗ ನೀರಿನ ದರ ಹೆಚ್ಚುವದು ಸರಿಯೇ?

ಜುಲೈ ೧೮, ೧೯೭೮

ಮಾನ್ಯ ಅಧ್ಯಕ್ಷರೇ,

ಇಂದು ವಿಧಾನಸಭೆಯ ಅಧಿವೇಶನದ ಕೊನೆಯ ದಿನ. ನೀರಿನ ದರದ ಗೆಜೆಟ್ ನೋಟಿಫಿಕೇಷನ್ ಹೊರ ಬರುವುದರಲ್ಲಿದೆ. ಸದನ ಪುನಃ ಸೇರುವುದು ಮೂರು ತಿಂಗಳ

ಬಳಿಕ. ನೀರಿನ ದರ ಹೆಚ್ಚಾದ ಬಳಿಕ ಕಂಗಾಲಾದ ರೈತನ ಜಮೀನು ಬಾಕಿ ವಸೂಲಿಗಾಗಿ ಜಪ್ತಿ ಆಗುವ ಸ್ಥಿತಿ ಬರುತ್ತದೆ. ಇದು ತಪ್ಪಬೇಕು, ರೈತರ ಹಿತ ಕಾಪಾಡಿ, ಎಚ್ಚರವಿರಲಿ.

ಆಗಸ್ಟ್ ೨೬, ೧೯೭೮

ಮಾನ್ಯ ಸಭಾಧ್ಯಕ್ಷರೇ,

ಆಲೂಗಡ್ಡೆ ಬೆಲೆ ಕುಸಿದು ರಾಜ್ಯದ ರೈತರು ಕಂಗಾಲಾಗಿರುವ ಪರಿಸ್ಥಿತಿಯನ್ನು ಕುರಿತು ಸರ್ಕಾರದ ಗಮನ ಸೆಳೆಯುತ್ತಿದ್ದೇನೆ.

ರೈತರ ಕಷ್ಟ ಮುಗಿಲು ಮುಟ್ಟಿದೆ. ಬಿತ್ತನೆ ಬೀಜಕ್ಕೆ ದುಬಾರಿ ಹಣ ತೆತ್ತವ ರೈತ, ಗೊಬ್ಬರದ ಬೆಲೆ ಗಗನ ಮುಟ್ಟಿತ್ತು. ಸಾಲಸೋಲ ಮಾಡಿ ಗೊಬ್ಬರ ಹಾಕಿ ಬೆಳೆಸಿದ.

ಕ್ವಿಂಟಾಲ್‌ಗೆ ೬೦ ರೂಪಾಯಿಯಂತೆ, ಕೆಲವು ಕಡೆಯಂತೂ ಕ್ವಿಂಟಾಲ್‌ಗೆ ೪೨ ರೂಪಾಯಿಗೆ ಇಳಿದಿದೆ.

ಬೆಂಬಲ ಬೆಲೆಯೊಂದೇ ರೈತನ ಕಷ್ಟ ನಿವಾರಣೆಗೆ ನಾವು ಕೈಗೊಳ್ಳಬಹುದಾದ ಪರಿಹಾರ, ರಾಜ್ಯ ಸರ್ಕಾರ ಈ ಕ್ರಿಯೆಗೆ ಮುಂದಾಗಬೇಕು ಎಂದು ಆಗ್ರಹಪೂರ್ವಕವಾಗಿ ಒತ್ತಾಯಿಸುತ್ತೇನೆ.

ಮೇ ೨, ೧೯೭೯

## ಬೇರೆ ದೇಶದ ಕ್ರಿಯಾಶೀಲ ನೀತಿ

ನಮ್ಮ ದೇಶದಲ್ಲಿ ದುರ್ದೈವವೇನು ಎಂದರೆ ರೈತ ತಾನು ಬೆಳೆದ ಉತ್ಪನ್ನಗಳನ್ನು ಹತಾಶನಾಗಿ ವರ್ತಕರಿಗೆ ಮಾರಿದ ಬಳಿಕ ಬೆಂಬಲ ಬೆಲೆ ನೀಡುವ ಪ್ರಸ್ತಾಪ ಬರುತ್ತದೆ. ಬೇರೆ ದೇಶಗಳಲ್ಲಿ ಹೀಗಿರುವುದಿಲ್ಲ. ಕೆಲವೊಂದು ದೇಶಗಳಲ್ಲಿ ಬಿತ್ತನೆಗೆ ಮುಂಚೆಯೇ ಇಂತಿಂಥ ಧಾನ್ಯಗಳಿಗೆ ಇಷ್ಟು ಬೆಲೆ ಎಂದು ನಿಗದಿ ಮಾಡುತ್ತಾರೆ.

ನಮ್ಮ ದೇಶದಲ್ಲಿ ರೈತನ ಉತ್ಪನ್ನಗಳಿಗೆ ಬೆಲೆ ನಿಗದಿ ಮಾಡುವ ರಾಜಕೀಯ ಇಚ್ಛಾಶಕ್ತಿಯೇ ಇಲ್ಲ.

ಮೇ ೧೪, ೧೯೭೯

## ರಾಗಿ-ಜೋಳದ ಬೆಲೆ ಗತಿ ಏನು?

ಸನ್ಮಾನ್ಯ ಅಧ್ಯಕ್ಷರೇ,

ಬೆಂಬಲ ಬೆಲೆಯ ವಿಷಯ ಬಂದಾಗ ನಮ್ಮ ರೈತರಿಗೆ ಆಗುತ್ತಿರುವ ಮತ್ತೊಂದು ವಿರೋದಾಭಾಸದ ಬಗೆಗೆ ಸದನದ ಗಮನ ಸೆಳೆಯಲು ಅಪೇಕ್ಷಿಸುತ್ತೇನೆ.

ಈ ದೇಶದಲ್ಲಿ ಭತ್ತ ಮತ್ತು ಗೋಧಿಗೆ ಬೆಂಬಲ ಬೆಲೆ ನಿರ್ಣಯವಾಗುವ ವ್ಯವಸ್ಥೆ ಎದ್ದು ಕಾಣುತ್ತದೆ. ಅದೂ ಸಹಿತ ಯಾವ ಪ್ರಮಾಣದಲ್ಲಿ ನಿಗದಿತವಾಗಬೇಕೋ ಅಷ್ಟು ಇಲ್ಲ. ಆದರೂ ಚಿಂತಿಲ್ಲ. ಕೊಂಚ ಸಹಾಯವಾಗಿದೆ.

ನಮ್ಮ ರಾಜ್ಯದ ಬಹುಭಾಗಗಳಲ್ಲಿ ರೈತರು ಪ್ರಮುಖವಾಗಿ ತೆಗೆಯುವ ಬೆಳೆ ರಾಗಿ ಮತ್ತು ಜೋಳ. ರೈತ ಕಷ್ಟಪಟ್ಟು ಕೆಲಸ ಮಾಡಿ ಬೆಲೆ ತೆಗೆದಾಗ ಬೆಲೆಗಳು ಕುಸಿಯುತ್ತವೆ. ಇದು ಪ್ರತಿವರ್ಷ ಕೃಷಿ ಕ್ಷೇತ್ರದಲ್ಲಿ ನಡೆದಿರುವ ರೈತನ ಶೋಷಣೆ.

ಹೇಳಿ ಇದಕ್ಕೇನು ಮಾಡುತ್ತೀರಿ?

ನನ್ನ ದೃಷ್ಟಿಯಲ್ಲಿ ರಾಗಿ-ಜೋಳಕ್ಕೆ ಸರಿಯಾದ ಬೆಲೆ ಸಿಗುವವರೆಗೂ ರೈತ ಬದುಕಲಾರ. ಹೀಗಾಗಿ ಆಗಿಂದಾಗ್ಯೆ ತಜ್ಞರಿಂದ ಬೆಂಬಲ ಬೆಲೆ ನಿರ್ಧರಿಸಿ.

ಕೇಂದ್ರ ಸರ್ಕಾರದೊಂದಿಗೆ, ಕೊಂಚವೂ ಆಲಸ್ಯ ಮಾಡದೆ, ಈ ಬಗ್ಗೆ ಆಗ್ರಹಪೂರ್ವಕವಾಗಿ ವ್ಯವಹರಿಸಿ.

ಸೆಪ್ಟೆಂಬರ್ ೨೧, ೧೯೭೯

## ಜಪಾನಿನ ಮಾದರಿ ಧೋರಣೆ

ಮಾನ್ಯ ಅಧ್ಯಕ್ಷರೇ,

ರೈತ ಬೆಳೆದ ಉತ್ಪನ್ನಗಳಿಗೆ ಸರಿಯಾದ ಬೆಲೆ ಕೊಟ್ಟು ಕೊಂಡುಕೊಳ್ಳುವ ಪದ್ಧತಿಯನ್ನು ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲಿಯೂ ಕಾಣಬಹುದು. ಇದು ಆಯಾ ಸಮಾಜ ರೈತರ ಬೆವರಿಗೆ, ದುಡಿಮೆಗೆ ನೀಡುವ ಮರ್ಯಾದೆ.

ಉದಾಹರಣೆಗಾಗಿ ನಾನು ಜಪಾನಿಗೆ ಹೋದಾಗ ನಾನು ಕಣ್ಣಾರೆ ಕಂಡ ಪ್ರಸಂಗವನ್ನು ಸದನಕ್ಕೆ ತಿಳಿಸುತ್ತೇನೆ.

ಜಪಾನಿನ ಸರ್ಕಾರ ಅಲ್ಲಿನ ರೈತ ಬೆಳೆಯುವ ಭತ್ತವನ್ನು ಅಂತಾರಾಷ್ಟ್ರೀಯ ಬೆಲೆಗಿಂತ ಮೂರು ಪಟ್ಟು ಹೆಚ್ಚು ಹಣ ಕೊಟ್ಟುಕೊಳ್ಳುವ ವ್ಯವಸ್ಥೆ ಅನುಸರಿಸುತ್ತಾ ಬಂದಿದೆ.

ಬಹಿರಂಗ ಮಾರುಕಟ್ಟೆಯಲ್ಲಿ ಇದಕ್ಕಿಂತಲೂ ಕಮ್ಮಿ ಬೆಲೆ ಇದ್ದರೂ ಚಿಂತಿಲ್ಲ, ನಮ್ಮ ರೈತನಿಗೆ ಕೊಡುವ ಬೆಲೆ ಮಾತ್ರ ಯಾವುದೇ ಕಾರಣಕ್ಕೂ ಕಮ್ಮಿ ಇರಬಾರದು ಎಂದು ನನಗೆ ಅಲ್ಲಿನ ಅಧಿಕಾರಿಗಳು ತಿಳಿಸಿದಾಗ ರೈತರ ಬಗೆಗಿನ ಅವರ ಪ್ರಾಮಾಣಿಕ ಕಾಳಜಿ ಕಂಡು ನಾನು ಹೆಮ್ಮೆಪಟ್ಟುಕೊಂಡೆ.

ಜೂನ್ ೧೮, ೧೯೮೦

## ಶಿಫಾರಸುಗಳನ್ನು ಜಾರಿಗೆ ತನ್ನಿ

ಸನ್ಮಾನ್ಯ ಅಧ್ಯಕ್ಷರೇ,

ಬೆಂಬಲ ಬೆಲೆ ವಿಷಯವನ್ನ ನಾನಾಗಲೀ ಉಳಿದ ನನ್ನ ಸಹೋದ್ಯೋಗಿ ಶಾಸಕರಾಗಲೀ ಮೇಲಿಂದ ಮೇಲೆ ಏತಕ್ಕೆ ಒತ್ತಾಯ ಮಾಡುತ್ತೇವೆಂದರೆ ಜನನಾಯಕರಾಗಿ ನಾವು ಎಲ್ಲರಿಗಿಂತ ಮುಂದಾಗಿ ಈ ವಿಷಯದಲ್ಲಿ ಸ್ಪಂದಿಸಬೇಕು. ಈ ವಿಷಯದಲ್ಲಿ ವಿಳಂಬ ಆಗಲೇಬಾರದು.

ರೈತರ ಕಷ್ಟಕಾರ್ಪಣ್ಯಗಳನ್ನು ಸಮಗ್ರವಾಗಿ ಪರಿಶೀಲಿಸಿ ತಜ್ಞರ ಸಮಿತಿ ಬೆಂಬಲ ಬೆಲೆ ಕುರಿತು ಯಾವುದಾದರೊಂದು ಶಿಫಾರಸು ಮಾಡಿತು ಎಂದು ಭಾವಿಸಿ, ಇದರ ಬಗೆಗೆ ವಿಳಂಬ ಆಗಲೇ ಕೂಡದು. ಸದನ ಈ ಬಗೆಗೆ ಜಾಗ್ರತೆ ವಹಿಸಬೇಕು.

ತಡಮಾಡಿದಲ್ಲಿ ರೈತನಿಗೆ ಉಪಕಾರಕ್ಕೆ ಬದಲಾಗಿ ಅಪಕಾರ ಮಾಡಿದಂತಾಗುತ್ತದೆ.

ಜುಲೈ ೩೧, ೧೯೮೦

## ರೈತನಿಗೆ ಕೊನೆಗೂ ದುಸ್ಥಿತಿ

ಮಾನ್ಯ ಅಧ್ಯಕ್ಷರೇ,

ಕನ್ನಡದಲ್ಲಿ ಒಂದು ಗಾದೆ ಮಾತಿದೆ. ಅದೇನೆಂದರೆ "ಸಮುದ್ರದ ಜೊತೆ ನಂಟಸ್ತನ; ಉಪ್ಪಿಗೆ ಬಡತನಾ"

ಹೀಗಾಗಿದೆ ನಮ್ಮ ರೈತನ ಸ್ಥಿತಿ. ಎಲ್ಲರೂ ಅವರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುವವರೇ. ಆದರೆ ವಾಸ್ತವಿಕವಾಗಿ ಅವನು ಅಲ್ಲೇ; ನಾವು ಇಲ್ಲೇ.

ಒಂದು ಮಾತು ಹೇಳುತ್ತೇನೆ. ರೈತನದು ಕೊಡುಗೈ. ಎಂದೂ ಆತ ಬೇರೆಯವರತ್ತ ಕೈ ಚಾಚಿ ಬೇಡುವವನಲ್ಲ. ಈತ ಕಷ್ಟಜೀವಿ ಸ್ವಾಭಿಮಾನಿ. ಆದುದರಿಂದ ಕೃಷಿ ಸಚಿವರಾದ ಶ್ರೀ ಬಂಗಾರಪ್ಪನವರಿಗೆ, ಮುಖ್ಯಮಂತ್ರಿಗಳಾದ ಶ್ರೀ ಗುಂಡೂರಾಯರಿಗೆ, ವಿರೋಧ ಪಕ್ಷದ ಹಿರಿಯ ಶಾಸಕ ಶ್ರೀ ಎಚ್.ಡಿ.ದೇವೇಗೌಡರಿಗೆ ಹಾಗೂ ಸದನದ ಉಳಿದೆಲ್ಲ ಶಾಸಕರಿಗೆ ನನ್ನ ಕಳಕಳಿಯ ಮನವಿ ಏನೆಂದರೆ ರೈತನಿಗೆ ಅನುಕೂಲ ಕಲ್ಪಿಸಿಕೊಡುವ ಯಾವುದಾದರೂ ವಿಷಯ ಸದನದಲ್ಲಿ ಚರ್ಚೆಗೆ ಬಂದರೆ ಎಲ್ಲರೂ ಈ ಪ್ರಸ್ತಾಪದಲ್ಲಿ ಭಾಗವಹಿಸಬೇಕು. ಇದಕ್ಕಾಗಿ ಸಮಯದ ಬಗೆಗೆ ಸಂಕೋಚವೇ ಇರಬಾರದು.

ಫೆಬ್ರವರಿ ೫, ೧೯೮೧

## ರಾಗಿ-ಭತ್ತ ಮರದಲ್ಲಿ ಬೆಳೆಯುತ್ತದೆಯೇ?

ಸನ್ಮಾನ್ಯ ಸಭಾಪತಿಗಳೇ,

ನಮ್ಮ ರಾಜ್ಯ ಮತ್ತು ರಾಷ್ಟ್ರ ವ್ಯವಸಾಯ ಪ್ರಧಾನವಾದದ್ದು. ಇವತ್ತಿನ ದಿವಸ ಎಲ್ಲ ಕೃಷಿ ಉತ್ಪನ್ನಗಳ ಬೆಲೆ ಕುಸಿಯುತ್ತ ಬಂದಿದೆ. ಇದರ ಬಗೆಗೆ ನಮ್ಮ ಸದನಗಳು ಗಂಭೀರವಾಗಿ ವಿಚಾರ ನಡೆಸಿವೆ. ನನಗನ್ನಿಸುತ್ತದೆ, ಈ ಬಗೆಗೆ ದೇಶದಲ್ಲಿನ ಎಲ್ಲ ರಾಜ್ಯಗಳು ಮತ್ತು ಕೇಂದ್ರ ಸರ್ಕಾರ ಇನ್ನೂ ಸಾಕಷ್ಟು ಗಂಭೀರವಾಗಿ ಚರ್ಚಿಸಿದಂತಿಲ್ಲ.

ರೈತ ಬೆಳೆಸುವ ಎಲ್ಲ ಕೃಷಿಪೂರಕ ಪದಾರ್ಥಗಳ ಬೆಲೆಯೂ ಒಂದಕ್ಕೆ ಹತ್ತರಷ್ಟು ಹೆಚ್ಚಿದೆ. ಗೊಬ್ಬರ, ಕ್ರಿಮಿನಾಶಕ, ರೈತ ಉಪಯೋಗಿಸುವ ಕೃಷಿ ಉಪಕರಣ, ಡೀಸಲ್, ಸೀಮೆಎಣ್ಣೆ, ವಿದ್ಯುಚ್ಛಕ್ತಿ ದರ, ಕೂಲಿ ಎಲ್ಲ ವಿಷಯದಲ್ಲಿಯೂ ರೈತನ ಶೋಷಣೆ ಏಕಪ್ರಕಾರವಾಗಿ ನಡೆದಿದೆ.

ಬೇರೆ ದೇಶಗಳಲ್ಲಿನ ಪರಿಸ್ಥಿತಿಗೆ ಹೋಲಿಸಿ ನೋಡಿದರೆ ನಮ್ಮ ರೈತನ ದಾರುಣ ಪರಿಸ್ಥಿತಿಯ ಚಿತ್ರ ಸಿಗುತ್ತದೆ. ಉದಾಹರಣೆಗೆ ಚೀನಾದಲ್ಲಿ ರೈತನ ವರಮಾನ ೯ ಸಾವಿರದಿಂದ ೧೦ ಸಾವಿರದಷ್ಟಿದೆ. ಭಾರತದಲ್ಲಿ ರೈತನ ವರಮಾನ ೪೦೦ ರಿಂದ ೫೦೦. ಈ ದೇಶಗಳಲ್ಲಿ ರೈತನ ಉತ್ಪನ್ನಕ್ಕೆ ಸರಿಯಾದ ಬೆಲೆ ಸಿಗುವ ಕಾರಣ ಆತನ ಉತ್ಪಾದನಾ ಸಾಮರ್ಥ್ಯವೂ ಹೆಚ್ಚಿದೆ. ಉತ್ಪಾದನಾ ಸ್ಥಿತಿಯೊಂದಿಗೆ ಜೀವನಸ್ಥಿತಿಯೂ ಸುಧಾರಿಸಿದೆ.

ದುರ್ದೈವದ ಸಂಗತಿ ಎಂದರೆ ನಮ್ಮಲ್ಲಿ ರೈತನಿಗೆ ಬೆಂಬಲ ಬೆಲೆ ನಿಗದಿ ಮಾಡುವ ಹಲವಾರು ಬೆಂಬಲ ಬೆಲೆ ನಿಗದಿ ಆಯೋಗಗಳ ಅಧ್ಯಕ್ಷರು ಮತ್ತು ಸದಸ್ಯರಿಗೆ ವಾಸ್ತವಿಕತೆಯ ಅರಿವೇ ಇಲ್ಲ. ರಾಗಿ, ಭತ್ತ ಎನ್ನುವುದೇ ಪೈರೇ ಅಥವಾ ಮರವೇ ಎನ್ನುವ ವ್ಯತ್ಯಾಸ ತಿಳಿಯದು.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ನನ್ನ ಮೊದಲ ಸಲಹೆ ಏನೆಂದರೆ ವ್ಯವಸಾಯ ಖಾತೆಗಳನ್ನು ಕೇಂದ್ರದಲ್ಲಿ ಪ್ರಧಾನ ಮಂತ್ರಿಯವರು, ರಾಜ್ಯದಲ್ಲಿ ಮುಖ್ಯ ಮಂತ್ರಿಯವರೂ ನೇರವಾಗಿ ನೋಡಿಕೊಳ್ಳಬೇಕು.

ಹೀಗಾದಲ್ಲಿ ರೈತನ ಬಗೆಗೆ ಎಚ್ಚರ ಮತ್ತು ಕಾಳಜಿ ಬರಬಹುದು.

ನವೆಂಬರ್ ೨೫, ೨೦೦೦

## ತೊಗರಿ ಬೆಳೆದ ನಂಜುಂಡ ನಾನು

ಸ್ವಾಮೀ, ಸನ್ಮಾನ್ಯ ಅಧ್ಯಕ್ಷರೇ,

ನಾನೂ ಒಬ್ಬ ರೈತ. ಬೆಳೆ ತೆಗೆದ ಬಳಿಕ ಧಾನ್ಯಗಳಿಗೆ ಬೆಲೆ ಸೂಕ್ತವಾಗಿ ಸಿಗದಿದ್ದರೆ ನಮಗಾಗುವ ದುಃಖ ಹಾಗೂ ನೋವನ್ನು ಈ ಸದನಕ್ಕೆ ತಿಳಿಸಲು ಅಪೇಕ್ಷಿಸುತ್ತೇನೆ.

ಹೊಸ ತೊಗರಿ ಬಿತ್ತನೆ ಬೀಜವೊಂದನ್ನು ಕೃಷಿ ವಿಶ್ವವಿದ್ಯಾನಿಲಯ ಬಿಡುಗಡೆ ಮಾಡಿತ್ತು. ಒಂದು ಕೆಜಿಗೆ ಎಂಟು ರೂಪಾಯಿ, ಮೂರು ಎಕರೆಯಲ್ಲಿ ೩೦ ಕ್ವಿಂಟಲ್ ಬೆಳೆದೆ.

ಬೆಳೆ ಬಂತು. ಬೆಂಗಳೂರು ಮಾರುಕಟ್ಟೆಗೆ ತಂದೆ. ಮಾರುಕಟ್ಟೆಯಲ್ಲಿ ಖರೀದಿ ಬೆಲೆ ಏನು ಗೊತ್ತೆ? ಕ್ವಿಂಟಲ್‌ಗೆ ೧೬೦ ರಿಂದ ೧೬೫ ರೂಪಾಯಿ.

ಹೊಟ್ಟೆ ಉರಿದುಹೋಯಿತು. ಒಳ್ಳೆ ಬೀಜ ತಂದು, ಔಷದೋಪಚಾರ ಮಾಡಿ, ಬೆವರು ಸುರಿಸಿ ಮಾರುಕಟ್ಟೆಗೆ ಬೆಳೆ ತಂದಾಗ ಹೀಗಾದರೆ ನೀವೇ ಯೋಚನೆ ಮಾಡಿ. ಹೊಟ್ಟೆ ಉರಿಯುವುದಿಲ್ಲವೇ?

ತೊಗರಿಯನ್ನು ಮಾರಾಟ ಮಾಡದೆ ವಾಪಸು ತಂದೆ.

ಬೇಳೆ ಮಾಡಿಸಿ ಮಾರಿದರೆ ಹೇಗೆ ಎನ್ನಿಸಿತು. ಬೆಂಗಳೂರಿನಲ್ಲಿ ಅವರೆ-ತೊಗರಿ ಬೇಳೆ ಮಾಡುವ ರೋಲರ್ ಮಿಲ್‌ಗಳು ಮೂರೋ ನಾಲ್ಕೋ ಇವೆ, ಅಷ್ಟೆ. ಬೇಳೆ ಮಾಡಲು ಒಂದು ಕ್ವಿಂಟಲ್‌ಗೆ ೨೦ ರಿಂದ ೨೭ ರೂಪಾಯಿ ಆಗುತ್ತೆ ಎಂದರು.

ರೆಗ್ಯುಲೇಟೆಡ್ ಮಾರ್ಕೆಟ್‌ಗೆ ಕೊಂಡೊಯ್ದೆ. ಅಲ್ಲಿ ಒಂದು ಕ್ವಿಂಟಾಲ್‌ಗೆ ೩೭೫ ರೂಪಾಯಿ ಎಂದರು. ಸ್ವಾಮಿ ಅಂಗಡಿಯಲ್ಲಿ ತೊಗರಿಬೇಳೆ ಕೇಜಿಗೆ ೫,೮೦ ರಿಂದ ೬.೨೦ ರೂಪಾಯಿ. ನನಗೆ ಸಿಗುವ ಬೆಲೆ ಇದರ ಅರ್ಧ.

ಹೇಳಿ ಸ್ವಾಮಿ ಹೊಟ್ಟೆ ಉರಿಯುವುದಿಲ್ಲವೇ.

ಚಾಮರಾಜಪೇಟೆಯ ಮೂರನೆ ರಸ್ತೆಯಲ್ಲಿರುವ ರೋಲರ್ ಮಿಲ್‌ನಲ್ಲಿ ೩೦ ಕ್ವಿಂಟಾಲ್ ತೊಗರಿ ಇನ್ನು ಬಿದ್ದಿದೆ. ಯಾರು ಬೇಕಾದರೂ ನೋಡಿಕೊಂಡು ಬರಬಹುದು. ನನ್ನ ದುಃಖ-ವ್ಯಸನವನ್ನು ಯಾರ ಮುಂದೆ ಹೇಳಿಕೊಳ್ಳಲಿ, ನೀವೇ ಹೇಳಿ?

ಜುಲೈ ೨೪, ೧೯೮೨

## ನಾಯಿಯ ಬೆಲೆಯೂ ಸೇರಿದ ಮಾರುಕಟ್ಟೆ

ಸನ್ಮಾನ್ಯ ಸಭಾಧ್ಯಕ್ಷರೇ,

ಮಾರುಕಟ್ಟೆಯಲ್ಲಿ ಬಿಡುಗಡೆಯಾಗುವ ಪ್ರತಿ ವಸ್ತುವಿಗೂ ಬೆಲೆ ನಿರ್ಧರಿಸುವ ವ್ಯಾಪಕ ವ್ಯವಸ್ಥೆ ಇರುತ್ತದೆ. ಅದು ಸಣ್ಣ ಸಾಮಾನಾಗಲೀ, ದೊಡ್ಡ ಯಂತ್ರವಾಗಲೀ ತಯಾರಿಕೆಗೆ ತಗುಲುವ ವೆಚ್ಚ ಎಲ್ಲವೂ ಮಾರಾಟವಾಗುವ ಮಾಲಿಗೆ ಸೇರಿರುತ್ತದೆ.

ತಯಾರಿಕೆ ವೆಚ್ಚ, ಬಾಡಿಗೆ ವೆಚ್ಚ, ಜಾಹೀರಾತು ವೆಚ್ಚ, ಸಾರಿಗೆಗೆ ತಗಲುವ ಖರ್ಚು, ತಯಾರಿಸುವ ವ್ಯಕ್ತಿಯ ಸಂಬಳದ ಖರ್ಚು, ಅವನು ಹೆಂಡತಿ ಮಕ್ಕಳೊಂದಿಗೆ ವಿಹಾರಕ್ಕೆ ಹೋಗಿ ಬಂದರೆ ಅದರ ವೆಚ್ಚ, ಕೊನೆಗೆ ನಾಯಿ ಸಾಕಿದ್ದರೆ ಅದರ ಬ್ರೆಡ್ಡಿನ ಬಾಬ್ತು - ಎಲ್ಲವೂ ಸೇರಿ ಮಾರಾಟದ ಬೆಲೆ ನಿರ್ಧಾರವಾಗಿರುತ್ತೆ.

ಇಲ್ಲಿ ವರ್ಷವೆಲ್ಲಾ ಉತ್ತು, ಬಿತ್ತು, ಬಿತ್ತನೆ ಬೀಜಕ್ಕೆ ಮತ್ತು ಕ್ರಿಮಿನಾಶಕಕ್ಕೆ ಒಂದಕ್ಕೆ ಎರಡರಷ್ಟು ಹಣತೆತ್ತು, ರಾತ್ರಿ ಎಲ್ಲಾ ಕಷ್ಟ ಬಿದ್ದು, ಕೊನೆಗೆ ತಾನು ಬೆಳೆದ ಉತ್ಪನ್ನವನ್ನು ಮಾರುಕಟ್ಟೆಗೆ ಮಾರಲು ಬಂದರೆ ರೈತನಿಗೆ ಸಿಗುವ ಬೆಲೆ ಎಷ್ಟು? ಬಿಡಿಗಾಸು.

ಇದಕ್ಕೆ ಅಂತ್ಯವೆಲ್ಲಿ ಹೇಳೀ ಸ್ವಾಮಿ?

ಜುಲೈ ೨೪, ೧೯೮೨

## ಕೇಂದ್ರದ ಜವಾಬ್ದಾರಿ ಹೆಚ್ಚು

ಮಾನ್ಯ ಸಭಾಪತಿಗಳೇ,

ಕೊಂಚ ಮನಸ್ಸಿಗೆ ಸಮಾಧಾನವಾಗುವ ವಿಷಯವನ್ನು ಹೇಳಬಯಸುತ್ತೇನೆ. ನಮ್ಮ ರೈತನು ಬೆಳೆದ ಎಲ್ಲ ಬೆಳೆಗಳಿಗೂ ಬೆಂಬಲ ಬೆಲೆ ನಿರ್ಧರಿಸಬೇಕೆಂದು ಶಾಸಕರಾದಿಯಾಗಿ ಸಮಾಜದ ಎಲ್ಲ ವರ್ಗಗಳೂ ಒತ್ತಾಯ ತಂದಿರುವ ವಾತಾವರಣ ಈಗ ಸೃಷ್ಟಿಯಾಗಿದೆ. ಕೃಷಿ ತಜ್ಞರೂ, ಆಡಳಿತಗಾರರೂ, ಕೃಷಿ ವಿಶ್ವವಿದ್ಯಾಲಯದ ಉಪಕುಲಪತಿಗಳು ಆದ ಡಾ। ಬಿ.ಬಿಸಿಲಯ್ಯನವರ ಅಧ್ಯಕ್ಷತೆಯಲ್ಲಿ ಕೃಷಿ ಬೆಲೆ ಆಯೋಗ ರಚಿಸಿರುವುದು ಸ್ವಾಗತಾರ್ಹ ಸಂಗತಿ.

ಆಹಾರ ಧಾನ್ಯ ಮತ್ತು ಇತರ ಕೃಷಿ ಉತ್ಪನ್ನಗಳ ಬೆಂಬಲ ಬೆಲೆ ನಿಗದಿ ಮಾಡುವ ವಿಷಯದಲ್ಲಿ ರಾಜ್ಯ ಸರ್ಕಾರಕ್ಕಿಂತಲೂ ಕೇಂದ್ರದ ಜವಾಬ್ದಾರಿ ಹೆಚ್ಚಿದೆ. ಈ ಬಗೆಗೆ ಸಂಘಟಿತವಾಗಿ ಕೇಂದ್ರದ ಮೇಲೆ ಒತ್ತಾಯ ತರುವ ಹೊಣೆಗಾರಿಕೆಯನ್ನು ದೇಶದಲ್ಲಿನ ಎಲ್ಲ ರಾಜ್ಯ ಸರ್ಕಾರಗಳೂ ನಿರ್ವಹಿಸಬೇಕಾಗಿದೆ. ತುರ್ತಾಗಿ ಈ ಕಾರ್ಯ ನಡೆಯಬೇಕಾಗಿದೆ.

ಜನವರಿ ೨೮, ೨೦೦೨

***

# ಆತ್ಮೀಯ ಬೀಳ್ಕೊಡುಗೆ

**ಕರ್ನಾಟಕ ವಿಧಾನ ಪರಿಷತ್ತಿನ ನಡವಳಿ**
**(೩.೪.೨೦೦೨)**

**ಶ್ರೀ ಹೆಚ್.ಕೆ. ಪಾಟೀಲ್ (ಬೃಹತ್ ಮತ್ತು ಮಧ್ಯಮ ನೀರಾವರಿ ಸಚಿವರು)** : ಮಾನ್ಯ ಸಭಾಪತಿಯವರೇ, ತಾವು ನಮ್ಮ ಹಿರಿಯ ಸದಸ್ಯರಾದ ಶ್ರೀ ರಾಜಶೇಖರನ್ ಬಗ್ಗೆ ಮಾತನಾಡಿದಿರಿ, ಅದಕ್ಕೆ ನಾನೂ ಧ್ವನಿಗೂಡಿಸುತ್ತೇನೆ. ತಮ್ಮ ಅಭಿಪ್ರಾಯಕ್ಕೆ ಎರಡು ಅಭಿಪ್ರಾಯವನ್ನು ಯಾರೂ ಹೊಂದುವುದಕ್ಕೆ ಸಾಧ್ಯವಿಲ್ಲ. ಸನ್ಮಾನ್ಯ ರಾಜಶೇಖರನ್‌ರವರು ಪಕ್ಷಾತೀತ ವ್ಯಕ್ತಿ ಹಾಗೂ ಅಜಾತಶತ್ರು. ಅವರನ್ನು ರಾಜ್ಯಸಭಾ ಸದಸ್ಯರನ್ನಾಗಿ ಮಾಡಬೇಕೆಂದು ಪಕ್ಷ ನಿರ್ಣಯ ಮಾಡಿದಾಗ ನಮ್ಮ ಪಕ್ಷದಲ್ಲಿ ಸಂಪೂರ್ಣವಾಗಿ ಸಂತೋಷ ಇತ್ತು. ಅದರ ಜೊತೆ ಬಿ.ಜೆ.ಪಿ. ಮೊದಲು ಮಾಡಿಕೊಂಡು ಎಲ್ಲ ಪಕ್ಷಗಳಲ್ಲೂ ಸಹ ಸಂತೋಷ ವ್ಯಕ್ತಪಡಿಸುವ ವ್ಯಕ್ತಿತ್ವ ರಾಜಶೇಖರನ್‌ರವರದು ಎಂದು ನಾವು ಸಂತೋಷದಿಂದ ಮತ್ತು ಹೆಮ್ಮೆಯಿಂದ ಹೇಳುತ್ತೇವೆ. ಅವರು ಇಲ್ಲಿಂದ ರಾಜ್ಯಸಭೆಗೆ ಹೋಗುವುದರಿಂದ ನಮಗೆ ಸಾಕಷ್ಟು ಅನಾನುಕೂಲ ಆಯಿತು ಎಂದರೂ ತಪ್ಪಿಲ್ಲ. ಅನಾನುಕೂಲ ಹೇಗೆಂದರೆ ನಾನು ವೈಯಕ್ತಿಕವಾಗಿ ಕೆಲಸ ಮಾಡುವಾಗ ನನಗೆ ಖಾಸಗಿಯಾಗಿ, ಲಾಬಿಯಲ್ಲಿ, ಲಾಂಜ್‌ನಲ್ಲಿ, ಛೇರ್ಮನ್ನರ ಆಂಟಿ ಚೇಂಬರ್‌ನಲ್ಲಿ ಸಾಕಷ್ಟು ಮಾರ್ಗದರ್ಶನ ಮಾಡುತ್ತಿದ್ದರು. ಹೊಸ ಪೀಳಿಗೆಗೆ ರಾಜಕಾರಣವನ್ನು ಸರಿಯಾಗಿ ಮಾರ್ಗದರ್ಶನ ಮಾಡುವ ಹಿರಿಯ ನಾಯಕರ ಸಾಲಿನಲ್ಲಿ ರಾಜಶೇಖರನ್‌ರವರು ಒಬ್ಬರು. ರಚನಾತ್ಮಕ ಕೆಲಸಗಳಿಗೆ ಸದಾಕಾಲ ಬೆನ್ನು ತಟ್ಟುವ ಅವರ ಮನೋಭಾವವು ಅವರನ್ನು ಈ ಎತ್ತರಕ್ಕೆ ತಂದಿದೆ. ರಾಜ್ಯಸಭೆಯಲ್ಲಿ ನಮ್ಮ ಕರ್ನಾಟಕದ ಧ್ವನಿಯಾಗಿ, ರಾಷ್ಟ್ರ ಕಟ್ಟುವ ಕೆಲಸದಲ್ಲಿ ಸಮರ್ಥ ರಾಜ್ಯಸಭಾ ಸದಸ್ಯರಾಗಿ ಕೆಲಸ ಮಾಡುತ್ತಾರೆ. ಅವರಿಗೆ ದೇವರು ಹೆಚ್ಚಿನ ಆಯುಷ್ಯ-ಆರೋಗ್ಯ ಹಾಗೂ ಹೆಚ್ಚು ಸೇವೆ ಮಾಡುವ ಸಾಮರ್ಥ್ಯವನ್ನು ಕೊಡುತ್ತಾನೆ ಎಂಬ ವಿಶ್ವಾಸವನ್ನು ಈ ಸಂದರ್ಭದಲ್ಲಿ ವ್ಯಕ್ತ ಮಾಡಿ, ಅವರಿಗೆ ನಮ್ಮ ಸದನದ ಪರವಾಗಿ ಅಭಿನಂದನೆಯನ್ನು ಸಲ್ಲಿಸುತ್ತೇನೆ.

**ಶ್ರೀ ಕೆ.ಹೆಚ್. ಶ್ರೀನಿವಾಸ್ (ವಿರೋಧ ಪಕ್ಷದ ನಾಯಕರು):** ಮಾನ್ಯ ಸಭಾಪತಿಯವರೆ, ಬಹಳ ಸಂತೋಷದ ವಿಚಾರವನ್ನು ತಾವು ಪ್ರಸ್ತಾಪ ಮಾಡಿದ್ದೀರಿ. ಒಂದೇ ಒಂದು ಮಿಶ್ರಿತ ಭಾವನೆ ಏನೆಂದರೆ, ಅವರು ಇನ್ನೂ ಬಹಳ ಪ್ರತಿಷ್ಠಿತವಾದ ಸ್ಥಾನಕ್ಕೆ ಹೋಗುತ್ತಿರುವ ಜೊತೆಯಲ್ಲಿ ಇಲ್ಲಿಯವರೆಗೂ ನಮ್ಮ ಜೊತೆಯಲ್ಲಿ ಇದ್ದರು. ಇನ್ನು ಮೇಲೆ ಅವರನ್ನು ಹಿಡಿಯುವುದು ಬಹಳ ಕಷ್ಟ. ನನಗೆ ಬಹು ದಿವಸದ ಆತ್ಮೀಯತೆ ಅವರ ಜೊತೆ ಇದೆ. ಬಹಳ ವಿಚಾರಗಳಲ್ಲಿ our wave-length also matches. ಪಕ್ಷ-ಪಂಗಡಗಳ ಭಿನ್ನ-ವಿಭಿನ್ನ ನಿಲುವುಗಳನ್ನು ಮರೆತು ಎಷ್ಟೋ ವಿಚಾರಗಳಲ್ಲಿ ಹಲವಾರು ಬಾರಿ ಸ್ಪಂದಿಸಿರುವುದು ಇದೆ. ಅವರು ಎಷ್ಟೋ ದೂರದಲ್ಲಿರಬಹುದು, ನಾನು ಎಲ್ಲೋ ಇರಬಹುದು. ಆದರೆ ಒಂದು ವಿಷಯಕ್ಕೆ ಒಂದೇ ರೀತಿಯಲ್ಲಿ ಹಲವಾರು ಬಾರಿ ಸ್ಪಂದಿಸಿರುವುದು ಇದೆ. ನಾನು ೧೯೬೭ರಲ್ಲಿ ಶಾಸಕನಾದ ಕಾಲದಿಂದಲೂ ಅವರ ಪರಿಚಯ ನನಗೆ ಇದೆ. ನಮ್ಮೆಲ್ಲರಿಗೂ ಪೂಜ್ಯರು ಹಾಗೂ ಕರ್ನಾಟಕದ ಏಕೀಕರಣಕ್ಕೆ ಅದರ ಶಿಲ್ಪಿ ಎಂದೇ ಖ್ಯಾತನಾಮ ಹೊಂದಿರುವ ಸಿದ್ದವಹಳ್ಳಿ ನಿಜಲಿಂಗಪ್ಪನವರ ಅತ್ಯಂತ ಹತ್ತಿರದ ಬಂಧುಗಳು. ಅವರು ಮುಖ್ಯಮಂತ್ರಿಯಾದ ಕಾಲದಿಂದಲೂ ಇವರನ್ನು ನಾನು ಆತ್ಮೀಯವಾಗಿ ಕಂಡಿದ್ದೇನೆ. ಮಾನ್ಯ ಶ್ರೀ ನಿಜಲಿಂಗಪ್ಪನವರು ಅನೇಕ ಆದರ್ಶಗಳನ್ನು ಮೈಗೂಡಿಸಿಕೊಂಡು, ಕಟ್ಟ ಕಡೆಯವರೆಗೂ ವಿಶಿಷ್ಟ ರೀತಿಯ ಜೀವನ ಪ್ರೀತಿಯನ್ನು ಇಟ್ಟುಕೊಂಡಿದ್ದರು. ಕಟ್ಟಕಡೆಯದಾಗಿ ಅವರು ಹೇಳಿರುವ ಮಾತುಗಳೆಂದರೆ "ಪ್ರಪಂಚವೆಲ್ಲಾ ಸಂತೋಷದಿಂದ ಇರಲಿ". ನಾನು ನಿಜಲಿಂಗಪ್ಪನವರನ್ನು ದೂರದರ್ಶನದ Archivesಕೋಸ್ಕರ ಒಂದು ಸುದೀರ್ಘವಾದ ಸಂದರ್ಶನ ಮಾಡಿದ್ದೇನೆ. ಅವರು ಪುನರ್ಜನ್ಮ ಅಂದರೆ ಇನ್ನೊಂದು ಸಾರಿ ಹುಟ್ಟುತ್ತೇನೆ ಹಾಗೂ ದೇವರು, ಮಠ ಯಾವುದಕ್ಕೂ ಅವರು ಸೊಪ್ಪು ಹಾಕಿದವರಲ್ಲ. ಆದರೆ ಅದಮ್ಯವಾದ ಜೀವನ ಪ್ರೀತಿ ಮಾತ್ರ ಅವರಲ್ಲಿತ್ತು. ನಾನು ರಾಜಶೇಖರನ್ ಅವರನ್ನು ಅನೇಕ ಸಾರಿ ಆತ್ಮೀಯವಾಗಿ ಗಮನಿಸಿದಾಗ ಮಾನ್ಯ ನಿಜಲಿಂಗಪ್ಪನವರು ಆರಾಧಿಸುತ್ತಿದ್ದ ಅನೇಕ ಜೀವನ ಮೌಲ್ಯಗಳನ್ನು ಅವರೂ ಆರಾಧಿಸುವುದಕ್ಕೆ ಪ್ರಯತ್ನ ಪಟ್ಟಿರುವವರು. ಆ ರೀತಿ ಆರಾಧಿಸುವುದಕ್ಕೆ ಪ್ರಯತ್ನ ಪಟ್ಟ ಅತ್ಯಂತ ಸಜ್ಜನಿಕೆಯಿಂದ ಕೂಡಿರುವ ರಾಜಕಾರಣಿ. ಒಂದು ರೀತಿಯಲ್ಲಿ ರಾಜಕಾರಣಕ್ಕೆ ಸಲ್ಲದವರ ಗುಂಪಿಗೂ ಅವರು ಸೇರಿದ್ದಾರೆ ಎಂದು ನಾನು ಹೇಳುತ್ತೇನೆ. ಇನ್ನೊಂದು ರೀತಿಯಿಂದ ರಾಜಕಾರಣಿಯಾದವನು ಯಾವ ಒಂದು ಮನಸ್ಥಿತಿಯಲ್ಲಿರಬೇಕೆಂಬುದನ್ನು ಅವರು ಪ್ರತಿನಿಧಿಸುತ್ತಾರೆ. ಆದ ಕಾರಣ ಅವರ ಸ್ನೇಹ, ಪರಿಚಯ ಮತ್ತು ಒಡನಾಟ ಎಲ್ಲ ಕಾಲದಲ್ಲೂ ಕೂಡ ಅತ್ಯಂತ ಸಂತೋಷವನ್ನು ತರುತ್ತದೆ. ಯಾವುದೇ ವಿಷಯವನ್ನು ಯಾವತ್ತೂ ಅವರು ನೆಗೆಟಿವ್ ಆಗಿ ಮಾತನಾಡಿದ್ದನ್ನು ನಾನು ಕೇಳಿಲ್ಲ. ಅದು ಎಂತಹ ಕೆಟ್ಟ ವಿಷಯ ಇದ್ದರೂ ಅದರಲ್ಲಿನ ಒಂದು ಪಾಸಿಟಿವ್ ಅಂಶವನ್ನು ಎತ್ತಿ ಹಿಡಿಯುವುದೇ ಹೊರತು, ಒಂದು ರೀತಿಯಲ್ಲಿ ಅದನ್ನು ತಿರಸ್ಕಾರದಿಂದ, ತಾತ್ಸಾರದಿಂದ ಅಥವಾ ನಿರರ್ಥಕ ಭಾವನೆಯಿಂದ ನೋಡುವ ಸ್ವಭಾವವೇ ಅಲ್ಲ. ಒಂದು ದೃಷ್ಟಿಯಿಂದ ಅವರಿಗೆ ರಾಜ್ಯಸಭೆ ಬಹಳ ಯೋಗ್ಯವಾದ

ಜಾಗ ಕೂಡ ಆಗುತ್ತದೆ. ಇಲ್ಲೇನೋ ಮಂತ್ರಿ ಪದವಿ ಅದು-ಇದು ಎಂದು ಹೇಳುತ್ತಿದ್ದರು. ಅವರು ಮಂತ್ರಿಯಾಗಿದ್ದರೆ ನಾನು ಸಂತೋಷ ಪಡುವವರಲ್ಲಿ ಒಬ್ಬನಾಗಿದ್ದೆನು. ಆದರೆ ನಿಜವಾಗಿ ಹೇಳುವುದಾದರೆ ಅವರ ಜಾಯಮಾನಕ್ಕೆ ಮತ್ತು ರಾಜ್ಯಸಭೆಯ ಸ್ಥಾನಮಾನಗಳಿಗೆ ಅವರು ವಿಶೇಷವಾದ ಭೂಷಣವನ್ನು ಕೊಡುತ್ತಾರೆ. ಆ ಸ್ಥಾನದಿಂದ ನಮ್ಮ ರಾಜ್ಯದ ಹಿತರಕ್ಷಣೆಯನ್ನು ಮಾಡುವುದಕ್ಕೆ ಪ್ರಯತ್ನಿಸುತ್ತಾರೆ. ರಾಜ್ಯದ ಜನರ ಕಷ್ಟ-ಸುಖಗಳಿಗೆ ಇತ್ಯಾತ್ಮಕವಾಗಿ ಸ್ಪಂದಿಸುತ್ತಾರೆ. ಅದಲ್ಲದೇ ಅವರು ಒಂದು ರೀತಿ ಅಂತರರಾಷ್ಟ್ರೀಯ ವ್ಯಕ್ತಿ ಕೂಡ ಹೌದು. ನಮ್ಮ ಕರ್ನಾಟಕದಲ್ಲಿ ಕೆಲವು ಜನ ಅಂತರ್ರಾಷ್ಟ್ರೀಯ ವ್ಯಕ್ತಿಗಳಿದ್ದಾರೆ. ಈಗ ಬಿ.ಎಸ್.ವಿಶ್ವನಾಥ್ ಅಂತಹವರನ್ನೆಲ್ಲಾ ಭೇಟಿಯಾದಾಗ ಬೇರೆಯವರು ಕೇಳಿದಂತೆ ಕ್ಷೇಮ-ಕುಶಲದ ಬಗ್ಗೆ ಕೇಳುವುದಿಲ್ಲ. ಇಂಡಿಯಾ ದೇಶಕ್ಕೆ ಯಾವಾಗ ಬಂದಿರಿ ಎಂದು ಕೇಳುತ್ತೇವೆ. ಅವರೆಲ್ಲ ಗಗನ ಸಂಚಾರಿಗಳು. ಮಹಾವಿಷ್ಣುವಿಗೆ ಪಕ್ಷಿವಾಹನನಾಗಿ ಗಗನ ಸಂಚಾರಿ ಎಂದು ಹೇಳಿದಂತೆ ಇವರೆಲ್ಲ ಗಗನ ಸಂಚಾರದಲ್ಲಿಯೇ ಇರುವವರು. ಭೂಮಿಗೆ ಇಳಿದಾಗ ಅದೇ ನಮ್ಮ ಭಾಗ್ಯ ಎನ್ನುವ ರೀತಿಯಲ್ಲಿ ಪ್ರೀತಿಯಿಂದ ಒಂದೊಂದು ಸಾರಿ ಮಾತನಾಡಿಸಿದ್ದು ಉಂಟು. ಆದರೆ ಅವರಲ್ಲಿ ಇನ್ನೊಂದು ವಿಷಯವನ್ನು ನಾನು ಕಂಡಿದ್ದೇನೆ. ಅವರು ಇಷ್ಟೆಲ್ಲ ಪ್ರಪಂಚ ಸುತ್ತಿದರೂ ಅವರ ಪ್ರೀತಿ ಇಲ್ಲೇ ಎಲ್ಲೋ ಸುತ್ತಿಕೊಂಡಿದೆಯೇ ಹೊರತು ಬೇರೆಲ್ಲೂ ಇಲ್ಲ. ಪ್ರಪಂಚದಲ್ಲಿ ಇನ್ನೆಲ್ಲೋ ನೆಲೆಯಾಗಿಬಿಡಬಹುದಾಗಿತ್ತು, ಬರೀ ಸುತ್ತುವುದಕ್ಕೆ ಮಾತ್ರ ಪ್ರಪಂಚವೇ ಹೊರತು ಅವರ ಪ್ರೀತ್ಯಾದರಗಳು ಮತ್ತು ಕಾಳಜಿಗಳು ಊರು ಹಾಗೂ ಮನೆಯಲ್ಲಿ ಇರುವ ವೈಶಿಷ್ಟ್ಯವನ್ನು ನಾನು ಗುರುತಿಸಿದ್ದೇನೆ. ರಾಜಶೇಖರನ್‌ರವರು ಇಲ್ಲಿ ಇದ್ದರು ಎಂಬುದೇ ನಮಗೆ ಆತ್ಮೀಯತೆಯ ರೀತಿಯ ಬಂಧುತ್ವದ ಭಾವನೆಗೆ ಕಾರಣವಾಗಿತ್ತು. ಈಗ ಅವರು ಈ ಮನೆಯಿಂದ ರಾಜ್ಯಸಭಾ ಸದಸ್ಯರಾಗಿರುವುದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯವಾಗಿದೆ. ನಮಗೆ ಓಟು ಇದ್ದಿದ್ದರೆ ಯಾವುದೇ ವ್ಯಾಪಾರವನ್ನು ಮಾಡದೇ ಅವರಿಗೆ ಕೊಡುತ್ತಿದ್ದೆವು. ಆದರೆ ನಮಗೆ ಯಾರಿಗೂ ಓಟು ಇಲ್ಲ. ನಮ್ಮ ಮಧುಸೂದನ್‌ರವರು ಕಾಗದ ಎಲ್ಲ ಬರೆದು ತುಂಬಾ ಪ್ರಯತ್ನಪಟ್ಟರು. ಆದರೆ ಅದು ಆಗಲಿಲ್ಲ.

**ಶ್ರೀ ಜಿ.ಮಧುಸೂಧನ್** : ನಾನು ಯಾವ Contextನಲ್ಲಿ ಹೇಳಿದ್ದೆಂದರೆ ಅಂತಹ ವ್ಯಕ್ತಿಗಳು ನಿಂತುಕೊಂಡರೆ ನಮಗೂ ಅವಕಾಶ ಸಿಗುತ್ತದೆ ಎಂದು ಹೇಳಿದೆ.

**ಶ್ರೀ ಕೆ.ಹೆಚ್.ಶ್ರೀನಿವಾಸ್** : The world consists of all characters. ನಾವು ಯಾವುದೋ ಒಂದು ಕ್ಯಾಂಡಿಡೇಟ್ ನೋಡುವ ಅಗತ್ಯ ಇಲ್ಲ. ರಾಜಶೇಖರನ್ ಅಂತಹವರು ಕೂಡ ಇದೇ ಚುನಾವಣೆಯಲ್ಲಿ ಗೆದ್ದು ರಾಜ್ಯಸಭೆಗೆ ಹೋಗುತ್ತಿದ್ದಾರೆ ಎಂದರೆ ನಾವು ಸಾಂತ್ವನ ಪಡಿಸಬೇಕಾದ ಅಗತ್ಯ ಇದೆ. ನಾವು ಓಟು ಕೊಡದಿದ್ದರೂ ನಮ್ಮೆಲ್ಲರ ಪ್ರೀತಿ, ವಿಶ್ವಾಸ, ಶುಭ ಹಾರೈಕೆಗಳು ಅವರ ಜೊತೆಯಲ್ಲಿರುತ್ತದೆ. ಮಾನ್ಯ ರಾಜಶೇಖರನ್‌ರವರಿಗೆ ಭಗವಂತ

ದೀರ್ಘವಾದ ಆಯುರಾರೋಗ್ಯಗಳನ್ನು ಕೊಡಲಿ, ರಾಜ್ಯಸಭಾ ಸದಸ್ಯರಾಗಿ ಅವರು ಒಂದು ವಿಶಿಷ್ಟವಾದ ರೀತಿಯ ಜನಸೇವೆ ಹಿನ್ನೆಲೆಯಲ್ಲಿ ಪ್ರತಿಷ್ಠಿತ ಸ್ಥಾನವನ್ನು ಪಡೆದು, ರಾಜ್ಯಕ್ಕೆ ಕೀರ್ತಿಯನ್ನು ತರಲೆಂದು ಹಾರೈಸಿ, ಶುಭ ಕೋರುತ್ತಾ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಡಿ.ಹೆಚ್.ಶಂಕರಮೂರ್ತಿ (ಪದವೀಧರ ಕ್ಷೇತ್ರ)** : ಸನ್ಮಾನ್ಯ ಸಭಾಪತಿಯವರೆ, ಮಾನ್ಯ ವಿರೋಧ ಪಕ್ಷದ ನಾಯಕರ ಮಾತಿಗೆ ಒಂದೆರಡು ಮಾತುಗಳನ್ನು ಸೇರಿಸುವುದಕ್ಕೆ ನಾನು ಇಷ್ಟಪಡುತ್ತೇನೆ. ನಮ್ಮ ಈ ಸದನದ ಗೌರವ ಎಷ್ಟು ಮೇಲಕ್ಕೆ ಹೋಗುತ್ತಿದೆಯೆನ್ನುವ ಅಂಶವನ್ನು ನಾನು ಮಾನ್ಯ ರಾಜಶೇಖರನ್‌ರವರ ಮುಖಾಂತರ ನೋಡುತ್ತಿದ್ದೇನೆ. ಈ ಸದನದ ಸದಸ್ಯರಾಗಿದ್ದವರನ್ನು ರಾಜ್ಯಸಭೆಗೆ ಕಳುಹಿಸುತ್ತಿದ್ದೇವೆ. ಚುನಾವಣೆಯ ತನಕ ಪಕ್ಷಭೇದ, ಪರ-ವಿರೋಧ. ಚುನಾವಣೆ ಮುಗಿದ ಮೇಲೆ ಅವರ ಗೆಲುವನ್ನು ನೋಡಿ ಇಡೀ ಸದನ ಸಂತೋಷಪಟ್ಟಿತು. ಮಾನ್ಯ ವಿರೋಧ ಪಕ್ಷದ ನಾಯಕರು ಆಡಿದಂತಹ ಮಾತಿಗೆ ಎಲ್ಲರೂ ಧ್ವನಿಗೂಡಿಸುತ್ತಿರುವುದನ್ನು ನೋಡಿದರೆ, ಉನ್ನತ ಮೌಲ್ಯಗಳನ್ನು ಎತ್ತಿ ಹಿಡಿಯುವುದರಲ್ಲಿ ನಮ್ಮ ಸದನ ತನ್ನ ಪಾಲನ್ನು ಸಹಾ ನೀಡಿದೆ. ಅದರಲ್ಲೂ ಮಾನ್ಯ ರಾಜಶೇಖರನ್‌ರವರ ಬಗ್ಗೆ ಮಾತನಾಡುವಾಗ ಹೊರಗಡೆಯೊಂದು ಒಳಗಡೆಯೊಂದು ಮಾತನಾಡಲು ಸಾಧ್ಯವಾಗದೆ, ಸ್ವಾಭಾವಿಕವಾಗಿಯೇ ನಾವು ಅವರ ಬಗ್ಗೆ ಮಾತನಾಡುತ್ತಿದ್ದೇವೆ. ಈಗಾಗಲೇ ಮಾನ್ಯ ರಾಜಶೇಖರನ್‌ರವರು ನಮಗೆಲ್ಲ ಒಂದು ಪತ್ರವನ್ನು ಬರೆದಿದ್ದಾರೆ, ಅದರಲ್ಲಿ 'ಕರ್ನಾಟಕಕ್ಕೆ ಸಂಬಂಧಪಟ್ಟ ಹಾಗೆ ದೆಹಲಿಯಲ್ಲಿ ಏನೇ ಕೆಲಸವಾಗಬೇಕಾದರೂ ನನಗೆ ತಿಳಿಸಿ' ಎಂದು ಅವರು ಪಕ್ಷಭೇದವನ್ನು ಮರೆತು ಪತ್ರವನ್ನು ಬರೆದಿದ್ದಾರೆ. ಇಂತಹ ಒಬ್ಬ ವ್ಯಕ್ತಿ ನಮ್ಮ ಈ ಮನೆಯನ್ನು ಬಿಟ್ಟು ರಾಜ್ಯಸಭೆಗೆ ಹೋಗುತ್ತಿದ್ದಾರೆ. ಇನ್ನು ಮುಂದೆ ಅವರಿಗೆ ಒಳ್ಳೆಯದಾಗಲಿ ಎಂದು ನಾನು ಹಾರೈಸುತ್ತೇನೆ. ರಾಜ್ಯಸಭೆಗೆ ಅವರ ಆಯ್ಕೆಯಿಂದ ಕರ್ನಾಟಕಕ್ಕೆ ಅವರ ಸೇವೆ ಇನ್ನಷ್ಟು ದೊರೆಯಲಿ ಎಂದು ಹೇಳುತ್ತಾ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಬಿ.ಎಸ್.ಹೊರಟ್ಟಿ (ಶಿಕ್ಷಕರ ಕ್ಷೇತ್ರ)** : ಸನ್ಮಾನ್ಯ ಸಭಾಪತಿಯವರೆ, ಎಲ್ಲ ಹಿರಿಯರು ಮಾನ್ಯ ರಾಜಸೇಖರನ್‌ರವರ ಬಗ್ಗೆ ಹೇಳಿದ್ದಾರೆ. ಸುಮಾರು ೨೨ ವರ್ಷದಿಂದ ರಾಜಕೀಯ ರಂಗದಲ್ಲಿರುವ ಅವರನ್ನು ನಾವು ಅಪರೂಪಕ್ಕೊಮ್ಮೆ ನೋಡುತ್ತಿದ್ದೆವು. ಅವರು ಕೆಲವೊಂದು ವಿಚಾರಗಳಲ್ಲಿ ತಮ್ಮ ಮಾರ್ಗದರ್ಶನವನ್ನು ನಮಗೆ ನೀಡುತ್ತಿದ್ದರು. ಅವರು ಪಕ್ಷಭೇದವನ್ನು ಮರೆತು ಎಲ್ಲರ ಬಗ್ಗೆ ಸದಭಿಪ್ರಾಯವನ್ನು ಹೊಂದಿದ್ದರು. ಅನೇಕ ರೀತಿಯಿಂದ ನಮಗೆ ಮಾರ್ಗದರ್ಶನವನ್ನು ಮಾಡಿದ್ದರು. ನಮ್ಮ ವಿರೋಧ ಪಕ್ಷದ ನಾಯಕರು ಹೇಳಿದ ಹಾಗೆ ಅವರು ಮಂತ್ರಿಗಳಾಗುತ್ತಾರೆನ್ನುವ ಭಾವನೆ ನಮಗೆ ಬಂದಿತ್ತು. ಆದರೆ, ಇವತ್ತು ಅವರು ರಾಜ್ಯಸಭೆಗೆ ಹೋಗುತ್ತಿದ್ದಾರೆ. ಅವರ ರಾಜ್ಯಸಭೆಯ ಸದಸ್ಯತ್ವ ನಮ್ಮ ಇಡೀ ರಾಜ್ಯಕ್ಕೆ ಹೆಮ್ಮೆಯನ್ನು ತರುವಂತಹ ಕೆಲಸವಾಗುತ್ತದೆ ಎನ್ನುವಂತಹ ನಂಬಿಕೆ ಮತ್ತು ಭರವಸೆಯಿದೆ. ಈ ರಾಜ್ಯಕ್ಕೆ ಸಾಕಷ್ಟು ಒಳ್ಳೆಯ ಕೆಲಸವನ್ನು ಮಾಡುತ್ತಾರೆ ಹಾಗೂ ಎಲ್ಲ

ರೀತಿಯಿಂದಲೂ ಅವರು ಯೋಗ್ಯರು ಎನ್ನುವುದರಲ್ಲಿ ಎರಡು ಮಾತಿಲ್ಲ. ಆ ದೃಷ್ಟಿಯಿಂದ ಮಾನ್ಯ ರಾಜಶೇಖರನ್‌ರವರನ್ನು ರಾಜ್ಯಸಭೆಗೆ ಆರಿಸಿ ಕಳುಹಿಸಿದಂತಹ ಎಲ್ಲ ಜನರಿಗೂ, ಸರ್ಕಾರಕ್ಕೂ, ರಾಜ್ಯದ ಎಲ್ಲ ಜನತೆಯ ಪರವಾಗಿ ಮತ್ತು ಎಲ್ಲ ಪಕ್ಷಗಳ ಪರವಾಗಿ ಅಭಿನಂದನೆಯನ್ನು ಸಲ್ಲಿಸುತ್ತೇನೆ. ಅವರು ಈ ದೇಶಕ್ಕೆ ಇನ್ನೂ ಹೆಚ್ಚಿನ ಸೇವೆಯನ್ನು ಸಲ್ಲಿಸಲು ಭಗವಂತ ಅವರಿಗೆ ಹೆಚ್ಚಿನ ಆರೋಗ್ಯವನ್ನು ಕೊಡಲಿ ಎನ್ನುವ ಮೂಲಕ ನಾನು ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

***

# ನನ್ನವರು

● ಗಿರಿಜಾ ರಾಜಶೇಖರನ್

ಆತ್ಮೀಯ ಭಾರತಿ ಕಮಲೇಶ್ ನಮ್ಮ ಮನೆಗೆ ಬಂದಾಗ ನಮ್ಮವರ ವಿಚಾರಗಳನ್ನು ತಿಳಿಸಲು ಒತ್ತಾಯಿಸಿದರು. ಪರಿಚಯವೇ ಇಲ್ಲದ ಅವರೊಡನೆ ಮಾತನಾಡುವುದಕ್ಕೆ ಸ್ವಲ್ಪ ಸಂಕೋಚವೆನಿಸಿತು. ನಮ್ಮ ಯಜಮಾನರಾದ ಶ್ರೀ ಎಂ.ವಿ. ರಾಜಶೇಖರನ್ ಅವರು ಹಿಂದಿನ ದಿನವೇ 'ಅವರ ಹತ್ತಿರ ನೀನು ಮನಬಿಚ್ಚಿ ಮಾತನಾಡು ಯಾವುದನ್ನೂ ಮುಚ್ಚಿಟ್ಟುಕೊಳ್ಳಬೇಡ' ಎಂದು ಹೇಳಿದ್ದರು. ನನಗೆ ತಿಳಿದಿರುವ ವಿಚಾರಗಳನ್ನು ಅವರೊಂದಿಗೆ ಹಂಚಿಕೊಂಡಿರುವೆ.

ನಾನು, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ದಿ. ಎಸ್. ನಿಜಲಿಂಗಪ್ಪ ಅವರ ನಾಲ್ಕನೆಯ ಮಗಳು. ನಾನೂ ಸೇರಿದಂತೆ ನಮ್ಮ ತಂದೆಯವರಿಗೆ ಒಂಬತ್ತು ಜನ ಮಕ್ಕಳು. ಆರು ಹೆಣ್ಣು ಮಕ್ಕಳು, ಮೂರು ಜನ ಗಂಡು ಮಕ್ಕಳು. ನಮ್ಮ ತಾಯಿ ಪೂಜ್ಯರಾದ ಶ್ರೀಮತಿ ಮುರಿಗೆಮ್ಮ ಅವರು ನಮ್ಮಗಳನ್ನು ತುಂಬಾ ಶಿಸ್ತಿನಲ್ಲಿ ಬೆಳೆಸಿದರು. ನಮ್ಮ ತಂದೆಯವರ ತಾಯಿ-ನಮ್ಮಜ್ಜಿ ನಮ್ಮೊಂದಿಗಿದ್ದರು. ಅವರು ತುಂಬಾ ಸ್ವಾಭಿಮಾನಿ, ನಮ್ಮಗಳನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಅವರ ಪ್ರೀತಿಯ ಮತ್ತು ರಕ್ಷಣೆಯ ನೆರಳಲ್ಲಿ ನಾವೆಲ್ಲಾ ಬೆಳೆದದ್ದು ಗೊತ್ತಾಗಲೇ ಇಲ್ಲ. ನಮ್ಮ ತಾಯಿಯವರು ಮಾಡಿದ ಅಡುಗೆ ರುಚಿಯನ್ನು ಇಂದಿಗೂ ಮರೆಯುವಂತಿಲ್ಲ. ವಿಧ ವಿಧ ಅಡುಗೆಗಳನ್ನು ನಮ್ಮವ್ವ ತಯಾರಿಸುತ್ತಿದ್ದರು. ಹಾಗಾಗಿ ಅವರಿಗೆ ದಿನವೆಲ್ಲಾ ಅಡುಗೆಮನೆಯ ಕೆಲಸವೇ ಆಗುತ್ತಿತ್ತು. ಹೀಗೆ ತುಂಬು ಸಂಸಾರದಲ್ಲಿ ನಾನು ಬೆಳೆದದ್ದು. ನಾನು ಚಿಕ್ಕವಳಿದ್ದಾಗ ನಮ್ಮ ಅಪ್ಪಾಜಿಯವರು ಚನ್ನಪಟ್ಟಣದಿಂದ ಮರದ ಬೊಂಬೆಗಳನ್ನು ತಂದು ಕೊಟ್ಟಿದ್ದರು. ಅವುಗಳನ್ನು ಇಟ್ಟುಕೊಂಡು ನನ್ನ ಬಾಲ್ಯದ ಗೆಳತಿಯರಾದ ಪದ್ಮಿನಿ, ಜಯ, ಸುಶೀಲ ಮೊದಲಾದವರೊಡನೆ ಆಟವಾಡುತ್ತಿದ್ದೆ. ಹಾಗೆಯೇ ಒಂದೊಂದು ಸಾರಿ ಎಲ್ಲರೂ ಸೇರಿ ನಾಟಕವಾಡುತ್ತಿದ್ದೆವು. ಕಲ್ಲಾಟ, ಚರಾಘಾಟಾ, ಕುಂಟಾಬಿಲ್ಲೆ, ಕಲ್ಲುಮಣ್ಣಾಟ - ಹೀಗೆ ಯಾವಯಾವುದೋ ಆಟಗಳನ್ನಾಡುತ್ತಾ ನಮ್ಮ

ಮನೆಯಂಗಳದಲ್ಲಿ ಎಲ್ಲರೂ ಸೇರುತ್ತಿದ್ದೆವು. ನಮ್ಮ ಬಾಲ್ಯ ನೆನೆಸಿಕೊಂಡರೆ ಇಂದಿನ ಮಕ್ಕಳಿಗೆ ಆಟವಾಡುವುದಕ್ಕೆ ಸಮಯದ ಅವಕಾಶವೇ ಇಲ್ಲವಲ್ಲ ಎಂದೆನ್ನಿಸುತ್ತದೆ. ನಮ್ಮ ತಂದೆಯವರು ನಮ್ಮನ್ನೆಲ್ಲಾ ತುಂಬಾ ಪ್ರೀತಿಯಿಂದ ಬೆಳೆಸಿದರು. ಎಲ್ಲ ಮಕ್ಕಳ ಮೇಲೂ ಅವರದು ಸಮಾನ ಪ್ರೀತಿ. ಎಲ್ಲರೂ ಒಟ್ಟಾಗಿ ಅವರೊಂದಿಗಿರಬೇಕಾಗಿತ್ತು. ನಮ್ಮ ತಾಯಿಯವರಂತೂ ತಮ್ಮ ಪ್ರೀತಿಯ ಮಹಾಪೂರವನ್ನೇ ನಮ್ಮ ಮೇಲೆ ಧಾರೆಯೆರೆದಿದ್ದರು. ನಮ್ಮಜ್ಜಿ ಪೂಜ್ಯ ನೀಲಮ್ಮ ಅವರು ನಮ್ಮನ್ನು ಕೂಡಿಸಿಕೊಂಡು ಕತೆ ಹೇಳುತ್ತಿದ್ದರು. ನಮ್ಮೊಂದಿಗೆ ಚೌಕಾಬಾರ, ಪಗಡೆ ಮೊದಲಾದ ಆಟಗಳನ್ನು ಆಡುತ್ತಿದ್ದರು. ಎಲ್ಲಾ ಮೊಮ್ಮಕ್ಕಳಿಗೂ ತಲೆಗೆ ಎಣ್ಣೆ ಒತ್ತಿ ಸ್ನಾನ ಮಾಡಿಸುತ್ತಿದ್ದರು. ಆಗ ಟೈಮ್ ನೋಡಲು ಈಗಿನ ಹಾಗೆ ಗಡಿಯಾರಗಳಿರಲಿಲ್ಲ. ಆಕಾಶದತ್ತ ನೋಡಿ ನಿಖರವಾದ ಟೈಮ್ ಹೇಳುತ್ತಿದ್ದರು. ನನ್ನಣ್ಣ ಉಮಾಕಾಂತ್ ಈಗ ಧಾರವಾಡದಲ್ಲಿದ್ದಾರೆ, ರಾಜಣ್ಣ, ಗೌರಕ್ಕ ಚಿತ್ರದುರ್ಗದಲ್ಲಿದ್ದಾರೆ. ನಾನು ಅನಸೂಯ, ಗೌರಕ್ಕ ಮತ್ತು ಪ್ರತಿಭಾ ಬೆಂಗಳೂರಿನಲ್ಲಿದ್ದೇವೆ. ಪಾರ್ವತಕ್ಕ ಹುಬ್ಬಳ್ಳಿಯಲ್ಲಿದ್ದಾರೆ. ಪೂರ್ಣಿಮಾ ಕೆನಡಾದಲ್ಲಿದ್ದಾಳೆ. ನಮ್ಮಣ್ಣ ರಾಜಣ್ಣ ಅವಿವಾಹಿತರು. ನಮ್ಮ ತಂದೆಯವರೊಂದಿಗೆ ಚಿತ್ರದುರ್ಗದಲ್ಲಿದ್ದರು. ಈಗಲೂ ಅಲ್ಲಿಯೇ ಇದ್ದಾರೆ. ನಮ್ಮ ತಂದೆಯವರನ್ನು ಕೊನೆಗಾಲದಲ್ಲಿ ಅವರು ತುಂಬಾ ಚೆನ್ನಾಗಿ ನೋಡಿಕೊಂಡರು. ಈಗ ಅವರೊಬ್ಬರೇ ಚಿತ್ರದುರ್ಗದ ನಮ್ಮ ಮನೆಯಲ್ಲಿರಬೇಕಾಗಿದೆ. ನಾವುಗಳು ಅಕ್ಕತಂಗಿಯರೆಲ್ಲಾ ಒಬ್ಬೊಬ್ಬರು ಆರು ತಿಂಗಳುಗಳ ಕಾಲ ನಮ್ಮ ಅಣ್ಣ ರಾಜಣ್ಣನವರೊಂದಿಗೆ ಇರುವಂತಹ ಪರಿಪಾಠ ಇಟ್ಟುಕೊಂಡಿದ್ದೆವು. ಈಗಲೂ ಅದನ್ನ ನಡೆಸಿಕೊಂಡು ಬರುತ್ತಿದ್ದೇವೆ.

ನನ್ನ ವಿದ್ಯಾಭ್ಯಾಸ ಇಂಟರ್‌ಮೀಡಿಯಟ್‌ವರೆಗೆ ನಡೆಯಿತು. ನಮ್ಮ ಅಜ್ಜಿ ಸ್ಕೂಲಿನಿಂದ ನಾವುಗಳು ತಡವಾಗಿ ಮನೆಗೆ ಬಂದರೆ ಯಾಕೆ ತಡವಾಯಿತು ? ನಿಮ್ಮವ್ವನಿಗೆ ಹೇಳಿದ್ದೀರಾ ? (ತಾಯಿಯವರನ್ನು ಅವ್ವ ಎಂದು ಕರೆಯುತ್ತಿದ್ದರು) ಎಂದು ಕೈಯಲ್ಲಿ ಕೋಲು ಹಿಡಿದುಕೊಂಡು ವಿಚಾರಿಸುತ್ತಿದ್ದರು. ಎಲ್ಲರೂ ಶಾಲೆ ಬಿಟ್ಟಾಕ್ಷಣ ಸರಿಯಾಗಿ ಮನೆ ಸೇರಬೇಕಾಗಿತ್ತು. ನಮ್ಮ ಅಜ್ಜಿಗೆ ವಯಸ್ಸಾಗಿದ್ದರಿಂದ ಕೋಲು ಹಿಡಿದುಕೊಂಡೇ ಓಡಾಡುತ್ತಿದ್ದರು. ಅಜ್ಜಿಯ ಹತ್ತಿರ ತುಂಬಾ ಸಲಿಗೆ ಇತ್ತು. ನಮ್ಮ ಅಜ್ಜಿಯನ್ನು 'ಅಮ್ಮಾ' ಎಂದು ಕರೆಯುತ್ತಿದ್ದೆವು.

ಶ್ರೀ ಎಂ.ವಿ. ರಾಜಶೇಖರನ್ ಅವರು ನನ್ನಣ್ಣ ಉಮಾಕಾಂತನೊಡನೆ ದೆಹಲಿಯಲ್ಲಿ ರೂಂ ಮೇಟ್ ಆಗಿದ್ದರು. ನಮ್ಮಣ್ಣ ಮೂಲಕವೇ ನಮ್ಮ ಪರಿಚಯವಾದದ್ದು. ಅವರೂರು ಮರಳವಾಡಿಗೂ ಹೋಗಿದ್ದೆವು. ೧೯೬೫ರಲ್ಲಿ ನಮ್ಮ ಮದುವೆಯಾಯಿತು. ನಮ್ಮ ಅತ್ತೆಯವರು ಪೂಜ್ಯ ಬಸಮ್ಮ, ಮಾವನವರು ವೀರಶೆಟ್ಟಯ್ಯ ಅವರು. ಇವರದು ಕೃಷಿ ಪ್ರಧಾನವಾದ ಕುಟುಂಬ. ಇಬ್ಬರು ಗಂಡುಮಕ್ಕಳು. ನನ್ನವರೇ ದೊಡ್ಡವರು. ಇವರು ಮದುವೆಯಾಗಲು ಮೊದಲು ಒಪ್ಪದೇ ತಮ್ಮನವರಾದ ಕೀರ್ತಿಹಾಸನ್ ಅವರ ಮದುವೆ ಮಾಡಿದ್ದರು. ನನ್ನ ಓರಗಿತ್ತಿಯೂ ಸಹ ತುಂಬಾ ಒಳ್ಳೆಯವರು. ನಮ್ಮ ಮದುವೆಯಾದಾಗ ನಮ್ಮ

ಮಾವನವರಿರಲಿಲ್ಲ; ಅತ್ತೆಯವರಿದ್ದರು. ಅವರೂ ತುಂಬಾ ಒಳ್ಳೆಯವರು. ನನ್ನನ್ನು ತಮ್ಮ ಮಗಳಂತೆ ನೋಡಿಕೊಳ್ಳುತ್ತಿದ್ದರು. ಬಿಸಿ ಬಿಸಿ ಒಬ್ಬಟ್ಟು ಕಂಡರೆ ನನಗಿಷ್ಟವೆಂದು ತಿಳಿದು ಮಾಡಿ ಬಡಿಸುತ್ತಿದ್ದರು. ಹಾಗೆಯೇ ತಲೆಗೆ ಸ್ನಾನ ಮಾಡಿಸುತ್ತಿದ್ದರು. ನನ್ನನ್ನಂತೂ ತಾಯಿಯ ಮಮತೆಯಿಂದ ನೋಡಿಕೊಳ್ಳುತ್ತಿದ್ದರು. ನಮ್ಮ ಮದುವೆ ಚಿತ್ರದುರ್ಗದಲ್ಲಿ ತುಂಬಾ ವಿಜೃಂಭಣೆಯಿಂದ ನಡೆಯಿತು. ಮೊದಲು ನನ್ನವರು ಮದುವೆ ಬೇಡವೆಂದು ಹಠಹಿಡಿದ್ದರಂತೆ. ಅವರಿಗೆ ದೇಶಸೇವೆ ಮಾಡಬೇಕೆನ್ನುವ ಹಂಬಲವಿತ್ತು. ಹಾಗಾಗಿ ಮದುವೆ ಮಾಡಿಕೊಂಡರೆ ನನ್ನನ್ನು ಮದುವೆಯಾಗುವ ಹುಡುಗಿಯನ್ನ ಸುಖವಾಗಿ ನೋಡಿಕೊಳ್ಳುವುದು ಸಾಧ್ಯವಾಗುವುದಿಲ್ಲ ಎನ್ನುತ್ತಿದ್ದರಂತೆ. ಅವರ ತಾಯಿಯವರ ಒತ್ತಾಯಕ್ಕೆ ಮಣಿದು ನನ್ನನ್ನು ಒಪ್ಪಿ ಮದುವೆಯಾದರು. ಮದುವೆಯಾದ ಹೊಸದರಲ್ಲಿ ನನಗೆ ಈ ಮನೆಗೆ ಹೊಂದಿಕೊಳ್ಳುವುದು ಕಷ್ಟವಾಗಬಹುದು ಎನ್ನಿಸುತ್ತಿತ್ತು. ನಮ್ಮ ತಾಯಿಯ ಕಡೆಯ ನೆಂಟರೆಲ್ಲ ಗಿರಿಜಾ ಮುಖ್ಯಮಂತ್ರಿಗಳವರ ಮಗಳು, ಈ ಮನೆಗೆ ಹೇಗೆ ಹೊಂದಿಕೊಳ್ಳುವಳೋ ಎಂಬ ಆತಂಕ ಹೊಂದಿದ್ದರು. ಆದರೆ ನನ್ನ ಅತ್ತೆಯವರ ಅಕ್ಕರೆಯಲ್ಲಿ ಮುಳುಗಿದ ನಾನು ಅವರ ಆತಂಕವನ್ನು ಬಗೆಹರಿಸಿ ಎಲ್ಲರಲ್ಲೂ ಧೈರ್ಯ ಮೂಡಿಸಿದೆ.

ನನ್ನವರ ಪ್ರಾಥಮಿಕ ವಿದ್ಯಾಭ್ಯಾಸ ಮರಳವಾಡಿಯಲ್ಲೇ ನಡೆಯಿತು. ಮನೆಯಲ್ಲಿ ಹೆಣ್ಣುಮಕ್ಕಳಿಲ್ಲದ ಕಾರಣ ಹೆಂಗರುಳಿನ ಪರಿಚಯ ಅವರಿಗೆ ಇರಲಿಲ್ಲ. ನಮ್ಮ ಮದುವೆಯಾದ ಮೇಲೆ ತುಂಬಾ ಸುಧಾರಿಸಿದ್ದಾರೆ. ಒಂದು ವರುಷ ಮಾತ್ರ ನಾವು ಮರಳವಾಡಿಯಲ್ಲಿದ್ದೆವು. ನಂತರ ಬೆಂಗಳೂರಿಗೆ ಬಂದೆವು.

ಇವರದ್ದು ಸ್ವಲ್ಪ ಹಠದ ಸ್ವಭಾವ. ಸಂಸಾರದಲ್ಲಿ ಅಚ್ಚುಕಟ್ಟಿರಬೇಕು. ಶುಚಿ-ರುಚಿಯಾದ ವಿಧ ವಿಧ ಅಡುಗೆಗಳನ್ನು ದಿನವೂ ತಯಾರಿಸಬೇಕು. ಅವರೇಕಾಳಿನಲ್ಲಿ ಮಾಡುವಂತಹ ಎಲ್ಲಾ ಅಡುಗೆಗಳೂ ಅವರಿಗೆ ತುಂಬಾ ಇಷ್ಟ. ಅದರಲ್ಲೂ ಹಿದುಕಿದ ಅವರೇಕಾಳು ಸಾರು, ಮುದ್ದೆ ಎಂದರೆ ಪಂಚಪ್ರಾಣ. ಸಿಹಿತಿಂಡಿಗಳ ಮೇಲೂ ಒಲವು ಜಾಸ್ತಿ. ಜೊತೆಗೆ ಚಕ್ಕುಲಿ, ಕೋಡುಬಳೆ ಮುಂತಾದ ಕರಿದ ಕುರುಕಲು ತಿಂಡಿಗಳೆಂದರೆ ಬಹಳ ಅಚ್ಚು ಮೆಚ್ಚು. ಗಣೇಶನ ಹಬ್ಬದಲ್ಲಿ ಮಾಡುವ ಕರಿಗಡುಬು ಇವರಿಗೆ ತುಂಬಾ ಪ್ರಿಯ.

ನಾವು ೧೯೮೮ರಲ್ಲಿ ಸ್ವಂತ ಮನೆ ಕಟ್ಟಿದೆವು. ಇಂದಿಗೆ ಹದಿನಾರು ವರುಷಗಳಾದವು. ಮೊದಲು ಬಾಡಿಗೆ ಮನೆಯಲ್ಲಿದ್ದೆವು. ಅಲ್ಲಿಗೆ ನಮ್ಮೂರಿನಿಂದ ಎಲ್ಲರೂ ಬರುತ್ತಿದ್ದರು. ಆಸ್ಪತ್ರೆಗೆಂದು ಬರುವವರು ನಮ್ಮಲ್ಲಿಯೇ ಉಳಿಯುತ್ತಿದ್ದರು. ಅವರೆಲ್ಲರಿಗೂ ಊಟ ಉಪಚಾರವಿಲ್ಲದೆ ಕಳಿಸುವಂತಿರಲಿಲ್ಲ. ಇಂದಿಗೂ ಯಾರಾದರೂ ಫೋನು ಮಾಡಿದರೆ ಮನೆಗೆ ಬಂದು ಊಟ ಮಾಡಿಕೊಂಡು ಹೋಗಿ ಎಂದು ಆಹ್ವಾನಿಸುತ್ತಾರೆ. ಮೊದಲಿನಿಂದಲೂ ನಮ್ಮ ಮನೆಗೆ ಅತಿಥಿಗಳ ಆಗಮನ ಹೆಚ್ಚು. ಎಲ್ಲಾ ಜಾತಿಯವರೂ ನಮ್ಮಲ್ಲಿಗೆ ಬರುತ್ತಾರೆ. ನಾವೆಲ್ಲರೂ ಅವರೊಂದಿಗೆ ಸಂತೋಷದಿಂದ ಬೆರೆಯುತ್ತೇವೆ.

ನನ್ನವರಿಗೆ ದೇವರ ಮೇಲೆ ಅಚಲವಾದ ಶ್ರದ್ಧೆ, ಭಕ್ತಿಯಿದೆ. ಅವರೆಂದೂ ಕಂದಾಚಾರವನ್ನು

ಒಪ್ಪುವುದಿಲ್ಲ. ಮತಮಾನ್ಯಗಳಿಗೂ ಮಾನ್ಯತೆ ಕೊಡುವವರಲ್ಲ. ಅವರಲ್ಲಿ ಅಂಧಶ್ರದ್ಧೆಗೆ ಅವಕಾಶವೇ ಇಲ್ಲ. ಇಂದಿಗೂ ದೇವರ ಪೂಜೆ ಮಾಡಿಯೇ ದಿನದ ಕೆಲಸ ಪ್ರಾರಂಭ ಮಾಡುವರು.

ನಮಗೆ ರವಿಶಂಕರ್, ಸುಜಾತ, ಮಧುಶಂಕರ್ ಹಾಗೂ ಸಂಧ್ಯಾ ಇವರು ನಾಲ್ಕು ಮಕ್ಕಳು. ಎಲ್ಲರ ಮದುವೆಯೂ ಆಗಿದೆ. ಒಟ್ಟು ಐದು ಜನ ಮೊಮ್ಮಕ್ಕಳು ನಮಗಿದ್ದಾರೆ. ನನ್ನ ಹೆರಿಗೆಯನ್ನು ನಮ್ಮ ತಾಯಿಯವರೇ ಮಾಡಿದ್ದು. ಚಿತ್ರದುರ್ಗದಲ್ಲಿಯೇ ರವಿಶಂಕರ್, ಸುಜಾತ ಹುಟ್ಟಿದ್ದು. ಮಧುಶಂಕರ್ ಹಾಗೂ ಸಂಧ್ಯಾ ಅವರುಗಳು ಹುಟ್ಟಿದಾಗ ನಮ್ಮ ಅಪ್ಪಾಜಿ ಈ ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಮಧುಶಂಕರ್, ಸಂಧ್ಯಾ ಇಲ್ಲಿಯೇ ಹುಟ್ಟಿದ್ದು. ನಾವೆಲ್ಲರೂ ಈಗ ಒಟ್ಟಾಗಿಯೇ ನಮ್ಮ ಸ್ವಂತ ಮನೆಯಲ್ಲಿದ್ದೇವೆ.

ಮಕ್ಕಳ ಬೆಳವಣಿಗೆಯಲ್ಲಿ ನನ್ನವರು ಅಷ್ಟು ಗಮನ ನೀಡಲಿಲ್ಲ. ಏಕೆಂದರೆ ಅವರಿಗೆ ರಾಜಕೀಯದಲ್ಲಿ ಹೆಚ್ಚು ಆಸಕ್ತಿಯಿತ್ತು. ಎಲ್ಲಾ ಮಕ್ಕಳನ್ನೂ ಪದವಿ ತನಕ ಓದಿಸಿದರು. ಮಕ್ಕಳಿಗೆ ಶಿಸ್ತಾಗಿ ಇರಬೇಕು ಎಂದು ಬೋಧಿಸುತ್ತಿದ್ದರು. ಅದರಲ್ಲೂ ಹೆಣ್ಣು ಮಕ್ಕಳ ಬಗ್ಗೆ ಅವರಿಗೆ ಅಪಾರವಾದ ಪ್ರೀತಿ. ಯಾವಾಗಲೂ ಅವರಿಗೆ ಶಿಕ್ಷಣದ ಬಗ್ಗೆ ಪ್ರೋತ್ಸಾಹದ ನುಡಿಗಳನ್ನಾಡುತ್ತಿದ್ದರು. ಆದರೆ ನಮ್ಮ ಮಕ್ಕಳ್ಯಾರೂ ಶಿಕ್ಷಣದಲ್ಲಿ ಅಷ್ಟು ಮುಂದೆ ಬರಲಿಲ್ಲ. ಅದಕ್ಕೆ ಕಾರಣ ಇವರ ರಾಜಕೀಯ ಕ್ಷೇತ್ರದ ಆಸಕ್ತಿ ಎಂದು ಹೇಳಬಹುದು. ಚುನಾವಣಾ ಸಂದರ್ಭದಲ್ಲಿ ನಮ್ಮ ಮನೆಗೆ ತುಂಬಾ ಜನ ಬರುತ್ತಿದ್ದರು. ಆಗ ಪರೀಕ್ಷೆಯ ಸಮಯ ಬೇರೆ. ಬಹುಶಃ ನನ್ನ ಮಕ್ಕಳ ವಿದ್ಯಾಭ್ಯಾಸಕ್ಕೆ ಅದು ತೊಡಕಾಗಿರಬಹುದೆಂದು ಭಾವಿಸಿರುವೆನು.

ಚುನಾವಣೆಗೆ ನಿಂತಾಗ ಅನೇಕ ಸ್ನೇಹಿತರು ಇವರಿಗೆ ಸಹಾಯ ಮಾಡಿದ್ದರು. ಕೆಲವರು ಆರ್ಥಿಕವಾಗಿಯೂ ನೆರವು ನೀಡಿದ್ದರು. ಅವರುಗಳು ನೀಡಿದ ಹಣವನ್ನು ನನ್ನ ಕೈಲಿ ಕೊಟ್ಟು ಬೀರುವಿನಲ್ಲಿಡು, ನಾನು ಕೇಳಿದಾಗ ಕೊಡು ಎನ್ನುತ್ತಿದ್ದರು. ಚುನಾವಣೆಯಲ್ಲಿ ಸೋತಾಗಲೂ ಸಂಸಾರದ ಮೇಲೆ ಅದು ಪ್ರಭಾವ ಬೀರಲಿಲ್ಲ. ನಮ್ಮ ಅಪ್ಪಾಜಿ ಅವರು ಸಹ ಹೀಗೇ ಅಲ್ಲವೇ ! ಅಲ್ಲಿ ನಮ್ಮ ತಾಯಿಯವರು ಹೇಗೆ ಸಂಸಾರವನ್ನು ನಿಭಾಯಿಸಿಕೊಂಡು ಹೋಗುತ್ತಿದ್ದರೋ ಅದೇ ರೀತಿ ಇಲ್ಲಿ ನಾನು ಜವಾಬ್ದಾರಿಯನ್ನು ಹೊತ್ತುಕೊಂಡೆ. ಹಾಗಾಗಿ ನನಗೆ ಕಷ್ಟವೆನಿಸಲಿಲ್ಲ.

ನಮ್ಮ ಅಪ್ಪಾಜಿ "ನನ್ನ ಅಳಿಯ ನನಗೆ, ಸೈಡ್ ಹೊಡೆದಿದ್ದಾನೆ" ಎನ್ನುತ್ತಿದ್ದರು. ಆ ಮಾತನ್ನು ನಿಜವಾಗಿಸಲು ನನ್ನವರು ತುಂಬಾ ಶ್ರಮಿಸುತ್ತಿದ್ದವರು. ಆದರೆ ಈಗ ಪ್ರಾಮಾಣಿಕತೆಗೆ ಬೆಲೆ ಎಲ್ಲಿದೆ ? ಅಂತಹವರಿಗೆ ಅವಕಾಶಗಳೇ ಸಿಗುವುದಿಲ್ಲ. ಹಿಂದುಳಿದವರ ಏಳಿಗೆಗೆ ಏನು ಮಾಡಬೇಕು ? ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದರೆ ನಮ್ಮ ದೇಶ ಹೆಚ್ಚಿನ ಪ್ರಗತಿಯನ್ನು ಸಾಧಿಸಬಹುದು ಎಂಬುದು ಅವರ ತುಡಿತ. ಆದರೆ ಆ ತುಡಿತಕ್ಕೆ ಸರಿಯಾದ ಮಿಡಿತ ಎಂದು ದೊರೆಯುವುದೋ ಎಂದು ಕಾಯಬೇಕಾಗಿದೆ. ಚುನಾವಣೆಯಲ್ಲಿ ಸೋಲಾಯಿತು

ಮುಂದೇನು ಮಾಡಬೇಕು ಎಂದು ಅವರೆಂದೂ ಧೃತಿಕೆಟ್ಟಿಲ್ಲ. ಹಾಗೂ ನನ್ನೊಂದಿಗೆ ಅದನ್ನೆಂದೂ ಚರ್ಚಿಸಿಯೂ ಇಲ್ಲ.

ನಮ್ಮವರಿಗೆ ಭಯಂಕರ ಸಿಟ್ಟು. ಆ ಸಿಟ್ಟು ಬಂದಾಗ ನಾವುಗಳ್ಯಾರೂ ಅವರೆದುರು ಇರುವುದಿಲ್ಲ. ಆದರೆ ನಮ್ಮ ಮೊಮ್ಮಕ್ಕಳ ಮುಖ ನೋಡಿದಾಗ ಆ ಸಿಟ್ಟು ಕರಗಿಬಿಡುತ್ತದೆ. ತಮಗೆ ತೋಚಿದ್ದನ್ನು ತಕ್ಷಣವೇ ಮಾಡುವಂತಹ ಸ್ವಭಾವ ನಮ್ಮವರದ್ದು. ಆದರೆ ಆ ಸಿಟ್ಟು ಬಹಳ ಹೊತ್ತು ಇರುವುದಿಲ್ಲ. ಕ್ಷಣಮಾತ್ರದಲ್ಲಿ ಬೆಣ್ಣೆಯಂತೆ ಕರಗಿಬಿಡುತ್ತದೆ. ಅಡುಗೆ ಮಾಡುವಾಗೇನಾದರೂ ಸ್ವಲ್ಪ ವ್ಯತ್ಯಾಸವಾದರೆ ಅದು ಸಿಟ್ಟಿಗೆ ಎಡೆ ಮಾಡಿಕೊಡುವುದು. ಹಾಗಾಗಿ ನನ್ನ ಸೊಸೆಯಂದಿರಾದ ಉಮಾ ಮತ್ತು ಶಿಲ್ಪ ಅವರುಗಳಿಗೆ ಅಡುಗೆ ಮಾಡುವುದನ್ನು ಹೇಳಿಕೊಟ್ಟಿರುವೆ. ನನಗೀಗ ೬೪ ವರುಷಗಳಾಗಿವೆ. ಎಲ್ಲಾ ಜವಾಬ್ದಾರಿಯನ್ನೂ ಮಕ್ಕಳಿಗೆ ಹೇಳಿಕೊಟ್ಟಿರುವೆ. ನನ್ನ ಮಾರ್ಗದರ್ಶನದಂತೆ ಅವರುಗಳು ನಡೆಯುತ್ತಿದ್ದಾರೆ. ನಮ್ಮದು ಸುಖೀ ಕುಟುಂಬ. ಸಂಸಾರದ ಬಗ್ಗೆ ನಮ್ಮವರೆಂದೂ ತಲೆ ಕೆಡಿಸಿಕೊಂಡವರಲ್ಲ.

ಇಂತಹ ಪ್ರಾಮಾಣಿಕ ಮನುಷ್ಯನನ್ನು ಗುರುತಿಸಿ ಅವರಿಗೆ ಅಭಿನಂದನ ಗ್ರಂಥವನ್ನು ತರುತ್ತಿರುವ ಪೂಜ್ಯ ಡಾ। ದೇಜಗೌ, ಹಾರ್ನಳ್ಳಿ ರಾಮಸ್ವಾಮಿ ಹಾಗೂ ಗೊ.ರು.ಚ. ಅವರುಗಳಿಗೆ ಕೃತಜ್ಞತಾಪೂರ್ವಕವಾದ ವಂದನೆಗಳು.

***

# ಏಕಾಂಗಿ

ಪಾರ್ವತಮ್ಮ ಮಹಾಲಿಂಗಶೆಟ್ಟಿ

ರಾಜಶೇಖರನ್ ಅವರನ್ನು ನಾನು ಮೊದಲು ನೋಡಿದ್ದು ಅವರು ನಮ್ಮ ಮನೆಗೆ ನನ್ನ ತಂಗಿ ಗಿರಿಜಾಳನ್ನು ನೋಡಲು ಬಂದಿದ್ದಾಗ. ದಾಸಪ್ಪನವರ ತಂಗಿ ಕೃಷ್ಣಮ್ಮನವರು ನಮಗೆ ರಾಜಶೇಖರನ್‌ರವರ ವಿಚಾರ ಹೇಳಿದ್ದರು. ನಮ್ಮವರೇ ಆಗಿದ್ದರೂ ರಾಜಶೇಖರನ್‌ರವರು ಹೆಚ್.ಸಿ. ದಾಸಪ್ಪನವರ ಮನೆಯಲ್ಲಿ ಮನೆಯ ಮಗನಾಗಿ ಬೆಳೆದಿದ್ದರು. ಯಶೋಧರಮ್ಮ ದಾಸಪ್ಪನವರಂತೂ ರಾಜಶೇಖರನ್ ಹಾಗೂ ತುಳಸೀ ದಾಸಪ್ಪನವರಲ್ಲಿ ಭಿನ್ನತೆ ಕಂಡವರಲ್ಲ. ಚಿತ್ರದುರ್ಗಕ್ಕೆ ಹೆಣ್ಣು ನೋಡಲು ಬಂದ ರಾಜಶೇಖರನ್ ತುಂಬಾ ಸ್ಫುರದ್ರೂಪಿ ಆಗಿದ್ದರು. ಸದಾ ನಗುಮುಖ, ಎಲ್ಲರನ್ನೂ ಪ್ರೀತಿಯಿಂದ ಮಾತನಾಡಿಸುವ ಅವರ ಸ್ವಭಾವ ನಮಗೆ ಬಹು ಬೇಗನೆ ಹಿಡಿಸಿತು. ನಮ್ಮ ಮನೆಯಲ್ಲಿ ನನ್ನ ತಂಗಿ ಗಿರಿಜಾಳದು ವಿಶಿಷ್ಟವಾದ ಸ್ವಭಾವ. ನಮ್ಮ ತಂದೆ-ತಾಯಿ ಆಕೆಯನ್ನು 'ನಿರಾಡಂಬರ ಸುಂದರಿ' ಎಂದು ಕರೆಯುತ್ತಿದ್ದರು. ಯಾವುದೇ ಒಡವೆಯನ್ನು ಅವಳು ಹಾಕಿಕೊಳ್ಳುತ್ತಿರಲಿಲ್ಲ. ಆದರೂ ಸೌಮ್ಯ ಸ್ವಭಾವದ ಆಕೆ ತನ್ನ ಸಹಜ ಕಳೆಯಿಂದ ಎಲ್ಲರನ್ನೂ ಸೆಳೆಯುತ್ತಿದ್ದಳು.

ಮದುವೆ ಆದ ಮೇಲೆ ಹೆಣ್ಣು ಒಪ್ಪಿಸಿ ಕೊಡಲು ನಾವು ಮರಳವಾಡಿಗೆ ಹೋಗಿದ್ದೆವು. ಅಷ್ಟೊತ್ತಿಗೆ ರಾಜಶೇಖರನ್‌ರವರ ತಂದೆ ಇರಲಿಲ್ಲ. ಅವರ ತಾಯಿ ಇದ್ದರು. ಅವರ ತಮ್ಮನಿಗೆ ಆಗಲೇ ಮದುವೆಯಾಗಿ ಮೂರು ವರ್ಷದ ಹೆಣ್ಣುಮಗು ಇತ್ತು. ನಾವು ಹೋದ ದಿನ ಊರಿನವರಿಗೆ ಸಂಭ್ರಮವೋ ಸಂಭ್ರಮ. ಆ ಹಳ್ಳಿಯ ಜನ ನವ ವಧು-ವರರನ್ನು ಸ್ವಾಗತಿಸಿದ ರೀತಿಯಂತೂ ಇಂದಿಗೂ ಮರೆಯಲಾಗದಂತಹ ಸವಿನೆನಪಾಗಿದೆ. ಮಾರನೆಯ ದಿನ ರಾಜಶೇಖರನ್ ಅವರ ಮನೆಯಲ್ಲಿ ಊರಿನವರಿಗೆ ಊಟ ಇಟ್ಟುಕೊಂಡಿದ್ದರು. ಆ ಊರಿನವರಿಗೆ ಕೊಟ್ಟ ಊಟವನ್ನು ನೆನೆಸಿಕೊಂಡರೆ ರಾಜಶೇಖರನ್‌ರವರ ಕುಟುಂಬದ ಬಗ್ಗೆ ಆ ಸುತ್ತಮುತ್ತಲಿನ ಗ್ರಾಮದವರಿಗಿದ್ದ ಪ್ರೀತಿ ವಿಶ್ವಾಸಗಳು ವೇದ್ಯವಾಗುತ್ತದೆ. ನಾಲ್ಕು ಕೊಪ್ಪರಿಗೆಯಲ್ಲಿ ಮುದ್ದೆಯನ್ನು ತೊಳಸುತ್ತಿದ್ದ ಆ ದೃಶ್ಯ ಇನ್ನೂ ನನ್ನ ಕಣ್ಣ ಮುಂದೆ ಇದೆ. ರಸ್ತೆಯಲ್ಲಿ ಎಲೆ ಹಾಕಿ ಊಟ ಬಡಿಸಿದ್ದರು. ಎಷ್ಟು ಜನ

ಊಟ ಮಾಡಿದರು, ಏನು ಎಂಬುದೂ ಕೂಡ ನೆನಪಿಲ್ಲ. ಬಹುಮಟ್ಟಿಗೆ ಆ ಭಾಗದ ಎಲ್ಲಾ ರೈತಾಪಿ ಜನರು ಆ ಊಟಕ್ಕೆ ಬಂದು ವಧು-ವರರನ್ನು ಹರಸಿ ಹೋಗಿದ್ದರು.

ನಮ್ಮ ಮನೆಯಲ್ಲಿ ಹೆಣ್ಣುಮಕ್ಕಳಿಗೆ ಒಡವೆ ವ್ಯಾಮೋಹ ಇರಲಿಲ್ಲ. ನಮ್ಮ ತಾಯಿ, ಅಜ್ಜಿ ಆ ರೀತಿ ನಮ್ಮನ್ನು ಬೆಳೆಸಿದ್ದರು. ಮದುವೆ ಸಂದರ್ಭದಲ್ಲಿ ರಾಜಶೇಖರನ್ ಮನೆಯವರು ನಮ್ಮ ತಂಗಿಗೆ ಭರ್ಜರಿ ಆಭರಣಗಳನ್ನು ಕೊಟ್ಟಿದ್ದರು. ಮನಸ್ಸಿಲ್ಲದಿದ್ದರೂ ಗಿರಿಜಾ ಆ ಆಭರಣಗಳನ್ನು ಹಾಕಿಕೊಂಡಿರಬಹುದು. ರಾಜಶೇಖರನ್‌ರವರ ತಾಯಿ ಬಸಮ್ಮನವರು ವಿಶಾಲ ಮಾತೃ ಹೃದಯವುಳ್ಳ ಮಹಾತಾಯಿ. ನಾವು ಒಟ್ಟು ಕುಟುಂಬದಲ್ಲಿ ಬೆಳೆದ ಕಾರಣ ಗಿರಿಜಾಳಿಗೆ ಮನೆಯ ಕೆಲಸ ಕಾರ್ಯಗಳು ಅಷ್ಟೇನೂ ಬರುತ್ತಿರಲಿಲ್ಲ. ಅವರೇ ನನ್ನ ತಂಗಿಗೆ ಪ್ರತಿಯೊಂದನ್ನು ಹೇಳಿಕೊಟ್ಟರು. ಆಕೆ ಯಾವ ಪರಿಸರಕ್ಕೆ ಹೋಗುತ್ತಾಳೋ ಆ ಪರಿಸರಕ್ಕೆ ತಕ್ಕಂತೆ ಹೊಂದಿಕೊಳ್ಳುತ್ತಾಳೆ. ನಮ್ಮ ಮನೆಯಲ್ಲಿ ದೇವರು-ದಿಂಡರ ಬಗ್ಗೆ ಅಷ್ಟಕ್ಕಷ್ಟೆ. ಆದರೆ, ರಾಜಶೇಖರನ್‌ರವರ ಮನೆಯಲ್ಲಿ ಈ ಬಗ್ಗೆ ಹೆಚ್ಚುಗಾರಿಕೆ ಇದೆ. ದೇವರ ಪಾತ್ರೆಯನ್ನು ಹೇಗೆ ತೊಳೆಯಬೇಕು ಎಂಬುದಕ್ಕೂ ಒಂದು ನಿಯಮ ಇದೆ. ಗಿರಿಜಾ ಅಂದು ತಮ್ಮ ಅತ್ತೆ ಹೇಳಿಕೊಟ್ಟ ಸಂಪ್ರದಾಯವನ್ನು ಇನ್ನೂ ಮುರಿದಿಲ್ಲ. ಆಕೆ ಬಹುಬೇಗ ಆ ಮನೆಯ ಮೆಚ್ಚಿನ ಸೊಸೆಯಾದಳು. ರಾಜಶೇಖರನ್ ಅವರಿಗೆ ಅವರ ತಾಯಿಯನ್ನು ಕಂಡರೆ ತುಂಬಾ ಪ್ರೀತಿ. ಗಿರಿಜಾಳ ಈ ನಡೆ ಅವರಿಗೆ ಹಿಡಿಸಿ ಬಹುಬೇಗ ಆಕೆಯನ್ನು ಮೆಚ್ಚಿಕೊಂಡಿರಬಹುದು.

ರಾಜಶೇಖರನ್‌ರವರಿಗೆ ವಿದ್ಯಾರ್ಥಿ ದೆಸೆಯಿಂದಲೂ ಅನೇಕರ ಸ್ನೇಹ ಸಂಬಂಧ ಇದೆ. ನಮ್ಮ ಮನೆಯ ಅಳಿಯ ಆಗುವ ಮೊದಲೇ ಅವರಿಗೆ ಎನ್.ಡಿ. ತಿವಾರಿ, ಬನ್ಸಿಲಾಲ್, ದಿನೇಶ್‌ಸಿಂಗ್ ಮೊದಲಾದವರ ಸ್ನೇಹವಿತ್ತು. 'ನಿಜಲಿಂಗಪ್ಪನವರ ಅಳಿಯ' ಎಂದೇ ಅರವತ್ತರ ದಶಕದಲ್ಲಿ ಅವರಿಗೆ ಸರಿಯಾದ ಅವಕಾಶ ದೊರೆಯಲಿಲ್ಲ. ೧೯೬೭ರಲ್ಲಿ ಅವರು ಲೋಕಸಭೆಗೆ ಆಯ್ಕೆಯಾದರು. ಲೋಕಸಭೆಗೆ ಮಧ್ಯಂತರ ಚುನಾವಣೆ ಬಂದ ಕಾರಣ ಪೂರ್ಣ ಅವಧಿ ಕೆಲಸ ಮಾಡಲು ಆಗಲಿಲ್ಲ. ಆಮೇಲೆ ೧೦-೨೦ ವರ್ಷ ತಾತ್ವಿಕ ಸಿದ್ಧಾಂತದ ಹಿನ್ನೆಲೆಯಲ್ಲಿ ವಿರೋಧ ಪಕ್ಷದ ಜೊತೆ ತಮ್ಮನ್ನು ಗುರುತಿಸಿಕೊಂಡರು. ಹೀಗಾಗಿ ರಾಜಶೇಖರನ್‌ರವರಿಗೆ ರಾಜಕಾರಣದಲ್ಲಿ ಸಮರ್ಪಕವಾದ ಅವಕಾಶ ದೊರಕಿಲ್ಲ. ಅವರಿಗೆ ಇರುವ ಅನುಭವ ಕರ್ನಾಟಕದ ಸಾರ್ವಜನಿಕ ಜೀವನಕ್ಕೆ ಸರಿಯಾದ ರೀತಿಯಲ್ಲಿ ಬಳಕೆಯಾಗಿಲ್ಲ.

ನನ್ನ ಕೊನೆಯ ತಂಗಿ ಪೂರ್ಣಿಮಾ ೩೨ ವರ್ಷಗಳಿಂದ ಕೆನಡಾದ ಟೊರಾಂಟೊದಲ್ಲಿ ವಾಸವಾಗಿದ್ದಾಳೆ. ರಾಜಶೇಖರನ್ ತಮ್ಮ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಮೂಲಕ ಕೆನಡಾಕ್ಕೆ ಹೋದಾಗ ಅವರ ಮನೆಗೆ ಹೋಗುತ್ತಾರೆ. ರಾಜಶೇಖರನ್ ಹೋದಾಗೆಲ್ಲಾ ಆ ಪ್ರಾಂತ್ಯದ ಕ್ಯಾಬಿನೆಟ್ ಮಿನಿಸ್ಟರ್ ಇವರನ್ನು ಭೇಟಿಮಾಡಿ, ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳಲು ಇವರ ಸಮಯವನ್ನು ಕೇಳುತ್ತಾರೆ. ಎಷ್ಟೋ ಸಂದರ್ಭದಲ್ಲಿ ಆ ಸಚಿವರುಗಳೇ ಇವರ ಮನೆಗೆ ಬಂದು ಗಂಟೆಗಟ್ಟಲೆ ಚರ್ಚೆ ಮಾಡಿದ್ದೂ ಉಂಟು. ಈ ಪ್ರಸಂಗವನ್ನು ಪೂರ್ಣಿಮಾ ಹೇಳಿದಾಗೆಲ್ಲಾ ನನಗೆ ತುಂಬಾ

ದುಃಖವಾಗುತ್ತದೆ. ರಾಜಶೇಖರನ್‌ರವರ ವಿದ್ವತ್ತು ಹಾಗೂ ಅನುಭವಗಳನ್ನು ನಮ್ಮ ಜನ ಬಳಸಿಕೊಳ್ಳಲಿಲ್ಲ ಎನ್ನುವ ಸಂಕಟ ನನ್ನದು. ರಾಜಶೇಖರನ್‌ರವರು ತುಂಬಾ ಶ್ರಮವಹಿಸಿ ಕೃಷಿ, ಗ್ರಾಮೀಣಾಭಿವೃದ್ಧಿ ಹಾಗೂ ಯುವ ಜನಾಂಗದ ಕ್ಷೇತ್ರಗಳಲ್ಲಿ ಅಪಾರ ವಿದ್ವತ್ತು ಗಳಿಸಿದ್ದಾರೆ. ಇದಕ್ಕಾಗಿ ಅವರು ತಮ್ಮ ವೈಯಕ್ತಿಕ ಸುಖ ಸಂತೋಷಗಳನ್ನು ತ್ಯಾಗಮಾಡಿದ್ದಾರೆ. ಹಾರ್ಟ್ ಆಪರೇಷನ್ ಆಗುವ ಮೊದಲಂತೂ ಅವರು ದೇಶ ವಿದೇಶಗಳನ್ನು ಸುತ್ತುತ್ತಲೇ ಇದ್ದರು. ಇಂತಹ ಓಡಾಟದಿಂದಲೇ ಅವರಿಗೆ ವಿವಿಧ ದೇಶಗಳಲ್ಲಿ ಆಗಿರುವ ಅಭಿವೃದ್ಧಿ ಮನವರಿಕೆಯಾಗಿದೆ. ಈ ಅನುಭವದೊಡನೆ ಅವರು ಹೊಸ ಹೊಸ ಸಿದ್ಧಾಂತಗಳನ್ನು ಅಭಿವೃದ್ಧಿ ಕ್ಷೇತ್ರಗಳಲ್ಲಿ ಪ್ರಯೋಗಮಾಡಲು ಸಾಧ್ಯವಾಗಿದೆ.

ರಾಜಶೇಖರನ್‌ರವರು ಹಳೆಯ ಜಮೀನ್ದಾರರಿದ್ದ ಹಾಗೆ. ದೇಶ ವಿದೇಶಗಳನ್ನು ಸುತ್ತಿದ್ದರೂ ಅವರ ಮನೋಭಾವ ಬದಲಾಗಿಲ್ಲ. ಅವರು ತಮ್ಮ ಹೆಂಡತಿಯೊಡನೆ ಎಂದೂ ಕಷ್ಟಗಳನ್ನು ಹಂಚಿಕೊಂಡಿಲ್ಲ. ಅದಕ್ಕೆ ಕಾರಣ ತನ್ನ ನೋವನ್ನು ಆಕೆಗೆ ಹೇಳಿ ಅವರ ಮನಸ್ಸಿಗೆ ಏಕೆ ತ್ರಾಸ ಮಾಡಬೇಕು ಎಂಬುದು. ಒಂದು ಅರ್ಥದಲ್ಲಿ ರಾಜಶೇಖರನ್‌ರವರು ಏಕಾಂಗಿ. ಸಾರ್ವಜನಿಕ ಕ್ಷೇತ್ರದಲ್ಲೂ ಅವರ ದುಃಖ-ದುಮ್ಮಾನಗಳನ್ನು ಅರಿಯುವ ಸಹಚರ ಅವರಿಗೆ ದೊರಕಿಲ್ಲ.

ರಾಜಶೇಖರನ್‌ರವರು ತಮ್ಮ ಅಧಿಕಾರ ಸ್ಥಾನದಿಂದ ದೊರೆತ ಯಾವುದೇ ಪ್ರಯೋಜನವನ್ನು ತಮ್ಮ ಕುಟುಂಬಕ್ಕೆ ಕೊಟ್ಟಿಲ್ಲ. ಅವರು ಸ್ವಲ್ಪ ಮನಸ್ಸು ಮಾಡಿದ್ದರೂ ಮಕ್ಕಳನ್ನು ಇನ್ನೂ ಉನ್ನತ ಸ್ಥಾನಕ್ಕೆ ತರಬಹುದಾಗಿತ್ತು. ಮಕ್ಕಳ ಮೇಲೆ ಅವರಿಗೆ ಅಪಾರವಾದ ಪ್ರೀತಿ. ಅದರಲ್ಲೂ ಹೆಣ್ಣು ಮಕ್ಕಳನ್ನು ಕಂಡರೆ ಹಿಡಿಸಲಾಗದಷ್ಟು ಹಿಗ್ಗು. ತಮಗೆ ದೊರೆತ ಸಾಮಾಜಿಕ ಸ್ಥಾನಮಾನದಿಂದ ಅವರಿಗೆ ಸಹಾಯ ಮಾಡಬೇಕು ಎನ್ನುವ ಸಂದರ್ಭ ಬಂದಾಗ ಇವರಿಗೆ ತೊಳಲಾಟ ಪ್ರಾರಂಭವಾಗುತ್ತದೆ. ಎಲ್ಲಾ ಮಕ್ಕಳಂತೆ ತಮ್ಮ ಮಕ್ಕಳು ಕೂಡ ಸರದಿಯಲ್ಲೇ ಮುಂದೆ ಬರಲಿ ಅಂತ ತೀರ್ಮಾನಿಸುತ್ತಾರೆ. ಇಂತಹ ಮನೋಭಾವ ಈಗಿನ ಎಷ್ಟು ಜನ ರಾಜಕಾರಣಿಗಳಲ್ಲಿದೆ?

ನಮ್ಮ ತಂದೆ ನಿಜಲಿಂಗಪ್ಪನವರಂತೆ ರಾಜಶೇಖರನ್ ಸಹ ತಾತ್ವಿಕ ಬದ್ಧತೆಯುಳ್ಳವರು. ತಮಗೆ ಬಂದ ಅವಕಾಶವನ್ನು ಸ್ನೇಹಿತರಿಗೆ ಬಿಟ್ಟುಕೊಡುವಂತಹ ಉದಾರಿಗಳು. ಬೇರೆಯವರಿಗೆ ಒಳ್ಳೆಯದಾಗುತ್ತದೆ ಎಂದರೆ ಅವರು ಯಾರಿಗೆ ಬೇಕಾದರೂ ದೂರವಾಣಿ ಮಾಡಿ ಸಂಬಂಧಪಟ್ಟವರಿಗೆ ಹೇಳುತ್ತಾರೆ. ತಮ್ಮ ವಿಚಾರ ಬಂದಾಗ ಅಗತ್ಯಕ್ಕಿಂತ ಹೆಚ್ಚು ತಟಸ್ಥರಾಗುತ್ತಾರೆ. ಇಂತಹ ನಿಲುವಿನಿಂದ ಅವರ ಕುಟುಂಬ ವರ್ಗ ಸಾಕಷ್ಟು ನೋವು ಅನುಭವಿಸಿದೆ ಎನ್ನುವುದು ನನ್ನ ಭಾವನೆ. ಆದರೆ ರಾಜಶೇಖರನ್‌ರವರು ಎಂದೂ ತಮ್ಮ ನಡತೆಯನ್ನು ಬದಲಾಯಿಸಿಕೊಳ್ಳುವವರಲ್ಲ. ಅದನ್ನು ಸಜ್ಜನರು ಗುರುತಿಸಿದ್ದರಷ್ಟೇ ಸಾಕು ಎಂಬುದು ನನ್ನ ಅನಿಸಿಕೆ.

***

# ಪ್ರಗತಿಪರ ಮನೋಧರ್ಮದ ನನ್ನ ಭಾವ

ಪ್ರೊ। ಉಮಾಕಾಂತ

ನನ್ನ ತಂಗಿಯ ಯಜಮಾನರೂ ಸಹಮಿತ್ರರೂ ರಾಜಶೇಖರನ್‌ರವರನ್ನು ಕುರಿತು ಪ್ರೊ. ದೇ. ಜವರೇಗೌಡ, ಗೊ.ರು. ಚನ್ನಬಸಪ್ಪ ಅವರುಗಳು ಅಭಿನಂದನ ಗ್ರಂಥ ತರುತ್ತಿರುವ ವಿಚಾರ ತಿಳಿದು ಸಂತೋಷವಾಯಿತು. ಇಂದಿನ ದಿನಗಳಲ್ಲಿ ಅಧಿಕಾರ ಸ್ಥಾನ ಇಲ್ಲದ ಗುಣವಂತನನ್ನು ಮೆಚ್ಚುವ ಸಜ್ಜನರೂ ಇದ್ದಾರೆಂಬ ಸಂತೃಪ್ತಿ ನನ್ನದು.

ಶ್ರೀ ಎಂ.ವಿ.ರಾಜಶೇಖರನ್ ಹಾಗೂ ನನ್ನ ಬಾಂಧವ್ಯ ಸುಮಾರು ಐದು ದಶಕಗಳಿಗೂ ಹಿಂದಿನದು. ೧೯೫೨ರಲ್ಲಿ ನಾನು ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಎಂ.ಎಸ್‌ಸಿ. ಪದವಿ ವ್ಯಾಸಂಗ ಮಾಡುತ್ತಿದ್ದೆ. ಆಗ ನಮ್ಮ ತಂದೆ ಪೂಜ್ಯ ಎಸ್.ನಿಜಲಿಂಗಪ್ಪನವರು ಲೋಕಸಭಾ ಸದಸ್ಯರಾಗಿದ್ದರು. ಅದೇ ವೇಳೆಯಲ್ಲಿ ರಾಜಶೇಖರನ್‌ರವರು ಮತ್ತು ತುಳಸೀ ದಾಸಪ್ಪನವರು ದೆಹಲಿಯಲ್ಲಿ ಕಾನೂನು ವ್ಯಾಸಂಗವನ್ನು ಕೈಗೊಂಡಿದ್ದರು. ನಾವು ಕನ್ನಡನಾಡಿನ ವಿದ್ಯಾರ್ಥಿಗಳಲ್ಲವೆ? ದೂರದ ಪ್ರದೇಶದಲ್ಲಿ ಪರಿಚಯವಾದ ಕೂಡಲೇ ತುಂಬಾ ಆತ್ಮೀಯರಾಗಿಬಿಟ್ಟೆವು. ಆಗ ರಾಜಶೇಖರನ್‌ರವರು ತುಳಸಿಯವರ ತಂದೆ ಹೆಚ್.ಸಿ.ದಾಸಪ್ಪನವರ ಮನೆಯಲ್ಲಿದ್ದರು. ನಾವು ಪ್ರತಿ ಭಾನುವಾರ ರಾಮಕೃಷ್ಣ ಆಶ್ರಮದ ಸ್ವಾಮಿ ರಂಗನಾಥಾನಂದ ಅವರು ವೇದಾಂತ ದರ್ಶನದ ಬಗ್ಗೆ ನೀಡುತ್ತಿದ್ದ ಉಪನ್ಯಾಸ ಕಾರ್ಯಕ್ರಮಕ್ಕೆ ತಪ್ಪದೇ ಭೇಟಿ ಕೊಡುತ್ತಿದ್ದೆವು. ಸ್ವಾಮಿ ರಂಗನಾಥಾನಂದ ಅವರು ಮೈಸೂರಿನಲ್ಲಿ ರಾಮಕೃಷ್ಣ ಆಶ್ರಮ ಬೆಳೆಸುವುದರಲ್ಲಿ ಮಹತ್ವದ ಪಾತ್ರ ವಹಿಸಿದ್ದರು. ಅವರಿಗೆ ಮೈಸೂರಿನ ಬಗ್ಗೆ ತುಂಬಾ ಪ್ರೇಮ. ಅವರನ್ನು ಸಂದರ್ಶಿಸಿ ಅವರ ಉಪನ್ಯಾಸ ಕೇಳುವ ಅವಕಾಶವನ್ನು ಪ್ರತಿ ಭಾನುವಾರ ನಾವು ಯಾರೂ ತಪ್ಪಿಸಿಕೊಳ್ಳುತ್ತಿರಲಿಲ್ಲ.

ರಾಜಶೇಖರನ್‌ರವರು ತುಂಬಾ ಸಭ್ಯ ವಿಧ್ಯಾರ್ಥಿ. ಮುಖದಲ್ಲಿ ಸದಾ ಚೇತೋಹಾರಿಯಾದ ನಗು. ಒಂದು ನಿಮಿಷವನ್ನೂ ವ್ಯರ್ಥಮಾಡದೆ ತಮ್ಮನ್ನು ಯಾವುದಾದರೂ ಕೆಲಸದಲ್ಲಿ ತೊಡಗಿಸಿಕೊಳ್ಳುವ ಅನನ್ಯ ಸ್ವಭಾವ. ಆ

ಕಾಲದಲ್ಲೂ ಕೆಲವು ವಿದ್ಯಾರ್ಥಿಗಳು ಹುಡುಗಿಯರನ್ನು ಕಂಡರೆ ಲಘುವಾಗಿಯಾದರೂ ಚುಡಾಯಿಸುತ್ತಿದ್ದರು. ಉದಾಹರಣೆಗೆ, ದಪ್ಪಗಿರುವ ಹುಡುಗಿಯನ್ನು ಕಂಡರೆ 'ಈಕೆಯನ್ನು ನೋಡಲು ಎರಡು ಕಣ್ಣು ಸಾಲವು' ಎಂಬ ಮಾತು ಹೊರ ಬರುತ್ತಿತ್ತು. ಆದರೆ, ರಾಜಶೇಖರನ್ ಎಂದೂ ಲಘುವಾಗಿ ಮಾತನಾಡುತ್ತಿರಲಿಲ್ಲ ಅಥವಾ ಅನವಶ್ಯಕವಾಗಿ ಒಂದು ಶಬ್ದವನ್ನೂ ಬೇರೆಯವರ ಬಗ್ಗೆ ಮಾತನಾಡಿದ್ದನ್ನು ನಾನು ಆ ಕಾಲದಲ್ಲಿ ಕಂಡಿಲ್ಲ. ಎಲ್ಲಾ ಜವಾಬ್ದಾರಿಯು ತಮ್ಮೊಬ್ಬರ ಮೇಲಿದೆ ಎಂದು ಭಾವಿಸಿಕೊಂಡು ಅಧ್ಯಯನ ಹಾಗೂ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಮರಳವಾಡಿಯಲ್ಲಿ ಅವರ ತಂದೆ ಇದೇ ಸಮಯದಲ್ಲಿ ನಿಧನರಾದ ಕಾರಣ ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸಿ ತಮ್ಮ ಊರಿಗೆ ವಾಪಸ್ಸಾದರು.

ಚಿತ್ರದುರ್ಗದಲ್ಲಿ ನಮ್ಮ ಔಟ್ ಹೌಸ್‌ನಲ್ಲಿ ಹೆಚ್.ಸಿ. ದಾಸಪ್ಪನವರ ತಂಗಿ ಶ್ರೀಮತಿ ಕೃಷ್ಣಮ್ಮ ಇದ್ದರು. ಅವರು ಚಿತ್ರದುರ್ಗಕ್ಕೆ ಹೆಡ್‌ಮಿಸ್ ಆಗಿ ಬಂದಿದ್ದರು. ಹೆಚ್.ಸಿ.ದಾಸಪ್ಪನವರು "ನಮ್ಮ ತಂಗಿ ನಿಮ್ಮ ಆಶ್ರಯದಲ್ಲಿ ಇರಲಿ, ಇದ್ದರೆ ನಮಗೆ ನೆಮ್ಮದಿ" ಎಂದು ನಮ್ಮನೆಗೆ ತಂದು ಬಿಟ್ಟಿದ್ದರು. ಅವರು ನಮ್ಮ ಅಕ್ಕ-ತಂಗಿಯರನ್ನೆಲ್ಲಾ ಸ್ವಂತ ಮಕ್ಕಳಂತೆ ಕಾಣುತ್ತಿದ್ದರು. ನಮ್ಮ ತಾಯಿಗೆ ಒಳ್ಳೆಯ ಸ್ನೇಹಿತರಾದರು. ನನ್ನ ಎರಡನೇ ತಂಗಿ ಗಿರಿಜಾಳನ್ನು ಕಂಡ ಮೇಲೆ ಇವರು ನಮ್ಮ ರಾಜಶೇಖರನ್‌ಗೆ ಸರಿ ಹೋಗುತ್ತಾಳೆ, ಒಳ್ಳೆಯ ಬಾಳಸಂಗಾತಿಯಾಗುತ್ತಾಳೆ ಎಂದು ನಿರ್ಣಯಿಸಿಬಿಟ್ಟಿದ್ದರು. ನಮ್ಮ ಕುಟುಂಬದಲ್ಲೇ ಗಿರಿಜಾ ತುಂಬಾ ಸೌಮ್ಯ ಸ್ವಭಾವದ ಹುಡುಗಿ. ನಮ್ಮ ತಂದೆ ಯಾವಾಗಲೂ ಆಕೆಯನ್ನು 'ನಿರಾಭರಣ ಸುಂದರಿ' ಎಂದು ಕರೆಯುತ್ತಿದ್ದರು. ಆಕೆಯ ಪ್ರೇರಣೆಯಿಂದ ಅವರು ಒಂದು ರೇಖಾಚಿತ್ರವನ್ನು ರಚಿಸಿದ್ದಿರಬೇಕು. ನಮ್ಮ ಕುಟುಂಬದಲ್ಲಿ ಹಣ ಹಾಗೂ ಒಡವೆಗೆ ಅಷ್ಟು ಮಹತ್ವ ಇರಲಿಲ್ಲ. ಗಾಂಧೀಜಿಯವರು ಬೋಧಿಸಿದ ಸರಳತೆ ನಮ್ಮ ಕುಟುಂಬದಲ್ಲಿ ಹಾಸುಹೊಕ್ಕಾಗಿತ್ತು. ನಮ್ಮ ತಂದೆ ವಕೀಲಿ ವೃತ್ತಿ ಬಿಟ್ಟು ರಾಜಕೀಯಕ್ಕೆ ಬಂದ ಮೇಲೆ ಆದಾಯದ ಮೂಲ ಬತ್ತಿ ಹೋಗಿತ್ತು. ಇಂತಹ ಸಂದರ್ಭದಲ್ಲಿ ವೈಭವದ ಜೀವನ ನಡೆಸಲು ಹೇಗೆ ಸಾಧ್ಯ? ಆದರೆ, ಗಾಂಧೀಜಿಯವರ ಸರಳ ಮಾರ್ಗ ನಮಗೆ ಮಾರ್ಗದರ್ಶನ ನೀಡಿತ್ತು. ನಮ್ಮ ಎಲ್ಲಾ ಹೆಣ್ಣು ಮಕ್ಕಳು ಇದನ್ನು ಅನುಸರಿಸಿದ ಕಾರಣ ಅವರ ಕೌಟುಂಬಿಕ ಜೀವನ ಇಂದಿಗೂ ಸುಖ-ಸಂತೋಷವನ್ನು ಹೊಂದಿದೆ.

ರಾಜಶೇಖರನ್‌ರವರು ತಮ್ಮ ಸ್ವಂತ ಮಾವ ನಿಜಲಿಂಗಪ್ಪನವರಂತೆ ವಿಶಿಷ್ಟ ಪ್ರಗತಿಪರ ಮನೋಭಾವವುಳ್ಳ ರಾಜಕಾರಣಿ. ನಮ್ಮ ತಂದೆ ೧೯೫೨ರಲ್ಲಿ ಚಿತ್ರದುರ್ಗದಿಂದ ಲೋಕಸಭಾ ಸದಸ್ಯರಾದ ಮೇಲೆ ತಮ್ಮ ಲೋಕಸಭಾ ಕ್ಷೇತ್ರಕ್ಕೆ ಏನೇನು ಕೆಲಸ ಮಾಡಬೇಕು ಎಂದು ಒಂದು ಯೋಜನಾ ವರದಿಯನ್ನು ತಯಾರಿಸಿದ್ದರು. ಮತ್ತು ಅದನ್ನು ಅನುಸರಿಸಿದ್ದರಂತೆ. ನನಗೆ ಕಂಡ ಹಾಗೆ ರಾಜಶೇಖರನ್‌ರವರು ೧೯೬೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ

ಚುನಾಯಿತರಾದ ಮೇಲೆ ಇಡೀ ಕ್ಷೇತ್ರ ಅಭಿವೃದ್ಧಿ ಕುರಿತಂತೆ ನೀಲಿನಕಾಶೆಯನ್ನು ತಯಾರಿಸಿಕೊಂಡರು. ಶಿಕ್ಷಕರ ಸಹಾಯ ಪಡೆದು ಸರ್ವೆ ಮಾಡಿಸಿ ಯಾವ ಹಳ್ಳಿಗೆ ಶಾಲೆ, ಯಾವ ಹೋಬಳಿಗೆ ಪಂಚಾಯಿತಿ ಕಟ್ಟಡ, ಯಾವ ತಾಲ್ಲೂಕಿಗೆ ಆಸ್ಪತ್ರೆ, ಸೇತುವೆ, ರಸ್ತೆ, ಕೆರೆ - ಹೀಗೆ ಮೊದಲಾದ ವಿಚಾರಗಳನ್ನು ಕುರಿತಂತೆ ಅವರು ಸಮಗ್ರ ಮಾಹಿತಿಯನ್ನು ಒಳಗೊಂಡ ನೀಲಿನಕಾಶೆಯನ್ನು ಸಿದ್ಧಪಡಿಸಿಕೊಂಡರು. ಅದರ ಪ್ರಕಾರವೇ ಅವರು ಮಂಚನಬೆಲೆ ನೀರಾವರಿ ಯೋಜನೆಯನ್ನು ಅನುಷ್ಠಾನ ಮಾಡಿದರು. ಹೀಗೆ ಯೋಜಿತ ರೀತಿಯಲ್ಲಿ ಎಲ್ಲಾ ಕೆಲಸವನ್ನು ಜನಪ್ರತಿನಿಧಿಗಳು ಕೈಗೊಂಡರೆ ಖಂಡಿತ ದೇಶ ಶೀಘ್ರಗತಿಯಲ್ಲಿ ಅಭಿವೃದ್ಧಿ ಆಗುವುದರಲ್ಲಿ ಸಂಶಯವಿಲ್ಲ.

ರಾಜಶೇಖರನ್‌ರವರಿಗೆ ಸ್ನೇಹಿತರನ್ನು ಮಾಡಿಕೊಳ್ಳುವುದು ಹಾಗೂ ಆ ಸ್ನೇಹವನ್ನು ಉಳಿಸಿಕೊಳ್ಳುವುದು ಜನ್ಮದತ್ತವಾಗಿ ಬಂದ ಕಲೆ. ಕೇರಳದಿಂದ ಕಾಶ್ಮೀರ, ಬಂಗಾಳದಿಂದ ಗುಜರಾತ್‌ರವರೆಗೆ ಎಲ್ಲಾ ರಾಜ್ಯಗಳಲ್ಲೂ ಅವರಿಗೆ ಮಿತ್ರರಿದ್ದಾರೆ. ಒಮ್ಮೆ ರಾಜಶೇಖರನ್‌ರವರ ಸಂಪರ್ಕಕ್ಕೆ ಸಜ್ಜನ ವ್ಯಕ್ತಿಯೊಬ್ಬರು ಬಂದು ಬಿಟ್ಟರೆ ಅವರನ್ನು ರಾಜಶೇಖರನ್ ಬಿಡುವುದಿಲ್ಲ. ಅವರಿಗೆ ಆಗಾಗ್ಗೆ ಕಾಗದ ಬರೆಯುತ್ತಾರೆ. ದೂರವಾಣಿ ಮಾಡುತ್ತಾರೆ. ಇಲ್ಲವೇ ಒಮ್ಮೆ ಹೋಗಿ ಅವರನ್ನು ನೋಡಿಕೊಂಡು ಬರುತ್ತಾರೆ. ಇಂತಹ ಸಾರ್ವಜನಿಕ ಸಂಪರ್ಕಾಧಿಕಾರಿ ಮಾಡುವ ಕೆಲಸವನ್ನು ರಾಜಕೀಯ ನಾಯಕರು ಮಾಡುವುದು ಅತ್ಯಂತ ವಿರಳ. ಇದಕ್ಕೆ ಬೇಕಾದುದು ಸ್ನೇಹಶೀಲ ಸ್ವಭಾವ. ಅದು ರಾಜಶೇಖರನ್‌ರವರಲ್ಲಿದೆ.

ಇಂತಹ ಸಮೃದ್ಧ ಸ್ನೇಹಿತರನ್ನು ಸಂಪಾದಿಸಿಕೊಂಡಿದ್ದೇ ರಾಜಶೇಖರನ್ ಅವರ ರಾಜಕೀಯ ಬೆಳವಣಿಗೆಯಲ್ಲಿ ತೊಂದರೆ ಆಗಿರಬಹುದು. ನಿಜಲಿಂಗಪ್ಪನವರ ಕಾಲದಲ್ಲಿ ಅವರ ಖಾಸಾ ಶಿಷ್ಯರೇ ರಾಜಶೇಖರನ್ ಅವರ ಏಳಿಗೆಯನ್ನು ಸಹಿಸಲಿಲ್ಲ. ಎಲ್ಲಾ ಗಣ್ಯ ವ್ಯಕ್ತಿಗಳ ಪರಿಚಯವಿರುವ ರಾಜಶೇಖರನ್ ದೆಹಲಿಯಲ್ಲಿ ನೆಲೆ ಊರಿದರೆ ನಮ್ಮ ಅಸ್ತಿತ್ವದ ಗತಿ ಏನೆಂದು ಕೆಲವರು ಯೋಚಿಸಿದ್ದಿರಬಹುದು. ಹಾಗಾಗಿ ರಾಜಶೇಖರನ್‌ರವರಿಗೆ ನ್ಯಾಯವಾಗಿ ದೊರೆಯಬೇಕಾಗಿದ್ದ ಅವಕಾಶ ಕೂಡ ದೊರೆಯಲಿಲ್ಲ. ನಾನು ನೋಡಿದ ಹಾಗೆ ಇದರ ಬಗ್ಗೆ ರಾಜಶೇಖರ್ ಅವರಲ್ಲಿ ಒಂದು ಚೂರೂ ಕಹಿ ಭಾವನೆ ಇಲ್ಲ. ಅವರು ಬೇರೆಯವರನ್ನು ನಿಂದಿಸಿದ್ದನ್ನೂ ಕೂಡ ನಾನು ಕಂಡಿಲ್ಲ. ಅವರಿಗೆ ಯಾರನ್ನಾದರೂ ನಿರಂತರವಾಗಿ ದ್ವೇಷಿಸಲು ಕೂಡ ಬರುವುದಿಲ್ಲ. ಸಿಟ್ಟು, ಕೋಪ ಅಥವಾ ಅಸಹನೆಗಳು ತಾತ್ಕಾಲಿಕವಾದುದು. ಕೆಲವು ಗಂಟೆಗಳ ನಂತರ ಅವರು ಮತ್ತೆ ಮೊದಲಿನ ರಾಜಶೇಖರನ್ ಆಗುತ್ತಾರೆ. ಒಮ್ಮೆ ಇಂಗ್ಲೆಂಡಿನ ಪ್ರಧಾನಿಯಾಗಿದ್ದ ಚರ್ಚಿಲ್, ವಿಜಯಲಕ್ಷ್ಮೀ ಪಂಡಿತ್‌ರವರಿಗೆ 'ನೆಹರುರವರು ದೊಡ್ಡ ಸಾಹಿತಿ, ಬರಹಗಾರ, ಅವೆಲ್ಲಕ್ಕಿಂತ ಆತ ದ್ವೇಷವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳದೆ, ಮನುಷ್ಯ-ಮನುಷ್ಯರನ್ನು ಪ್ರೀತಿಸುವ ಮಾನವತಾವಾದೀ ಆತ ದ್ವೇಷವನ್ನು ಗೆದ್ದಿದ್ದಾನೆ' ಎಂದು ಹೇಳಿದ್ದರಂತೆ. ಇಂದು ನೆಹರುರವರು ಇತಿಹಾಸದಲ್ಲಿ ಉಳಿದಿರುವುದು ಈ ಕಾರಣಕ್ಕಾಗಿಯೇ.

ರಾಜಶೇಖರನ್ ಅವರ ದ್ವೇಷರಹಿತ ಮನೋಭಾವ ಹಾಗೂ ಸದಾ ಒಳಿತನ್ನು ಮಾಡಬೇಕು ಎನ್ನುವ ತುಡಿತ ಅವರನ್ನು ಇತರರಿಗಿಂತ ಭಿನ್ನವಾಗಿಸಿದೆ. ರಾಜಶೇಖರನ್‌ರವರು ಎಂದೂ ಪ್ರಚಾರದ ಹುಚ್ಚಿಗೆ ಬಿದ್ದವರಲ್ಲ. ಅವರು ಸ್ವಯಂಸೇವಾ ಸಂಸ್ಥೆಗಳ ಮೂಲಕ ಅನೇಕ ಉತ್ತಮ ಕೆಲಸಗಳನ್ನು ಮಾಡಿದ್ದಾರೆ. ಅವುಗಳಾವುವೂ ಅನೇಕ ಜನರಿಗೆ ಗೊತ್ತೇ ಇಲ್ಲ. ಒಂದು ಕೈಯಲ್ಲಿ ಕೊಟ್ಟದ್ದು ಮತ್ತೊಂದು ಕೈಗೆ ತಿಳಿಯಬಾರದು ಎನ್ನುವ ಸೂಕ್ಷ್ಮ ಪ್ರಜ್ಞೆ ಅವರದು. ಇಂದಿನ ಪ್ರಚಾರ ಯುಗದಲ್ಲಿ ರಾಜಶೇಖರನ್‌ರವರು ಈ ತರಹದ ಮನೋಭಾವದಿಂದಾಗಿ ಸ್ವಲ್ಪ ಹಿಂದೆ ಬಿದ್ದಿರಬಹುದು. ಆದರೆ ಅವರ ಸತ್-ಆಲೋಚನೆಗಳು ಅನೇಕ ಪ್ರಜ್ಞಾವಂತ ಜನರ ಮನಸ್ಸನ್ನು ಹರ್ಷಗೊಳಿಸಿವೆ. ರಾಜಶೇಖರನ್‌ರವರನ್ನು ನೋಡಿದಾಗ ನನಗೆ ಅವರ ಮಿತ್ರರಾದ ತುಳಸೀ ದಾಸಪ್ಪನವರು ನೆನಪಿಗೆ ಬರುತ್ತಾರೆ. ರಾಜಶೇಖರನ್‌ರವರಂತೆ ತುಳಸೀ ದಾಸಪ್ಪ ಕೂಡ ಸಜ್ಜನರು. ರಾಜಶೇಖರನ್ ಅವರ ಎಲ್ಲಾ ಗುಣಗಳು ತುಳಸಿಯವರಲ್ಲಿ ಇವೆ. ಐವತ್ತು ವರ್ಷಗಳ ಹಿಂದೆ ನೋಡಿದ ಅಂದಿನ ಯುವ ಜೋಡಿ ಇಂದಿಗೂ ಕೂಡ ಅದೇ ರೀತಿ ಇದೆ. ಅವರ ಸ್ನೇಹ ಸೇತುವೆ ಎಷ್ಟು ಭದ್ರವಾಗಿದೆಯೋ ಅಷ್ಟೇ ಸಮರ್ಥವಾಗಿ ಅವರು ಜೀವನ ಮೌಲ್ಯಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದೊಂದು ಅಪರೂಪದ ಜೋಡಿ ಎಂದೇ ನನ್ನ ಎಣಿಕೆ. ತಮ್ಮ ನೆಚ್ಚಿನ ರಚನಾತ್ಮಕ ಕಾರ್ಯಗಳನ್ನು ಮಾಡಲು ಮಿತ್ರ ರಾಜಶೇಖರನ್ ಅವರಿಗೆ ಇನ್ನೂ ಹೆಚ್ಚು ಅವಕಾಶಗಳು ದೊರೆಯಲಿ ಎಂದು ಹಾರೈಸುತ್ತೇನೆ.

❊❊❊

# ಸರಳಜೀವಿ

**ರಾಜಶೇಖರ್**

ಎಂ.ವಿ. ರಾಜಶೇಖರನ್ ಅವರ ೭೫ನೇ ಹುಟ್ಟುಹಬ್ಬದ ಅಭಿನಂದನ ಗ್ರಂಥದ ಸಲುವಾಗಿ ಒಂದು ಲೇಖನ ಬರೆದುಕೊಡಬೇಕೆಂದು ಡಾ। ದೇ.ಜವರೇಗೌಡರು ಅಪೇಕ್ಷಿಸಿ ಕಾಗದ ಬರೆದಿದ್ದಾರೆ. ಅವರಲ್ಲಿ ಅಪಾರ ಗೌರವವಿರುವ ನನಗೆ ಅವರ ಅಪೇಕ್ಷೆ ಆದೇಶಗಳೆರಡೂ ಒಂದೆ.

ನನ್ನ ಅಣ್ಣ ಉಮಾಕಾಂತ ದೆಹಲಿಯ ಅಣು ವಿದ್ಯುತ್ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾಗ ವಿದ್ಯಾರ್ಥಿಯಾಗಿದ್ದ ಶ್ರೀ ರಾಜಶೇಖರನ್ ಅವರ ಪರಿಚಯವಾಗಿ, ಅದು ಸ್ನೇಹಕ್ಕೆ ತಿರುಗಿ ತಮ್ಮ ತಂಗಿ ಗಿರಿಜಳಿಗೆ ಈತ ಪತಿಯಾಗಲು ಸೂಕ್ತ ವ್ಯಕ್ತಿಯೆಂದು ಭಾವಿಸಿ, ಆ ಬಗ್ಗೆ ವಿಚಾರ ಮಾಡಿದನು. ಶ್ರೀ ಹೆಚ್.ಸಿ.ದಾಸಪ್ಪನವರು ರಾಜಕೀಯ ಧುರೀಣರಾಗಿದ್ದು ನನ್ನ ತಂದೆಗೆ ಸ್ನೇಹಿತರು, ಹಿತೈಷಿಗಳು. ಅವರ ಮಗ ಶ್ರೀ ತುಳಸಿದಾಸಪ್ಪನವರು ಮತ್ತು ರಾಜಶೇಖರನ್ ಅವರ ಪರಮ ಮಿತ್ರರು. ಆ ಕಡೆಯಿಂದಲೂ ಪ್ರೋತ್ಸಾಹ ದೊರೆತು ೧೬-೩-೧೯೪೯ರಂದು ಗಿರಿಜಳ ವಿವಾಹ ಅವರೊಡನೆ ಆಯಿತು. ಆಕೆ ಸುಖಿ.

ಶ್ರೀ ರಾಜಶೇಖರನ್ ಅವರು ಶ್ರೀಮಂತ ಗೌರವಾನ್ವಿತ ಕುಟುಂಬದಿಂದ ಬಂದವರಾದರೂ ಅತ್ಯಂತ ಸರಳಜೀವಿಗಳು. ಸಮಾಜದಲ್ಲಿ ಹೇಗೆಯೋ, ಸಂಸಾರದಲ್ಲಿಯೂ ಹಾಗೆಯೇ. ಉದಾಹರಣೆಗೆ ನನ್ನ ತಂಗಿ ಶ್ರೀಮಂತಿಕೆಯಲ್ಲಿ ಬೆಳೆದವಳಲ್ಲವಾದರೂ ಸುಖವಾಗಿ ಬೆಳೆದವಳು. ಮದುವೆಯಾದ ಹೊಸದರಲ್ಲಿ ಆಗಲೇ ಕೃಷಿಕ ಸಮಾಜದಿಂದ ಹೆಸರುವಾಸಿಯಾಗಿದ್ದ, ಅನೇಕ ಬಾರಿ ಜಪಾನ್ ಮೊದಲಾದ ವಿದೇಶಗಳಿಗೆ ಹೋಗಿದ್ದ ಶ್ರೀ ರಾಜಶೇಖರನ್ ಅವರು ತಮ್ಮ ಮಿತ್ರರನ್ನು ಸ್ವಾಗತಿಸಲು ವಿಮಾನ ನಿಲ್ದಾಣಕ್ಕೆ ಆಗಾಗ್ಗೆ ಬೆಳಗಿನ ಜಾವ ಹೋಗಬೇಕಾಗುತ್ತಿತ್ತು. ಆಗ ತಮ್ಮ ತಾಯಿ, ಪತ್ನಿಯರಿಗೆ ತೊಂದರೆ ಕೊಡದೆ ತಾವೇ ಬ್ರೆಡ್, ಕಾಫಿ ಮಾಡಿಕೊಳ್ಳುತ್ತಿದ್ದರು. ಅವರ ಮದುವೆ ಚಿತ್ರದುರ್ಗದಲ್ಲಿ ನಡೆಯಿತು. ಆ ದಿನ ಅವರ ಕಡೆಯ ಮುಖ್ಯ ಸಂಬಂಧಿಕರೊಬ್ಬರೊಡನೆ ಯುವಕನಾಗಿದ್ದ ನಾನು ಉಪಾಹಾರದ

ವಿಷಯದಲ್ಲಿ ಘರ್ಷಣೆಗೆ ಇಳಿದು, ವಿರಸವಾಗಬೇಕಾಗಿದ್ದ ಸಮಯದಲ್ಲಿ ಶ್ರೀ ರಾಜಶೇಖರನ್ ಅವರೇ ಬಂದು ನನ್ನ ಭುಜದ ಮೇಲೆ ಕೈ ಹಾಕಿ, ನನ್ನನ್ನು ಸಾಂತ್ವನಗೊಳಿಸಿದರು. ಅವರ ವ್ಯಕ್ತಿತ್ವ ಹೇಗಿದ್ದಿತು ಎಂದರೆ, ಅವರು ನನ್ನ ಹೆಗಲ ಮೇಲೆ ಕೈ ಹಾಕಿದ ಕೂಡಲೇ ನಾನು ಶಾಂತನಾದ ಹಲವು ನಿದರ್ಶನಗಳಿವೆ.

"ಜೋರೂಕಾ ಭಾಯಿ ಏಕ್ ತರಫ್, ಸಾರೇ ದುನಿಯ ಏಕ್ ತರಫ್" (ಹೆಂಡತಿಯ ತಮ್ಮ ಒಂದು ಕಡೆ, ಇಡೀ ಜಗತ್ತು ಒಂದು ಕಡೆ ತೂಗಿದರೂ, ಹೆಂಡತಿಯ ತಮ್ಮನ ತೂಕವೇ ಜಾಸ್ತಿ) ಎನ್ನುವಂತೆ ಅವರು ನಡೆದುಕೊಂಡರೆ, "ಜಾಮಾತಾ ದಶಮಗ್ರಹಃ" ಎಂದು ನಾನು ರೇಗಿಸಿದರೂ ಸಂತೋಷಪಡುತ್ತಾರೆ.

ಶ್ರೀ ರಾಜಶೇಖರನ್ ಅವರು ರಾಜಕೀಯ ಧುರೀಣರಾಗಿದ್ದ ಶ್ರೀ ಎಸ್. ನಿಜಲಿಂಗಪ್ಪನವರ ಅಳಿಯಂದಿರಾದರೂ, ಅದಕ್ಕೂ ಹತ್ತಾರು ವರ್ಷಗಳಿಗೆ ಮೊದಲೇ ಅವರು ಪ್ರಗತಿಪರ ಕೃಷಿಕರಾಗಿ ತಮ್ಮ ಕ್ಷೇತ್ರದಲ್ಲಿ ರಾಜಕಾರಣಿಯಾಗಿ ಸಾಕಷ್ಟು ಶ್ರಮಿಸಿ ಹೆಸರು ಪಡೆದಿದ್ದರಲ್ಲದೆ, ಹಲವಾರು ಸಾರಿ ವಿದೇಶ ಪ್ರವಾಸ ಮಾಡಿ ವಿಸ್ತಾರವಾದ ದೃಷ್ಟಿಯನ್ನು ಇಟ್ಟುಕೊಂಡಿದ್ದರು. ಆಗಿನಿಂದಲೂ ಅವರ ಕಾರ್ಯಚಟುವಟಿಕೆಗಳು ವಿಸ್ತಾರವಾಗುತ್ತಲೇ ಸಾಗಿವೆ.

ನನ್ನ ತಂಗಿ ಪೂರ್ಣಿಮ ತನ್ನ ಡಾಕ್ಟರ್ ಪತಿಯೊಡನೆ ಸುಮಾರು ೩೫ ವರ್ಷಗಳಿಂದ ಕೆನಡಾದಲ್ಲಿ ವಾಸಿಸುತ್ತಿದ್ದಾಳೆ. ಶ್ರೀ ರಾಜಶೇಖರನ್ ಅವರು ಆಗಾಗ್ಗೆ ಕೆನಡಾಕ್ಕೆ ಹೋಗುತ್ತಿರುತ್ತಾರೆ. ಅಲ್ಲಿ ಪೂರ್ಣಿಮ ಹಾಗೂ ಅವಳ ಪತಿ ಡಾ। ಮೃತ್ಯುಂಜಯ ಅವರ ಅತಿಥಿಯಾಗಿರುತ್ತಾರೆ. ಆಗ ಹಲವಾರು ಸೆನೆಟ್ ಸದಸ್ಯರು, ರಾಯಭಾರಿ ಕಛೇರಿಯವರು, ರಾಜಕಾರಣಿಗಳು ಶ್ರೀ ರಾಜಶೇಖರನ್ ಅವರನ್ನು ಫೋನಿನಲ್ಲಿ ವಿಚಾರಿಸುವುದನ್ನು ನೋಡಿ ನಮಗೆ ಆಶ್ಚರ್ಯವೂ, ಗಾಬರಿಯೂ ಆಗುವುದೆಂದು ಪೂರ್ಣಿಮ ಹೇಳುತ್ತಾಳೆ. ಆಗ ಅವರ ಮನೆಯು ಚಟುವಟಿಕೆಗಳ ಕೇಂದ್ರವಾಗುವುದಲ್ಲದೆ, ಮನೆಗೆ ಪೋಲಿಸರ ರಕ್ಷಣೆ ಇರುವುದೆಂದೂ, ಅದರಿಂದ ಶ್ರೀ ರಾಜಶೇಖರನ್ ಬಂದಿರುವುದನ್ನು ನೆರೆಹೊರೆಯವರು ವಿಚಾರಿಸುವರೆಂದೂ ಹೇಳಿದಳು.

ಶ್ರೀ ರಾಜಶೇಖರನ್ ಅವರು ೧೯೪೨ರಿಂದಲೇ ರಾಜಕೀಯದಲ್ಲಿ ತೊಡಗಿ, ರೈತ ಸಂಘದ ಸಂಸ್ಥಾಪಕರಾಗಿ, ಉತ್ತಮವಾಗಿ ಸಂಘಟಿಸಿದರು. ಅವರು ರಾಜಕೀಯಕ್ಕೆ ಪ್ರವೇಶಿಸದೆ ಇದ್ದಿದ್ದರೆ ರೈತ ಸಂಘವು ಸರಕಾರವನ್ನು ನಿಯಂತ್ರಿಸುವಷ್ಟು ಪ್ರಬಲವಾಗಿ ಬೆಳೆಯುತ್ತಿತ್ತೆಂದು ನನ್ನ ಅನಿಸಿಕೆ. ಅನಂತರವೂ ಹಾಗೆ ಬೆಳೆಸಬಹುದಾಗಿತ್ತು. ರೈತರ ದುರ್ದೈವ, ಹಾಗೆ ಆಗಲಿಲ್ಲ.

ಶ್ರೀ ರಾಜಶೇಖರನ್ ಅವರು ಪ್ರಜಾಪ್ರಭುತ್ವದಲ್ಲಿ ಸಂಪೂರ್ಣ ನಂಬಿಕೆಯುಳ್ಳವರು. ಸದಸ್ಯರಾಗಿ ಲೋಕಸಭೆ ಹಾಗೂ ವಿಧಾನಸಭೆಯಲ್ಲಿ ತಾವು ಮಾಡಿ ಭಾಷಣಗಳ ಸಾವಿರಾರು ಪ್ರತಿಗಳನ್ನು ಮುದ್ರಿಸಿ, ಓಟುದಾರರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಕಳುಹಿಸುತ್ತಿದ್ದರು. ಹೀಗೆ

ಮಾಡುತ್ತಿದ್ದವರು ಬಹುಶಃ ಇವರೊಬ್ಬರೆ. ಇದು ಸ್ವಪ್ರಚಾರವಾಗಿರಲಿಲ್ಲ. ತಾವು ಮತ ಹಾಕಿ ಕಳುಹಿಸಿದ ತಮ್ಮ ಪ್ರತಿನಿಧಿ ಏನು ಮಾಡುತ್ತಿರುವನು ಎಂದು ತಿಳಿಯುವ ಹಕ್ಕು ಮತದಾರನಿಗೆ ಇದೆ, ಹಾಗೆ ತಿಳಿಸುವುದು ತನ್ನ ಕರ್ತವ್ಯವೆಂದು ತಿಳಿದಿದ್ದರು.

ಶ್ರೀ ರಾಜಶೇಖರನ್ ಅವರು ಪ್ರಗತಿಪಥದಲ್ಲಿ ಸಾಗಿದಂತೆಲ್ಲ, ವಿದೇಶ ಸಂಚಾರಿಗಳಾದಂತೆಲ್ಲ, ಲೋಕಸಭೆ, ಶಾಸನಸಭೆ ಹಾಗೂ ಅನೇಕ ಸಂಸ್ಥೆಗಳ ಚಟುವಟಿಕೆಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡಂತೆಲ್ಲ ಅವರು ಹೆಚ್ಚು ಹೆಚ್ಚು ಸುಸಂಸ್ಕೃತರೂ, ಸರಳ ಜೀವಿಗಳೂ ಆದರು, ಎಂದೂ ಅಧಿಕಾರಾಪೇಕ್ಷಿಗಳಾಗಲಿಲ್ಲ. ಅವರಿಗೆ ಸ್ಥಾನಮಾನ ಸಿಗುವ ಸಮಯದಲ್ಲಿ ಅವರೇ ಆ ಸ್ಥಾನಕ್ಕೆ ಬೇರೆ ಅರ್ಹ ವ್ಯಕ್ತಿಗಳ ಹೆಸರನ್ನು ಸೂಚಿಸಿರುವ ಸಂದರ್ಭಗಳೂ ಇವೆ.

ಶ್ರೀ ರಾಜಶೇಖರನ್ ನನ್ನ ಭಾವನಾಗಿರುವುದು ನನಗೆ ಅತ್ಯಂತ ಸಂತೋಷ ಹೆಮ್ಮೆ. ಅವರ ೭೫ರ ಹುಟ್ಟುಹಬ್ಬವು ಯಶಸ್ವಿಯಾಗಲಿ, ನನ್ನ ತಂಗಿ ದೀರ್ಘ ಸುಮಂಗಲಿಯಾಗಲಿ, ಅವರ ದೀರ್ಘ ಕಾಲದ ಸೇವೆ ದೇಶಕ್ಕೆ ದೊರಕಲಿ ಎಂದು ಆಶಿಸುವುದಲ್ಲದೆ ಇನ್ನೂ ಹೆಚ್ಚಿನ ಸ್ಥಾನಮಾನಗಳನ್ನು ಪಡೆಯಲಿ, ಅವರದು ಸಂತೃಪ್ತ ಜೀವನ ಆಗಿರಲಿ ಎಂದು ಆಶಿಸುತ್ತೇನೆ.

***

# ಸಿಟ್ಟು, ಸ್ವಾಭಿಮಾನಿಗಳ ಅಪ್ಪಾಜಿ

ಸಿ. ಸುಜಾತ



ನನ್ನ ತಂದೆಯ ತವರೂರು ಮರಳವಾಡಿ. ಅದು ಬೆಂಗಳೂರಿನಿಂದ ಮೂವತ್ತು ಮೈಲಿ ದೂರದಲ್ಲಿದೆ. ಅವರಿಗೆ ಚಿಕ್ಕ ವಯಸ್ಸಿನಲ್ಲಿಯೇ ತಂದೆ ತೀರಿಕೊಂಡರು. ತಾಯಿ ಬಸಮ್ಮ ಮತ್ತು ತಮ್ಮ ಕೀರ್ತಿಹಾಸನ್. ಇದು ಅವರ ಪುಟ್ಟ ಸಂಸಾರ.

ಇವರ ತಂದೆಗೆ ಮಗ ಬ್ಯಾರಿಸ್ಟರ್ ಆಗಬೇಕೆಂಬ ಮಹದಾಸೆ. ಇವರು ಆಗಿನ ಕಾಲದಲ್ಲಿ ಕಂಡ ಕಂಡವರ ಮನೆಯಲ್ಲಿ ಇದ್ದು B.A. Honours ಮುಗಿಸಿದರು. ತಂದೆಯ ಆಸೆಯನ್ನು ಇವರಿಗೆ ತೀರಿಸುವುದಕ್ಕೆ ಆಗಲಿಲ್ಲ. ಕಾರಣ, ಆಗ ಇವರು ದೆಹಲಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಆ ಸಮಯದಲ್ಲಿ ಸರ್ಕಾರದವರು ರೈತರ ಭೂಮಿಯನ್ನು ವಶಪಡಿಸಿಕೊಳ್ಳುತ್ತಿದ್ದರು. ಆಗ ಇವರು ತಮ್ಮ ತಂದೆ ಮತ್ತು ತಾತನ ಕಾಲದ ಆಸ್ತಿಯನ್ನು ಉಳಿಸಿ ಕೊಳ್ಳುವುದಕ್ಕಾಗಿ ದೆಹಲಿಯಿಂದ ಹಿಂದಿರುಗಿದರು. ಅಲ್ಲಿಗೆ ಇವರ ವಿದ್ಯಾಭ್ಯಾಸ ಮಣ್ಣುಪಾಲಾಯಿತು. ಸಂಸಾರದ ಜವಾಬ್ದಾರಿ ಸಂಪೂರ್ಣವಾಗಿ ಇವರ ಮೇಲೆ ನಿಂತಿತ್ತು.

ಈಗಲೂ ಕೂಡ ನನ್ನ ತಂದೆಯವರು ತಮ್ಮ ತಂದೆಯ ಇಚ್ಛೆಯಂತೆ ನಾನು ಬ್ಯಾರಿಸ್ಟರ್ ಆಗಲಿಲ್ಲವೆಂದು ದುಃಖಿಸುತ್ತಾರೆ. ನನ್ನ ತಂದೆ ಅವರ ತಾಯಿಯ ಪ್ರೀತಿಯ ಮಗ. ಇವತ್ತಿಗೂ ತಮ್ಮ ತಾಯಿ ಬೆಳೆಸಿದ ರೀತಿಯನ್ನು ನೆನೆಯುತ್ತಾರೆ: 'ನನ್ನವ್ವ ನನಗೆ ಆಗ ತಾನೆ ಹಾಲು ಕರೆದು ಕುಡಿಸುತ್ತಿದ್ದಳು. ತುಪ್ಪವನ್ನು ಉಂಡೆ ಮಾಡಿ ತಿನ್ನಿಸುತ್ತಿದ್ದಳು, ಎಂದು ತಾಯಿಯ ಅಡುಗೆಯ ಸವಿಯನ್ನು, ಸಾಕಿದ ರೀತಿಯನ್ನು ಅಪ್ಪಾಜಿ ಈಗಲೂ ನೆನೆಯುತ್ತಾರೆ.

ಇನ್ನು ನನ್ನ ತಂದೆಯವರ ಮದುವೆಯ ನಂತರದ ಸಂಸಾರ.

ನನ್ನ ಅಮ್ಮ (ಗಿರಿಜಾ) ಅವರಿಗೆ ೧೯ನೇ ವಯಸ್ಸಿನಲ್ಲಿ ಮದುವೆ ಯಾಯಿತು. ಅವರಿಗೆ ೨೭ನೇ ವಯಸ್ಸಿನಲ್ಲಿ ನಾಲ್ಕು ಮಕ್ಕಳು ಹುಟ್ಟಿದ್ದರು. ನನ್ನ ಅಮ್ಮ ತನ್ನ ತವರಿನಲ್ಲಿ ಯಾವ ಕಷ್ಟವನ್ನೂ ಅರಿಯದೆ ಸುಖವಾಗಿ

ಬೆಳೆದವರು. ಇಲ್ಲಿ ಅತ್ತೆಯ ಮನೆಯಲ್ಲಿ ತುಂಬಿದ ಸಂಸಾರದಲ್ಲಿ ಹೊಂದಿಕೊಂಡು ಹೋದರು. ಅವರ ಪಾಲಿಗೆ ಒಳ್ಳೆಯ ಅತ್ತೆ ಸಿಕ್ಕಿದ್ದರು.

ನನ್ನ ತಂದೆಯವರು ೧೯೬೭ರಲ್ಲಿ ಎಂ.ಪಿ. (ಮೆಂಬರ್ ಆಫ್ ದಿ ಪಾರ್ಲಿಮೆಂಟ್) ಆಗಿದ್ದರು. ನಾಲ್ಕು ಮಕ್ಕಳ ಜೊತೆ ತುಂಬಿದ ಸಂಸಾರದಲ್ಲಿ ನನ್ನ ತಾಯಿಗೆ, ಮಕ್ಕಳಿಗೆ ಕಾಯಿಲೆ ಬಂದರೂ ತೋರಿಸುವುದಕ್ಕೆ ಯಾವ ವೈದ್ಯರ ಪರಿಚಯವೂ ಇರಲಿಲ್ಲ.

ನಾನು ಚಿಕ್ಕವಳು ಇದ್ದಾಗ ನನಗ ಕಿವಿ ಗಾಯವಾಗಿರುತ್ತಿತ್ತು. ನನ್ನ ತಾಯಿಯವರು ನನ್ನ ತಂದೆಯವರಿಗೆ ಈ ವಿಷಯವನ್ನು ಹೇಳಿದರೂ ಅವರು ನನ್ನ ಕಡೆ ಗಮನ ಕೊಡಲಿಲ್ಲ. ಕಡೆಗೆ ನನ್ನ ತಾಯಿ ಪಕ್ಕದ ಮನೆಯವರ ಸಹಾಯದಿಂದ ಕಾರಿನ ಡ್ರೈವರನ್ನು ಕರೆದುಕೊಂಡು ಹೋಗಿ ಕಿವಿಯ ನೋವನ್ನು ವಾಸಿ ಮಾಡಿಸಿದರು.

ಮಕ್ಕಳಿಗೆ ಸಿನಿಮಾ, ಹೋಟೆಲ್ ಮತ್ತು ದವಾಖಾನೆಗೆ ಕರೆದುಕೊಂಡು ಹೋಗುವುದಕ್ಕೆ ನನ್ನ ತಂದೆಯವರು ತಮ್ಮ ಇಬ್ಬರು ಸ್ನೇಹಿತರನ್ನು ನೇಮಿಸಿದ್ದರು. (ಇಬ್ರಾಹಿಂ ಮತ್ತು ಗಡ್ಡದ ರಾಜಶೇಖರ್) ಈಗಲೂ ಇವರಿಬ್ಬರೂ ನಮ್ಮ ಪ್ರೀತಿ, ವಿಶ್ವಾಸವನ್ನು ಉಳಿಸಿಕೊಂಡಿದ್ದಾರೆ.

ನಮ್ಮ ತಂದೆಯವರು ಮಾತ್ರ ದೆಹಲಿಯಲ್ಲಿ ಇದ್ದರೂ ಅವರ ಸಂಸಾರವನ್ನು ಬೆಂಗಳೂರಿನಲ್ಲಿಯೇ ಬಿಟ್ಟಿದ್ದರು. ತಂದೆ ಎಂ.ಪಿ., ನನ್ನ ಅಜ್ಜ (ನಿಜಲಿಂಗಪ್ಪನವರು-) ಸಿ.ಎಮ್. (ಚೀಫ್ ಮಿನಿಸ್ಟರ್) ಎಂಬುದು ನಮಗೆ ಏನೂ ಗೊತ್ತಿರಲಿಲ್ಲ. ಶನಿವಾರ ಮತ್ತು ಭಾನುವಾರ ಶಾಲೆಗ ರಜೆ ಬಂದರೆ, ಬೆಂಗಳೂರಿನಲ್ಲಿರುವ ಬಾಲುಬ್ರೂಯಿಗೆ ಹೋಗುತ್ತಿದ್ದೆವು. ಅದೇ ನಮ್ಮ ಅಜ್ಜನ ಮನೆಯೆಂದು ತಿಳಿದಿದ್ದೆವು. ನನ್ನ ತಂದೆಯವರು ನಾವು ನರ್ಸರಿಯಿಂದ ಹಿಡಿದು ಬಿ.ಎಸ್‌ಸಿ.ವರೆಗೂ ಓದುವುದಕ್ಕೆ ಟ್ಯೂಷನ್ ಇಡಿಸಿದ್ದರು. ಆದರೆ ಮಕ್ಕಳ ಭವಿಷ್ಯದ ಬಗ್ಗೆ ಜವಾಬ್ದಾರಿ ತೆಗೆದುಕೊಳ್ಳುವುದಕ್ಕೆ ತಂದೆ-ತಾಯಿ ಇಬ್ಬರಿಗೂ ಸಮಯ ಇರುತ್ತಿರಲಿಲ್ಲ.

ನಾವು ಚಿಕ್ಕವರಿದ್ದಾಗ ಪ್ರತಿ ವರ್ಷ ನಮ್ಮ ತಂದೆ ಹಬ್ಬ ಬಂದರೆ ಹೊಸ ಬಟ್ಟೆ ಕೊಡಿಸುತ್ತಿದ್ದರು. ಪಟಾಕಿಯನ್ನು ಒಂದು ವಾರ ಹೊಡೆದರೂ ಮುಗಿಯುತ್ತಿರಲಿಲ್ಲ. ನನ್ನ ಅಮ್ಮ ಯಾವಾಗಲೂ ಚಕ್ಕುಲಿ, ನಿಪ್ಪಟ್ಟು, ಕೋಡುಬಳೆ, ಜಾಮೂನು ವರ್ಷ ಪೂರ್ತಿ ಮಾಡುತ್ತಲೇ ಇರುತ್ತಿದ್ದರು. ನನ್ನ ತಂದೆಯವರಿಗೆ ಕರಿದ ತಿಂಡಿ ಅಂದರೆ ಪಂಚಪ್ರಾಣ.

ನನ್ನ ಅಣ್ಣ ತನ್ನ ಅಂಗಡಿಗೆ ಟೆಲಿಫೋನ್ ಬೇಕೆಂದು ತಂದೆಯವರನ್ನು ಕೇಳಿದಾಗ

ಅಪ್ಪ ಮಗನ ಸಂಭಾಷಣೆ

ಮಗ : ನನಗೆ ಒಂದು ಫೋನ್ ಬೇಕು.

ಅಪ್ಪ : ಹೋಗ್ ಹೋಗೇ ನಮ್ಮ ಕಾಲದಲ್ಲಿ ಫೋನಿನ ಮೂಲಕವೇ ಬಿಸಿನೆಸ್

ಮಾಡುತ್ತಿದ್ದೆವಾ?

ನನ್ನ ತಂದೆ-ತಾಯಿಯ ಸಂಭಾಷಣೆ

ಅಮ್ಮ : ನೀವೊಬ್ಬರು ಇಂಟರ್ ನ್ಯಾಷನಲ್ ಫಿಗರ್ ಆದರೆ ಆಗ್ಹೋಯಿತಾ! ಮಕ್ಕಳನ್ನೂ ಹಾಗೇ ಮಾಡಬೇಕಾಗಿತ್ತು.

ಅಪ್ಪ : ನಾನಂತೂ ಊರೂರು ಸುತ್ತಿಕೊಂಡು ಇರುತ್ತಿದ್ದೆ. ನೀನು ಓದಿಸಬೇಕಾಗಿತ್ತು.

ಅಮ್ಮ : ನಿಮ್ಮ ಮಕ್ಕಳನ್ನು ನೀವು ಓದಿಸಬೇಕಾಗಿತ್ತು. ವಾರಕ್ಕೆ ನಾಲ್ಕು ಸಾರಿ ಸ್ನೇಹಿತರನ್ನು ಕರೆದು ಊಟಕ್ಕೆ ಇಡಿ. ನಿಮ್ಮ ಹಳ್ಳಿಯ ನೆಂಟರಿಷ್ಟರು ಕಾಯಿಲೆ ಮತ್ತು ಕೋರ್ಟಿನ ಕೇಸ್ ಇದೆಯೆಂದು ಹೋಗಿ ಬರುವವರಿಗೆ ಬೇಯಿಸಿ ಹಾಕುವುದೇ ನನಗೆ ಆಗುತ್ತಿತ್ತು. ಮಕ್ಕಳ ಕಡೆ ಗಮನ ಕೊಡುವುದಕ್ಕೆ ನನಗೆ ಪುರುಸೊತ್ತು ಎಲ್ಲಿ ಇರುತ್ತಿತ್ತು?

ಈಗಲೂ ನನ್ನ ತಂದೆಯವರು ತಮ್ಮ ಮಕ್ಕಳು ಇಂಜಿನಿಯರ್ - ಡಾಕ್ಟರ್ ಆಗಲಿಲ್ಲ ಅಮೆರಿಕಾಕ್ಕೆ ಹೋಗಲಿಲ್ಲ ಎಂದು ಕೊರಗುತ್ತಾರೆ. ಅವರ ಹಳ್ಳಿಯ ನೆಂಟರ ಮಕ್ಕಳು ಇಂದು ಚೆನ್ನಾಗಿ ಓದಿ ಪರದೇಶದಲ್ಲಿ ನೆಲೆಸಿದ್ದಾರೆ. ಅವರ ಅಳಲು ಏನೆಂದರೆ, ಅವರಿಗೆ ಪ್ರಪಂಚದಲ್ಲಿ ಎಲ್ಲಾ ಕಡೆ ಸ್ನೇಹಿತರಿದ್ದಾರೆ. ಆದರೂ ನನ್ನ ಮಕ್ಕಳು ಉಪಯೋಗಿಸಿಕೊಳ್ಳಲಿಲ್ಲವಲ್ಲ ಎಂಬ ವ್ಯಥೆ. ಈಗ ನನ್ನ ತಂದೆಯವರು ಮೊಮ್ಮಕ್ಕಳ ಮೊರೆ ಹೋಗಿದ್ದಾರೆ. ಅವರು ಮೊಮ್ಮಕ್ಕಳನ್ನು ಕುರಿತು ಆಸೆಯ ಬೀಜವನ್ನು ಬಿತ್ತಿದ್ದಾರೆ: 'ನೀವಾದರೂ ಚೆನ್ನಾಗಿ ಓದಿ ಪುಟಾಣಿಗಳೇ ನಿಮ್ಮನ್ನು ನಾನು ಅಮೆರಿಕಾಕ್ಕೆ ಕಳಿಸುತ್ತೇನೆ' ಎಂದು.

ಮೊಮ್ಮಕ್ಕಳು ಟಿ.ವಿ.ಯಲ್ಲಿ ಹಿಂದಿಯ ಸಿನಿಮಾವನ್ನು ನೋಡುತ್ತಿದ್ದರೆ ಅದರಲ್ಲಿ ಬರುವ ವಿದೇಶದ ಸೀನರಿಗಳನ್ನೂ ನೋಡಿ ನನ್ನ ತಂದೆಯವರು ಇದು ಇಂಥ ದೇಶದ ಕಟ್ಟಡ, ಹೋಟೆಲ್, ಲೇಕ್ಸ್ ಎಂದು ತಕ್ಷಣ ಉತ್ತರಿಸುತ್ತಾರೆ. ನಮ್ಮನ್ನು ಕುರಿತು "ಇವೆಲ್ಲ ನೀವು ಎಲ್ಲಿ ನೋಡುವುದಕ್ಕೆ ಆಗುತ್ತದೆ. ಇಲ್ಲೇ ನೋಡಿಕೊಳ್ಳಿ" ಎನ್ನುತ್ತಾರೆ.

ಮೊಮ್ಮಕ್ಕಳು ಭಾನುವಾರದ ದಿನ ತಡವಾಗಿ ಎದ್ದರೆ ಎಲ್ಲರಿಗೂ ಬಯ್ಯುತ್ತಾರೆ. "ಹಕ್ಕಿಗಳು ಕೂಡ ಬೆಳಗ್ಗೆ ಆರಕ್ಕೆ ಗೂಡು ಬಿಟ್ಟರೆ ಸಂಜೆ ಆರಕ್ಕೆ ಗೂಡು ಸೇರಿಕೊಳ್ಳುತ್ತವೆ. ನೀವೆಲ್ಲ ಪ್ರಾಣಿಗಳಲ್ಲ, ನೀವೆಲ್ಲ ಈಡಿಯಟ್ಸ್" ಎಂದು ಬಯ್ಯುತ್ತಾರೆ.

ಅವರಿಗೆ ಮನೆ ತುಂಬಾ ಅಚ್ಚುಕಟ್ಟಾಗಿ ಇರಬೇಕು. ತಿನ್ನುವ ಪಾತ್ರೆಯ ಮುಚ್ಚಳಗಳು ತೆರೆದಿಡಬಾರದು. ಹಾಗೇನಾದರೂ ಇದ್ದರೆ ಸಿಕ್ಕಾಪಟ್ಟೆ ಕಿರುಚುತ್ತಾರೆ. ನನ್ನ ತಂದೆಯವರಿಗೆ ಸಮಯವನ್ನು ವ್ಯರ್ಥಮಾಡಬಾರದು. ಹಾಗೇನಾದರೂ ನಾವು ಮಾಡಿದರೆ 'ನೀವೆಲ್ಲ ಈಡಿಯೆಟ್ಸ್ Time is Money' ಎಂದು ಬೈದು ನೀವೆಲ್ಲ ಪಾದರಸದಂತೆ ಇರಬೇಕೆಂದು ಬುದ್ಧಿ ಹೇಳುತ್ತಾರೆ.

## ನಿಜಬಿಂಬ

ನನ್ನ ತಂದೆಯವರು ಪರದೇಶಕ್ಕೆ ಹೋಗಬೇಕೆಂದರೆ ಮನೆಯಲ್ಲಿ ರಾತ್ರಿ ಮೂರು ಗಂಟೆ ಕಾಲ ಅಷ್ಟೆ ನಿದ್ದೆಮಾಡುವುದು. ಅವರು ಪರದೇಶಕ್ಕೆ ಹೋಗುವ ಸುದ್ದಿಯನ್ನು ನಾವು ಮೂರನೆಯವರ ಬಾಯಿಂದ ಕೇಳಿ ತಿಳಿದುಕೊಳ್ಳುತ್ತೇವೆ. ಅಂದರೆ, ನಮ್ಮ ತಂದೆಯವರು ಫೋನ್‌ನಲ್ಲಿ ಯಾರಿಗಾದರೂ ಹೇಳಿದಾಗ ಮಾತ್ರ.

ನನ್ನ ತಂದೆಯವರು ಹೋದ ವರ್ಷ ತಮ್ಮ ಇಬ್ಬರು ಸೊಸೆಯಂದಿರಿಗೆ ಮತ್ತು ಇಬ್ಬರು ಹೆಣ್ಣುಮಕ್ಕಳಿಗೆ ಹಬ್ಬದ ದಿನದಂದು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟರು.

ನನ್ನ ಹಾಸಿಗೆಗೆ ಒಂದೇ ಬೆಡ್ ಸ್ಪ್ರೆಡ್ ಇದ್ದದ್ದು. ಇದನ್ನು ಗಮನಿಸಿದ ನನ್ನ ತಂದೆ ನಾಲ್ಕು ಮಕ್ಕಳ ಸಂಸಾರಕ್ಕೂ ಹಾಸಿಗೆಗೆ ಹೊದಿಕೆಯನ್ನು ತಂದುಕೊಟ್ಟರು. ಮನೆಗೆ ಯಾರಾದರೂ ಬುಟ್ಟಿಯಲ್ಲಿ ಹಣ್ಣುಗಳು ಮತ್ತು ಡ್ರೈ ಫ್ರೂಟ್ಸ್‌ಗಳನ್ನು ತಂದುಕೊಟ್ಟರೆ ನನ್ನ ತಂದೆಯವರು ಸೊಸೆಯಂದಿರಿಗೆ ಮತ್ತು ಹೆಣ್ಣು ಮಕ್ಕಳಿಗೆ ಹಂಚುತ್ತಾರೆ. ನನ್ನ ತಂದೆಯವರಿಗೆ ಸ್ವಾಭಿಮಾನ ಜಾಸ್ತಿ. ಅವರಿಗೆ ಎಷ್ಟು ಬೇಗ ಸಿಟ್ಟು ಬರುತ್ತದೋ ಅಷ್ಟು ಬೇಗನೆ ಅದು ತಣ್ಣಗಾಗುತ್ತದು.

ಅವರು ಪರದೇಶದಿಂದ ವಾಚ್, ರೇಡಿಯೊ, ಟಿ.ವಿ. ಕ್ಯಾಮೆರಾ ಇತ್ಯಾದಿ ತಂದಿದ್ದಾರೆ. ಆದರೆ ನನ್ನ ತಂದೆಯವರಿಗೆ ಇವು ಯಾವುವನ್ನು ಉಪಯೋಗಿಸುವುದಕ್ಕೆ ಗೊತ್ತಿಲ್ಲ. ಕಲಿತುಕೊಳ್ಳಬೇಕೆಂಬ ಆಸೆಯೂ ಇಲ್ಲ. ಅವರು ಪರದೇಶಕ್ಕೆ ಹೋದಾಗಲೆಲ್ಲ ಅಲ್ಲಿಯ ಗೊಂಬೆಗಳನ್ನು ತರುತ್ತಾರೆ. ನಲವತ್ತು ವರ್ಷದ ಹಿಂದೆ ತಂದ ಗೊಂಬೆಗಳನ್ನು ಇದು ಇಂಥ ದೇಶದ್ದೇ ಎಂದು ಈಗಲೂ ಹೇಳುತ್ತಾರೆ. ತಮ್ಮ ಹೆಣ್ಣುಮಕ್ಕಳು ಉಟ್ಟ ಸೀರೆಯನ್ನು ನೋಡಿ ಅದು ಹದಿನೈದು ವರ್ಷದ ಹಿಂದಿನದ್ದಾದರೂ ಈ ಸೀರೆ ನಾನು ಇಂಥ ದೇಶದಿಂದ ತಂದದ್ದು, ಎಂದು ಹೇಳುತ್ತಾರೆ.

ಮನೆಯಲ್ಲಿ ಇದ್ದಾಗ ಹಾಲು, ಟೀಯನ್ನು ಕೊಟ್ಟರೆ ಅರ್ಧ ಕುಡಿದು ಹಾಗೆಯೇ ಬಿಟ್ಟಿರುತ್ತಾರೆ. ಕಾರಣ ಇಷ್ಟೇ. ಯಾವುದಾದರೂ ಫೋನ್ ಬರುತ್ತದೆ, ಇಲ್ಲ ಯಾರಾದರೂ ಮನೆಯ ಬಾಗಿಲು ಕದ ತಟ್ಟುತ್ತಾರೆ. ಊಟಕ್ಕೆ ತಿಂಡಿಗೆ ಕೂತಾಗಲೂ ಅಷ್ಟೆ. ಅರ್ಧವನ್ನೂ ತಿಂದಿರುವುದಿಲ್ಲ ಹಾಗೇ ಮರೆತು ಹೋಗುತ್ತಾರೆ.

ನನ್ನ ತಂದೆಯವರ ಹತ್ತಿರ ಕೆಲಸವನ್ನು ಮಾಡಿಸಿಕೊಳ್ಳುವವರಲ್ಲಿ ಕೆಲವರು ಹಣವನ್ನು ಮುಂದಿಟ್ಟು ಕುಳಿತುಕೊಳ್ಳುತ್ತಾರೆ. ಆಗ ನನ್ನ ತಂದೆಯವರು 'ಮೊದಲು ಹಣವನ್ನು ಮನೆಯಲ್ಲಿ ಇಟ್ಟು ಬನ್ನಿ' ಎಂದು ಹೇಳುತ್ತಿದ್ದರು.

ನಮ್ಮ ಮನೆಗೆ ಭಾಗ್ಯ ಎಂಬ ಕೆಲಸದವಳು ಬರುತ್ತಿದ್ದಳು. ಜೊತೆಯಲ್ಲಿ ಅವಳ ಅಂಬೆಗಾಲಿಡುವ ಮಗುವೂ ಬರುತ್ತಿತ್ತು. ನಮ್ಮ ತಂದೆಯವರು ಆ ಮಗುವನ್ನು ನೋಡಿ ಊಟದ ಮನೆಗೆ ಬಂದು ಎರಡು ಬಾಳೆಹಣ್ಣು ತೆಗೆದುಕೊಂಡು ಆ ಮಗುವಿಗೆ ಕೊಟ್ಟರು. ಮತ್ತೆ ಇನ್ನೊಂದು ದಿನ ನನ್ನ ತಂದೆ ಆ ಮಗುವನ್ನು ನೋಡಿದರು. ಮತ್ತೆ ಊಟದ ಮನೆಗೆ

ಹೋದರು ಅಲ್ಲಿ ಹಣ್ಣು ಇರಲಿಲ್ಲ. ತಮ್ಮ ಕೋಣೆಗೆ ಹೋಗಿ ಬೀರುವಿನ ಬಾಗಿಲು ತೆಗೆದು ಗೋಡಂಬಿ - ದ್ರಾಕ್ಷಿಗಳನ್ನು ತೆಗೆದುಕೊಂಡು ಆ ಮಗುವಿನ ಕೈಗೆ ಕೊಟ್ಟರು. ಈ ದೃಶ್ಯವನ್ನು ನೋಡಿದ ನನಗೆ ನಗುವಿನ ಜೊತೆ ಸಂತೋಷವೂ ಆಯಿತು.

ನಾನು ಮೊದಲನೇ ಮಗುವಿನ ಬಾಣಂತನದಲ್ಲಿ ಚಪ್ಪಲಿಯನ್ನು ಹಾಕಿಕೊಂಡು ಅಡಿಗೆ ಮನೆಗೆ ಬಂದೆ. ಇದನ್ನು ನೋಡಿದ ನನ್ನ ತಂದೆ ನನಗೆ ಬೈದರು. ನನ್ನ ತಾಯಿಯವರು ನನ್ನ ತಂದೆಯನ್ನು ಕುರಿತು "ಹೆಣ್ಣುಮಕ್ಕಳು ಇರುವ ಮನೆಯಲ್ಲಿ ಬೆಳೆದಿದ್ದರೆ ತಾನೆ!" ಎಂದು ಗೊಣಗಿದರು.

ಒಂದು ದಿನ ನಾನು ಚಿಕ್ಕವಳಿದ್ದಾಗ ನನ್ನ ತಂದೆಯವರು ತಮ್ಮ ಸಂಸಾರದೊಂದಿಗೆ ದವಾಖಾನೆಗೆ ಹೋಗಿದ್ದರು. ಅಲ್ಲಿ ಬೆಳಗ್ಗೆ ಹತ್ತೂವರೆಯಿಂದ ಮಧ್ಯಾಹ್ನ ಒಂದೂವರೆವರೆಗೂ ಕಾದರು. ನನ್ನ ತಂದೆಗೆ ಸಿಟ್ಟು ಬಂದು, ಅಲ್ಲಿಯೇ ನನ್ನ ಅಮ್ಮನನ್ನು "ನನ್ನ ಕೆಲಸವನ್ನೆಲ್ಲಾ ನೀನು ಹಾಳುಮಾಡಿದೆ" ಎಂದು ಬೈದರು.

ನನ್ನ ತಂದೆಯವರು 'ಮುಡುಕು ತೊರೆ' ದೇವಸ್ಥಾನಕ್ಕೆ ಹೋಗಿದ್ದರು. ಅಲ್ಲಿ ಒಬ್ಬ ಹೆಣ್ಣು ಮಗಳು ನನ್ನ ತಂದೆಯವರನ್ನು ನೋಡಿ ಕಾಲಿಗೆ ಬಿದ್ದು ನಮಸ್ಕರಿಸಿದಳು. 'ಯಾರಮ್ಮ ನೀನು' ಎಂದು ನನ್ನ ತಂದೆಯು ಆಕೆಯನ್ನು ಕೇಳಿದಾಗ 'ನಾನು ಅಮೇರಿಕಾಗೆ ಹೋಗುವುದಕ್ಕೆ ಎರಡು ವರುಷದಿಂದ ವೀಸಾ ಸಿಕ್ಕಿರಲಿಲ್ಲ ಸಾರ್. ನೀವು ಬೇಗ ಮಾಡಿಸಿಕೊಟ್ಟಿರಿ' ಎಂದು ಪರಿಚಯಮಾಡಿಕೊಂಡರು. ಹೀಗೆ ನಮ್ಮ ತಂದೆಯನ್ನು ಜನರೆಲ್ಲ ಹೊಗಳುತ್ತಿರುತ್ತಾರೆ. ನಮ್ಮ ಮನೆಯಲ್ಲಿ ಅವರ ಬಗ್ಗೆ ಅಸಮಾಧಾನವಿದೆ. ಜೊತೆಗೆ ಅವರ ಮೇಲೆ ಪ್ರೀತಿ ವಿಶ್ವಾಸವೂ ಇದೆ.

***

# ಶಿಸ್ತು, ಲೆಕ್ಕಾಚಾರಗಳ ಮೂರ್ತರೂಪ

ಆರ್. ಮಧುಶಂಕರ್

ನಮ್ಮ ಅಪ್ಪಾಜಿ ಬಗ್ಗೆ ಏನಾದರೂ ಹೇಳಲು ನನಗೆ ತುಂಬಾ ಸಂಕೋಚ ಅಥವಾ ಏನು ಹೇಳಬೇಕು ಎನ್ನುವುದು ಕೂಡ ಗೊತ್ತಾಗುತ್ತಿಲ್ಲ. ನಮ್ಮ ತಾಯಿ ಹಾಗೂ ಅಪ್ಪಾಜಿ ಅವರುಗಳು ನಮ್ಮನ್ನು ಹೇಗೆ ಬೆಳೆಸಿದ್ದಾರೆಂದರೆ, ಈಗಲೂ ನಮ್ಮ ಮನೆಯಲ್ಲಿ ಬೇರೆ ಶ್ರೀಮಂತರ ಮನೆಯಲ್ಲಿರುವ ಭೋಗ ವಸ್ತುಗಳು ಇಲ್ಲ. ಹಿಂದಿನ ಕಾಲದ ಯಜಮಾನರ ಮನೆಯಲ್ಲಿರುವಂತೆ ಹಳೆಯ ಫರ್ನೀಚರ್ ನಮ್ಮ ಮನೆಯಲ್ಲಿದೆ. ನನ್ನ ಮಡದಿ, ನಮ್ಮ ಅಕ್ಕ, ಮತ್ತು ತಾಯಿ ಇವರುಗಳು ಸೇರಿಕೊಂಡು ದಿನನಿತ್ಯ ಅಡಿಗೆ ಕೆಲಸ ಮಾಡುತ್ತಾರೆ. ಅಡುಗೆಗೆ ಕೆಲಸದವರನ್ನು ಇಟ್ಟುಕೊಳ್ಳಬೇಕು ಅಥವಾ ಕಾರು ತೊಳೆಯಲಿಕ್ಕೆ ಒಬ್ಬ ಹುಡುಗನನ್ನು ಇಟ್ಟುಕೊಳ್ಳಬೇಕು ಎಂಬ ಕಲ್ಪನೆ ಕೂಡ ನಮಗೆ ಬಂದಿಲ್ಲ. ನಾನು ಶಾಲೆಗೆ ಹೋಗಬೇಕಾದರೆ ನನ್ನ ಬಟ್ಟೆ ನಾನೇ ಇಸ್ತ್ರಿ ಮಾಡಿಕೊಳ್ಳಬೇಕು ಎನ್ನುವುದು ನಮ್ಮ ತಂದೆಯವರ ಆದೇಶವಾಗಿತ್ತು. ಅದು ನಮ್ಮ ಮನೆಯವರು ಪಾಲಿಸಬೇಕಾದಂತಹ ನಿಯಮವಾಗಿತ್ತು. ನಮ್ಮ ತಂದೆಗೆ ಗಲೀಜು ಕಂಡರೆ ಭಯಂಕರ ಕೋಪ. ಅದು ಅಡುಗೆ ಮನೆಯಲ್ಲಿರುವ ಗಲೀಜಾಗಿರಬಹುದು ಅಥವಾ ವ್ಯಕ್ತಿಗಳಲ್ಲಿರುವ ಗಲೀಜಾಗಿರಬಹುದು. ಯಾವುದನ್ನೂ ಅವರು ಸಹಿಸುತ್ತಿರಲಿಲ್ಲ. ಗಂಡು ಮಕ್ಕಳಾಗಲಿ, ಹೆಣ್ಣುಮಕ್ಕಳಾಗಲಿ ನೀಟಾಗಿ ಕಾಣಬೇಕು. ಅಸಹ್ಯವಾಗಿ ಕೂದಲು ಬಿಟ್ಟುಕೊಂಡರೆ ಅವರು ನಮ್ಮನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ನನ್ನನ್ನಂತೂ ಅವರು ಸಲೂನ್ ಶಾಪ್‌ಗೆ ಕರೆದುಕೊಂಡು ಹೋಗಿದ್ದುಂಟು. ಬಟ್ಟೆಯಲ್ಲೂ ಅಷ್ಟೆ ಸ್ವಚ್ಛತೆ ಹಾಗೂ ಕಣ್ಣಿಗೆ ಹಿತವಾಗಿರಬೇಕು ಎಂದು ಅವರು ಆಗಾಗ್ಗೆ ಹೇಳುತ್ತಿದ್ದರು. ನಮ್ಮ ತಂದೆಯವರಷ್ಟು ಲೆಕ್ಕಾಚಾರದವರನ್ನು ಕಾಣುವುದು ಅಪರೂಪ. ನಮ್ಮ ಮರಳವಾಡಿಗೆ ಒಂಬತ್ತು ಕಿಲೋಮೀಟರ್ ದೂರದಲ್ಲಿ ಶೀತಲವಾಡಿ ಬಳಿ ನಮ್ಮ ಜಮೀನು ಇದೆ. ಪ್ರತಿನಿತ್ಯ ನಾನು ಇಲ್ಲಿಂದ ಬಸ್ಸಿನಲ್ಲಿ ಮರಳವಾಡಿಗೆ ಹೋಗಿ ಅಲ್ಲಿಂದ ಸೈಕಲ್‌ನಲ್ಲೋ ಅಥವಾ ನಡೆದುಕೊಂಡೋ ಶೀತಲವಾಡಿಗೆ ಹೋಗುತ್ತಿದ್ದೆ. ಆ ಜಮೀನಿನ ಕೆಲಸವನ್ನು ಮುಗಿಸಿ ಹಾಗೆಯೇ ಬಸ್ಸಿನಲ್ಲಿ ಬರುತ್ತಿದೆ. ಒಮ್ಮೊಮ್ಮೆ ನಮ್ಮ ತಂದೆಯವರು

ಜೀಪಿನಲ್ಲಿ ಬರುತ್ತಿದ್ದುದು ಉಂಟು. ಹೆಚ್ಚು ಕಡಿಮೆ ೧೯೬೮ರಿಂದ ನಾನೇ ಜಮೀನಿನ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿದ್ದೇನೆ. ಆಗ ನನ್ನ ಕೈಗೆ ಅವರು ಜಮೀನಿನ ಖರ್ಚಿಗೆ ದುಡ್ಡು ಕೊಡುತ್ತಿದ್ದರು. ಕೊಟ್ಟ ಹಣದ ಬಗ್ಗೆ ಅವರು ಲೆಕ್ಕ ಕೇಳುತ್ತಿದ್ದ ರೀತಿಯೇ ಬೇರೆ. ಪ್ರತಿಯೊಂದಕ್ಕೂ ಲೆಕ್ಕ ಬರೆದು ಆ ವಿವರಗಳನ್ನು ಕೊಟ್ಟ ನಂತರವೇ ಅವರು ಮುಂದಿನ ಬಾಬ್ತಿಗೆ ಹಣ ಕೊಡುತ್ತಿದ್ದರು. ಈಗಲೂ ಕೂಡ ಅವರು ಮಾಡುವಷ್ಟು ಅಚ್ಚುಕಟ್ಟು ಲೆಕ್ಕವನ್ನು ನಮ್ಮ ಮನೆಯಲ್ಲಿ ಯಾರೂ ಮಾಡುವುದಿಲ್ಲ. ಅವರು ವಿದೇಶಗಳಿಗೆ ಹೋದ ಸಂದರ್ಭದಲ್ಲೂ ಅಷ್ಟೆ, ತುಂಬಾ ಅಚ್ಚುಕಟ್ಟಾಗಿ ಆ ಪ್ರವಾಸದ ಲೆಕ್ಕಾಚಾರದ ವಿವರಗಳನ್ನು, ತಮ್ಮನ್ನು ಕರೆಸಿಕೊಂಡಂತಹ ಸಂಸ್ಥೆಗೆ ಒದಗಿಸುತ್ತಾರೆ. ಅವರು ಹೇಳುತ್ತಿದ್ದುದು ಇಷ್ಟೆ, 'ನೀವು ಯಾವುದಕ್ಕಾದರೂ ಖರ್ಚು ಮಾಡಿ, ಸಿನಿಮಾ ನೋಡಿ, ಹೋಟೆಲ್‌ನಲ್ಲಿ ತಿಂಡಿ ತಿನ್ನಿ, ಬೇಕಾದ ಬಟ್ಟೆ ಕೊಂಡುಕೊಳ್ಳಿ ಆದರೆ ಅದನ್ನು ಬರೆದಿಡಿ.' ಅಂದರೆ, ವ್ಯಕ್ತಿಗೆ ತನ್ನ ಉತ್ಪನ್ನ ಹಾಗೂ ಖರ್ಚು ಹೇಗೆ ಇರುತ್ತದೆ ಎಂಬುದನ್ನು ತಿಳಿದುಕೊಳ್ಳುವುದು ಅವರ ಮೂಲ ಉದ್ದೇಶ. ಎಷ್ಟೇ ಕಷ್ಟವಾದರೂ ನಿಜ ಹೇಳುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು. ಒಂದು ಸಲ ಸುಳ್ಳು ಹೇಳಿದರೆ ಅದನ್ನು ಸಮರ್ಥಿಸುವುದಕ್ಕೆ ನೂರು ಸುಳ್ಳುಗಳನ್ನು ಹೇಳಬೇಕಾಗುತ್ತದೆ. ನಿಜ ಹೇಳುವುದನ್ನು ಅಭ್ಯಾಸ ಮಾಡಿಕೊಂಡರೆ ಜೀವನದಲ್ಲಿ ಕಷ್ಟವೇ ಬರುವುದಿಲ್ಲ ಎಂದು ನಮ್ಮ ತಂದೆಯವರು ಹೇಳುತ್ತಿರುತ್ತಾರೆ. ಈ ಮಾತು ನಮ್ಮಗಳಿಗೆಲ್ಲಾ ಸದಾ ಮಾರ್ಗದರ್ಶನ ನೀಡಿದೆ.

ಅವರು ಭಾನುವಾರ ಮನೆಯಲ್ಲಿದ್ದರೆ ಮಕ್ಕಳು, ಸೊಸೆಯಂದಿರು, ಅಳಿಯಂದಿರು ಎಲ್ಲಾ ಸೇರಿ ಜೊತೆಯಲ್ಲೇ ಊಟ ಮಾಡಬೇಕು. ಇಂತಹ ಅವಕಾಶವನ್ನು ಕಳೆದುಕೊಳ್ಳಬಾರದು ಎನ್ನುವುದೇ ಅವರ ಕಾಳಜಿ. ನೀವು ಎಷ್ಟು ಚೆನ್ನಾಗಿ ಮನೆಯವರ ಜೊತೆ ಇರುತ್ತೀರೋ ಅಷ್ಟೇ ಬೇರೆಯವರ ಹತ್ತಿರ ಚೆನ್ನಾಗಿರಲು ಸಾಧ್ಯ. ನೀವು ನಗುನಗುತ್ತಾ ನಿಮ್ಮ ಮನೆಯವರ ಜೊತೆ ಇದ್ದರೆ ಅದೇ ಅಭ್ಯಾಸ ನಿಮ್ಮಲ್ಲಿ ರೂಢಿಯಾಗಿ ಎಲ್ಲರಲ್ಲೂ ನೀವು ಹಾಗೆಯೇ ಇರುತ್ತೀರಿ ಎಂದು ಅವರು ಹೇಳುತ್ತಾರೆ. ಅವರು ನಮಗೆಂದೂ ಮಹತ್ವಾಕಾಂಕ್ಷಿಗಳಾಗಿರಬೇಕೆಂದು ಪ್ರಯತ್ನಪಟ್ಟು, ಅದು ಸಿಗದೇ ಇರುವಾಗ ಆಗುವ ದುಃಖವನ್ನು ಅನುಭವಿಸುವುದು ಹೇಗೆ? ಎಂಬುದು ಅವರ ಪ್ರಶ್ನೆ. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು, ತೃಪ್ತಿಯನ್ನು ನಮ್ಮ ಅಂತರಂಗದಿಂದ ಗಳಿಸಿಕೊಳ್ಳದೇ ಇದ್ದರೆ ನಾವೇನೂ ಸಾಧಿಸುವುದಕ್ಕೆ ಆಗುವುದಿಲ್ಲ ಅಂತ ಯಾವಾಗಲೂ ಹೇಳುತ್ತಾರೆ. ಅಪ್ಪಾಜಿಯವರು ಶಿಸ್ತಿಗೆ ತುಂಬಾ ಬೆಲೆ ಕೊಡುವವರು. ನಿಗದಿತ ಸಮಯದಲ್ಲಿ ಶ್ರದ್ಧೆಯಿಂದ ಕೆಲಸ ಮಾಡಬೇಕು. ಯಾವುದೇ ಕಾರಣಕ್ಕೂ ನಿಜಪಥ ಬಿಟ್ಟು ಅತ್ತ ಸರಿಯಬಾರದು. ದೇವರಲ್ಲಿ ಅಚಲ ನಂಬಿಕೆ ಇಟ್ಟುಕೊಂಡು ಶ್ರದ್ಧೆಯಿಂದ ಕೆಲಸ ಮಾಡಿದರೆ ಸೋಲಾಗುವುದೇ ಇಲ್ಲ ಎನ್ನುವುದು ಅವರ ಸಿದ್ಧಾಂತ. ನಮ್ಮ ತಾಯಿ, ನಮ್ಮ ತಂದೆ ಇಬ್ಬರೂ ಕೂಡ ಏಕಮನಸ್ಕರು. ಇಬ್ಬರಲ್ಲೂ ಅಪಾರವಾದ ದೈವ ಶ್ರದ್ಧೆ ಇದೆ. ಯಾವುದನ್ನು ದೇವರು ಕೊಟ್ಟಿದ್ದಾನೋ ಅದನ್ನು ಸಂತೋಷದಿಂದ

ಅನುಭವಿಸಬೇಕು. ದೊರೆಯದಿರುವ ವಸ್ತುವನ್ನು ನೆನೆಸಿಕೊಂಡು ದುಃಖಪಡಬಾರದು. ನಮ್ಮಜ್ಜ ನಿಜಲಿಂಗಪ್ಪನವರನ್ನು ಕಂಡರೆ ನಮ್ಮ ಅಪ್ಪಾಜಿಗೆ ತುಂಬಾ ಪ್ರೀತಿ. ಅವರು ಬಂದಾಗೆಲ್ಲಾ ನಮ್ಮನ್ನು 'ಕುಮಾರ ಕೃಪಾ'ಗೆ ಕರೆದುಕೊಂಡು ಹೋಗಿ ಅವರಿಂದ ಆಶೀರ್ವಾದ ಮಾಡಿಸುತ್ತಿದ್ದರು. ಇಲ್ಲವೆ, ಅವರನ್ನೇ ಮನೆಗೆ ಕರೆದುಕೊಂಡು ಬರುತ್ತಿದ್ದರು. ನಾನು ಯಾವುದಾದರೂ ಸಭೆ ಸಮಾರಂಭಕ್ಕೆ ಹೋದಾಗೆಲ್ಲಾ ಜನ - ನೀನು ರಾಜಶೇಖರನ್‌ರವರ ಮಗ ಅಲ್ಲವೇ, ಅವರು ಬಿಡಪ್ಪ ಈ ಕಾಲದ ಅಪರೂಪದ ವ್ಯಕ್ತಿಗಳು ಎಂದು ಹೇಳಿದಾಗ ನಮ್ಮ ಅಪ್ಪಾಜಿ ಬಗ್ಗೆ ನನಗೆ ಹೆಮ್ಮೆ ಆಗುತ್ತದೆ. ಅವರ ಆದರ್ಶಗಳನ್ನು ಒಂದಿಷ್ಟಾದರೂ ಪಾಲಿಸಬೇಕೆಂಬ ಬದ್ಧತೆ ನಮ್ಮ ಕುಟುಂಬದ ಎಲ್ಲರಲ್ಲೂ ಇದೆ.

ಅಮೆರಿಕಾದ ಜಾನ್ ಕೆನಡಿ ಅವರ ವಂಶಸ್ಥರ ಕಥೆಯನ್ನು ಅಪ್ಪಾಜಿ ಯಾವಾಗಲೂ ಹೇಳುತ್ತಿರುತ್ತಾರೆ. ಕೆನಡಿ ವಂಶಸ್ಥರು ಅಮೇರಿಕಾದ ವಿವಿಧ ಕಡೆ ಹಂಚಿಹೋಗಿದ್ದಾರೆ. ಆದರೆ ಯಾವುದಾದರೂ ಒಂದು ಸಂದರ್ಭದಲ್ಲಿ ಅವರೆಲ್ಲಾ ಒಂದು ಕಡೆ ಸೇರಿ ತಮ್ಮ ಕಷ್ಟ-ಸುಖಗಳನ್ನು ಹಂಚಿಕೊಂಡು ತಮ್ಮ ಕುಟುಂಬದ ಭಾವೈಕ್ಯತೆಯನ್ನು ಪ್ರದರ್ಶಿಸುತ್ತಾರೆ. ಹಾಗೆಯೇ ನಮ್ಮ ಕುಟುಂಬ ಆಗಬೇಕು ಎಂಬುದು ಅವರ ಹಿರಿದಾದ ಆಸೆ. ಅದು ನಮ್ಮ ಗುರಿಯೂ ಹೌದು.

***

# ರುಚಿಕಟ್ಟಾದ ಅಡುಗೆ ಬಯಸುವ ಮಾವನವರು

ಉಮಾ ರವಿಶಂಕರ್

ಪೂಜ್ಯರಾದ ನನ್ನ ಮಾವನವರ ಬಗ್ಗೆ ಬರೆಯಬೇಕೆಂದರೆ ನಾನು ಕೈಲಿ ಹಿಡಿದ ಲೇಖನಿಯೇ ತಡವರಿಸುತ್ತಿದೆ. ಅವರ ಬಗ್ಗೆ ಏನು ಬರೆಯಲಿ ಎಂದು ಯೋಚಿಸುವಂತಾಗಿದೆ. ನಾನು ಅವರಿಗೆ ದೊಡ್ಡ ಸೊಸೆ. ನಮ್ಮದು ದಾವಣಗೆರೆ. ನಮ್ಮ ತಂದೆ ಚೆನ್ನಪ್ಪ, ಮುಳುಗುಂದ ದೊಡ್ಡ ಇಂಡಸ್ಟ್ರಿಯಲಿಸ್ಟ್. ತಾಯಿ ಶಾರದಮ್ಮ. ನಾವು ಒಟ್ಟು ಐದು ಜನ ಹೆಣ್ಣು ಮಕ್ಕಳು. ಎಲ್ಲರ ಮದುವೆಯೂ ಆಗಿದೆ. ಸುಖವಾಗಿದ್ದೇವೆ. ನಮ್ಮ ತಂದೆಯವರು ನಮ್ಮನ್ನು ಪದವಿವರೆಗೂ ಓದಿಸಿದ್ದಾರೆ. ನಾನು ಬಿ.ಎಸ್‌ಸಿ. ಹೋಂ ಸೈನ್ಸ್ ಮಾಡಿಕೊಂಡಿರುವೆ. ನಮ್ಮ ಮನೆಯಲ್ಲಿ ರಾಜಕೀಯ ವಾತಾವರಣ ಇರಲಿಲ್ಲ. ನನ್ನ ಮದುವೆಯಾದ ಮೇಲೆ ನನಗೆ ನಮ್ಮ ಮಾವನವರ ಮನೆಯಲ್ಲಿನ ವಾತಾವರಣ ಬೇಕೆನಿಸಿತು. ಮೊದಲು ನನಗೆ ಈ ವಾತಾವರಣಕ್ಕೆ ಹೊಂದಿಕೊಳ್ಳುವುದು ತುಂಬಾ ಕಷ್ಟವೆನಿಸಿತು. ನನ್ನ ಪತಿ ರವಿಶಂಕರ್. ಶ್ರೀ ಎಂ.ವಿ.ರಾಜಶೇಖರನ್ ಅವರ ಮೊದಲನೆಯ ಮಗ. ನಮಗೆ ಒಬ್ಬನೇ ಮಗ ವರುಣ್. ಟಾಟಾ ಸಿಲ್ಕ್ ಫಾರಂನ ಕುಮಾರನ್ಸ್ ಶಾಲೆಯಲ್ಲಿ ಆರನೆಯ ತರಗತಿ ಓದುತ್ತಿರುವನು. ನಮ್ಮ ಮದುವೆ ೧೯೯೦ರಲ್ಲಿ ದಾವಣಗೆರೆಯಲ್ಲಿ ನಡೆಯಿತು. ನಮ್ಮ ತಂದೆಯವರಿಲ್ಲ. ಈಗ ನಮ್ಮ ತಾಯಿಯವರು ಬೆಂಗಳೂರಿನಲ್ಲಿ ತಮ್ಮ ಮೊಮ್ಮಗಳ ಜೊತೆ ಇರುತ್ತಾರೆ.

ಮದುವೆಯಾದ ಹೊಸದರಲ್ಲಿ ನಮ್ಮ ಮನೆಯ ವಾತಾವರಣಕ್ಕೂ ನಮ್ಮ ಮಾವನವರ ಮನೆಯ ವಾತಾವರಣಕ್ಕೂ ವ್ಯತ್ಯಾಸವಿತ್ತು. ನನ್ನ ತಂದೆಯವರ ಹತ್ತಿರ ಹೇಗೆ ಇರುತ್ತಿದ್ದೆನೋ ಹಾಗೆಯೇ ಇಲ್ಲಿಯೂ ಇರುತ್ತಿದ್ದೆ. ನಮ್ಮ ತಾಯಿಯವರ ಮನೆಯಲ್ಲಿ ನನ್ನನ್ನು ತುಂಬಾ ಮುದ್ದಾಗಿ ಬೆಳೆಸಿದ್ದರು. ಮನೆಯ ಕೆಲಸವಂತೂ ನನಗೆ ಬರುತ್ತಲೇ ಇರಲಿಲ್ಲ. ಇನ್ನು ಅಡುಗೆ ಕೆಲಸದ ಬಗ್ಗೆ ನಾನು ಹೇಳುವುದೇ ಬೇಡ. ಹೀಗೆ ಬೆಳೆದ ನಾನು ಇಲ್ಲಿನ ವಾತಾವರಣಕ್ಕೆ ನನ್ನನ್ನು ಒಗ್ಗಿಸಿಕೊಳ್ಳಲು ತುಂಬಾ ವರುಷಗಳೇ ಬೇಕಾದವು.

ನನಗೆ ಎಲ್ಲಾ ರೀತಿಯಲ್ಲೂ ಮಾರ್ಗದರ್ಶನ ನೀಡಿ ಈ ಸುಖ-ಸಂಸಾರದಲ್ಲಿ ಒಂದಾಗುವಂತೆ ಮಾಡಿದವರೆಂದರೆ ನನ್ನ ಪೂಜ್ಯ ಅತ್ತೆಯವರು.

ನಮ್ಮ ಮಾವನವರಾದ ಪೂಜ್ಯ ಶ್ರೀ ಎಂ.ವಿ.ರಾಜಶೇಖರನ್ ಅವರ ಸ್ವಭಾವ ತಿಳಿಯಲು ನನಗೆ ಎರಡು ವರುಷಗಳು ಬೇಕಾದವು. ಅವರಿಗೆ ಕೋಪ ಜಾಸ್ತಿ ಎಂದು ಕ್ರಮೇಣ ಗೊತ್ತಾಯಿತು. ಅಡುಗೆ ಮಾಡುವಾಗ ಸ್ವಲ್ಪ ರುಚಿಯಲ್ಲಿ ವ್ಯತ್ಯಾಸವಾಗುತ್ತಿತ್ತು. ಆಗ ನಮ್ಮ ಮಾವನವರು "ಏನಮ್ಮಾ ಉಮಾ, ನಮ್ಮ ಮನೆಗೆ ಬರುವ ಅತಿಥಿ ಅಭ್ಯಾಗತರು ಈ ರೀತಿ ಅಡುಗೆ ಮಾಡಿದರೆ ಹೇಗೆ ಊಟ ಮಾಡುತ್ತಾರೆ" ಎಂದು ನನ್ನನ್ನು ಎಚ್ಚರಿಸುತ್ತಿದ್ದರು. ಅವರಿಗಂತೂ ಪ್ರತಿನಿತ್ಯ ರುಚಿಕಟ್ಟಾದ ಅಡುಗೆ ಮಾಡಲೇಬೇಕಾಗಿತ್ತು.

ನಮ್ಮ ಮಾವನವರಿಗೆ ಸಿಟ್ಟು ಬಂದಾಗ ನಾವ್ಯಾರೂ ಅವರೆದುರು ಇರುವುದಿಲ್ಲ. ಪರಿಸ್ಥಿತಿ ಶಾಂತವಾದ ಮೇಲೆಯೇ ನಾವೆಲ್ಲರೂ ಒಟ್ಟಿಗೆ ಕುಳಿತು ಊಟ ಮಾಡುವುದು, ಟಿ.ವಿ.ನೋಡುವುದು, ಮಾತನಾಡುವುದು.

ನಾನಾಗಲಿ, ನನ್ನ ಪತಿಯಾಗಲಿ ನಾವು ಎಂ.ಪಿ. ಅವರ ಮನೆಯವರೆಂದು ಎಂದೂ ಹೆಮ್ಮೆಪಟ್ಟುಕೊಂಡಿಲ್ಲ. ಅದರಂತೆ ಅವರ ಅಧಿಕೃತ ಕಾರನ್ನು ಯಾವುದೇ ವ್ಯವಹಾರಕ್ಕೂ ನಾವು ಬಳಸಿಕೊಂಡಿಲ್ಲ. ನಾವು ಅವರ ಹೆಸರನ್ನು ಯಾವ ಸಂದರ್ಭದಲ್ಲೂ ಎನ್‌ಕ್ಯಾಷ್ ಮಾಡಿಕೊಂಡಿಲ್ಲ ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ.

ನಮ್ಮ ಅತ್ತೆಯವರ ಕಣ್ಗಾವಲಿನಲ್ಲಿ ನಾನು ಎಲ್ಲಾ ವಿಧದ ಅಡುಗೆ ಮಾಡುವುದನ್ನು ಕಲಿತಿದ್ದೇನೆ. ನಮ್ಮ ಮಾವನವರ ಮನಸ್ಸನ್ನು ಅರಿತು ಯಾವ ರೀತಿಯಾಗಿ ಇರಬೇಕೋ ಅದೇ ರೀತಿಯಾಗಿ ಅವರೊಂದಿಗೆ ಹೊಂದಿಕೊಂಡಿರುವೆ. ಅವರನ್ನು ಕಂಡರೆ ಭಯ; ಜೊತೆಗೆ ಗೌರವವೂ ನನ್ನಲ್ಲಿದೆ. ನಮ್ಮ ಮಾನವರಿಗೆ ಕರಿದ ತಿಂಡಿ ಎಂದರೆ ತುಂಬಾ ಇಷ್ಟ. ಯಾವಾಗಲೂ 'ಉಮಾ ಚಕ್ಕುಲಿ, ಕೋಡುಬಳೆ ಮಾಡಮ್ಮ' ಎಂದು ಹೇಳುತ್ತಲೇ ಇರುತ್ತಾರೆ. ನಮ್ಮ ಅತ್ತೆಯವರಿಂದ ಜವಾಬ್ದಾರಿಯನ್ನು ಕಲಿತುಕೊಂಡು ಈ ಸಂಸಾರದಲ್ಲಿ ದೊಡ್ಡ ಸೊಸೆಯಾಗಿ ಎಲ್ಲರೊಂದಿಗೂ ಬೆರೆತು ಬಾಳುತ್ತಿರುವೆ.

***

# ಅವಿಶ್ರಾಂತ ದುಡಿಮೆಯ ನಮ್ಮಜ್ಜ

**ವರುಣ್ ರವಿಶಂಕರ್**

ನಮ್ಮ ತಾತ, ಪೂಜ್ಯ ರಾಜಶೇಖರನ್ ಅವರು ನಮ್ಮನ್ನೆಲ್ಲಾ ತುಂಬಾ ಅಕ್ಕರೆಯಿಂದ ಬೆಳೆಸಿದ್ದಾರೆ. ನಾವು ಐದು ಜನ ಮೊಮ್ಮಕ್ಕಳಿದ್ದೇವೆ. ಅವರು ಬೇರೆ ಯಾವುದಾದರೂ ದೇಶಕ್ಕೆ ಹೋದರೆ ಮನೆಗೆ ಆಗಾಗ್ಗೆ ದೂರವಾಣಿ ಮಾಡುತ್ತಿರುತ್ತಾರೆ. ಅಂತಹ ಸಂದರ್ಭದಲ್ಲಿ ತಪ್ಪದೇ ನಮ್ಮ ಜೊತೆಯಲ್ಲಿ ಮಾತನಾಡುತ್ತಾರೆ. ನನ್ನ ತಂಗಿ ಸ್ಫೂರ್ತಿಯನ್ನು ಕಂಡರೆ ಅವರಿಗೆ ತುಂಬಾ ಇಷ್ಟ. ಭಾನುವಾರನೋ ಅಥವಾ ಅವರಿಗೆ ಬಿಡುವಿದ್ದ ಯಾವ ದಿನವಾದರೂ ಸರಿ ನಮ್ಮನ್ನೆಲ್ಲಾ ಕರೆದುಕೊಂಡು ಆಚೆ ಕಡೆಗೆ ಹೋಗುತ್ತಾರೆ. ಅಜ್ಜನ ಜೊತೆಯಲ್ಲಿ ಹೊರಗೆ ಹೋಗುವುದೇ ತುಂಬಾ ಖುಷಿ ತರುವಂತಹ ವಿಚಾರ. ನಮ್ಮಜ್ಜನಿಗೆ ಬೇಗ ಸಿಟ್ಟು ಬರುತ್ತದೆ. ಸಿಟ್ಟು ಯಾಕೆ ಬರುತ್ತದೆಂದರೆ ಅವರು ಹೇಳಿದ ಕೆಲಸ ನಾವ್ಯಾರೂ ಸರಿಯಾಗಿ ಮಾಡದೇ ಹೋದ್ರೆ, ಆಗ ಅವರಿಗೆ ಸಿಟ್ಟು ಉಕ್ಕಿ ಹರಿಯುತ್ತದೆ. ಆ ಸಿಟ್ಟು ಬಹಳ ಹೊತ್ತು ಇರುವುದಿಲ್ಲ. ಒಂದು ಗಂಟೆಯೊಳಗೆಲ್ಲಾ ತಣ್ಣಗಾಗಿಬಿಡುತ್ತಾರೆ. ಯಾವುದೇ ಕೆಲಸವಾದ್ರೂ ಶ್ರದ್ಧೆಯಿಂದ ಮಾಡಬೇಕು. ದೋಷರಹಿತವಾಗಿ ಆ ಕೆಲಸ ಆಗಿರಬೇಕೆಂಬುದು ಅವರ ಅಭಿಪ್ರಾಯ. ಸಣ್ಣ ಕೆಲಸ ಅಂತ ಹೇಳಿ ಅವರು ಅದನ್ನು ಅಸಡ್ಡೆ ಮಾಡಲ್ಲ. ಒಂದು ಪೆನ್ನಿಗೆ ಇಂಕು ಹಾಕಬೇಕಾದರೆ ಎಷ್ಟು ಆಸಕ್ತಿ ವಹಿಸುತ್ತಾರೋ, ಅಷ್ಟೇ ಆಸಕ್ತಿಯನ್ನು ಅವರು ಬೇರೆಯವರಿಗೆ ಕಾಗದ ಬರೆಯಬೇಕಾದರೂ ವಹಿಸುತ್ತಾರೆ. ಯಾವಾಗಲೂ ನಮ್ಮೊಡನೆ ಜಪಾನ್ ದೇಶವನ್ನು ನಮ್ಮಜ್ಜ ವರ್ಣಿಸುತ್ತಿರುತ್ತಾರೆ. ಜಪಾನಿಯರು ಸಣ್ಣ ಕೆಲಸವಾದರೂ ಹೇಗೆ ಆಸಕ್ತಿಯಿಂದ ಮಾಡುತ್ತಾರೆ. ಅದಕ್ಕಾಗಿ ಆ ದೇಶಕ್ಕೆ ವಿಶ್ವದಲ್ಲೇ ಹೆಚ್ಚಿನ ಮಾನ್ಯತೆ ದೊರಕಿದೆ ಎಂಬುದು ಅವರ ಮಾತಿನ ಸಾರಾಂಶ.

ನಮ್ಮಜ್ಜ ಎಂದೂ ಒಬ್ಬರೇ ಊಟ ಮಾಡುವುದಿಲ್ಲ. ನಮ್ಮನ್ನೆಲ್ಲಾ ಡೈನಿಂಗ್ ಟೇಬಲ್ ಹತ್ತಿರ ಕೂಡಿಸಿ ಆನಂತರ ಅವರು ಕೂತುಕೊಂಡು ಮಾತನಾಡುತ್ತಾ ಊಟ ಮಾಡುತ್ತಾರೆ. ನಮ್ಮ ಮನೆಯಲ್ಲಿನ ಆಹಾರ ಪದ್ಧತಿ ಸಹ ತುಂಬಾ ಸರಳವಾದುದು. ಯಾರೂ ಕೂಡಾ ತಟ್ಟೆಯಲ್ಲಿ

ಊಟವನ್ನ ಹಾಕಿಸಿಕೊಂಡು ಅದನ್ನ ತಿನ್ನದೇ ಕೈ ತೊಳೆಯುವಂತಿಲ್ಲ. ಹಾಗೇನಾದರೂ ಮಾಡಿದರೆ ನಮ್ಮ ದೇಶದಲ್ಲಿ ಎಷ್ಟೋ ಜನರಿಗೆ ಒಂದು ಹೊತ್ತಿಗೂ ಊಟಕ್ಕೆ ಇಲ್ಲವಲ್ಲ ಅಂತ ಹೇಳಿ ನಮ್ಮ ತಪ್ಪು ಅರಿವಾಗುವಂತೆ ಮಾಡುತ್ತಾರೆ. ಬೆಳಗ್ಗೆ ಐದೂವರೆಗೆ ಎದ್ದ ನಮ್ಮಜ್ಜ ಲಾಲ್‌ಬಾಗ್‌ಗೆ ವಾಕಿಂಗ್ ಹೋಗುತ್ತಾರೆ. ೮ ಗಂಟೆಗೆ ಮನೆಗೆ ಬಂದು ದಿನಪತ್ರಿಕೆ ಓದಿ, ಸ್ನಾನ ಪೂಜೆ ಮುಗಿಸಿ ಹತ್ತೂವರೆಗೆ ಕಚೇರಿಗೆ ಹೋಗುವುದಕ್ಕೆ ರೆಡಿಯಾಗುತ್ತಾರೆ. ಇಲ್ಲಿ ಒಂದು ನಿಮಿಷ ಕೂಡಾ ಅವರು ವ್ಯರ್ಥಮಾಡೋಲ್ಲ. ಎಐಆರ್‌ಡಿಯಲ್ಲಿ ಕುಳಿತು ತುಂಬಾ ಕೆಲಸ ಮಾಡುತ್ತಾರೆ. ಮಧ್ಯಾಹ್ನ ಮನೆಗೆ ಬಂದು ಊಟ ಮಾಡಿ ಪುನಃ ಕಚೇರಿಗೆ ಹೋಗುತ್ತಾರೆ ರಾತ್ರಿ ೮ ಗಂಟೆ ತನಕ ಅವರು ವಿಶ್ರಾಂತಿಯನ್ನೇ ತೆಗೆದುಕೊಳ್ಳುವುದಿಲ್ಲ. ಟಿವಿ ನೋಡ್ತಾ, ಅಥವಾ ಇನ್ನ್ಯಾವುದೋ ಹರಟೆ ಹೊಡೆಯುತ್ತಾ ಸಮಯ ವ್ಯರ್ಥ ಮಾಡುವಂತವರಲ್ಲ ನಮ್ಮಜ್ಜ. ಅದನ್ನ ನಾವೆಲ್ಲಾ ಕಲಿಯಬೇಕೆಂಬುದು ಅವರ ಆಸೆ. ನಮ್ಮಜ್ಜಿ ಕೂಡಾ ಸದ್ಗುಣಗಳ ಗಣಿ. ಇವರಿಬ್ಬರೂ ನಮ್ಮನೆಯ ಎರಡು ಕಣ್ಣುಗಳಿದ್ದಂತೆ. ಅವರ ಆಶೀರ್ವಾದದಿಂದ ನಾವೆಲ್ಲಾ ಚೆನ್ನಾಗಿ ಓದಿ ಉತ್ತಮ ನಾಗರಿಕರಾಗುತ್ತೇವೆಂದು ಹೇಳಬಯಸುತ್ತೇನೆ.

❊❊❊

# ತಾತ್ವಿಕ ಬದ್ಧತೆಯ ನನ್ನಣ್ಣ

● ಕೀರ್ತಿಹಾಸನ್

ನನ್ನಣ್ಣ ಎಪ್ಪತ್ತೈದು ವಸಂತಗಳನ್ನು ಪೂರೈಸುತ್ತಿದ್ದಾನೆ. ಈ ಸಂದರ್ಭದಲ್ಲಿ ಅವರ ಸನ್ಮಿತ್ರರು ಹಿತೈಷಿಗಳು ಅವರಿಗೆ ಅಭಿನಂದನ ಗ್ರಂಥವೊಂದನ್ನು ಅರ್ಪಿಸುತ್ತಿರುವ ಸಂಗತಿ ನನಗೆ ಅತೀವ ಸಂತೋಷವನ್ನು ತಂದಿದೆ. ಈ ಮೂಲಕ ನನ್ನಣ್ಣನ ನಿಸ್ವಾರ್ಥದ ಸಾರ್ಥಕ ಜನಸೇವೆಯನ್ನು ಸ್ಮರಿಸುವ, ಅದಕ್ಕಾಗಿ ಅಭಿನಂದಿಸುವ ಮತ್ತು ಅದನ್ನು ಕ್ರೋಢೀಕರಿಸಿ ದಾಖಲಿಸಿರುವ ಮಹತ್ಕಾರ್ಯ ನಡೆದಿದೆ. 'ನಿಮ್ಮಣ್ಣನನ್ನು ಕುರಿತು ಲೇಖನವೊಂದನ್ನು ಬರೆದು ಕೊಡಿ' ಎಂದು ಕೇಳಿರುವರು. ಅದೇನನ್ನು ಬರೆಯಬೇಕು ಎಂದು ಆಲೋಚಿಸತೊಡಗಿದೆ. 'ಮೆಚ್ಚಿ ಬರೆದರೆ' ಹೆಗ್ಗಳಿಕೆ ಎಂದು ಜನರು ಆಡಿಕೊಳ್ಳುತ್ತಾರೆ. ಏನಾದರೂ ತೆಗಳಿ ಬರೆಯೋಣವೆಂದರೆ ಮತ್ತೇನನ್ನೋ ಕಲ್ಪಿಸಿಕೊಂಡು ಹೊಸ ಗಾಯನ ಆರಂಭ ಮಾಡಿಬಿಡುತ್ತಾರೆ. ನನ್ನ ಅಭಿಪ್ರಾಯದಲ್ಲಿ 'ನನ್ನಣ್ಣನ ಬಗೆಗೆ ನಾನೇನು ಬರೆಯಬೇಕು' ಎನ್ನುವುದು ತೋಚುತ್ತಿಲ್ಲ. ಆದರೂ ತೋಚಿದಷ್ಟು ಹೇಳಿಬಿಡುತ್ತೇನೆ.

ನನ್ನಣ್ಣ ಸದುವಿನಯದ ಸಾಕಾರಮೂರ್ತಿ. ಅವನಿಗೆ ರಾಜಕೀಯ ಮಾಡುವುದಕ್ಕಿಂತ ರಾಜಕೀಯೇತರ ಸಮಾಜ ಸೇವೆಯೇ ಹೆಚ್ಚು ಇಷ್ಟ. ದಿನದ ಹದಿನೆಂಟು ಇಪ್ಪತ್ತು ತಾಸು ಅದಾವುದೋ ಗ್ರಾಮೀಣಾಭಿವೃದ್ಧಿ, ಕೃಷಿ ಅಭಿವೃದ್ಧಿ ಎಂದು ಅವರಿವರೊಡನೆ ಮಾತನಾಡಿಕೊಳ್ಳುತ್ತಾನೆ. ನಮ್ಮ ಸಂದರ್ಭದ 'ರಾಜಕೀಯ' ಪದ ಸವಕಳಿಯಾಗಿ ಕ್ಲೀಷೆಯ ಸ್ವರೂಪವನ್ನು ಪಡೆದುಕೊಂಡಿರುವುದರ ಬಗೆಗೆ ಅವನಿಗೆ ಅಸಹನೆಯಿದೆ. ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರೋತ್ತರ ಆಸುಪಾಸಿನಲ್ಲಿ ರಾಜಕೀಯ ಪದಕ್ಕೆ ಪವಿತ್ರ ತಮವಾದ ಅರ್ಥಗಳಿದ್ದುದುಂಟು ಎಂದು ಹೇಳುತ್ತಾ ಅಂತಹ ರಾಜಕಾರಣವೇ ನನ್ನಿಂದ ಅನುಸರಣೆಯಾಗಬೇಕೆಂದು ಅಕ್ಕಪಕ್ಕ ಕುಳಿತವರಿಗೆ ಹೇಳುತ್ತಿರುವುದನ್ನು ನಾನು ಅನೇಕ ಸಲ ಕೇಳಿದ್ದುಂಟು.

'ಪ್ರಜಾಸತ್ತಾತ್ಮಕವಾದ ಈ ದೇಶ ಪವಿತ್ರವಾದದ್ದು. ನಿಸ್ವಾರ್ಥದಿಂದ, ತತ್ವಬದ್ಧತೆಯಿಂದ ಜನಸೇವೆ ಮಾಡಬೇಕು. ಅದೇ ನನ್ನ ಮುಂದಿರುವ

ರಾಜಕೀಯ ಗುರಿ. ಎಂದು ಹೇಳುತ್ತಿರುತ್ತಾನೆ. ನಾನಾದರೂ 'ಬಿಜಿನೆಸ್ ಮ್ಯಾನ್'. ನನಗೆ ಇವೆಲ್ಲಾ ಅರ್ಥವಾದರೂ ತಲೆಕೆಡಿಸಿಕೊಳ್ಳುವುದಿಲ್ಲ. ದಿನದ ಆರೇಳು ಗಂಟೆಗಳಷ್ಟು ಭಾರತದ ರಾಜಕೀಯ - ಆರ್ಥಿಕ ವಿದ್ಯಮಾನಗಳನ್ನು ನಾನು ಟಿ.ವಿ.ಯಲ್ಲಿ ನೋಡುತ್ತಾ ಇರುತ್ತೇನೆ. ನನ್ನಣ್ಣನ ತಾತ್ವಿಕ ಜಿಜ್ಞಾಸೆಗೆ ಪ್ರಚಲಿತ ವಿದ್ಯಮಾನಗಳಲ್ಲಿ ನೆಲೆ ಹುಡುಕಿಕೊಂಡು ನಾನೇ ಮೌಲ್ಯಮಾಪನ ಮಾಡಿಕೊಂಡಿರುವೆನಾದರೂ ಅದರ ಫಲಶ್ರುತಿಯನ್ನು ನನ್ನಣ್ಣನ ಮುಂದೆ ನಾನು ಚರ್ಚಿಸಿಲ್ಲ. ಏಕೆಂದರೆ ಅವನ ಉತ್ಸಾಹ, ಅವನ ಸದಾಲೋಚನೆ, ಅವನ ದೂರದೃಷ್ಟಿ, ಭವ್ಯ ಭಾರತ ನಿರ್ಮಾಣದ ಅವನ ಕನಸು, ಇವುಗಳೆಲ್ಲ ಸಾಕಾರಗೊಳ್ಳಬೇಕಾದರೆ ಅವನ ಮಾಡುವ ಪ್ರಯತ್ನಗಳಲ್ಲಿ ಯಾವುದೇ ರೀತಿಯ ಗತಿ ವ್ಯತ್ಯಾಸವಾಗದಿರಲೆಂದು. ಇಂತಹ ದಾರ್ಶನಿಕ ಅಣ್ಣನನ್ನು ಪಡೆದುಕೊಂಡ ನಾನಂತೂ ಧನ್ಯನೆಂದೇ ಹೇಳುತ್ತೇನೆ.

ನನ್ನಣ್ಣನಿಗೆ ಭವ್ಯಭಾರತ ನಿರ್ಮಾಣದ ಕನಸನ್ನು ಕಟ್ಟಿಕೊಟ್ಟ ಸಂದರ್ಭಗಳು ಹಲವು. ಅದು ಬಂದದ್ದು ನಮ್ಮ ಮನೆತನದವರ ರಕ್ತಗುಣದಿಂದಲೇ ಎಂದು ಹೇಳುವೆ. ತಾತ ಶೆಟ್ಟರ ಮುದ್ದಮಲ್ಲಯ್ಯ ಮತ್ತು ಅಜ್ಜಿ ಪುಟ್ಟಬಸಮ್ಮನವರ ಆದರ್ಶಗಳು ಅನೂಚಾನವಾಗಿ ನನ್ನ ತಂದೆ ಶ್ರೀ ವೀರಶೆಟ್ಟಯ್ಯನವರಿಗೆ ಹರಿದು ಬಂದಿದೆ. ಇಂಗ್ಲಿಷ್ ಆಡಳಿತೆಯ ಕಾಲದಲ್ಲಿ ಅಜ್ಜ ಒಬ್ಬ ಪ್ರತಿಷ್ಠಿತ ವ್ಯಕ್ತಿ. ಜೊತೆಗೆ ಭಾರತದ ಸ್ವಾತಂತ್ರ್ಯದ ಕನಸು ಕಂಡಾತ. ತಂದೆಯಾದರೋ ಶಿಕ್ಷಕರು. ಜೊತೆಗೆ ಸಮಾಜಸೇವಾ ಮನೋಭಾವದವರು. ಶಿಕ್ಷಣ, ವೈಚಾರಿಕತೆ ಮತ್ತು ಸೇವಾಮನೋಭಾವದಲ್ಲಿ ಅವರದ್ದು ಅಪ್ರತಿಮ ಸಾಧನೆ. ನಮ್ಮ ತಾಯಿಯದಂತೂ ದೇವತಾ ಸ್ವಭಾವ. ಶರಣ ಪರಿಕಲ್ಪನೆಗೆ ಆಪ್ಯಾಯಮಾನವಾದ ವ್ಯಕ್ತಿತ್ವ ಅವರದ್ದು. ನಿತ್ಯ ದಾಸೋಹ ಮತ್ತು ದೀನ-ದುರ್ಬಲರ ಬಗೆಗಿನ ಅನನ್ಯ ಕಾಳಜಿ ಅವರ ವ್ಯಕ್ತಿತ್ವದ ವೈಶಿಷ್ಟ್ಯವೆಂದೇ ಹೇಳಬಹುದು. ಇಂತಹ ಎಲ್ಲ ಸುಸಂಗತ ಆಚಾರ-ವಿಚಾರಗಳು ಮೇಳೈಸಿ ಎರಕ ಹೊಯ್ದು ಘನೀಕೃತವಾದದ್ದು ನನ್ನಣ್ಣನ ವ್ಯಕ್ತಿತ್ವದಲ್ಲಿ. ಇವರೆಲ್ಲರ ವ್ಯಕ್ತಿತ್ವಗಳು ನನ್ನಣ್ಣನ ಮೇಲೆ ದಟ್ಟವಾಗಿ ಪ್ರಭಾವ ಬೀರಿವೆ.

ಇದರೊಟ್ಟಿಗೆ ಅವನು ಸ್ವತಃ ಓದಿನ ಮೂಲಕ ಪಡೆದುಕೊಂಡ ಜ್ಞಾನ, ವಿದ್ವಾಂಸರಿಂದ ಪ್ರಾಜ್ಞರಿಂದ ಬಂದ ಅನುಭವದ ನುಡಿಗಳು ಅವನನ್ನು ಒಬ್ಬ ಪರಿಪೂರ್ಣ ವ್ಯಕ್ತಿಯನ್ನಾಗಿಸಿದವು. ನಿಜಲಿಂಗಪ್ಪನವರ ಮನೆಯ ಸಂಬಂಧ ಬೆಳೆಸಿದ ನಂತರವಂತೂ ಅವನ ರಾಜಕೀಯ ಮತ್ತು ಸೇವಾ ಮನೋಭಾವದಲ್ಲಾದ ಪರಿವರ್ತನೆಗಳ ತೀವ್ರತೆಯನ್ನು ನಾನು ಗುರುತಿಸಿರುವೆ. ನನ್ನಣ್ಣ ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿರುವ ಸಂದರ್ಭದಲ್ಲಿ ಮಿತ್ರಮೇಳದ ಸದಸ್ಯನಾಗಿದ್ದುದು ಅವನಲ್ಲಿ ತಾತ್ವಿಕ ಚಿಂತನೆಗಳು ಬೆಳೆಯಲು ಕಾರಣವಾದವು. ಮಿತ್ರಮೇಳದಲ್ಲಿ ಜೆ.ಹೆಚ್.ಪಟೇಲರು, ಯು.ಆರ್.ಅನಂತಮೂರ್ತಿಯವರಂತಹವರ ಸಂಪರ್ಕದಿಂದ ನಿರಂತರ ಅಧ್ಯಯನಶೀಲತೆಯನ್ನು ರೂಢಿಸಿಕೊಂಡ. ಅದಾದ ನಂತರ ಉನ್ನತ ವ್ಯಾಸಂಗಕ್ಕೆ ದೆಹಲಿಗೆ ಹೋದಾಗ 'ಯಂಗ್ ಟರ್ಕ್'ನ ಸಕ್ರಿಯ ಸದಸ್ಯನಾಗಿ ಆಗಿನ ರಾಜಕೀಯದ ಅತಿರಥ

ಮಹಾರಥರ ಗಮನವನ್ನು ಸೆಳೆದನು. ೧೯೬೪-೬೬ರ ಹೊತ್ತಿಗೆ ಅವರೆಲ್ಲರ ಗಮನ ಸೆಳೆದು ರಾಷ್ಟ್ರಮಟ್ಟದಲ್ಲಿ ಬಿಂಬಿತವಾಗತೊಡಗಿದನು. ಅಣ್ಣನ ಈ ಬೆಳವಣಿಗೆ ನಮಗೆಲ್ಲಾ ಅತ್ಯಂತ ಖುಷಿ ತಂದಿತ್ತು.

ರಾಜಕೀಯವಾಗಿ, ವೈಯಕ್ತಿಕವಾಗಿ ಎಷ್ಟೇ ಎತ್ತರ ಬೆಳೆದಿದ್ದರೂ ನನ್ನಣ್ಣ ನಮ್ಮಮ್ಮನಿಗೆ ಮಗನೇ ತಾನೆ! ತಮ್ಮನಿಗೆ ಅಣ್ಣನೇ ತಾನೆ! ರಾಷ್ಟ್ರದ ಜವಾಬ್ದಾರಿಗಳ ಜೊತೆಗೆ ಕೌಟುಂಬಿಕ ಜವಾಬ್ದಾರಿಗಳನ್ನು ಅಷ್ಟೇ ಸಮರ್ಥವಾಗಿ ನಿಭಾಯಿಸಿದ್ದು ನನಗೆ ಆಶ್ಚರ್ಯತಂದಿತು. ಆತನಿಗಿಂತಲೂ ನನಗೆ ಮೊದಲು ಮದುವೆ ಮಾಡಿಸಿದ. ಬಿಜ್ಜಳ್ಳಿ ಸಾಹುಕಾರ ಬಿ.ಪುಟ್ಟಯ್ಯನವರ ಮಗಳಾದ ಬಿ.ಸುನಂದಾಬಾಯಿಯವರನ್ನು ನನಗೆ ಧರ್ಮಪತ್ನಿಯಾಗಿಸುವಲ್ಲಿ ಯಶಸ್ವಿಯಾದ. ನಾನು 'ನಿನ್ನ ಮದುವೆ ಆಗುವವರೆಗೂ ನನಗೂ ಮದುವೆ ಬೇಡ'ವೆಂದರೂ ಕೇಳಲಿಲ್ಲ. ನನಗೆ ಇನ್ನೂ ಕೆಲವು ಜವಾಬ್ದಾರಿಗಳಿವೆ. ಅಮ್ಮನ ಸಹಾಯಕ್ಕೆ ಮನೆಗೊಬ್ಬ ಗೃಹಿಣಿ ಬೇಕು. ಮೊದಲು ನೀನು ಮದುವೆಯಾಗು ಎಂದೆಲ್ಲಾ ಭಾಷಣಕೊಟ್ಟು ನನಗೆ ಮೊದಲು ಮದುವೆ ಮಾಡಿಸಿದ. ತಾನು ಉನ್ನತ ವ್ಯಾಸಂಗ, ಎ.ಐ.ಆರ್.ಡಿ., ದೆಹಲಿಯ ರಾಜಕಾರಣ ಮುಂತಾದ ಕಾರ್ಯಕಾರಣದಿಂದ ಹಾಗೆಯೇ ಉಳಿದ. ೧೯೫೮ರ ಹೊತ್ತಿಗೆ ನನ್ನಣ್ಣನಿಗೆ ಕಂಕಣಬಲ ಕೂಡಿ ಬಂದಿತು. ಕರ್ನಾಟಕದ ರಾಜಕೀಯದಲ್ಲಿ ಅಂದು ಅಗ್ರಮಾನ್ಯರೆನಿಸಿದ್ದ ಶ್ರೀ ಎಸ್.ನಿಜಲಿಂಗಪ್ಪನವರ ಮನೆಯ ಸಂಬಂಧದ ಪ್ರಸ್ತಾಪ ಬಂತು. ಶ್ರೀಮತಿ ಯಶೋಧರಮ್ಮ, ಶ್ರೀ ತುಳಸೀದಾಸಪ್ಪ ಮತ್ತು ಅವರ ಸಹೋದರಿ ಶ್ರೀಮತಿ ಕೃಷ್ಣಮ್ಮ ಅವರ ಸಾರಥ್ಯದಲ್ಲಿ ಮದುವೆ ಅದ್ದೂರಿಯಾಗಿ ನಡೆಯಿತು. ಅತ್ತಿಗೆ ಗಿರಿಜಾ ಅವರು ನಮ್ಮ ಮನೆಯ ಸೊಸೆಯಾಗಿ ಬಂದಾಗಲಂತೂ ನಮ್ಮ ಮನೆಯ ಸಂಭ್ರಮ ನಮ್ಮೂರಿಗೇ ವ್ಯಾಪಿಸಿತ್ತು. ಒಬ್ಬ ಧೀಮಂತ ರಾಜಕಾರಣಿಯ ಮಗಳು ನಮ್ಮೂರ ಸೊಸೆ ಎಂಬ ಅಭಿಮಾನದಿಂದ ಊರವರೆಲ್ಲ ಹಿಗ್ಗಿದರು. ಅವರ ವಿನಯ ಮತ್ತು ಸೌಜನ್ಯಗಳಿಗೆ ತಲೆದೂಗಿ ತನ್ಮಯತೆಯಿಂದ ಶುಭ ಹಾರೈಸಿದ ಪ್ರಸಂಗವನ್ನಂತೂ ನಾನು ಇನ್ನೂ ಮರೆಯಲಾರೆ. ಆದರೇನು ನನ್ನಣ್ಣ ಛಲವಾದಿ. ಶ್ರೀ ಎಸ್.ನಿಜಲಿಂಗಪ್ಪನವರ ಮೂಲಕ ಗುರುತಿಸಿಕೊಳ್ಳಬಾರದು ಎಂಬುದು ಮತ್ತು ಸ್ವಯಂ ಪ್ರಯತ್ನಗಳ ಮೂಲಕ ಮೇಲೆದ್ದು ಬರಬೇಕೆಂಬುದು ಅವನ ಸಂಕಲ್ಪವಾಗಿತ್ತು. ಎಂತಹ ರಾಜಕೀಯ ಸಂದರ್ಭದಲ್ಲೂ ತನ್ನ ಮಾವನನ್ನು ಆಶ್ರಯಿಸಲಿಲ್ಲ. ಬದಲಾಗಿ ತಾನೇ ಸ್ವಯಂಸ್ಫೂರ್ತಿಯಿಂದ ತನ್ನೆಲ್ಲ ಬೆಂಬಲವನ್ನು ಮಾವನ ಬೆಂಗಾವಲಿಗಾಗಿ ನಿಲ್ಲಿಸಿದ್ದನು ಎಂಬುದಂತೂ ನನಗೆ ತಿಳಿದ ಮಟ್ಟಿಗೆ ಸತ್ಯ.

ನಾವು ಔಪಚರಿಕವಾಗಿ ಭಾಗವಾಗಬೇಕಾದ ಸಂದರ್ಭ ಒಮ್ಮೆ ಬಂದಿತು. ೧೯೬೭ರ ಸುಮಾರಿನಲ್ಲಿ ಲೋಕಸಭೆಗೆ ಆಸ್ತಿ ವಿವರಗಳನ್ನು ಒದಗಿಸಬೇಕಾದ ಸಂದರ್ಭದಲ್ಲಿ ನಮ್ಮ ಪಿತ್ರಾರ್ಜಿತ ಆಸ್ತಿಯನ್ನು ಪಾಲು ಮಾಡಿದೆವು. ಅದು ನನ್ನ ಹೆಂಡತಿಗಾಗಲೀ ಅಥವಾ ನನ್ನ ಅತ್ತಿಗೆಯವರಿಗಾಗಲೀ ತಿಳಿದಿರಲೇ ಇಲ್ಲ. ಭಾಗವಾದ ವಿಷಯ ಅವರಿಬ್ಬರಿಗೆ ತಿಳಿದಾಗ

ಭಾಗವಾಗಿ ಸುಮಾರು ೧೦-೧೫ ವರ್ಷಗಳೇ ಸಂದಿದ್ದವು. ಅಲ್ಲಿಂದ ನನ್ನಣ್ಣ ಗ್ರಾಮೀಣಾಭಿವೃದ್ಧಿ, ಕೃಷಿಯಲ್ಲಿನ ನಿರಂತರ ಪ್ರಯೋಗಗಳು, ರಾಜಕೀಯದಲ್ಲಿ ನಿರತನಾಗಿ ತನ್ನ ಪ್ರತಿಷ್ಠೆಯನ್ನು ಮತ್ತು ಧೀಮಂತಿಕೆಯನ್ನು ಹೆಚ್ಚಿಸಿಕೊಳ್ಳುತ್ತಾ ಹೋದ. ನಾನು ಬಿಜಿನೆಸ್ ಆರಂಭಿಸಿ ನನ್ನ ಪರಿಧಿಯಲ್ಲಿ ನಾನಿದ್ದುಬಿಟ್ಟೆ. ೧೯೭೭ರಲ್ಲಿ ನನ್ನಣ್ಣ ಜನತಾಪಕ್ಷ ಬೆಂಬಲಿತ ಅಭ್ಯರ್ಥಿಯಾಗಿ ಲೋಕಸಭಾ ಚುನಾವಣೆಗೆ ಸ್ಪರ್ಧಿಸಿದು. ಕನಕಪುರ ಕ್ಷೇತ್ರವ್ಯಾಪೀ ಪ್ರಚಾರ ಮಾಡಿದೆವು. ಸಾತನೂರಿನಲ್ಲಿ ಮೊರಾರ್ಜಿಯವರು ಚುನಾವಣಾ ಪ್ರಚಾರ ಭಾಷಣವನ್ನು ಮಾಡಲೊಪ್ಪದ ಕಾರಣ ಪ್ರಚಾರ ಕಾರ್ಯದಲ್ಲಿ ಕಿಂಚಿತ್ತೂ ಹಿನ್ನಡೆಯುಂಟಾಗಲಿಲ್ಲವೆಂದೇ ನನ್ನ ಅನಿಸಿಕೆ. ಏಕೆಂದರೆ ಕ್ಷೇತ್ರದ ಸಣ್ಣ ಹಳ್ಳಿ ಬೀದಿಗಳೂ ಮರಗಿಡಗಳೂ ನನ್ನಣ್ಣನ ಹೆಸರನ್ನೇ ಹೇಳುತ್ತಿದ್ದವು. ಆದರೂ ಕ್ಷೇತ್ರದ ಒಂದು ಸಮುದಾಯದ ಕಾಣದ ಕೈಯ ಪಿತೂರಿಯನ್ನು ನಮ್ಮಿಂದ ಗಮನಿಸಲಾಗಲಿಲ್ಲ. ಜಾತ್ಯತೀತ ಆಲೋಚನೆಯ ಸಂಭ್ರಮದಲ್ಲಿದ್ದ ನನ್ನಣ್ಣ ಅಥವಾ ಆತನ ಹಿತೈಷಿಗಳಿಗೆ ಇದು ತಿಳಿಯಲೇ ಇಲ್ಲ. ಇದು ನನಗೆ ತಿಳಿಯುವ ಹೊತ್ತಿಗೆ ಪರಿಸ್ಥಿತಿ ಕೈ ಮೀರಿ ಹೋಗಿತ್ತು. ಈ ಕಾರಣದಿಂದ ೧೯೭೭ರಿಂದ ನನ್ನಣ್ಣ ಒಂದರ್ಥದಲ್ಲಿ ರಾಜಕೀಯ ವನವಾಸ ಅನುಭವಿಸಬೇಕಾಗಿ ಬಂದಿತು.

ಅಧಿಕಾರದಲ್ಲಿರಲಿ, ಇರದಿರಲಿ ನನ್ನಣ್ಣ ಯಾವತ್ತೂ ಕ್ರಿಯಾಶೀಲ. ಕಾನೂನು ಸಮ್ಮತವಾದ ಯಾವುದೇ ಕೆಲಸವನ್ನು ಯಾರಿಗೇ ಆಗಲಿ ಮಾಡಿಕೊಡಲು ಅವನು ಹೋರಾಟಕ್ಕೆ ಸದಾಸಿದ್ಧ. ಸಮಾಜಕ್ಕೆ ಒಳಿತೆನ್ನುವ ಕಾರ್ಯಕ್ಕೆ ಧಾರ್ಮಿಕ ಮತ್ತು ಸಮುದಾಯಗಳ ಪುರೋಭಿವೃದ್ಧಿಗೆ ಟೊಂಕಕಟ್ಟಿ ನಿಲ್ಲುತ್ತಾನೆ. ಗ್ರಾಮೀಣಾಭಿವೃದ್ಧಿ, ಕೃಷಿಕ ಸಮಾಜದ ಏಳ್ಗೆಗೆ ಸಂಕಲ್ಪಬದ್ಧನಾಗಿ ದುಡಿಯುತ್ತಿದ್ದಾನೆ. ನಿಸ್ವಾರ್ಥವಾದ ಅವನ ಸಂಕಲ್ಪಗಳಿಗೆ ದೈವದ ಮತ್ತು ಬುದ್ಧಿಜೀವಿಗಳ ಬೆಂಬಲವಿದೆ. ಅಂತಹ ಸಂಕಲ್ಪಗಳಿಂದಲೇ ನಮ್ಮ ಸಂದರ್ಭದಲ್ಲಿ ಏಕಮೇವಾದ್ವಿತೀಯವಾದ ಮೌಲ್ಯಾಧಾರಿತ ರಾಜಕಾರಣಿಯಾಗಿ ಸಕ್ರಿಯವಾಗಿರುವುದು ನನಗೆ ಸಮಾಧಾನ ತಂದಿದೆ.

ನಮ್ಮ ಮಾವನವರಾದ ಶ್ರೀ ಎಸ್.ನಿಜಲಿಂಗಪ್ಪನವರು ಅವರ ಕೊನೆಯ ದಿನಗಳಲ್ಲಿ ಅವರ ಮನೆಯಲ್ಲೊಮ್ಮೆ (ಚಿತ್ರದುರ್ಗದಲ್ಲಿ) ಹೇಳುತ್ತಿದ್ದ ಮಾತು ನನಗೆ ಆನಂದದ ಕಣ್ಣೀರನ್ನೇ ಇಳಿಸುವಂತೆ ಮಾಡಿತು. "ಆದರ್ಶದಲ್ಲಿ, ನಿಸ್ವಾರ್ಥ ರಾಜಕಾರಣದಲ್ಲಿ, ತಾತ್ವಿಕ ಬದ್ಧತೆಯಲ್ಲಿ, ನಿಷ್ಕಾಮ ಜನಸೇವೆಯಲ್ಲಿ ನನ್ನ ರಾಜಶೇಖರ ನನ್ನನ್ನೂ ಮೀರಿ ಒಂದು ಹೆಜ್ಜೆ ಮುಂದಿಟ್ಟಿದ್ದಾನೆ. ಸಮಕಾಲೀನ ರಾಜಕೀಯವೇ ನಿರ್ಮೌಲ್ಯಗಿರುವಾಗ ಮೌಲ್ಯವರ್ಧಿತನಾಗಿ ಆತ ಕ್ರಿಯಾಶೀಲನಾಗಿರುವುದು ನನಗೆ ಸೋಜಿಗವನ್ನುಂಟುಮಾಡಿದೆ ಮತ್ತು ಅದರಿಂದ ನನಗೆ ಸಮಾಧಾನ ತಂದಿದೆ. ಅವನ ನಡವಳಿಕೆಯಂತೂ ನನಗೆ ತೃಪ್ತಿ ತಂದಿದೆ..." ಎಂದು ಉದ್ಗಾರವೆತ್ತಿದರು. ನಿಜಕ್ಕೂ ಅಂತಹ ಮಹಾನುಭಾವನಿಂದ ಇಂತಹ ಮಾತು ಬರುವುದೇನು ಸಾಮಾನ್ಯದ ಸಂಗತಿಯಲ್ಲ. ಇಂತಹ ವ್ಯಕ್ತಿಯ ತಮ್ಮನೆಂದು ಕರೆಸಿಕೊಳ್ಳುವ ನಾನು ನಿಜಕ್ಕೂ ಧನ್ಯ.

ನನ್ನಣ್ಣ ಇಲ್ಲಿಯವರೆಗೂ ರಾಜಕಾರಣ ಮಾಡಿದ್ದಾನೆ. ಸಂಸತ್ತಿನ ಮತ್ತು ರಾಜ್ಯದ ವಿಧಾನಸೌಧದ ಹತ್ತಾರು ಅತ್ಯುತ್ತಮ ಹುದ್ದೆಗಳನ್ನು ಅಲಂಕರಿಸಿದ್ದಾನೆ. ಕಾಂಗ್ರೆಸ್ ಸಂಸದೀಯ ಪಕ್ಷದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದಾನೆ. ಇಷ್ಟೆಲ್ಲಾ ಅನುಭವಿಸಿದ್ದರೂ ಆರ್ಥಿಕವಾಗಿ ಆತನ ಗಳಿಕೆಯೇನು? ಎಂಬುದು ನನಗೆ ಪ್ರಶ್ನೆಯಾಗಿದೆ. ಈಗಿರುವ ಮನೆಯನ್ನು ಕಟ್ಟಿಸಲಿಕ್ಕೆ ಹದಿನಾಲ್ಕು ವರ್ಷಗಳೇ ಬೇಕಾದವು. ಪಿತ್ರಾರ್ಜಿತವಾದ ಬೆಂಗಳೂರಿನ ಮಲ್ಲೇಶ್ವರಂನಲ್ಲಿದ್ದ ಎರಡು ಸೈಟುಗಳು ಇಲ್ಲವಾದವು. ತನ್ನ ಆರ್ಥಿಕ ಜೀವನವೆಲ್ಲದಕ್ಕೂ ಕೃಷಿಯನ್ನೇ ಅವಲಂಬಿಸಿದ ಈತ ಎಂದೂ ಲಾಭವನ್ನು ಉಣ್ಣಲೇಯಿಲ್ಲ. ವಿದೇಶಗಳಲ್ಲಿ ವಿಚಾರಸಂಕಿರಣಗಳಲ್ಲಿ ಭಾಗವಹಿಸಿದ ಗೌರವಧನದಿಂದಲೇ ದಿನಗಳನ್ನು ದೂಡುತ್ತಿದ್ದಾನೆ. ತನಗಾಗಿ, ತನ್ನ ಮಕ್ಕಳಿಗಾಗಿ ಈತ ಏನನ್ನು ಸಂಪಾದಿಸಿದನೆನ್ನುವುದು ಈ ಸಂದರ್ಭದಲ್ಲಿ ನಾನು ಕೇಳುವ ಪ್ರಶ್ನೆ. ನಮ್ಮ ಸಂದರ್ಭದ ಬಹುತೇಕ ರಾಜಕಾರಣಿಗಳು ರಾಜಕಾರಣ ಮಾಡುವುದೇ ಹಣಕ್ಕಾಗಿ ಎನ್ನುವುದು ಕಣ್ಣಿಗೆ ಢಾಳವಾಗಿ ಕಾಣುತ್ತಿರುವಾಗ ನನ್ನಣ್ಣನಿಗೆ ಮನಸ್ಸು ಬಾರದೇ? ದೈವವಶಾತ್ ಪಿತ್ರಾರ್ಜಿತ ಆಸ್ತಿಯಿತ್ತು. ಮನೆ ಆರ್ಥಿಕವಾಗಿ ಸುಗಮವಾಗಿ ನಡೆದುಹೋಯಿತು. ಇರದಿದ್ದರೆ ಎಂತಹ ಫಜೀತಿಗೀಡಾಗುತ್ತಿತ್ತೋ. ನಾನೊಬ್ಬ ಬಿಜಿನೆಸ್ ಮ್ಯಾನ್ ಆಗಿ ಇಂತಹದ್ದನ್ನೆಲ್ಲಾ ಯೋಚಿಸುತ್ತಿದ್ದೇನೆಯೇ ಹೊರತು ಆತನ ತಮ್ಮನಾಗಿ ಈ ತಕರಾರನ್ನು ಎತ್ತುತ್ತಿಲ್ಲ. ಅದೇನೇ ಇರಲಿ, ಅಂತಹದ್ದನ್ನೆಲ್ಲಾ ನಾನೇ ನೋಡಿಕೊಳ್ಳುವೆ. ನನ್ನಣ್ಣ ತನ್ನ ಪ್ರಾಜ್ಞ ಮತ್ತು ನಿಸ್ವಾರ್ಥ ಮನೋಭಾವವನ್ನೇ ಅನುಸರಿಸಲಿ. ಆತ ನಿಸ್ವಾರ್ಥನಾದಷ್ಟು ನಮ್ಮ ಮನೆತನಕ್ಕೆ ಹೆಚ್ಚು ಗೌರವ. ಆತ ನಡೆದದ್ದೇ ನಮ್ಮ ಮನೆತನದಲ್ಲಿ ಹಾದಿಯಾಗಲಿ. ನಮ್ಮ ಮುಂದಿನ ಪೀಳಿಗೆಗೆ ಅದು ಆದರ್ಶವಾದೀತು; ಮಾದರಿಯಾದೀತು.

ಈಗ ನನ್ನಣ್ಣ ತನ್ನ ವಯೋಮಾನದ ಮುಕ್ಕಾಲು ಭಾಗವನ್ನು ಅರ್ಥಪೂರ್ಣವಾಗಿ ಪೂರೈಸಿದ್ದಾನೆ. ಅವನಿಗೆ ಜೀವನಾನುಭವ ತುಂಬಿ ಬಂದಿದೆ. ರಾಷ್ಟ್ರದ ಯಾವುದೇ ಹುದ್ದೆಗಳನ್ನು ಜವಾಬ್ದಾರಿಯುತವಾಗಿ ನಿಭಾಯಿಸುವ ಸಾಮರ್ಥ್ಯವಿದೆ. ಮುತ್ಸದ್ದಿತನವಿದೆ. ಎಂತಹ ಬಿಕ್ಕಟ್ಟುಗಳನ್ನೂ ಸಮರ್ಥವಾಗಿ ನಿರ್ವಹಿಸುವ ಧೀಮಂತಿಕೆಯಿದೆ. ಉತ್ತರೋತ್ತರ ಅಂತಹ ಎಲ್ಲ ಮಾನವಶಕ್ತಿಯನ್ನು ಈ ರಾಷ್ಟ್ರ ಸಮರ್ಥವಾಗಿ ಬಳಸಿಕೊಳ್ಳಲಿ ಎಂದು ನಾನು ದೇವರಲ್ಲಿ ಪ್ರಾರ್ಥಿಸಿಕೊಳ್ಳುವೆ. ಜೀವಮಾನವಿಡೀ ನನ್ನಣ್ಣ ರಾಷ್ಟ್ರಸೇವೆ, ಜನಸೇವೆ ಮಾಡಿ ಈ ಮಣ್ಣಿನ ಮತ್ತು ರಾಷ್ಟ್ರದ ಋಣ ತೀರಿಸುವಂತಾಗಲಿ ಎಂದು ಕಿರಿಯನಾದ ನಾನು ಹಾರೈಸುವೆ. ಕೊನೆಯವರೆಗೂ ಅವನ ವ್ಯಕ್ತಿತ್ವವನ್ನು ಗೌರವಿಸಿ ಅವನ ಎಲ್ಲಾ ಚಟುವಟಿಕೆಗಳಿಗೆ, ಕ್ರಿಯಾಶೀಲತೆಗೆ ಬೆಂಬಲಿಗನಾಗಿ ನಾನು ನಿಲ್ಲುವಂತಹ ಶಕ್ತಿಯನ್ನು ಆ ಸದಾಶಿವ ನನಗೆ ಕರುಣಿಸಲಿ ಎಂದು ಭಕ್ತಿಯಿಂದ ಬೇಡಿಕೊಳ್ಳುವೆ.

***

# ಗ್ರಾಮೀಣ ಭಾರತದ ಕನಸುಗಾರ

ಸಂದರ್ಶನ : ಕೆ.ಆರ್. ಕಮಲೇಶ್
ಚಿದಾನಂದ ಎಸ್. ಮಠದ

೧೨.೯.೧೯೨೮ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕಿನ ಮರಳವಾಡಿಯಲ್ಲಿ ಜನಿಸಿರುವ ಶ್ರೀ ಎಂ.ವಿ. ರಾಜಶೇಖರನ್ ಅವರು ಕರ್ನಾಟಕದ ಸಜ್ಜನ ರಾಜಕಾರಣಿಗಳಲ್ಲಿ ಒಬ್ಬರಾಗಿದ್ದಾರೆ. ೧೯೪೭-೪೮ರ 'ಮೈಸೂರು ಚಲೋ' ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಶ್ರೀ ಎಂ.ವಿ. ರಾಜಶೇಖರನ್ ಅವರು, ಅಪ್ಪರ್ ಸೆಕೆಂಡರಿ (ಮಾಧ್ಯಮಿಕ ಶಾಲೆಯಲ್ಲಿ) ವ್ಯಾಸಂಗ ಮಾಡುತ್ತಿದ್ದಾಗಲೇ ಭಾರತದ ಸ್ವಾತಂತ್ರ್ಯ ಹೋರಾಟದ ಮಹಾನ್ ಮೌಲ್ಯಗಳಿಗೆ ತಮ್ಮನ್ನು ತೆತ್ತುಕೊಂಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ವ್ಯಾಸಂಗ ಮಾಡುತ್ತಿದ್ದಾಗ 'ಮಿತ್ರಮೇಳ' ಎಂಬ ಸಾಂಸ್ಕೃತಿಕ ಸಂಘಟನೆಯಲ್ಲಿ ದುಡಿದು ತಮ್ಮ ಮುಂದಿನ ಬದುಕನ್ನು ರಚನಾತ್ಮಕ ಕೆಲಸಗಳಿಗೆ ಮೀಸಲಾಗಿಟ್ಟಿದ್ದಾರೆ. ೧೯೫೩ರಲ್ಲಿ ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಕಾನೂನು ವ್ಯಾಸಂಗ ಮುಗಿಸುವ ಮುಂಚೆಯೇ ತಮ್ಮ ತಂದೆಯವರ ಅಕಾಲ ಮರಣದಿಂದ ಮರಳವಾಡಿಗೆ ಮರಳಿ ವ್ಯವಸಾಯಕ್ಕೆ ತಮ್ಮ ಸಂಪೂರ್ಣ ಸಮಯವನ್ನು ಮೀಸಲಿಟ್ಟು ಪ್ರಗತಿಪರ ರೈತರೆನಿಸಿಕೊಂಡಿದ್ದಾರೆ. ಶ್ರೀ ಹೆಚ್.ಸಿ. ದಾಸಪ್ಪ ಮತ್ತು ಶ್ರೀಮತಿ ಯಶೋಧರಮ್ಮ ದಾಸಪ್ಪನವರ ಮಧ್ಯಸ್ತಿಕೆಯಿಂದ ಕರ್ನಾಟಕದ ರೂವಾರಿ ಶ್ರೀ ಎಸ್. ನಿಜಲಿಂಗಪ್ಪನವರ ನಾಲ್ಕನೆಯ ಮಗಳು ಗಿರಿಜಾ ಅವರನ್ನು ೧೯೫೯ರಲ್ಲಿ ವಿವಾಹವಾದರು. ಅಖಿಲ ಭಾರತ ಕಾಂಗ್ರೆಸ್ ಪಕ್ಷದಲ್ಲಿ ರಾಜ್ಯ ಘಟಕದ ವಿವಿಧ ಸ್ಥಾನಗಳಲ್ಲಿ ಸೇವೆ ಸಲ್ಲಿಸುವ ಅವಕಾಶ ಅವರದಾಯಿತು. ವಿಶೇಷವಾಗಿ 'ಯೂತ್ ಕಾಂಗ್ರೆಸ್' ರಾಜ್ಯದಲ್ಲಿ ಬಲಗೊಳ್ಳಲು ಅವರು ಕಾರಣಕರ್ತರಾಗಿದ್ದಾರೆ. ೧೯೬೭ರಲ್ಲಿ ೫೦ ಸಾವಿರಕ್ಕೂ ಹೆಚ್ಚಿನ ಮತಗಳಿಂದ ಕನಕಪುರ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾದ ಎಂ.ವಿ.ರಾಜಶೇಖರನ್ ಯಾವ ಲೋಕಸಭಾ ಸದಸ್ಯರೂ ಯೋಚಿಸದ ರೀತಿ ಚಿಂತಿಸಿ, ಅವುಗಳನ್ನು ಅನುಷ್ಠಾನ ಮಾಡಿದರು. ಮಂಚನಬೆಲೆ ನೀರಾವರಿ ಯೋಜನೆ ಹೀಗೆಯೇ ಅನುಷ್ಠಾನಗೊಂಡ ಒಂದು ಯೋಜನೆಯಾಗಿದೆ. ೧೯೭೮ರಲ್ಲಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ

ಜನತಾಪಕ್ಷದ ಅಭ್ಯರ್ಥಿಯಾಗಿ ಆಯ್ಕೆಯಾದ ರಾಜಶೇಖರನ್ ತಮ್ಮ ರಚನಾತ್ಮಕ ಕೆಲಸಗಳಿಂದ ತಮ್ಮ ಕ್ಷೇತ್ರದ ಎಲ್ಲೆಡೆ ಪ್ರಸಿದ್ಧಿಯಾಗಿದ್ದರು. ೧೯೯೯ರಲ್ಲಿ ವಿಧಾನಪರಿಷತ್ತಿನ ಸದಸ್ಯತ್ವ, ೨೦೦೨ರಲ್ಲಿ ರಾಜ್ಯಸಭಾ ಸದಸ್ಯತ್ವ ಸ್ಥಾನವು ಅವರನ್ನು ಅರಸಿಕೊಂಡು ಬಂದಿತು. ಬದ್ಧತೆ, ಸಂಘಟನೆ ಹಾಗೂ ವಿಚಾರಶೀಲತೆಗೆ ರಾಜಶೇಖರನ್ ಸದಾ ಉಲ್ಲೇಖಿಸಲ್ಪಡುವ ಹೆಸರಾಗಿದೆ. ೧೯೫೮ರಿಂದಲೂ ದೇಶ ವಿದೇಶಗಳನ್ನು ಸುತ್ತಿರುವ ರಾಜಶೇಖರನ್ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಗ್ರಾಮೀಣ ಅಭಿವೃದ್ಧಿ ಕುರಿತಂತೆ ೧೦೦ಕ್ಕೂ ಹೆಚ್ಚಿನ ಪ್ರಬಂಧಗಳನ್ನು ಮಂಡಿಸಿದ್ದಾರೆ. ರಾಜಶೇಖರನ್ ಅವರ ವಿಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಗ್ರಾಮೀಣ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಸಂಸ್ಥೆಯಾಗಿದೆ. ಸರಳತೆ, ಸಜ್ಜನಿಕೆ, ತಾಳ್ಮೆಗಳನ್ನು ರೂಢಿಸಿ ಕೊಂಡಿರುವ ರಾಜಶೇಖರನ್ ಮಹಾತ್ಮ ಗಾಂಧೀಜಿ ಹೇಳಿದ ಜೀವನ ಮೌಲ್ಯಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದಾರೆ. ಕನ್ನಡನಾಡಿನ ಶ್ರೇಷ್ಠ ಪುರುಷರಲ್ಲಿ ಒಬ್ಬರಾದ ಎಂ.ವಿ.ರಾಜಶೇಖರನ್ ಅವರಿಗೆ ಅವರ ಎಪ್ಪತ್ತೈದರ ಹುಟ್ಟುಹಬ್ಬದ ಸಂದರ್ಭದಲ್ಲಿ ನಮ್ಮ ಪರಂಪರೆಗನುಗುಣವಾಗಿ ಅಭಿನಂದನ ಗ್ರಂಥವನ್ನು ಅರ್ಪಿಸಿ ಸನ್ಮಾನಿಸಲಾಗುತ್ತಿದೆ.

ವಿವಿಧ ಕ್ಷೇತ್ರಗಳಲ್ಲಿ ಅಪಾರ ಅನುಭವ ಇರುವ ರಾಜಶೇಖರನ್‌ರವರನ್ನು ಅವರ ಹುಟ್ಟುಹಬ್ಬದ ಸಂದರ್ಭದಲ್ಲಿ ನಡೆಸಿದ ಸಂದರ್ಶನ :

***- ತಾವು ಹುಟ್ಟಿದ ಸ್ಥಳ ಯಾವುದು? ಹಿಂದೆ ಈ ತಾಲ್ಲೂಕಿಗೆ ಯಾವ ಹೆಸರಿತ್ತು?***

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಮರಳವಾಡಿ ನನ್ನ ಹುಟ್ಟೂರು. ಕರ್ನಾಟಕದ ದಕ್ಷಿಣ ತುದಿಯ ಹಾಗೂ ತಮಿಳುನಾಡಿನ ಉತ್ತರದಲ್ಲಿರುವ ನಮ್ಮ ಊರಿಗೆ ಗುಡ್ಡ-ಬೆಟ್ಟಗಳ ರಕ್ಷಣೆ ಇದೆ. ನನ್ನ ಬಾಲ್ಯವಂತೂ ಇಲ್ಲಿ ಬಹು ಸುಂದರವಾಗಿ ಕಳೆಯಿತು. ಆಕಾಶಕ್ಕೆ ಮುಟ್ಟುವ ಮರಗಳು, ಮಳೆಗಾಲದಲ್ಲಿ ಸದಾ ಹರಿಯುವ ತೊರೆಗಳು, ಶ್ರೀಗಂಧದ ಮರಗಳ ತಾಣ ನನ್ನೂರು. ತಮಿಳುನಾಡು ಹಾಗೂ ಕರ್ನಾಟಕದ ಗಡಿ ಭಾಗದಲ್ಲಿ ನಮ್ಮ ಊರಿದೆ. ಕನಕಪುರಕ್ಕೆ ಹಿಂದೆ ಕಾನ್‌ಕಾನಹಳ್ಳಿ ಎಂಬ ಹೆಸರಿತ್ತು. ಕಾನ್‌ಕಾನ್‌ಹಳ್ಳಿ ವರದಾಚಾರ್, ಸರದಾರ ವೆಂಕಟರಾಮಯ್ಯ, ರಂಗಕರ್ಮಿ ಕಾನ್‌ಕಾನ್‌ಹಳ್ಳಿ ಗೋಪಿ ಇವರೆಲ್ಲಾ ಅಪ್ರತಿಮ ದೇಶಭಕ್ತರು. ಗಾಂಧೀವಾದಿ ಎಸ್.ಕರಿಯಪ್ಪ, ಕರ್ನಾಟಕದ ಖ್ಯಾತ ವಿದ್ವಾಂಸರಾದ ಟಿ.ವಿ. ವೆಂಕಟಾಚಲಶಾಸ್ತ್ರಿ ಇವರೂ ಕೂಡ ನಮ್ಮ ತಾಲ್ಲೂಕಿನವರು. ಸ್ವಾತಂತ್ರ್ಯಪೂರ್ವದಲ್ಲಿ ಈ ಪ್ರಾಂತ್ಯ ಮೈಸೂರು ಒಡೆಯರ ಆಡಳಿತಕ್ಕೆ ಸೇರಿತ್ತು. ಮರಳವಾಡಿ ಹೋಬಳಿ ಸ್ಥಳ. ಬೆಂಗಳೂರಿಗೆ ೪೫ ಕಿಲೋಮೀಟರ್ ದೂರದಲ್ಲಿ ಈ ಊರಿದೆ. ಕೃಷಿ ಪ್ರಧಾನವಾದ ನಮ್ಮ ಊರಲ್ಲಿ ರಾಗಿ, ಹುರುಳಿ ಹಾಗೂ ಅವರೆ ಪ್ರಮುಖ ಬೆಳೆಗಳು. ಹೊಳೆಯ ಹತ್ತಿರ ತೆಂಗು, ವೀಳೆದೆಲೆ ತೋಟ ಇದೆ. ಮಾವಿನ ತೋಪು ಕೂಡ ಸಾಕಷ್ಟು ಇದೆ. ವ್ಯವಸಾಯದ ಜೊತೆ ರೇಷ್ಮೆಕೃಷಿ, ಪಶುಪಾಲನೆ, ಕುಂಬಾರಿಕೆ, ಕಮ್ಮಾರಿಕೆ ಮೊದಲಾದ ವ್ಯವಸಾಯ ಆಧಾರಿತ ಕಸುಬುಗಳೂ ಇವೆ.

***– ನಿಮ್ಮ ತಂದೆ-ತಾಯಿ ಯಾರು? ಅವರ ಉದ್ಯೋಗ ಯಾವುದು? ನಿಮ್ಮ ತಾತನವರ ಹೆಸರೇನು? ಅವರು ಜಮೀನುದಾರರೇ? ನಿಮ್ಮ ತಂದೆಗೆ ನೀವು ಎಷ್ಟು ಜನ ಮಕ್ಕಳು?***

ನಮ್ಮ ಪ್ರಾಂತ್ಯದ ಆಳ ಹಳ್ಳಿಗಳಿಗೆ ಯಜಮಾನರಾಗಿ ಆಡಳಿತ ನಡೆಸಿದವರು ನಮ್ಮ ತಾತ ಶೆಟ್ಟರ ಮುದ್ದಮಲ್ಲಯ್ಯನವರು. ಅವರ ಮಡದಿ ಶ್ರೀಮತಿ ಮಲ್ಲಮ್ಮ. ನಮ್ಮ ತಾತ ಜೀವನದಲ್ಲಿರಬೇಕಾದ ಶಿಸ್ತಿನ ಮಹತ್ವವನ್ನು ಅರಿತಿದ್ದ ವ್ಯಕ್ತಿಯಾಗಿದ್ದರು. ನನ್ನಲ್ಲಿ ಏನಾದರೂ ಒಂದಿಷ್ಟು ಶಿಸ್ತಿನ ಪ್ರಜ್ಞೆ ಮೂಡಿದ್ದರೆ, ಅದಕ್ಕೆ ಅವರೇ ಕಾರಣಕರ್ತರು. ಕನ್ನಡ ಸಾಹಿತ್ಯದಲ್ಲಿ ಅವರಿಗೆ ಅಪರಿಮಿತವಾದ ಗೌರವ ಇತ್ತು. ಅವರಿಗೆ ಪ್ರತಿನಿತ್ಯ ಶಬರಶಂಕರವಿಲಾಸ, ಹರಿಹರನ ರಗಳೆ, ರಾಜಶೇಖರ ವಿಲಾಸ ಮೊದಲಾದ ಗ್ರಂಥಗಳ ಪಾರಾಯಣ ಆಗಲೇ ಬೇಕಿತ್ತು. ನನಗೆ ಮುಖ್ಯ ಉಪಾಧ್ಯಾಯರಾಗಿದ್ದ ಸುಬ್ಬಯ್ಯ ಅವರು ಈ ಗ್ರಂಥಗಳ ವ್ಯಾಖ್ಯಾನದಲ್ಲಿ ನಮ್ಮ ತಾತನವರಿಗೆ ಸಹಾಯಕರಾಗಿದ್ದರು. ಧನುರ್ಮಾಸದ ಆಚರಣೆಯಂತೂ ನಮಗೆ ಮನೆಯಲ್ಲಿ ವಿಶೇಷ. ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ಸ್ನಾನಮಾಡಿ, ಪೂಜಾದಿಗಳ ನಂತರ ಪುರಾಣ ಪ್ರವಚನ ನಡೆಯುತ್ತಿತ್ತು. ಅಕ್ಕಪಕ್ಕದ ಜನ ಬಂದು ತುಂಬಾ ಭಯ-ಭಕ್ತಿಯಿದ ಪುರಾಣವನ್ನು ಆಲಿಸುತ್ತಿದ್ದರು. ಶಿವಭಕ್ತರಾಗಿದ್ದ ನಮ್ಮ ತಾತ ದಾನ-ಧರ್ಮಗಳ ಜೊತೆ ಸತ್ಯ, ನಿಷ್ಠೆಯನ್ನೂ ರೂಢಿಸಿಕೊಂಡಿದ್ದರು. ನಮ್ಮ ತಂದೆ ವೀರಶೆಟ್ಟರು ಮತ್ತು ನನ್ನ ತಾಯಿ ಬಸಮ್ಮ. ನಮ್ಮ ತಾತನವರು ನನ್ನನ್ನು ಇಂಗ್ಲೆಂಡಿಗೆ ಕಳುಹಿಸಿ ನನ್ನನ್ನು "ಬ್ಯಾರಿಸ್ಟರ್" ಮಾಡಲು ಓದಿಸಬೇಕೆಂದು ಇದ್ದರು. ಆದರೆ ನಾನು ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಅವರು ಗತಿಸಿಹೋದರು. ನಾನು ದೆಹಲಿಯಲ್ಲಿ ವ್ಯಾಸಂಗ ಮಾಡಬೇಕಾದರೆ ನಮ್ಮ ತಂದೆ ನಿಧನರಾದರು. ನಮ್ಮದು ಕೃಷಿಯನ್ನು ಅವಲಂಬಿಸಿರುವ ಕುಟುಂಬವಾಗಿದ್ದರೂ, ನಮ್ಮ ತಂದೆ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಅವರು ಮೈಸೂರಿನ ಆಗಿನ ಕಾಲದ ಸಾರ್ವಜನಿಕ ಜೀವನದಲ್ಲಿ ಮೈಸೂರು ಜಿಲ್ಲೆಯ ಹೆಸರಾಂತ ಮುಖಂಡರಾದ ಕಬ್ಬಳ್ಳಿ ಸಾಹುಕಾರ್ ಸುಬ್ಬಣ್ಣನವರ ಜೊತೆ ಕಬ್ಬಳ್ಳಿ ಹಾಸ್ಟೆಲ್‌ನಲ್ಲಿದ್ದು ತಮ್ಮ ವ್ಯಾಸಂಗವನ್ನು ಪೂರೈಸಿದ್ದರು. ಕನಕಪುರ ತಾಲ್ಲೂಕಿನ ಸುತ್ತಮುತ್ತ ಶಾಲೆಗಳಲ್ಲಿ ಕೆಲಸಮಾಡಿ ಆನಂತರ ಅವರು ಬೆಂಗಳೂರಿನ ಅರಳೇಪೇಟೆಯ ಪ್ರಾಥಮಿಕ ಶಾಲೆಯ ಮುಖ್ಯ ಉಪಾಧ್ಯಾಯರಾಗಿ ನಿವೃತ್ತರಾದರು. ನಮ್ಮ ತಂದೆಗೆ ಗುರುಹಿರಿಯರೆಂದರೆ ಅಪಾರ ಗೌರವ. ನಮ್ಮ ತಾತನವರು ಕುಳಿತುಕೊಂಡಿದ್ದರೆ ಅವರ ಎದುರಿಗೆ ನಮ್ಮ ತಂದೆ ಎಂದೂ ಕುಳಿತುಕೊಳ್ಳುತ್ತಿರಲಿಲ್ಲ. ಅವರು ಬೆಂಗಳೂರಿನಲ್ಲಿ ದ್ದಾಗಲೂ ಕೂಡ ವಾರಕ್ಕೊಮ್ಮೆ ಬೈಸಿಕಲ್ಲಿನಲ್ಲಿ ಊರಿಗೆ ಬರುತ್ತಿದ್ದರು. ತಾವು ಖರ್ಚು ಮಾಡಿದ ಒಂದಾಣೆಯ ಲೆಕ್ಕವನ್ನೂ ಸಹ ನಮ್ಮ ತಾತನಿಗೆ ಕೊಡುತ್ತಿದ್ದರು. ಗುರುಹಿರಿಯರ ಬಗ್ಗೆ ಅವರಿಗೆ ಇದ್ದ ಶ್ರದ್ಧೆಯಿಂದಾಗಿ ಅವರ ಬದುಕಿನಲ್ಲಿ ವಿನಯ ಹಾಸು-ಹೊಕ್ಕಾಗಿತ್ತು. ಅದೂ ಕೂಡ ನನ್ನ ಮೇಲೆ ಪ್ರಭಾವ ಬೀರಿದೆ. ನಮ್ಮ ತಾಯಿ ಬಸಮ್ಮನವರು ಶರಣರು ಹೇಳುವಂತೆ ತಮ್ಮ ಬದುಕನ್ನು ಶ್ರೇಷ್ಠ ಮೌಲ್ಯಗಳಿಗಾಗಿ ಮೀಸಲಿಟ್ಟಿದ್ದರು. ದಾಸೋಹ ಅವರಿಗೆ ಅತ್ಯಂತ ಪ್ರಿಯವಾದ ವಿಚಾರವಾಗಿತ್ತು. ನಮ್ಮ ಮನೆಯಿಂದ ಹೊಳೆಗೆ ಬಟ್ಟೆ

ಒಗೆಯಲು ನಮ್ಮ ತಾಯಿ ಹೊರಟರೆ, ಬಟ್ಟೆಯ ಮಂಕ್ರಿಯಲ್ಲಿ ಮುದ್ದೆ, ಅನ್ನ, ಸಾರು ಇವೆಲ್ಲಾ ಅರ್ಧದಷ್ಟು ಜಾಗವನ್ನು ಆಕ್ರಮಿಸಿಕೊಳ್ಳುತ್ತಿತ್ತು. ಹೊಳೆ ದಂಡೆಯಲ್ಲಿದ್ದ ಬಡವರಿಗೆ ಊಟ ಹಾಕುವುದರಲ್ಲೇ ಅವರು ಸಂತೃಪ್ತಿಯನ್ನು ಕಾಣುತ್ತಿದ್ದರು. ಎಷ್ಟೋ ಸಂದರ್ಭದಲ್ಲಿ ಹೀಗೆ ಬಿಸಿ ಮುದ್ದೆಯನ್ನು ಮುಚ್ಚಿಟ್ಟುಕೊಂಡು ಹೋಗಿ ಮೈ-ಕೈಯನ್ನು ಸುಟ್ಟುಕೊಂಡಿದ್ದೂ ಉಂಟು. ಆದರೂ ಅವರು ಎಂದೂ ತಮ್ಮತನವನ್ನು ಬಿಟ್ಟವರಲ್ಲ. ಅಸಹಾಯಕರನ್ನು ಕಂಡಾಗೆಲ್ಲಾ ನಮ್ಮ ತಾಯಿ ಕರಗಿ ನೀರಾಗುತ್ತಿದ್ದರು. ಇದು ನನ್ನ ಮೇಲೆ ತುಂಬಾ ಪ್ರಭಾವ ಬೀರಿದೆ.

ನಮ್ಮ ತಂದೆಗೆ ಮೂರು ಜನ ಗಂಡು ಮಕ್ಕಳು. ನಾನು ಐದಾರು ವರ್ಷದವನಿದ್ದಾಗಲೇ ಹಿರಿಯವ ಚಂದ್ರಮೌಳಿ ಆಮಶಂಕೆ ಜ್ವರಕ್ಕೆ ಬಲಿಯಾಗಿ ತೀರಿಕೊಂಡ. ನಾನು ಮತ್ತು ನನ್ನ ತಮ್ಮ ಕೀರ್ತಿಹಾಸನ್ ಇಬ್ಬರು ಉಳಿದುಕೊಂಡೆವು. ನಾನು ಮತ್ತು ನನ್ನ ತಮ್ಮ ಕೀರ್ತಿ ದೇಹ ಎರಡು, ಆತ್ಮ ಒಂದು ಎಂಬ ಮಾದರಿಯಲ್ಲಿದ್ದೆವು. ನಾನು ಸಾರ್ವಜನಿಕ ಜೀವನವನ್ನು ಪ್ರವೇಶಿಸಿದರೆ, ಆತ ವಾಣಿಜ್ಯ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡ. ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ದುಡಿದು ಆತ ಮೇಲೆ ಬಂದಿದ್ದಾನೆ. ನಮ್ಮ ತಾತ, ನಮ್ಮ ತಂದೆ, ದಾನಿ ತಾಯಿಯವರ ಕಣ್ಣಾಸರೆಯಲ್ಲಿ ಬೆಳೆದ ನಮಗೆ ಬಾಲ್ಯದಿಂದಲೂ ಎಚ್ಚರ ಪ್ರಜ್ಞೆ ಇದೆ. ನಾನು ಪ್ರಾರಂಭದಲ್ಲಿ ಮರಳವಾಡಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದೆ. ಹಾರೋಹಳ್ಳಿಯಲ್ಲಿ ನಮ್ಮ ತಂದೆಯ ಸ್ನೇಹಿತರಾದ ಹೊನ್ನಪ್ಪನವರ ಮನೆಯಲ್ಲಿ ಇದ್ದು ಹಿರಿಯ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದೆ. ನಮ್ಮ ತಂದೆಯವರ ಮತ್ತೊಬ್ಬ ಸ್ನೇಹಿತ ಪ್ರಭು ಆರಾಧ್ಯರು ಸಹ ರಾಮನಗರ ತಾಲ್ಲೂಕಿನ ಬಿಡದಿಯಲ್ಲಿ ನನಗೆ ಸ್ವಲ್ಪ ದಿನ ಆಶ್ರಯದಾತರಾಗಿದ್ದರು. ಕನಕಪುರದ ದೇಗುಲಮಠದ ವಿದ್ಯಾರ್ಥಿನಿಲಯದಲ್ಲಿ ಇದ್ದು ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದೆ. ಕರ್ನಾಟಕದಲ್ಲಿ ದೇಗುಲಮಠಕ್ಕೆ ವಿಶೇಷವಾದ ಮಹತ್ವ ಇದೆ. ಇಮ್ಮಡಿ ನಿರ್ವಾಣಸ್ವಾಮಿಗಳು ಹಾಗೂ ಇಮ್ಮಡಿ ಮಹಾಲಿಂಗ ಸ್ವಾಮಿಗಳು ಮಠಕ್ಕೆ ಸೇರಿದ್ದ ಐದಾರು ಎಕರೆ ಜಮೀನಿನಲ್ಲಿ ತಾವೇ ವ್ಯವಸಾಯ ಮಾಡಿಸಿ ಜೋಳಿಗೆ ಹಿಡಿದು ಸುಗ್ಗಿ ಕಾಲದಲ್ಲಿ ದವಸ ಸಂಗ್ರಹಮಾಡಿ ವಿದ್ಯಾರ್ಥಿನಿಲಯವನ್ನು ನಡೆಸುತ್ತಿದ್ದರು. ಆ ಕಾಲದಲ್ಲಿ ನಮಗೆ ಹಿರಿಯ ಗಾಂಧಿ ವಿಚಾರವಾದಿ ಕರಿಯಪ್ಪನವರ ಆದರ್ಶವನ್ನು ನಾವೆಲ್ಲ ಮೈಗೂಡಿಸಿ ಕೊಂಡು ಕೆಲಸ ಮಾಡುವ ಅವಕಾಶ ದೊರೆಯಿತು. ಮಹಾತ್ಮ ಗಾಂಧೀಯವರ ಬದುಕು ಮತ್ತು ಸಂದೇಶವನ್ನು ಅವರಷ್ಟು ಸುಲಲಿತವಾಗಿ ಹೇಳಿದವರು ಯಾರೂ ಇಲ್ಲ. ಹಾಗೆಯೇ ಇಂಗ್ಲಿಷ್ ವ್ಯಾಕರಣ ಚೆನ್ನಾಗಿ ಬೋಧನೆ ಮಾಡಿದವರೂ ಕೂಡ ಕರಿಯಪ್ಪನವರೇ. ಆ ಕಾಲದ ಮನೆಯಲ್ಲಿನ ಪ್ರೀತಿ, ವಿಶ್ವಾಸಪೂರ್ವಕವಾದ ವಾತಾವರಣ, ಗಾಂಧೀವಾದಿ ಕರಿಯಪ್ಪನವರ ಸೇವಾ ಆಸಕ್ತಿಯ ಬದುಕು, ಶ್ರೀ ದೇಗುಲಮಠ ಶ್ರೀಗಳವರ ಅಪಾರ ಅಂತಃಕರಣ ಇವು ನನ್ನನ್ನು ಮನುಷ್ಯನನ್ನಾಗಿ ರೂಪಿಸಿವೆ. ನನ್ನ ಸಹಪಾಠಿಗಳ ಎಲ್ಲರ ಹೆಸರು ನನಗೆ ಮರೆತುಹೋಗಿದೆ. ಆದರೆ ಕೆಲವು ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು.

ವಿ.ವೆಂಕಟಪ್ಪನವರ ಸೋದರ ಸಂಬಂಧಿ ಕೆ.ವಿ.ಶ್ರೀನಿವಾಸಮೂರ್ತಿ, ಸ್ವಾತಂತ್ರ್ಯ ಹೋರಾಟಗಾರರಾದ ವೆಂಕಟಾಚಲಪತಿ ಶೆಟ್ಟರ ಮಗ ವೆಂಕಟಾಚಲಪತಿ ಶೆಟ್ಟರು, ಮುಂದೆ ವಿಧಾನಸಭೆಯ ಸದಸ್ಯರಾದ ಕೆ.ಎಲ್. ಶಿವಲಿಂಗೇಗೌಡ, ವಕೀಲರಾದ ಕೆ.ಟಿ. ಚನ್ನಬಸವೇಗೌಡ ಮೊದಲಾದವರು ನನ್ನ ಸಹಪಾಠಿಗಳು. ಆ ಕಾಲದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರಾದ ಹಾರೋಹಳ್ಳಿ ಹೆಚ್.ಆರ್.ಸೀನಪ್ಪ ಹೊಳ್ಳರವರು ನಮಗೆ ಸ್ಫೂರ್ತಿನೀಡುವ ಮಾರ್ಗದರ್ಶಕರಾಗಿದ್ದರು. ಆಗ ಹಾರೋಹಳ್ಳಿಯಲ್ಲಿ ಅಧ್ಯಾಪಕರಾದ ಸುಬ್ಬಯ್ಯರ್, ಪ್ರಹ್ಲಾದರಾವ್ ಹಾಗೂ ರಾಮಾನುಜ ಅಯ್ಯಂಗಾರ್‌ರವರು ನನ್ನ ನೆನಪಿನಲ್ಲಿರುವ ಕೆಲವು ಅಧ್ಯಾಪಕರುಗಳಾಗಿದ್ದಾರೆ.

***– ನಿಮ್ಮ ತಾಯಿ ಯಾವ ಊರಿನವರು? ನಿಮ್ಮ ಮನೆತನದ ಹಿನ್ನಲೆ ಏನು?***

ನಮ್ಮ ತಾಯಿ ಕನಕಪುರ ತಾಲ್ಲೂಕಿನ ಚಿಕ್ಕಮುದವಾಡಿ ಗ್ರಾಮದವರು. ಅದು ನಮ್ಮ ಮರಳವಾಡಿಯಿಂದ ೧೨ ಕಿಲೋಮೀಟರ್ ದೂರ ಇದೆ. ಅವರ ತಂದೆ ಬಜ್ಜಪ್ಪ, ತಾಯಿ ಭದ್ರಮ್ಮ. ನಮ್ಮ ತಾಯಿಯ ದೊಡ್ಡ ತಮ್ಮ ವೀರಭದ್ರಯ್ಯ. ಅವರು ಶೇಕ್‌ದಾರರಾಗಿದ್ದರು. ನನಗೆ ಲೌಕಿಕ ವಿಚಾರದಲ್ಲಿ ಅವರೇ ಮಾರ್ಗದರ್ಶಕರಾಗಿದ್ದರು. ನಮ್ಮ ತಾಯಿಯ ಮನೆಯಲ್ಲಿ ತುಂಬಾ ಸುವ್ಯವಸ್ಥಿತವಾದ ರೇಷ್ಮೆ ಕೃಷಿಯನ್ನು ಕೈಗೊಳ್ಳಲಾಗುತ್ತಿತ್ತು.

***– ನೀವು ಹುಟ್ಟಿದಾಗ ಮರಳವಾಡಿಯ ಪರಿಸರ ಹೇಗಿತ್ತು? ಆ ಕಾಲದ ಜನರ ಭಾವನೆಗಳು ಯಾವುವು? ನಿಮ್ಮ ಊರಿನಲ್ಲಿ ನಡೆಯುತ್ತಿದ್ದ ಪ್ರಮುಖ ಜಾತ್ರೆಗಳು ಯಾವುವು? ಬೇರೆ ಬೇರೆ ಪಂಗಡದವರು ಅಲ್ಲಿ ಹೇಗೆ ಒಂದಾಗಿ ಬಾಳುತ್ತಿದ್ದರು? ಈ ಅಂಶಗಳು ನಿಮ್ಮ ವ್ಯಕ್ತಿತ್ವವನ್ನು ರೂಪಿಸಿವೆಯೇ?***

ನಿರ್ಮಲ ಪರಿಸರ ಹಾಗೂ ಮುಗ್ಧ ಜನಸಮುದಾಯವಿದ್ದ ಮರಳವಾಡಿ ನನಗೆ ತುಂಬಾ ಪ್ರಿಯವಾದ ಸ್ಥಳ. ಅದನ್ನು ಒಂದು ಪುಟ್ಟ ಭಾರತ ಎಂದು ಕರೆದರೆ ತಪ್ಪಾಗಲಾರದು. ಅಲ್ಲಿ ಎಲ್ಲಾ ಜಾತಿಯ ಜನ ಇದ್ದಾರೆ. ಕಾಳುಗಳಿಂದ ಎಣ್ಣೆ ತೆಗೆಯುವ ಗಾಣಿಗರು ನಮ್ಮ ಎಡಭಾಗಕ್ಕಿದ್ದರು. ಮನೆಯ ಹಿಂಭಾಗದಲ್ಲಿ ಮಹಮದೀಯರು, ಮನೆಯಿಂದ ಮುಂದೆ ಒಕ್ಕಲಿಗರು, ಇನ್ನೊಂದು ಕಡೆ ವಿಶ್ವಕರ್ಮಿಗಳು, ತಿಗಳರು, ಅಗಸರು, ಮೇದರು, ಕುಂಬಾರರು, ಮರಾಠರು ಹೀಗೆ ಎಲ್ಲರೂ ಅಲ್ಲಿ ವಾಸ ಮಾಡುತ್ತಿದ್ದರು. ಮುಂದಿನ ಬೀದಿಯಲ್ಲಿ ಬ್ರಾಹ್ಮಣ ಸಮುದಾಯದ ಶ್ಯಾನುಬೋಗ್ ವೆಂಕಟಣ್ಣನವರು ವಾಸಮಾಡುತ್ತಿದ್ದರು. ಊರಿನ ಹೊರಕೇರಿಯಲ್ಲಿ ಪರಿಜನರು, ಅದರ ಪಕ್ಕದಡಲ್ಲಿಯೇ ಸ್ವಲ್ಪ ದೂರದಲ್ಲಿ ಬಸವೇಶ್ವರ ದೇವಸ್ಥಾನ. ನಾವು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಎಲ್ಲಾ ಸಮುದಾಯದಲ್ಲೂ ನನಗೆ ಸ್ನೇಹಿತರಿದ್ದರು. ಮರಳವಾಡಿ ನಂಜುಂಡಭಟ್ಟರು ನನ್ನ ಸಹಪಾಠಿಗಳು. ನಮ್ಮ ಊರಿನಲ್ಲಿದ್ದ ಮಹಮದೀಯರು ನಮ್ಮನ್ನು ಹೊಂದಿಕೊಂಡು ಹೋಗುತ್ತಿದ್ದರು. ಆ ಸಮುದಾಯಕ್ಕೆ ಸೇರಿದವರೇ ಆಗಿ ನಮ್ಮ ಗ್ರಾಮ ಪಂಚಾಯತಿಯ ಅಧ್ಯಕ್ಷರಾಗಿ ಯಜಮಾನ್ ಯಾಕೂಬ್ ಸಾಹೇಬರು ಜನ ಮೆಚ್ಚುಗೆಯ

ಕೆಲಸಮಾಡಿದ್ದಾರೆ. ಪಿ.ಜಿ.ಆರ್.ಸಿಂಧ್ಯಾರವರ ತಾತ ಸ್ವಾಮಿರಾವ್ ಚಿಕ್ಕಮರಳವಾಡಿಯವರು. ಅವರು ಪ್ರಗತಿಪರ ರೈತರಾಗಿದ್ದರು. ಸಿಂಧ್ಯಾರವರ ಸೋದರಮಾವ ಬಾಪುರಾವ್‌ರವರು ಕೂಡ ನಮ್ಮ ಪಂಚಾಯತಿಯ ಸದಸ್ಯರಾಗಿದ್ದರು. ಅವರ ತಂದೆ ಪಾಂಡುರಂಗರಾವ್ ಅಪಾರ ದೈವ ಶ್ರದ್ಧೆಯುಳ್ಳವರು. ದೊಡ್ಡಮರಳವಾಡಿ ಗ್ರಾಮದ ಪಂಚಾಯತಿಯ ಅಧ್ಯಕ್ಷರಾಗಿ ಅವರು ಸೇವೆ ಸಲ್ಲಿಸಿದ್ದರು. ಎಲ್ಲಾ ಜನಾಂಗದವರು ವಿವಿಧ ವೃತ್ತಿಗಳನ್ನು ಕೈಗೊಂಡು, ಆತ್ಮೀಯ ವಾತಾವರಣದಲ್ಲಿ ಜೀವನ ಸಾಗಿಸುತ್ತಿದ್ದರು. ನನ್ನಲ್ಲಿ ಜಾತ್ಯತೀತ ಪ್ರಜ್ಞೆ ಬೆಳೆಯಲು ನಮ್ಮ ಊರಿನ ಪರಿಸರವೇ ಕಾರಣವಾಗಿದೆ. ಸ್ವಾತಂತ್ರ್ಯ ಬಂದನಂತರವೂ ಜಾತಿ ಹೆಸರಿನಲ್ಲಿ ಆ ಗ್ರಾಮ ಒಡೆದಿರಲಿಲ್ಲ. ಪ್ರತಿಯೊಬ್ಬ ಹಳ್ಳಿಯವನಲ್ಲೂ ದೈವಶ್ರದ್ಧೆ ಇತ್ತು. ಊರೊಟ್ಟಿನ ಕೆಲಸ ಎಂದರೆ ಎಲ್ಲರೂ ನಮ್ಮ ಮನೆಗೆ ಬಂದುಬಿಡುತ್ತಿದ್ದರು. ನಾವೂ ಕೂಡ ಯಾವುದೇ ವ್ಯಕ್ತಿಯನ್ನು ಹುಟ್ಟಿನಿಂದ ಬೇರೆ ಮಾಡಿದವರಲ್ಲ. ಎಲ್ಲರೂ ಒಂದೇ ಕಡೆ ಕುಳಿತುಕೊಂಡು ಊಟ-ತಿಂಡಿ ಮಾಡುತ್ತಿದ್ದೆವು. ಊರಿನ ಜಾತ್ರೆಯಾಗಲಿ ಅಥವಾ ಯಾವುದಾದರೂ ಕುಟುಂಬದಲ್ಲಿ ವಿವಾಹ ಮತ್ತಿತರ ಕಾರ್ಯಗಳಾದರೆ ತಪ್ಪದೇ ನಾವು ಹಾಜರಾಗಿ ಅಲ್ಲಿನ ಕೆಲಸ ಕಾರ್ಯಗಳಲ್ಲಿ ತೊಡಗುತ್ತಿದ್ದೆವು. ನಮ್ಮ ಊರಿನ ಪಕ್ಕದ ದೇವರಾಳಮ್ಮನ ಜಾತ್ರೆ ತುಂಬಾ ಪ್ರಸಿದ್ಧ. ದೇವರಾಳು ಗ್ರಾಮದಲ್ಲಿ ಈ ದೇವತೆಯ ಗುಡಿ ಇದೆ. ದೇವಿಯ ಜಾತ್ರೆ ದೊಡ್ಡ ಪ್ರಮಾಣದಲ್ಲಿ ಜರುಗುತ್ತದೆ. ದೇವಿಗೆ ತೊಡಿಸುತ್ತಿದ್ದಂತಹ ಒಡವೆಯಲ್ಲಾ ನಮ್ಮ ಮನೆಯಿಂದ ತೆಗೆದುಕೊಂಡು ಹೋಗುತ್ತಿದ್ದರು. ಜಾತ್ರೆ ಮುಗಿದ ತಕ್ಷಣ ಮತ್ತೆ ಆ ಒಡವೆಗಳನ್ನು ತಂದಿಡುತ್ತಿದ್ದರು. ಎಲ್ಲಾ ಸಮುದಾಯದವರು ಒಗ್ಗಟ್ಟಾಗಿ ಜಾತ್ರೆಯಲ್ಲಿ ದುಡಿಯುತ್ತಿದ್ದರು. ಪತ್ತಾರು ಹಳ್ಳಿಯ ಜನ ಮೂರು ದಿನಗಳ ಕಾಲ ತಮ್ಮ ವೈಯಕ್ತಿಕ ಕಷ್ಟ-ದುಃಖಗಳನ್ನು ಮರೆತು ಜಾತ್ರೆಯಲ್ಲಿ ಒಂದಾಗಿ ಬೆರೆಯುತ್ತಿದ್ದರು. ಜಾತ್ರೆಯ ಸಂದರ್ಭದಲ್ಲಿ ನಡೆಯುವ 'ಕೊಂಡ ಹಾಯುವ' ಪ್ರಸಂಗ ನೋಡುವುದು ಬಹಳ ರೋಮಾಂಚಕಾರಿಯಾದ ಅನುಭವವಾಗಿರುತ್ತಿತ್ತು. ನಿಗಿನಿಗಿ ಎನ್ನುತ್ತಿರುವ ಕೆಂಡದ ಮೇಲೆ, ದೇವಿಯನ್ನು ನಂಬಿದ್ದ ಭಕ್ತಾದಿಗಳು ಶರವೇಗದಲ್ಲಿ ಓಡುತ್ತಿದ್ದರು. ಅವರ ಕಾಲುಗಳಿಗೆ ಏನೂ ಆಗುತ್ತಿರಲಿಲ್ಲ. ನಮಗೆಲ್ಲಾ ಅದನ್ನು ಕಂಡು ದೇವರ ಮೇಲೆ ಮತ್ತಷ್ಟು ಗೌರವ ಹೆಚ್ಚಾಗುತ್ತಿತ್ತು.

***– ಆ ಕಾಲದಲ್ಲಿ ಜಾತಿ ಕಟ್ಟುಪಾಡುಗಳು ಹೇಗಿದ್ದವು? ಪರಿಶಿಷ್ಟ ಜಾತಿ, ವರ್ಗ ಹಾಗೂ ಹಿಂದುಳಿದವರು ನೆಮ್ಮದಿಯ ಜೀವನ ನಡೆಸುತ್ತಿದ್ದರೇ?***

ನಾನು ಆಗಲೇ ಹೇಳಿದ ಹಾಗೆ ನಮ್ಮ ಊರಿನಲ್ಲಿ ಎಲ್ಲಾ ಸಂಪ್ರದಾಯದವರೂ ಮತ್ತು ಎಲ್ಲ ಸಮುದಾಯದವರೂ ಇದ್ದರು. ಪರಕೀಯರ ಆಳ್ವಿಕೆಗೆ ಒಳಪಟ್ಟಿದ್ದ ದಿನಗಳವು. ಗ್ರಾಮೀಣ ಪ್ರದೇಶದ ಮೇಲೆ ಹೆಚ್ಚಿನ ಹಣವನ್ನು ಸರ್ಕಾರ ವೆಚ್ಚ ಮಾಡುತ್ತಿರಲಿಲ್ಲ. ಮೂಲಭೂತ ಸೌಲಭ್ಯಗಳಿಲ್ಲದೆ ಜನ ನರಳುತ್ತಿದ್ದರು. ಆದರೆ, ಸಮಾಜದಲ್ಲಿನ ವಿವಿಧ ಪಂಗಡಗಳಲ್ಲಿ ಮಾನವೀಯತೆಯ ಗುಣ ಹೆಚ್ಚಾಗಿತ್ತು. ಬಡತನ ಬಹುಮಟ್ಟಿನ ಜನರ ಮನೆಯನ್ನು

ಹಾಸಿಹೊಕ್ಕಿತ್ತು. ಆದರೂ, ಹಸಿವಿನಿಂದ ಆ ಕಾಲದಲ್ಲಿ ಒಬ್ಬರಾದರೂ ಸತ್ತಿದ್ದನ್ನು ನಾನು ನೋಡಿಲ್ಲ. ಶ್ರೀಮಂತ ರೈತರು ಹಾಗೂ ಇತರರಲ್ಲಿ, ಒಂದಿಷ್ಟಾದರೂ ಹಂಚಿಕೊಂಡು ತಿನ್ನಬೇಕೆಂಬ ಮನಸ್ಸು ಇತ್ತು. ಸಾಮಾಜಿಕ ಕಟ್ಟುಪಾಡು ಅಂದರೆ ಮೂಢನಂಬಿಕೆ, ಸಂಪ್ರದಾಯಗಳು ಸಾಕಷ್ಟಿದ್ದರೂ, ಯಾರಿಗೂ ದಿನನಿತ್ಯದ ಜೀವನ ನಿರ್ವಹಿಸುವುದು ಕಷ್ಟದ ಕೆಲಸ ಆಗಿರಲಿಲ್ಲ. ಕೃಷಿ ಕೂಡ ಅಂದು ಲಾಭದಾಯಕವಾಗಿರಲಿಲ್ಲ. ವಾಣಿಜ್ಯ ಬೆಳೆಗಳು ಅಪರಿಚಿತವಾಗಿತ್ತು. ತಲೆತಲಾಂತರದಿಂದ ವಿದ್ಯೆಯನ್ನು ಹಂಚದ ಕಾರಣ ಕೆಳವರ್ಗವನ್ನು ಮೂಢನಂಬಿಕೆಗಳು ಆಳುತ್ತಿದ್ದವು. ಅಜ್ಞಾನ ಸಮಾಜದಲ್ಲಿ ಪ್ರಮುಖ ಸ್ಥಾನ ಪಡೆದಿತ್ತು. ವ್ಯಕ್ತಿಗೆ ಅರಿವಿಲ್ಲದೆ ಎಲ್ಲಾ ಸ್ತರದಲ್ಲೂ ಶೋಷಣೆ ಆಗುತ್ತಿತ್ತು. ಈಗ ಅದು ಸ್ವಲ್ಪ ಸುಧಾರಣೆಯಾಗಿದೆ.

***– ಸ್ವತಃ ರೈತರಾದ ತಾವು ಕೃಷಿಯಲ್ಲಿ ಯಾವ ರೀತಿ ಪ್ರಯೋಗ ನಡೆಸಿದ್ದೀರಿ? ಅಂತಹ ಪ್ರಯೋಗಗಳು ಯಶಸ್ವಿ ಆಗಿವೆಯೇ? ಅದು ಒಂದು ವೇಳೆ ವಿಫಲವಾಗಿದ್ದರೆ ಅದಕ್ಕೆ ಕಾರಣಗಳೇನು?***

ನಮ್ಮ ತಾತನವರು ಹರಾಜಿನಲ್ಲಿ ಸ್ವಲ್ಪ ಜಮೀನನ್ನು ಕೊಂಡರು. ಜೊತೆಗೆ ಪಿತ್ರಾರ್ಜಿತವಾದ ಆಸ್ತಿ ಇತ್ತು. ನಮ್ಮ ಮನೆತನಕ್ಕೆ ಆ ಕಾಲದಲ್ಲಿ ೩೬೪ ಎಕರೆ ಜಮೀನು ಇತ್ತು. ನಮ್ಮ ತಂದೆಯವರು ನಮ್ಮ ತಾತನವರಿಗೆ ಏಕಮಾತ್ರ ಪುತ್ರರಾದ ಕಾರಣ ಎಲ್ಲಾ ಜಮೀನು ಅವರ ಹೆಸರಿಗಾಯಿತು. ಎರಚಲವಾಡಿ, ಮರಳವಾಡಿ, ಶೀತಲವಾಡಿ, ಹುಯಿಲಪ್ಪನಹಳ್ಳಿ ಮೊದಲಾದ ಕಡೆ ನಮ್ಮ ಮನೆತನದ ಜಮೀನು ಇತ್ತು. ರಾಮನಗರ ತಾಲ್ಲೂಕಿನ ಅವ್ವೇರಹಳ್ಳಿಯಲ್ಲೂ ಕೂಡ ಸ್ವಲ್ಪ ಜಮೀನು ಇತ್ತು. ನಾನು ದೆಹಲಿಯಲ್ಲಿ ಕಾನೂನು ವ್ಯಾಸಂಗ ಮುಗಿಸುವ ಮೊದಲೆ ಮರಳವಾಡಿಗೆ ಬಂದೆ. ನಮ್ಮ ತಂದೆ ಹಠಾತ್ತನೆ ನಿಧನರಾದ ಕಾರಣ ಆ ಜಮೀನನ್ನು ನೋಡಿಕೊಳ್ಳುವ ಜವಾಬ್ದಾರಿ ನನ್ನ ಮೇಲೆ ಬಿತ್ತು. ಸ್ವತಃ ಕೃಷಿಕ ಕುಟುಂಬದಿಂದ ಬಂದ ನನಗೆ ಜಮೀನಿನಲ್ಲಿ ಹೊಸ ಹೊಸ ಬೆಳೆ ತೆಗೆಯಬೇಕು ಎಂಬ ಆಸೆ ಸ್ಫುರಿಸಿತು. ನಮ್ಮ ತಾತನವರು ಜಮೀನನ್ನು ಹೆಚ್ಚು ಮಾಡುತ್ತಾ ಹೋದರೆ, ನಾನು ಕೃಷಿಯಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿದೆ. ರೇಷ್ಮೆ ಕೃಷಿಯನ್ನು ಕೈಗೊಂಡೆ. ಹೊಗೆಸೊಪ್ಪನ್ನು ಬೆಳೆದೆ. ವಿದೇಶಗಳಿಗೆ ಹೋದಾಗ ಭತ್ತದ ಹೊಸ ತಳಿಗಳನ್ನು ತಂದು ನನ್ನ ಜಮೀನಿನಲ್ಲಿ ಕೃಷಿ ಮಾಡಿದೆ. ತೆಂಗಿನ ಮರವನ್ನು ಬೆಳೆಸಿದೆ. ವಿವಿಧ ಮರಗಳು ನಮ್ಮ ಜಮೀನಿನಲ್ಲಿ ಇರಬೇಕೆಂದು ಎಲ್ಲಾ ರೀತಿಯ ಮರಗಳನ್ನು ನೆಡಿಸಿದೆ. ಜಾನುವಾರುಗಳಿಗೂ ಸಹ ನನ್ನ ಕೃಷಿಯಲ್ಲಿ ಆದ್ಯತೆ ಇತ್ತು. ವ್ಯವಸಾಯದ ಪ್ರಾಯೋಗಿಕ ಅನುಭವ ಇದ್ದ ಕಾರಣ ನಾನು ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನ ಮೂಲಕ ಹೊಸ ತಳಿಗಳನ್ನು ಸಂಶೋಧಿಸಲು ವಿಜ್ಞಾನಿಗಳಿಗೆ ಸಲಹೆ ಸೂಚನೆ ಕೊಟ್ಟೆ. ಇಂತಹ ಕ್ಷೇತ್ರಗಳಲ್ಲಿ ವಿಫಲತೆ ಅಥವಾ ಸಫಲತೆ ಎಂಬುದಿಲ್ಲ. ರೈತ ಮುಗಿಲು ನೋಡುತ್ತಾ ವ್ಯವಸಾಯ ಮಾಡುತ್ತಾನೆ. ಅವನ ಅದೃಷ್ಟ ಚೆನ್ನಾಗಿದ್ದರೆ ಮಳೆ ಆಗಬಹುದು, ಇಲ್ಲದಿದ್ದರೆ

ಬಿತ್ತನೆಗ ಚೆಲ್ಲಿರುವ ಕಾಳು ಕೂಡ ಸೀದು ಹೋಗಬಹುದು. ಒಳ್ಳೆಯ ಬೆಳೆ ಬಂದ ನಂತರವೂ ಅದರ ಪೂರ್ಣ ಲಾಭ ಆತನಿಗೆ ದೊರೆಯುತ್ತದೆ ಎಂಬ ವಿಶ್ವಾಸವಿಲ್ಲ. ಅವನು ಬೆಳೆದ ಬೆಳೆಯ ಲಾಭವನ್ನು ಮಧ್ಯವರ್ತಿಗಳು ನುಂಗಬಹುದು. ಒಟ್ಟಾರೆ ಭಾರತೀಯ ರೈತ ಅಸಹಾಯಕನಾಗಿದ್ದಾನೆ. ಅದೂ ಕೂಡ ನನಗೆ ಕೃಷಿಯಲ್ಲಿ ಮನವರಿಕೆಯಾದ ಅಂಶ.

***– 'ಮೈಸೂರು ಚಲೋ' ಚಳವಳಿಯಲ್ಲಿ ತಾವು ಭಾಗವಹಿಸಿದ್ದಾಗ ತಮಗಾದ ಅನುಭವಗಳಾವುವು?***

ನಾನು ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿ ಮೈಸೂರು ಚಲೋ ಚಳವಳಿ ಪ್ರಾರಂಭವಾಯಿತು. ಕೆಂಗಲ್ ಹನುಮಂತಯ್ಯ, ಕೆ.ಸಿ. ರೆಡ್ಡಿ, ಕೆ.ಟಿ. ಭಾಷ್ಯಂ, ಎಸ್.ನಿಜಲಿಂಗಪ್ಪ ಮೊದಲಾದವರು ಅಂದು ನಮ್ಮ ನಾಯಕರುಗಳಾಗಿದ್ದರು. ಮೈಸೂರು ಅರಮನೆಗೆ ಮುತ್ತಿಗೆ ಹಾಕಲು ನಮ್ಮ ಕನಕಪುರದಿಂದ ಯುವಕರ ದಂಡು ಹೊರಟಿತ್ತು. ಕರಿಯಪ್ಪ, ವೆಂಕಟಾಚಲಪತಿ ಶೆಟ್ಟಿ, ಸೈಕಲ್ ರಂಗಪ್ಪ ಮೊದಲಾದವರ ಸ್ಫೂರ್ತಿಯಿಂದ ನಾವು ಹುಡುಗರು ಮೈಸೂರಿನ ಕಡೆ ಹೊರಟೆವು. ಆ ಚಳವಳಿಯಲ್ಲಿ ಕೆ.ಟಿ.ಚನ್ನಬಸವೇಗೌಡ, ಕೆ.ಎಲ್.ಶಿವಲಿಂಗೇಗೌಡ, ಕೆ.ಜಿ.ಶ್ರೀನಿವಾಸಮೂರ್ತಿ ಮೊದಲಾದವರು ನನ್ನ ಜೊತೆಗಾರರಾಗಿದ್ದರು. ಕನಕಪುರದಿಂದ ನಡೆದುಕೊಂಡು ಬಂದ ನಾವು ರಾತ್ರಿ ಮಳವಳ್ಳಿ ಸೇರಿದೆವು. ಆಗ ನಡೆದ ಒಂದು ಪ್ರಸಂಗ ಈಗಲೂ ನನ್ನ ನೆನಪಿನಲ್ಲಿದೆ. ಮಳವಳ್ಳಿಯ ಮುಖಂಡರೊಬ್ಬರು, ಒಂದು ಮನೆಯಲ್ಲಿ ಮೂರು ಜನರಂತೆ ಇಳಿದುಕೊಳ್ಳಲು ನಮಗೆ ವ್ಯವಸ್ಥೆ ಮಾಡಿಕೊಟ್ಟರು. ರಾತ್ರಿ ಒಂಬತ್ತು ಗಂಟೆಗೆ ನಾವು ನಮಗೆ ನಿಗದಿಯಾದ ಮನೆಗೆ ಹೋದೆವು. ಆ ಮನೆಯವರು ತುಂಬಾ ಆದರಿಸಿ ನಮಗೆ ಊಟ ವಸತಿಗಳನ್ನು ಒದಗಿಸಿಕೊಟ್ಟರು. ವರಾಂಡದಲ್ಲಿ ಪೇರಿಸಿಟ್ಟ ಮೂಟೆ ಮೇಲೆ ಕಾನ್ಸ್‌ಟೇಬಲ್ ಒಬ್ಬರ ಟೋಪಿ ಇತ್ತು. ಆ ಟೋಪಿಯ ಬಗ್ಗೆ ವಿಚಾರಿಸಿದಾಗ, ನಾವು ರಾತ್ರಿ ಊಟಮಾಡಿದ ಮನೆಯ ಯಜಮಾನ ಒಬ್ಬ ಪೋಲಿಸ್ ಪೇದೆ ಎಂಬ ವಿಷಯ ಗೊತ್ತಾಯಿತು. ನಮಗೆ ಗಾಬರಿಯಾಗಿ ಅವರ ಕಡೆ ನೋಡಿದಾಗ, ಅವರು 'ಮಕ್ಕಳೇ ನೀವು ಹೆದರಬೇಡಿ, ನಾನು ಸರ್ಕಾರಿ ಚಾಕರಿಯಲ್ಲಿದ್ದರೂ ಮಹಾತ್ಮಗಾಂಧೀಜಿಯವರ ಭಕ್ತ. ನಿಮ್ಮ ಹೋರಾಟಕ್ಕೆ ನನ್ನದು ಒಂದು ಅಳಿಲು ಸೇವೆ ಇರಲಿ ಎಂದು ನಿಮ್ಮನ್ನು ಮನೆಗೆ ಕರೆದುಕೊಂಡು ಬಂದೆ' ಎಂದರು. ಭಾರತದ ಸ್ವಾತಂತ್ರ್ಯ ಚಳವಳಿ ಹೇಗೆ ಜನಮನವನ್ನು ಗೆದ್ದಿತ್ತು ಎಂಬುದಕ್ಕೆ ಇದೊಂದು ನಿದರ್ಶನವಾಗಿ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತಿದೆ.

***– ವಿದ್ಯಾರ್ಥಿ ದೆಸೆಯಲ್ಲಿ ತಾವು ಕಾಂಗ್ರೆಸ್ ಸೇರಲು ಕಾರಣವೇನು? ಕಾಂಗ್ರೆಸ್‌ನ ಯಾವ ತತ್ವ ತಮ್ಮ ಮನಸ್ಸನ್ನು ಆಕರ್ಷಿಸಿತು?***

'ಕ್ವಿಟ್ ಇಂಡಿಯಾ ಚಳವಳಿಯ' ಸಂದರ್ಭದಲ್ಲಿ ನಾನು ಬಿಡದಿ ಮತ್ತು ಹಾರೋಹಳ್ಳಿಯಲ್ಲಿ ಖಾಸಗಿಯಾಗಿ ಮಾಧ್ಯಮಿಕ ಶಾಲೆಯ ಪಾಠ ಹೇಳಿಸಿಕೊಳ್ಳುತ್ತಿದ್ದೆ. ಆಗಿನಿಂದಲೂ

ಮಹಾತ್ಮಗಾಂಧಿ, ಮೌಲಾನ ಅಬುಲ್‌ಕಲಂ ಆಜಾದ್, ನೆಹರು ಇವರುಗಳು ನಮಗೆ ಆರಾಧ್ಯಪುರುಷರಾಗಿದ್ದರು. ಕಾಂಗ್ರೆಸ್ ಒಂದು ಮಹಾಸಾಗರ ಇದ್ದ ಹಾಗೆ. ಅದರಲ್ಲಿ ಎಲ್ಲಾ ಜಾತಿಯ ಜನರೂ ಇರುತ್ತಿದ್ದರು. ಆ ಕಾಲದ ಬಹುಮಟ್ಟಿನ ಜನ, ಕಾಂಗ್ರೆಸ್ ಎಂದರೆ ತ್ಯಾಗ ಹಾಗೂ ಅರ್ಪಣೆಯ ಮನೋಭಾವದಿಂದ ದುಡಿಯುವ ದೇಶಭಕ್ತರ ಒಕ್ಕೂಟ ಎಂದು ಭಾವಿಸಿದ್ದರು. ಆ ವಿಚಾರಕ್ಕೆ ನನ್ನದೂ ಕೂಡ ಸಮ್ಮತವಿತ್ತು. ಅಂತೇ ನಾನು ಕಾಂಗ್ರೆಸ್ ಪಕ್ಷದಿಂದ ಆಕರ್ಷಿತನಾದೆ.

*- ಕಾಂಗ್ರೆಸ್ ಪಕ್ಷದಲ್ಲಿ ಇದ್ದುಕೊಂಡು ತಾವು ಸಲ್ಲಿಸಿದ ಸೇವೆ ಯಾವುದು? ಕಾಂಗ್ರೆಸ್ಸಿನ ವಿವಿಧ ಹುದ್ದೆಗಳನ್ನು ಯಾವಾಗ ಅಲಂಕರಿಸಿದ್ದಿರಿ?*

ಕನಕಪುರದಲ್ಲಿ ಪ್ರೌಢಶಾಲಾ ವಿದ್ಯಾರ್ಥಿ ಆಗಿದ್ದಾಗ, ನಾನು ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿದ್ದೆ. ೧೯೪೮ರಲ್ಲಿ ಕನಕಪುರ ತಾಲ್ಲೂಕಿನ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿದ್ದೆ. ೧೯೫೩ರಲ್ಲಿ ದೆಹಲಿಗೆ ಹೋದ ನಂತರ ಅನೇಕ ಕಾಂಗ್ರೆಸ್ ಮುಖಂಡರನ್ನು ಪ್ರತ್ಯಕ್ಷವಾಗಿ ನೋಡಿ ಅವರೊಂದಿಗೆ ಮಾತನಾಡುವ ಅವಕಾಶ ನನಗೆ ದೊರೆಯಿತು. ೧೯೫೭ರಲ್ಲಿ ಮೈಸೂರು ಯುವ ಕಾಂಗ್ರೆಸ್ಸಿನ ಸಂಚಾಲಕನಾಗಿ ಆಯ್ಕೆಯಾದೆ. ಕಾಂಗ್ರೆಸ್ ಪಕ್ಷದಲ್ಲಿ ನನ್ನ ಬೆನ್ನು ತಟ್ಟಿ ಪ್ರೋತ್ಸಾಹಿಸಿದವರು ಹೋಟೆಲ್ ಸುಬ್ಬಯ್ಯ, ಡಿ.ಆರ್.ರಾಮಯ್ಯ, ವೆಂಕಟಾಚಲಪತಿಶೆಟ್ಟಿ, ತಿಮ್ಮಪ್ಪರೆಡ್ಡಿ ಹಾಗೂ ಸೈಕಲ್ ರಂಗಪ್ಪನವರು. ಜಿಲ್ಲಾ ಕಾಂಗ್ರೆಸ್ ಸಮಿತಿಯಲ್ಲಿ ನನಗೆ ಅವಕಾಶ ನೀಡಿದವರೆಂದರೆ ಎ.ವಿ. ನರಸಿಂಹರೆಡ್ಡಿ ಯವರು. ಅವರು ಬೆಂಗಳೂರಿನ ದಕ್ಷಿಣ ತಾಲ್ಲೂಕಿನ ಕಾಂಗ್ರೆಸ್ ವಿಧಾನಸಭಾ ಕ್ಷೇತ್ರದ ಸದಸ್ಯರು. ಜಿಲ್ಲಾ ಕಾರ್ಯಕಾರಿ ಸಮಿತಿಯಲ್ಲಿ ನನ್ನ ಹೆಸರು ಸೇರಿಸಲು, ಮೇಯರ್ ಆಗಿದ್ದ ಎಂ.ಕೃಷ್ಣಪ್ಪ, ವಿ.ಎಸ್.ಕೃಷ್ಣಯ್ಯರ್, ಕಾಂಗ್ರೆಸ್ ನಾಯಕರಾಗಿದ್ದ ಹೆಚ್.ಎಸ್. ಸೀತಾರಾಮ್ ಅವರುಗಳು ಕಾರಣಕರ್ತರಾಗಿದ್ದರು. ಕೆ.ಜಿ.ತಿಮ್ಮೇಗೌಡರು ಸಹ ಈ ಸಂದರ್ಭದಲ್ಲಿ ನನಗೆ ಸಹಾಯಮಾಡಿದರು. ನಾನು ಹೆಚ್.ಸಿ.ದಾಸಪ್ಪ ಮತ್ತು ಯಶೋಧರಮ್ಮ ದಾಸಪ್ಪನವರ ಮನೆಯಲ್ಲಿ ಬೆಳೆದ ಹುಡುಗ. ಅವರೂ ಕೂಡ ನನ್ನ ಸಮಸ್ತ ಏಳಿಗೆಗೆ ಕಾರಣೀಭೂತರಾಗಿದ್ದಾರೆ.

*- ಮೈಸೂರು ಯೂತ್ ಕಾಂಗ್ರೆಸ್‌ನಲ್ಲಿ ತಾವು ೧೩ ವರ್ಷಗಳ ಕಾಲ ಸೇವೆ ಸಲ್ಲಿಸಿರುವಿರಿ? ಆ ಕಾಲದಲ್ಲಿ ತಾವು ಮಾಡಿದ ಸಾಧನೆಗಳೇನು? ತಾವು ಬೆಳೆಸಿದ ಅಂದಿನ ನಾಯಕರು ಯಾರು?*

೧೯೫೭ರಲ್ಲಿ ನಾನು ಯೂತ್ ಕಾಂಗ್ರೆಸ್‌ಗೆ ಸೇರ್ಪಡೆಯಾದೆ. ಆಗಿನಿಂದಲೂ ನನಗೆ ಪ್ರೋತ್ಸಾಹ ಕೊಟ್ಟವರು ಯಶೋಧರಮ್ಮ ದಾಸಪ್ಪ ಹಾಗೂ ದಾಸಪ್ಪನವರು. ಶ್ರೀಮತಿ ಇಂದಿರಾಗಾಂಧಿಯವರು ನನ್ನನ್ನು ಯೂತ್ ಕಾಂಗ್ರೆಸ್ಸಿನ ಸಂಚಾಲಕನನ್ನಾಗಿ ನೇಮಿಸಿದರು. ಈ ನೇಮಕಕ್ಕೆ ನನ್ನ ಮಿತ್ರರಾದ ದಿನೇಶ್‌ಸಿಂಗ್ ಕಾರಣರಾಗಿದ್ದರು. ಅದಕ್ಕೆ ಪ್ರೋತ್ಸಾಹ ಶ್ರೀ ಎಂ.ಎಸ್. ಗುರುಪಾದಸ್ವಾಮಿಯವರದು. ನಾನು ಯೂತ್ ಕಾಂಗ್ರೆಸ್ಸಿನ ಸಂಚಾಲಕನಾದ

ಮೇಲೆ ಇಡೀ ರಾಜ್ಯದಲ್ಲಿ ಯೂತ್ ಕಾಂಗ್ರೆಸ್ ಕಟ್ಟಲು ಶ್ರಮಿಸಿದೆ. ಮಾಜಿ ಮುಖ್ಯಮಂತ್ರಿ ಗುಂಡೂರಾವ್, ಇಂದಿನ ಶಾಸಕರಾದ ಮುನಿಸ್ವಾಮಿ, ಮಾಜಿ ಸಚಿವರಾದ ಸಿ.ಎಂ.ಇಬ್ರಾಹಿಂ, ಸಚಿವರಾದ ಮಹಾದೇವ್, ಅಲ್ಲಂ ವೀರಭದ್ರಪ್ಪ, ವಿಧಾನ ಪರಿಷತ್ತಿನ ಮಾಜಿ ಸದಸ್ಯರಾದ ಅಬ್ದುಲ್‌ಸತ್ತಾರ್ ಸೇಟ್, ವಿಧಾನ ಪರಿಷತ್ತಿನ ಸದಸ್ಯರಾದ ಮುನಿವೆಂಕಟರೆಡ್ಡಿ, ಶಾಸಕರಾಗಿದ್ದ ಶೀರ್ನಾಳಿ ಚಂದ್ರಶೇಖರ್, ಬೆಳಗಾವಿ ಮೇಯರ್ ಆಗಿದ್ದ ಸಿದ್ಧನಗೌಡ ಪಾಟೀಲ್, ವಿಧಾನ ಪರಿಷತ್ತಿನ ಸದಸ್ಯರಾಗಿದ್ದ ಟಿ.ಎನ್.ನರಸಿಂಹಮೂರ್ತಿ ಮುಂತಾದವರು ಯೂತ್ ಕಾಂಗ್ರೆಸ್ಸಿನ ಮೂಲಕವೇ ಸಾರ್ವಜನಿಕ ಕ್ಷೇತ್ರಕ್ಕೆ ಬಂದವರು. ಅಂದಿನ ಮೈಸೂರು ಯೂತ್ ಕಾಂಗ್ರೆಸ್ ಇಡೀ ರಾಷ್ಟ್ರದ ಮುಖಂಡರ ಸಂಪರ್ಕ ಇಟ್ಟುಕೊಂಡಿತ್ತು. ಅರ್ಜುನ್‌ಸಿಂಗ್, ಮಹಾರಾಷ್ಟ್ರದ ಶರದ್ ಪವಾರ್, ವಸಂತ ಸಾಠೆ, ವಯಲಾರ್ ರವಿ, ಎ.ಸಿ.ಜಾರ್ಜ್, ಹರಿಯಾಣದ ಬನ್ಸಿಲಾಲ್, ಉತ್ತರಾಂಚಲದ ಮುಖ್ಯಮಂತ್ರಿ ಎನ್.ಡಿ. ತಿವಾರಿ, ರಾಜಸ್ಥಾನದ ಜಗನ್ನಾಥ ಪಹಾಡಿಯಾ ಮೊದಲಾದವರು ಮೈಸೂರು ಯೂತ್ ಕಾಂಗ್ರೆಸ್ ಬಲಿಷ್ಠವಾಗಿ ಬೆಳೆಯಲು ಕಾರಣಕರ್ತರಾಗಿದ್ದರು. ಯಾವುದೇ ಕಾಂಗ್ರೆಸ್ ಸಮಾರಂಭವಾದರೂ ನಮ್ಮ ಮಿತ್ರಪಡೆ ಅದನ್ನು ಅಚ್ಚುಕಟ್ಟಾಗಿ ಮಾಡಿ ರಾಷ್ಟ್ರದ ಹಿರಿಯ ನಾಯಕರ ಗಮನ ಸೆಳೆಯುತ್ತಿತ್ತು. ಮುಂದಿನ ಅವಕಾಶಗಳಿಗೆ ಯೂತ್ ಕಾಂಗ್ರೆಸ್ ಒಂದು ಸಮರ್ಥ ವೇದಿಕೆಯಾಗಿತ್ತು ಎನ್ನಬಹುದು.

***– ತಾವು ಯಾವಾಗ ನಿಜಲಿಂಗಪ್ಪನವರ ಮಗಳನ್ನು ವಿವಾಹವಾದಿರಿ? ಅದಕ್ಕೆ ಕಾರಣಕರ್ತರು ಯಾರು?***

ನಾನು ಮೈಸೂರಿನಲ್ಲಿ ಇಂಟರ್‌ಮೀಡಿಯೆಟ್‌ನಲ್ಲಿ ಓದುತ್ತಿರಬೇಕಾದರೆ, ಕನ್ನಡ ಸಮಾರಂಭವೊಂದರಲ್ಲಿ ಭಾಗವಹಿಸಿದ್ದ ನಿಜಲಿಂಗಪ್ಪನವರನ್ನು ನೋಡಿದ್ದೆ. ಅಷ್ಟು ಹೊತ್ತಿಗಾಗಲೇ ನಿಜಲಿಂಗಪ್ಪನವರು ತಮ್ಮ ತ್ಯಾಗ ಹಾಗೂ ಏಕೀಕರಣ ಚಳುವಳಿಗಾಗಿ ಇಡೀ ರಾಜ್ಯದಲ್ಲಿ ಪ್ರಸಿದ್ಧಿಯಾಗಿದ್ದರು. ೧೯೫೩ರಲ್ಲಿ ನಾನು ಮತ್ತು ತುಳಸೀದಾಸ್ ಇಬ್ಬರೂ ಲಾ ಓದಲು ದೆಹಲಿಗೆ ಹೋದೆವು. ಆಗ ದೆಹಲಿಯ ಹಾಸ್ಟೆಲ್‌ನಲ್ಲಿದ್ದ ನಿಜಲಿಂಗಪ್ಪನವರ ಮೊದಲ ಮಗ ಉಮಾಕಾಂತ್ ಅವರ ಪರಿಚಯವಾಯಿತು. ನಾವಿಬ್ಬರೂ ಒಂದೇ ವಿದ್ಯಾರ್ಥಿನಿಲಯದಲ್ಲಿದ್ದೆವು. ಆಗಾಗ್ಗೆ ನಿಜಲಿಂಗಪ್ಪನವರನ್ನು ನೋಡಲು ನಾವು ಹೋಗುತ್ತಿದ್ದೆವು. ಆಗ ಅವರು ಚಿತ್ರದುರ್ಗ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾಗಿದ್ದರು. ಯಶೋಧರಮ್ಮ ದಾಸಪ್ಪನವರ ನಾದಿನಿ ಕೃಷ್ಣಮ್ಮನವರಿಗೆ ಚಿತ್ರದುರ್ಗದ ಮಹಿಳಾ ಪ್ರೌಢಶಾಲೆಗೆ ಹೆಡ್‌ಮಿಸ್ ಆಗಿ ವರ್ಗವಾಯಿತು. ಹೆಚ್.ಸಿ.ದಾಸಪ್ಪನವರು ತಮ್ಮ ತಂಗಿಯನ್ನು ನಿಜಲಿಂಗಪ್ಪನವರ ಮನೆಯಲ್ಲಿ ಬಿಟ್ಟರು. ಯಶೋಧರಮ್ಮ ದಾಸಪ್ಪನವರು ನಿಜಲಿಂಗಪ್ಪರಿಗೆ ಹೇಳಿ ನನ್ನ ವಿವಾಹವನ್ನು ಅವರ ಮಗಳೊಡನೆ ನಿಶ್ಚಯಿಸಿದರು. ಯಶೋಧರಮ್ಮ ದಾಸಪ್ಪನವರ ಅಣ್ಣ ಗೋವಿಂದರವರೂ ಕೂಡಾ ಇದರಲ್ಲಿ ಸಿಂಹಪಾಲು ಪಡೆದಿದ್ದಾರೆ. ೧೯೫೯ ಮಾರ್ಚ್ ೧೭ರಂದು ನಿಜಲಿಂಗಪ್ಪನವರ ನಾಲ್ಕನೇ ಮಗಳು ಗಿರಿಜಾಳೊಡನೆ ನನ್ನ ವಿವಾಹವಾಯಿತು. ಆ ಕಾಲದಲ್ಲಿ ಗುರು-ಹಿರಿಯರು ನಿಶ್ಚಯಿಸಿಬಿಟ್ಟರೆ ಮುಗಿದುಹೋಯಿತು. ವಧು-ವರರ ಅಭಿಪ್ರಾಯವನ್ನು

ಯಾರು ತಾನೇ ಕೇಳುತ್ತಿದ್ದರು?

*- ನಿಮ್ಮ ಮಾವನವರು, ಅಂದರೆ ನಿಜಲಿಂಗಪ್ಪನವರು ತಮ್ಮ ಮದುವೆ ಸಂದರ್ಭದಲ್ಲಿ ತಮ್ಮನ್ನು ಹೇಗೆ ಕಂಡರು? ಯಾವ ಯಾವ ಉಡುಗೊರೆಯನ್ನು ಕೊಟ್ಟರು?*

ನಿಜಲಿಂಗಪ್ಪನವರಿಗೆ ಮುಖ್ಯವಾಗಿ ಸರಳತನ ಅಚ್ಚುಮೆಚ್ಚಿನ ವಿಷಯವಾಗಿತ್ತು. ಅವರೂ ಕೂಡ ಕನಿಷ್ಠ ಅವಶ್ಯಕತೆಗಳ ಮೇಲೆ ಜೀವನ ಸಾಗಿಸುತ್ತಿದ್ದರು. ನನ್ನನ್ನು ಬಲವಂತ ಮಾಡಿ ಒಂದು ಸೂಟನ್ನು ಹೊಲಿಸಿಕೊಳ್ಳಲು ಅವರ ಹತ್ತಿರದ ಸಂಬಂಧಿ ಗುರುನಾಥಪ್ಪನವರ ಮೂಲಕ ಐದು ನೂರು ರೂಪಾಯಿ ಚೆಕ್‌ನ್ನು ಕಳುಹಿಸಿಕೊಟ್ಟರು. ಅವರ ಚಿತ್ರದುರ್ಗದ ಮನೆ ಮುಂದೆ ಚಪ್ಪರ ಹಾಕಿ ಮಾಡಿದ ಮದುವೆ ಇದೊಂದೆ. ಈ ಮದುವೆಗೆ ಪ್ರಧಾನಿ ಜವಹರ್‌ಲಾಲ್ ನೆಹರು, ರಾಷ್ಟ್ರಪತಿ ರಾಜೇಂದ್ರ ಪ್ರಸಾದ್ ಮೊದಲಾದವರು ಶುಭಾಶಯ ಕಳುಹಿಸಿದ್ದರು. ರಾಜ್ಯದ ಎಲ್ಲಾ ಪ್ರಮುಖ ನಾಯಕರು ಇದರಲ್ಲಿ ಭಾಗವಹಿಸಿ ನಮ್ಮಿಬ್ಬರನ್ನು ಆಶೀರ್ವದಿಸಿದ್ದರು.

*- ನಿಜಲಿಂಗಪ್ಪ ದಂಪತಿಗಳಿಗೆ ತಮ್ಮ ಹೆಣ್ಣು ಮಕ್ಕಳ ಮೇಲೆ ಎಂತಹ ಪ್ರೇಮ ಇತ್ತು? ಅವರ ಸದ್ಗುಣಗಳು ಅವರ ಮಕ್ಕಳಲ್ಲಿ ಕಂಡುಬರುತ್ತವೆಯೇ?*

ನಿಜಲಿಂಗಪ್ಪ ದಂಪತಿಗಳು ಆದರ್ಶ ಕುಟುಂಬಕ್ಕೆ ಮಾದರಿಯಾಗಿದ್ದರು. ತಮ್ಮ ಎಲ್ಲಾ ಒಂಬತ್ತು ಮಕ್ಕಳನ್ನು ಪ್ರೀತಿ-ವಿಶ್ವಾಸ ಮತ್ತು ಆತ್ಮೀಯತೆಯಿಂದ ಬೆಳೆಸಿದ್ದಾರೆ. ನಿಜಲಿಂಗಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದ ಮೇಲೆ ಅವರಿಗೆ ನಿಶ್ಚಿತ ಆದಾಯವಿರಲಿಲ್ಲ. ಇಡೀ ಮನೆಯನ್ನು ನಮ್ಮತ್ತೆ ಮುರಿಗೆಮ್ಮನವರು ಹೇಗೋ ಸರಿದೂಗಿಸಿಕೊಂಡು ಹೋಗುತ್ತಿದ್ದರು. ಅಂತಹ ಹೊಂದಾಣಿಕೆಯ ಗುಣ ಅವರ ಎಲ್ಲಾ ಮಕ್ಕಳಲ್ಲೂ ಕಂಡುಬರುತ್ತದೆ. ಒಡವೆ, ವಸ್ತ್ರಗಳ ಆಸೆ ಯಾರಲ್ಲೂ ಇಲ್ಲ. ಯಾವುದಾದರೂ ಒಂದು ಧ್ಯೇಯಕ್ಕೆ ತಮ್ಮನ್ನು ಅರ್ಪಿಸಿಕೊಂಡು ಹಗಲಿರುಳು ದುಡಿಯುವುದು ಅವರ ಮಕ್ಕಳಲ್ಲಿ ಕಾಣಬರುತ್ತದೆ. ಪ್ರೊ। ಉಮಾಕಾಂತ್‌ರವರು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕರಾಗಿದ್ದು ಬಹುದೊಡ್ಡ ಹೆಸರನ್ನು ಗಳಿಸಿದ್ದಾರೆ. ನನ್ನ ಮಡದಿ ಗಿರಿಜಾಳಿಗೆ ಅವರ ತಾಯಿಯೇ ಪ್ರೇರಕ ಶಕ್ತಿ. ಒಂದು ಮನೆಯನ್ನು ಗೃಹಿಣಿ ಹೇಗೆ ನಿರ್ವಹಿಸಬೇಕು ಎಂಬುದನ್ನು ಅವರು ನನ್ನ ಮಡದಿಗೆ ತಿಳಿಹೇಳಿಕೊಟ್ಟಿದ್ದರು. ಇಂದು ನನ್ನ ಮನೆಯಲ್ಲಿ ಸುಖ-ಸಂತೋಷಗಳಿದ್ದರೆ ಅದಕ್ಕೆ ಮೂಲ ಕಾರಣಕರ್ತರೆಂದರೆ ನಿಜಲಿಂಗಪ್ಪ ದಂಪತಿಗಳು.

*- ನಿಜಲಿಂಗಪ್ಪ ದಂಪತಿಗಳಂತೆ ತಾವೂ ಸಹ ತಮ್ಮ ಮಕ್ಕಳಿಗೆ ಆದರ್ಶಗಳನ್ನು ಕಲಿಸಿದ್ದೀರಾ?*

ತಮ್ಮ ಸ್ವಂತ ಶಕ್ತಿಯಮೇಲೆ ಮಕ್ಕಳು ಮೇಲೆ ಬರಬೇಕೆಂದು ನಾನು ಯಾವಾಗಲೂ ಯೋಚಿಸುತ್ತೇನೆ. ನನ್ನ ಮಕ್ಕಳಿಗೆ ಎಲ್ಲಾ ರೀತಿಯ ಅವಕಾಶಗಳನ್ನು ಕೊಟ್ಟಿದ್ದೇನೆ. ಆದರೂ

ಅವರ ಅಭ್ಯುದಯದ ಕಡೆಗೆ ಮತ್ತಷ್ಟು ಗಮನ ಕೊಡಬೇಕಾಗಿತ್ತು ಎಂದು ಈಗ ನನಗನ್ನಿಸುತ್ತಿದೆ. ನನ್ನ ಮಡದಿ ಸಹ ತುಂಬಾ ಮುಗ್ಧೆ. ಆಕೆ ಮನೆಯ ಜವಾಬ್ದಾರಿಯನ್ನೆಲ್ಲಾ ಸ್ವಯಂ ಪ್ರೇರಣೆಯಿಂದ ತೆಗೆದುಕೊಂಡಳು. ಆದರೆ, ಮಕ್ಕಳನ್ನು ಮತ್ತಷ್ಟು ವಿಸ್ತಾರ ಪ್ರಪಂಚದಲ್ಲಿ ಬೆಳೆಸಲು ಸಾಧ್ಯವಾಗಲಿಲ್ಲ. ನಿಜ ಹೇಳಬೇಕೆಂದರೆ, ಈ ಕಾಲದವರಂತೆ ನಾವು ಮಕ್ಕಳನ್ನು ಕಣ್ಣಲ್ಲಿ ಕಣ್ಣಿಟ್ಟು ಬೆಳೆಸಲು ಸಾಧ್ಯವಾಗಲಿಲ್ಲ. ಇದಕ್ಕೆ ನನ್ನ ಸಂಕೋಚ ಪ್ರವೃತ್ತಿಯೇ ಕಾರಣವೋ ಅಥವಾ ಅತಿ ಆದರ್ಶತನ ಕಾರಣವೋ ಗೊತ್ತಿಲ್ಲ.

***– ನಿಜಲಿಂಗಪ್ಪನವರು ತಮ್ಮ ಮಕ್ಕಳಿಗೆ ಕನಿಷ್ಠ ಪ್ರಮಾಣದಲ್ಲಾದರೂ ಆಸ್ತಿ ಮಾಡಿ ಕೊಟ್ಟಿಲ್ಲ. ಆ ಕಾರಣ ಇಬ್ಬರು ಗಂಡು ಮಕ್ಕಳು ಮದುವೆ ಮಾಡಿಕೊಳ್ಳಲಿಲ್ಲ ಎಂದು ಕೆಲವರು ಹೇಳುತ್ತಾರೆ. ಇದು ನಿಜವೇ?***

ನಿಜಲಿಂಗಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದ ಮೇಲೆ ಅವರಿಗೆ ಕುಟುಂಬ ನಡೆಸುವುದೇ ಕಷ್ಟವಾಗಿತ್ತು. ಹೇಗೋ ಹೆಣ್ಣುಮಕ್ಕಳನ್ನು ಒಂದು ದಡ ಮುಟ್ಟಿಸಿದರು. ಮೂರು ಗಂಡು ಮಕ್ಕಳಲ್ಲಿ ಕೊನೆಯವನಾದ ಕಿರಣ್‌ಶಂಕರ್ ಮಾತ್ರ ವಿವಾಹವಾದರು. ಪ್ರೊ। ಉಮಾಕಾಂತ್‌ನಂತೂ ಬೋಧನೆ ಹಾಗೂ ಸಂಶೋಧನೆಗೆ ತಮ್ಮನ್ನು ಅರ್ಪಿಸಿಕೊಂಡಿದ್ದಾನೆ. ಎರಡನೇ ಮಗ ರಾಜಣ್ಣ ನಿಜಲಿಂಗಪ್ಪನವರ ಕೊನೆಗಾಲದ ತನಕ ಸೇವೆಯನ್ನು ಮಾಡಿದರು. ಅವರಿಬ್ಬರೂ ವಿವಾಹವಾಗದೇ ಇರಲು ಆಸ್ತಿ ಅಥವಾ ಇತರ ಯಾವುದೇ ಬೇರೆ ವಿಚಾರಗಳು ಕಾರಣವಾಗಿಲ್ಲ. ಅದು ಕೇವಲ ಅವರ ವೈಯಕ್ತಿಕ ನಿರ್ಧಾರ ಎಂಬುದು ನನ್ನ ಭಾವನೆ. ನಿಜಲಿಂಗಪ್ಪನವರು ಆಸ್ತಿ ಮಾಡಿ ಕೊಡದೇ ಹೋದರೂ ಮಕ್ಕಳನ್ನು ಉತ್ತಮ ನಾಗರಿಕರನ್ನಾಗಿ ರೂಪಿಸಿದ್ದಾರೆ. ಅದು ದೊಡ್ಡ ವಿಚಾರವಲ್ಲವೇ?

***– ನಿಜಲಿಂಗಪ್ಪನವರಲ್ಲಿ ತಾವು ಕಂಡ ಶ್ರೇಷ್ಠ ಗುಣ ಯಾವುದು? ಹಾಗೆಯೇ ದೌರ್ಬಲ್ಯಗಳನ್ನೂ ಗುರುತಿಸಿದ್ದೀರಾ?***

ನಿಜಲಿಂಗಪ್ಪನವರಿಗೆ ಮಹಾತ್ಮ ಗಾಂಧಿಯವರೇ ಮಹಾನ್ ಆದರ್ಶವಾಗಿದ್ದರು. ಅವರ ಮತ್ತೊಬ್ಬ ಮೆಚ್ಚಿನ ನಾಯಕರೆಂದರೆ ಸರದಾರ ವಲ್ಲಭಭಾಯಿ ಪಟೇಲ್. ದೇಶಭಕ್ತಿ, ಸತ್ಯ, ಧರ್ಮ, ನ್ಯಾಯ, ನೀತಿ, ತಾತ್ವಿಕ ಬದ್ಧತೆಯನ್ನು ಅವರಲ್ಲಿ ಸುಲಭವಾಗಿ ಗುರುತಿಸಬಹುದು. ಅವರ ವಿಶೇಷತೆ ಎಂದರೆ, ಅವರಲ್ಲಿದ್ದ ವಿಚಾರಶೀಲತೆ. ಬುದ್ಧ, ಬಸವ ಹಾಗೂ ಗಾಂಧೀಜಿಯವರನ್ನು ಅವರು ನೋಡುತ್ತಿದ್ದ ರೀತಿಯೇ ಬೇರೆ. ಅವರ ವ್ಯಕ್ತಿತ್ವವನ್ನು ರೂಪಿಸಿದವರು ಈ ಮೂವರು ವ್ಯಕ್ತಿಗಳು. ಒಮ್ಮೆ ಸರಳತನವನ್ನು ಒಪ್ಪಿಕೊಂಡ ಮೇಲೆ ಅದಕ್ಕನುಗುಣವಾಗಿ ಅವರು ಬದುಕಿದರು. ತಮ್ಮ ಇಡೀ ಕುಟುಂಬವನ್ನು ಆ ತತ್ವಾದರ್ಶಗಳ ನೆರಳಿನಲ್ಲಿ ಮುನ್ನಡೆಸಿದರು. ಭ್ರಷ್ಟಾಚಾರ, ಅನೀತಿ, ಅಪ್ರಾಮಾಣಿಕತೆ ಹಾಗೂ ಪಿತೂರಿಗಳನ್ನು ಕಂಡರೆ ಅವರಿಗೆ ಕೆಂಡದಂತಹ ಕೋಪ ಬರುತ್ತಿತ್ತು. ಇಂತಹ ವಿಚಾರಗಳನ್ನು ಕಂಡಾಗ ಅವರು ಎಂದೂ ರಾಜಿಗೆ ಒಪ್ಪುತ್ತಿರಲಿಲ್ಲ. ತಮಗೆ ಎಂತಹ ನಷ್ಟವಾದರೂ ಸರಿಯೇ,

ಅವರು ತಮ್ಮ ತಾತ್ವಿಕ ನೀತಿಯನ್ನು ಬಿಟ್ಟು ಬದುಕಿದವರಲ್ಲ. ತೀವ್ರವಾದ ಆದರ್ಶಗಳಿಂದಾಗಿ ನಿಜಲಿಂಗಪ್ಪನವರು ಅನೇಕ ಸಾರಿ ಕಠೋರವಾಗಿ ಮಾತನಾಡುತ್ತಿದ್ದರು. ಅದು ಕೆಲವು ಜನಕ್ಕೆ ಅಪಥ್ಯವಾಗಿದ್ದಿರಬಹುದು. ಅದೇ ರೀತಿ ಒಮ್ಮೆ ಒಬ್ಬ ವ್ಯಕ್ತಿಯನ್ನು ನಂಬಿದ ಮೇಲೆ ಅತ್ತ-ಇತ್ತ ಸರಿದಾಡಿದವರಲ್ಲ. ಅಂತಹ ವ್ಯಕ್ತಿಗಳ ಬಗ್ಗೆ ಯಾರಾದರೂ ಏನನ್ನಾದರೂ ಹೇಳುವುದಕ್ಕೆ ಹೋದರೆ ಅವರು ಒಪ್ಪಿಕೊಳ್ಳುತ್ತಿರಲಿಲ್ಲ. ಆ ರೀತಿ ಅವರು ಅಪಾರವಾಗಿ ನಂಬಿಕೆ ಇಟ್ಟ ಜನರಿಂದ ನಿರಾಸೆಯನ್ನು ಅನುಭವಿಸಿದ್ದರು. ಆದರೆ, ನಿಜಲಿಂಗಪ್ಪನವರು ಅಂಥವರ ಬಗ್ಗೆ ಬೇಸರಪಟ್ಟುಕೊಂಡಿಲ್ಲ. ಇದನ್ನು ಏನೆನ್ನಬೇಕು? ಇದು ದೌರ್ಬಲ್ಯವೋ ಅಥವಾ ಕ್ಷಮಾ ಗುಣವೋ?

***– ತಾವು ನಿಜಲಿಂಗಪ್ಪನವರ ಅಳಿಯಂದಿರಾದ ಮೇಲೆ ತಮ್ಮ 'ರಾಜಕೀಯ ಹಿನ್ನಡೆ' ಪ್ರಾರಂಭವಾಯಿತು ಎನ್ನುತ್ತಾರೆ. ಈ ಬಗ್ಗೆ ತಮಗೇನನ್ನಿಸುತ್ತದೆ? ಏಕೆಂದರೆ, ೧೯೬೨ರಲ್ಲಿ ತಾವು ಕನಕಪುರ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಶಾಸಕರಾಗಬಹುದಾಗಿತ್ತು. ೧೯೬೭ರ ತನಕ ಕಾಯುವ ಆವಶ್ಯಕತೆ ಇತ್ತೇ?***

ಒಂದರ್ಥದಲ್ಲಿ ತಮ್ಮ ಮಾತು ನಿಜ. ೧೯೫೩ರಿಂದಲೇ ನಾನು ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತನಾಗಿದ್ದೆ. ೧೯೫೪ರಿಂದಲೂ ಕಾಂಗ್ರೆಸ್ ಪಕ್ಷದ ವಿವಿಧ ವಿಭಾಗಗಳಲ್ಲಿ ಕೆಲಸ ಮಾಡಿದ್ದೆ. ನಿಜಲಿಂಗಪ್ಪನವರ ಅಳಿಯನಾದ ನಂತರ ನನಗೆ ನಾನೇ ಅವಕಾಶ ಕೇಳಲು ಇಷ್ಟಪಡಲಿಲ್ಲ. ನನ್ನಂತೆ ನಿಜಲಿಂಗಪ್ಪನವರೂ ಕೂಡ ಇದನ್ನು ಒಪ್ಪುತ್ತಿರಲಿಲ್ಲ. ಹೀಗಿದ್ದರೂ ಆಗ ಬೆಂಗಳೂರಿನ ಮೇಯರ್ ಆಗಿದ್ದ ಕೃಷ್ಣಪ್ಪ, ಎ.ವಿ.ನರಸಿಂಹರೆಡ್ಡಿ ಮೊದಲಾದವರು ೧೯೬೨ರ ಚುನಾವಣೆಯಲ್ಲಿ ನನ್ನನ್ನು ಕನಕಪುರದಿಂದ ಅಥವಾ ಬೆಂಗಳೂರಿನ ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸುವಂತೆ ಮಾಡಲು ಸಾಕಷ್ಟು ಪ್ರಯತ್ನಪಟ್ಟರು. ಆದರೆ, ನಾನು ಒಪ್ಪಲಿಲ್ಲ.

***– ೧೯೬೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಪ್ರವೇಶಿಸಲು ತಮಗೆ ಯಾರು ಸಹಾಯ ಮಾಡಿದರು?***

೧೯೬೫ರಲ್ಲಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು, ಮೈಸೂರು ಯೂತ್ ಕಾಂಗ್ರೆಸ್ ಸಂಘಟನೆ ಮಾಡುವಲ್ಲಿ ನನ್ನ ಪ್ರಯತ್ನವನ್ನು ನೋಡಿ ಪ್ರಶಂಸೆಯ ಮಾತುಗಳನ್ನು ಆಡಿದರು. ಆಗ ರಾಜ್ಯಸಭಾ ಸದಸ್ಯರಾಗಿದ್ದ ಎಂ.ಎಸ್.ಗುರುಪಾದಸ್ವಾಮಿಯವರು ಸಹ ಇಂದಿರಾಗಾಂಧಿಯವರಿಗೆ ನನ್ನ ಬಗ್ಗೆ ಒಳ್ಳೆಯ ಮಾತುಗಳನ್ನು ಹೇಳಿದರು. ಚುನಾವಣೆಗೆ ಸ್ಪರ್ಧಿಸಬಹುದಾದ ಅಭ್ಯರ್ಥಿಗಳ ಪಟ್ಟಿಯಲ್ಲಿ ನನ್ನ ಹೆಸರನ್ನು ಸೇರಿಸಿ, ಅದನ್ನು ಹೈಕಮಾಂಡಿಗೆ ಕಳುಹಿಸಲು ಗುರುಪಾದಸ್ವಾಮಿಯವರು ಹರಸಾಹಸ ಮಾಡಿದ್ದರು. ನನ್ನ ಮಾವ ನಿಜಲಿಂಗಪ್ಪನವರು ನನ್ನ ಹೆಸರನ್ನು ಕಂಡ ಕೂಡಲೇ ವಿರೋಧ ವ್ಯಕ್ತಪಡಿಸಿದರು. ಒಮ್ಮೆ

ನಾನು ಅವರ ಮನೆಗೆ ಹೋಗಿದ್ದಾಗ ನಮ್ಮತ್ತೆ ಮುರಿಗೆಮ್ಮನವರು ನನ್ನನ್ನು ನೋಡಿ 'ಏಕೋ ನಿಮ್ಮ ಮಾವನವರು ನಿಮ್ಮ ಮೇಲೆ ಮುನಿಸಿಕೊಂಡಿದ್ದಾರೆ' ಎಂದರು. ಆಗ ನಾನು ಅವರಿಗೆ 'ನಾನು ಯಾವ ಸ್ಥಾನವನ್ನೂ ಯಾರಿಂದಲೂ ಅಪೇಕ್ಷಿಸಿಲ್ಲ' ಎಂದೆ. ನಂತರ, ನನ್ನ ಹೆಸರು ಕೈಬಿಟ್ಟ ಪಟ್ಟಿ ಸಿದ್ಧವಾಯಿತು. ಇದನ್ನು ತಿಳಿದ ಶ್ರೀಮತಿ ಇಂದಿರಾಗಾಂಧಿಯವರು, ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಮಹಮದ್ ಆಲಿ ಅವರಿಗೆ ದೂರವಾಣಿ ಮಾಡಿ, 'ರಾಜಶೇಖರನ್‌ರವರ ಹೆಸರನ್ನು ಸೇರಿಸಿ ಪಟ್ಟಿ ಮಾಡಿ ಕಳುಹಿಸಿಕೊಡಿ' ಎಂದರು. ಆಗ ನನ್ನ ಹೆಸರು ಆ ಪಟ್ಟಿಯಲ್ಲಿ ಕೊನೆಯದಾಗಿ ಸೇರ್ಪಡೆಯಾಯಿತು.

***– ಕಾಂಗ್ರೆಸ್ ವಿಭಜನೆಯನ್ನು ತಾವು ತಡೆಯಬಹುದಾಗಿತ್ತಲ್ಲವೇ? ಏಕೆಂದರೆ, ಶ್ರೀಮತಿ ಇಂದಿರಾಗಾಂಧಿಯವರ ಜೊತೆ ತಮ್ಮ ಸಂಬಂಧ ಯಾವಾಗಲೂ ಉತ್ತಮವಾಗಿತ್ತು. ಅಲ್ಲದೆ ದೆಹಲಿಯ ಎಲ್ಲಾ ನಾಯಕರು ನಿಮ್ಮ ಜೊತೆಯಲ್ಲಿ ಚೆನ್ನಾಗಿದ್ದರು. ಆ ದಿಸೆಯಲ್ಲಿ ಕಾಂಗ್ರೆಸ್ ಒಡೆಯುವುದನ್ನು ತಾವು ಏಕೆ ತಡೆಯಲಿಲ್ಲ?***

೧೯೬೯ರಲ್ಲಿ, ದೇಶದ ಹಿತದೃಷ್ಟಿಯಿಂದ ಕಾಂಗ್ರೆಸ್ ವಿಭಜನೆಯನ್ನು ತಡೆಯುವ ಅಗತ್ಯ ಇತ್ತು. ಆ ವಿಭಜನೆಯನ್ನು ತಡೆಯಲು ಮನಃಪೂರ್ವಕವಾಗಿ ಕೆಲಸ ಮಾಡಿದ ಸಂತೃಪ್ತಿ ನನ್ನದು. ಕಾಂಗ್ರೆಸ್ ವಿಭಜನೆಯಲ್ಲಿ ಸೈದ್ಧಾಂತಿಕ ವಿಚಾರಗಳಿಗೆ ಪ್ರಾಮುಖ್ಯತೆ ಇತ್ತು. ಕಾಂಗ್ರೆಸ್‌ನ ಹಿರಿಯ ನಾಯಕರುಗಳಾದ ಎಸ್.ನಿಜಲಿಂಗಪ್ಪ, ಕಾಮರಾಜ್, ಎಸ್.ಕೆ.ಪಾಟೀಲ್, ಮೊರಾರ್ಜಿ ದೇಸಾಯಿ, ಅತುತ್ಯಘೋಷ್, ಸಿ.ಬಿ.ಗುಪ್ತ ಮೊದಲಾದವರು ಪ್ರಜೆಗಳ ಭಾಗವಹಿಸುವಿಕೆ ಹಾಗೂ ಜವಾಬ್ದಾರಿಯಿಂದ ದೇಶದಲ್ಲಿ ಸರ್ಕಾರ ನಡೆಸಬೇಕೆಂದು ಇಚ್ಛೆಪಟ್ಟಿದ್ದರು. ಶ್ರೀಮತಿ ಇಂದಿರಾಗಾಂಧಿ, ಜಗಜೀವನ್‌ರಾಂ, ವೈ.ಬಿ. ಚವ್ಹಾಣ್, ಫಕ್ರುದ್ದೀನ್ ಆಲಿ ಆಹಮದ್, ಸಿ.ಸುಬ್ರಹ್ಮಣ್ಯಂ ಮೊದಲಾದವರು ಸಮಾಜವಾದಿ ಸಿದ್ಧಾಂತದ ಮೇಲೆ ಸರ್ಕಾರ ನಡೆಸಬೇಕೆಂದು ಬಯಸಿದ್ದರು. ಈ ಎರಡೂ ಗುಂಪುಗಳು ಪರಸ್ಪರ ವಿಶ್ವಾಸದ ಮೇಲೆ ನಡೆದುಕೊಂಡಿದ್ದರೆ ದೇಶಕ್ಕೆ ಉತ್ತಮ ಭವಿಷ್ಯ ಇತ್ತು. ಜಾಕೀರ್‌ಹುಸೇನ್‌ರವರ ನಿಧನದ ನಂತರ ನಡೆದ ರಾಷ್ಟ್ರಪತಿ ಚುನಾವಣೆ ಕಾಂಗ್ರೆಸ್ ವಿಭಜನೆಗೆ ವೇದಿಕೆಯನ್ನು ಒದಗಿಸಿಕೊಟ್ಟಿತು. ಪಕ್ಷದ ಮತ್ತು ಸರ್ಕಾರದೊಡನೆ ಅನ್ಯೋನ್ಯ ಸಂಬಂಧ ಉಳಿಸಿಕೊಳ್ಳುವ ನಮ್ಮ ಪ್ರಯತ್ನ ಯಶಸ್ವಿಯಾಗಲಿಲ್ಲ. ಕಾಂಗ್ರೆಸ್ಸಿನ ಹಿರಿಯ ನಾಯಕ ಮಣಿಗಳು ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದರು. ಮಧ್ಯಪ್ರದೇಶದ ಮುಖ್ಯಮಂತ್ರಿ ಡಿ.ಪಿ.ಮಿಶ್ರ ಅವರಿಂದಾಗಿ ಕಾಂಗ್ರೆಸ್ ಮತ್ತಷ್ಟು ಬೇಗ ವಿಭಜನೆ ಆಗುವಂತಾಯಿತು. ನನ್ನ ಜೊತೆಗೆ ಅನೇಕ ಜನ ಚಿಂತಕರು ಕಾಂಗ್ರೆಸ್ ಒಡೆಯಬಾರದೆಂದು ಪ್ರಯತ್ನಿಸಿದ್ದರು. ಸೈದ್ಧಾಂತಿಕ ನೆಲೆಯಲ್ಲಿ ಪ್ರಾರಂಭವಾದ ಈ ಭಿನ್ನಾಭಿಪ್ರಾಯ ಆನಂತರ ವ್ಯಕ್ತಿಗತವಾದುದು ಅತ್ಯಂತ ಶೋಚನೀಯವಾದ ವಿಚಾರ.

***– ಆಡಳಿತ ಕಾಂಗ್ರೆಸ್ ಮಹಾಸಂಸ್ಥೆ ವಿಭಜನೆ ಆದ ಮೇಲೆ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿಯಲು 'ನಿಜಲಿಂಗಪ್ಪನವರ ಅಳಿಯ' ಎಂಬ ಸಂಬಂಧ ಕಾರಣವೇ? ಅಥವಾ ಸಂಸ್ಥಾ ಕಾಂಗ್ರೆಸ್ಸಿನ ಸಿದ್ಧಾಂತ ಕಾರಣವೇ?***

೧೯೬೯ರಲ್ಲಿ ಕಾಂಗ್ರೆಸ್ ವಿಭಜನೆ ಆದ ಮೇಲೆ ಶ್ರೀಮತಿ ಇಂದಿರಾಗಾಂಧಿಯವರು ದಿನೇಶ್‌ಸಿಂಗ್ ಕೈಯಲ್ಲಿ ನನಗೆ ಅನೇಕ ಬಾರಿ ಆಡಳಿತ ಕಾಂಗ್ರೆಸ್‌ಗೆ ಸೇರುವಂತೆ ಹೇಳಿ ಕಳುಹಿಸಿದರು. ಆಗ ನಾನು ಅವರಿಗೆ 'ಮಾವನಿಗೆ ದ್ರೋಹ ಬಗೆದ ಅಳಿಯ ಎಂದು ನಾನು ಇತಿಹಾಸದಲ್ಲಿ ದಾಖಲಾಗಲಾರೆ' ಎಂದು ಹೇಳಿದ್ದೆ. ಎಂ.ಎಸ್.ಗುರುಪಾದಸ್ವಾಮಿ, ವೀರೇಂದ್ರ ಪಾಟೀಲ್, ರಾಮಕೃಷ್ಣ ಹೆಗಡೆ, ಶಂಕರಗೌಡ ಮೊದಲಾದ ಅನೇಕ ಜನ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದರು. ವಿಶೇಷವಾಗಿ ನಿಜಲಿಂಗಪ್ಪನವರ ವ್ಯಕ್ತಿತ್ವ ಹಾಗೂ ಈ ರಾಜ್ಯಕ್ಕೆ ಅವರು ಮಾಡಿದ ತ್ಯಾಗ ನಮ್ಮ ಮೇಲೆ ಪ್ರಭಾವ ಬೀರಿತ್ತು. ಜನರ ಪಾಲ್ಗೊಳ್ಳುವಿಕೆ ಮೂಲಕ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸುಭದ್ರಗೊಳಿಸಬೇಕೆಂಬ ಸಂಸ್ಥಾ ಕಾಂಗ್ರೆಸ್ಸಿನ ನೀತಿ ಕೂಡ ನನಗೆ ಆಗ ಪ್ರಿಯವಾಗಿತ್ತು. ಕಾಂಗ್ರೆಸ್ ವಿಭಜನೆ ಆದಾಗ ಆಗ ಕೇಂದ್ರದಲ್ಲಿ ಮಂತ್ರಿಗಳಾಗಿದ್ದ ಗುರುಪಾದಸ್ವಾಮಿಯರು ಸಹಾ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದು ಅವರ ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರು.

***– ತುರ್ತು ಪರಿಸ್ಥಿತಿಯ ನಂತರ, ಅಂದರೆ ೧೯೭೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ತಾವು ಜನತಾಪಕ್ಷದ ಅಭ್ಯರ್ಥಿಯಾಗಿ ಕೇವಲ ನಾಲ್ಕು ಸಾವಿರ ಮತಗಳಿಗಿಂತ ಕಡಿಮೆ ಅಂತರದಿಂದ ಸೋತಿರಿ. ಈ ಸೋಲಿನ ಹಿಂದೆ ನಿಮ್ಮ ಪಕ್ಷದ ಕೈವಾಡ ಇತ್ತೇ?***

ನಡೆದುಹೋದ ಘಟನೆ ಬಗ್ಗೆ ಚಿಂತಿಸಿ ಫಲವಿಲ್ಲ. ಕೆಲವರು ಜಾತಿ ರಾಜಕಾರಣವನ್ನು ಮಾಡದೇ ಇದ್ದಿದ್ದರೆ ನಾನು ಸುಲಭವಾಗಿ ಆಯ್ಕೆ ಆಗುತ್ತಿದ್ದೆ. ನಮ್ಮ ಪಕ್ಷದ ಕೆಲವು ನಾಯಕರು ಚನ್ನಪಟ್ಟಣ ಹಾಗೂ ರಾಮನಗರ ಕ್ಷೇತ್ರಕ್ಕೆ ಹೋಗಿ, ಈತ ಆಯ್ಕೆಯಾದರೆ ಕೇಂದ್ರದಲ್ಲಿ ಖಂಡಿತ ಮಂತ್ರಿಯಾಗುತ್ತಾನೆ, ನಮಗಿನ್ನು ಉಳಿಗಾಲವಿಲ್ಲ ಎಂದು ತಮ್ಮ ಜಾತಿಯ ಜನರ ಮುಂದೆ ಹೇಳಿಕೊಂಡರು. ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯ ಜೊತೆ ಗುಟ್ಟಾಗಿ ವ್ಯವಹಾರ ನಡೆಸಿದರು. ಸಾತನೂರು ಕ್ಷೇತ್ರದಲ್ಲಿ ಸಾವಿರಾರು ಜನ ಸೇರಿದ್ದ ಸಂದರ್ಭದಲ್ಲಿ ಮೊರಾರ್ಜಿಯವರು ತಮ್ಮ ಕಾರ್ಯಕ್ರಮದಲ್ಲಿ ಸಾತನೂರು ಬರುವುದಿಲ್ಲ ಎನ್ನುವ ಕಾರಣಕ್ಕಾಗಿ ಕಾರಿನಿಂದ ಕೆಳಗೆ ಇಳಿಯಲು ಒಪ್ಪಲಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ನನಗೆ ಆ ಚುನಾವಣೆಯಲ್ಲಿ ಸೋಲಾಯಿತು. ಆ ಬಗ್ಗೆ ನನಗೆ ಚಿಂತೆ ಇಲ್ಲ. ಏಕೆಂದರೆ ನಾನೊಬ್ಬ ಜನಸೇವಕ ಮತ್ತು ದೈವವನ್ನು ನಂಬಿರುವವನು. ಆತನ ಇಚ್ಛೆ ಹೇಗಿರುತ್ತದೆಯೋ ಹಾಗೆ ನಡೆಯುತ್ತದೆ.

***– ೧೯೭೮ರಲ್ಲಿ ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ತಾವೇಕೆ ಕನಕಪುರದಿಂದ***

***ಸ್ಪರ್ಧಿಸಲಿಲ್ಲ? ಆಗ ಉತ್ತರಹಳ್ಳಿ ಕ್ಷೇತ್ರದಿಂದ ಏಕೆ ಸ್ಪರ್ಧಿಸಿದಿರಿ?***

ಕನಕಪುರ ನನ್ನ ಸ್ವಂತ ತಾಲ್ಲೂಕಾಗಿದ್ದರೂ, ೧೯೭೭ರ ಚುನಾವಣೆಯಲ್ಲಿ ಅದು ವಿಭಿನ್ನ ರೀತಿಯ ಫಲಿತಾಂಶ ನೀಡಿತ್ತು. ಆಗ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರ ನನಗೆ ನಾಲ್ಕು ಸಾವಿರ ಮತಗಳ ಲೀಡನ್ನು ದೊರಕಿಸಿಕೊಟ್ಟಿತ್ತು. ಜೊತೆಗೆ ಅಲ್ಲಿನ ಮತದಾರರು ನನ್ನನ್ನು ಇಷ್ಟಪಟ್ಟಿದ್ದರು. ಬೆಂಗಳೂರಿಗೆ ಹೊಂದಿಕೊಂಡಿದ್ದ, ಆ ಕ್ಷೇತ್ರದ ಜನರ ಆಸೆ ಆಕಾಂಕ್ಷೆಗಳಿಗೆ ಸ್ಪಂದಿಸಿ ಅಲ್ಲಿಂದಲೇ ಸ್ಪರ್ಧಿಸಿ ಬಹುಮತದಿಂದ ಆಯ್ಕೆಯಾದೆ.

***– ೧೯೮೦ರ ಲೋಕಸಭಾ ಮಧ್ಯಂತರ ಚುನಾವಣೆಯಲ್ಲಿ ಜನತೆ ಏಕೆ ಜನತಾ ಪಕ್ಷವನ್ನು ಬೆಂಬಲಿಸಲಿಲ್ಲ? ಇದಕ್ಕೆ ಕೇಂದ್ರದಲ್ಲಿ ಜನತಾಪಕ್ಷದ ಕಿತ್ತಾಟ ಕಾರಣವೋ ಅಥವಾ ಪರಿಶಿಷ್ಟ ಜಾತಿಯ ಜಗಜೀವನ್‌ರಾಂರವರನ್ನು ಪ್ರಧಾನಮಂತ್ರಿಯಾಗಿ ಪ್ರತಿಬಿಂಬಿಸಿದ್ದು ಕಾರಣವೋ?***

ತಮ್ಮ ಎರಡು ಪ್ರಶ್ನೆಗಳಲ್ಲೂ ಉತ್ತರ ಅಡಗಿದೆ. ೧೯೭೭ರಲ್ಲಿ ಅಧಿಕಾರಕ್ಕೆ ಬಂದ ಜನತಾಪಕ್ಷ ಜನತೆಯ ನಿರೀಕ್ಷೆಯನ್ನು ಸುಳ್ಳಾಗಿಸಿತು. ವಿರೋಧ ಪಕ್ಷಗಳು ಒಂದು ಸಣ್ಣ ತಪ್ಪನ್ನು ಮಾಡಿದರೂ ನಮ್ಮ ಮತದಾರ ಸಹಿಸುವುದಿಲ್ಲ. ಅವರನ್ನು ಕ್ರೂರವಾಗಿ ಶಿಕ್ಷಿಸುತ್ತಾನೆ ಎಂಬುದಕ್ಕೆ ಈ ಘಟನೆಯೇ ಸಾಕ್ಷಿ. ವ್ಯಕ್ತಿ ಪ್ರತಿಷ್ಠೆಯಿಂದ ಚರಣ್‌ಸಿಂಗ್‌ರವರ ನೇತೃತ್ವದಲ್ಲಿ ಜನತಾಪಕ್ಷ ಒಡೆದ ಮೇಲೆ ಪಕ್ಷದ ದೊಡ್ಡ ಗುಂಪು ಜಗಜೀವನ್‌ರಾಂ ನೇತೃತ್ವದಲ್ಲಿ ಚುನಾವಣೆಗೆ ಹೋಯಿತು. ನಾವು ಎಷ್ಟೇ ಹೇಳಿದರೂ ಜನ ಕೆಲವೊಮ್ಮೆ ಸಂಕುಚಿತವಾಗಿ ಯೋಚಿಸುತ್ತಾರೆ ಎನ್ನುವುದಕ್ಕೆ ಇದೊಂದು ನಿದರ್ಶನ. ಜಗಜೀವನ್‌ರಾಂ ಅವರು ಸ್ವಾತಂತ್ರ್ಯದ ನಂತರ ಭಾರತ ಕಂಡ ದಕ್ಷ ಆಡಳಿತಗಾರರಲ್ಲಿ ಒಬ್ಬರು. ಅವರು ಕೃಷಿ ಸಚಿವರಾಗಿದ್ದಾಗ ಐ.ಸಿ.ಎ.ಆರ್.ನ ಸಲಹಾ ಸಮಿತಿಯ ಸದಸ್ಯನಾಗಿ ಅವರನ್ನು ಹತ್ತಿರದಿಂದ ಕಂಡಿದ್ದೇನೆ. ಭಾರತದ ಕೃಷಿ ಕ್ಷೇತ್ರಕ್ಕೆ ಅವರ ಕೊಡುಗೆ ದಾಖಲಾರ್ಹವಾದ ಸಂಗತಿ. ಅವರು ಪ್ರಧಾನ ಮಂತ್ರಿಯಾಗಿದ್ದರೆ ದೇಶದ ಅಭಿವೃದ್ಧಿ ಗತಿಯೇ ಬೇರೆ ಆಗುತ್ತಿತ್ತು. ಆದರೆ ಉತ್ತರ ಭಾರತದಲ್ಲಿ ಜನ ಈ ಬಗ್ಗೆ ಸರಿಯಾಗಿ ಯೋಚನೆಯನ್ನೇ ಮಾಡಲಿಲ್ಲ.

***– ೧೯೮೩ರಲ್ಲಿ ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ಜನತಾ ಪಕ್ಷದಲ್ಲಿದ್ದಿರಿ. ವಿಧಾನಸಭೆಯಲ್ಲಿ ವಿರೋಧ ಪಕ್ಷದಲ್ಲಿದ್ದು ಉತ್ತಮ ಕೆಲಸವನ್ನು ಮಾಡಿದಿರಿ. ಆದರೂ ತಮಗೆ ಉತ್ತರಹಳ್ಳಿಯಿಂದ ಸ್ಪರ್ಧಿಸಲು ಟಿಕೆಟ್ ದೊರೆಯಲಿಲ್ಲ. ತಾವು ಕೂಡ ಭಾವೋದ್ರೇಕದಿಂದ ವಿಧಾನಸಭಾ ಸ್ಥಾನಕ್ಕೆ ರಾಜೀನಾಮೆ ಕೊಟ್ಟಿರಿ. ಇವೆಲ್ಲದರ ಹಿಂದೆ ಯಾವ ನಿಗೂಢತೆ ಅಡಗಿದೆ?***

೧೯೭೮ರಲ್ಲಿ ಉತ್ತರಹಳ್ಳಿ ಕ್ಷೇತ್ರದಿಂದ ಆಯ್ಕೆ ಆದ ಮೇಲೆ ನಾನು ಗ್ರಾಮೀಣ ಜನರ ಆಶೋತ್ತರಗಳಿಗೆ ತಕ್ಕಂತೆ ಸ್ಪಂದಿಸಿದ್ದೆ ಎಂದು ಹೇಳಬಯಸುತ್ತೇನೆ. ನನ್ನ ಉತ್ತರಹಳ್ಳಿ ವಿಧಾನಸಭಾ

ಕ್ಷೇತ್ರದ ವ್ಯಾಪ್ತಿಗೆ ೩೦೦ಕ್ಕೂ ಹೆಚ್ಚಿನ ಹಳ್ಳಿಗಳು ಬರುತ್ತಿದ್ದವು. ಅವುಗಳಿಗೆಲ್ಲಾ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಒಂದು ಯೋಜನೆಯನ್ನು ತಯಾರಿಸಿ ಅದನ್ನು ಅನುಷ್ಠಾನ ಗೊಳಿಸಲು ನಾನು ಪ್ರಯತ್ನಿಸಿದ್ದುಂಟು. ವಿಧಾನಸಭೆಯಲ್ಲಿ ರಾಜ್ಯದ ಅಭಿವೃದ್ಧಿ ಕುರಿತಂತೆ ನಾನು ಕೆಲಸ ಮಾಡುತ್ತಿದ್ದೆ. ಕೃಷಿ, ಗ್ರಾಮೀಣ ಅಭಿವೃದ್ಧಿ, ಕುಡಿಯುವ ನೀರು, ನೈರ್ಮಲ್ಯೀಕರಣ, ಮೊದಲಾದವುಗಳ ಬಗ್ಗೆ ಸಚಿವರನ್ನು ಕಂಡು ಅವರು ಹಾಕಿಕೊಳ್ಳಬೇಕಾದ ಕಾರ್ಯಕ್ರಮಗಳನ್ನು ತಿಳಿಸುತ್ತಿದ್ದೆ. ಗುಂಡೂರಾವ್‌ರವರ ಕಾಲದಲ್ಲಿ ಗ್ರಾಮೀಣ ಅಭಿವೃದ್ಧಿ ಸಚಿವರಾಗಿದ್ದ ಬೇಗಾನೆ ರಾಮಯ್ಯ ಅವರನ್ನು ಕಂಡು, ಕುಡಿಯುವ ನೀರಿನ ಯೋಜನೆಯನ್ನು ಜನಾಂದೋಲನವಾಗಿ ಪರಿವರ್ತಿಸುವಂತೆ ಕೋರಿಕೊಂಡಿದ್ದೆ. ಅದನ್ನು ಅವರು ಆಗ ಮಾಡಲಿಲ್ಲ. ಆನಂತರ, ಜನತಾ ಪಕ್ಷ ಅಧಿಕಾರಕ್ಕೆ ಬಂದಾಗ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಇದರ ಕಡೆ ಹೆಚ್ಚಿನ ಗಮನಕೊಡಬೇಕೆಂದು ಪತ್ರ ಬರೆದೆ. ಮುಂದೆ ನಜೀರ್‌ಸಾಬ್ ಆ ಯೋಜನೆಯನ್ನು ಕೈಗೆತ್ತಿಕೊಂಡು 'ನೀರ್‌ಸಾಬ್' ಎಂದು ಖ್ಯಾತರಾದರು. ಅದು ಬೇರೆ ವಿಚಾರ. ೧೯೮೦ರ ಮಧ್ಯಂತರ ಲೋಕಸಭಾ ಚುನಾವಣೆಯಲ್ಲಿ ನಾನು ಮತ್ತೆ ಜನತಾ ಪಕ್ಷದ ಪರವಾಗಿ ಸ್ಪರ್ಧಿಸಿದೆ. ನಾನು ಆ ಚುನಾವಣೆಯಲ್ಲಿ ಸೋತಿದ್ದಕ್ಕೆ ಬೇಸರ ಆಗಲಿಲ್ಲ. ಆದರೆ ನನ್ನ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲೇ ಕಾಂಗ್ರೆಸ್ ಅಭ್ಯರ್ಥಿಗಿಂತ ನನಗೆ ಕಡಿಮೆ ಮತ ಬಂತು. ಇದು ಸಿದ್ಧಾಂತಕ್ಕೆ ಹಾಗೂ ಆತ್ಮಸಾಕ್ಷಿಗೆ ಎದುರಾಗುವ ಪ್ರಶ್ನೆ. ನನ್ನ ಕ್ಷೇತ್ರದ ಜನ ನನ್ನ ಅಭಿವೃದ್ಧಿ ಕಾರ್ಯಗಳನ್ನು ಮೆಚ್ಚಲಿಲ್ಲ. ಅದರಲ್ಲೇನೋ ದೋಷ ಇದೆ ಎಂದು ನಾನು ಆತ್ಮಾವಲೋಕನ ಮಾಡಿಕೊಂಡೆ. ೧೯೭೮ರ ವಿಧಾನಸಭಾ ಚುನಾವಣೆಯ ನಂತರ ಜನತಾ ಪಕ್ಷ ತೀವ್ರವಾದ ತಳಮಳಕ್ಕೆ ಒಳಗಾಯಿತು. ಸರ್ಕಾರ ರಚಿಸಿಯೇ ತೀರುತ್ತೇವೆ ಅಂದುಕೊಂಡಿದ್ದ ನಾಯಕರುಗಳು ನಿರಾಶೆಯ ಕೂಪಕ್ಕೆ ಬಿದ್ದರು. ಆ ಕಾರಣ ಪಕ್ಷದಲ್ಲಿ ಗುಂಪುಗಾರಿಕೆ ಹೆಚ್ಚಾಯಿತು. ೧೯೮೦ರಲ್ಲಿ ವೀರೇಂದ್ರ ಪಾಟೀಲ್‌ರವರು ಬಹು ದೊಡ್ಡ ಗುಂಪನ್ನು ಕರೆದುಕೊಂಡು ಕಾಂಗ್ರೆಸ್‌ನತ್ತ ಪಯಣಿಸಿದರು. ಆ ನಂತರ ನಾನು ಕ್ಷುಲ್ಲಕ ಘಟನೆಗಳನ್ನು ಕಂಡು, ನೊಂದು, ರಾಜಕೀಯದಿಂದ ನಿವೃತ್ತಿ ಆಗಬೇಕೆಂದು ಮನಸ್ಸು ಮಾಡಿದೆ. ಈ ಕುರಿತು ಕೇಂದ್ರದಲ್ಲಿ ಜನತಾಪಕ್ಷದ ಅಧ್ಯಕ್ಷರಾಗಿದ್ದ ಚಂದ್ರಶೇಖರ್‌ರವರಿಗೂ ರಾಜ್ಯದಲ್ಲಿ ಅಧ್ಯಕ್ಷರಾಗಿದ್ದ ಎಸ್.ಆರ್. ಬೊಮ್ಮಾಯಿಯವರಿಗೂ ಒಂದು ಪತ್ರ ಬರೆದೆ. ನನ್ನ ನಿರ್ಧಾರವನ್ನು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ಮಹಾ ಜನತೆಗೂ ನಾನು ಮುಂದೆ ಚುನಾವಣೆಗೆ ನಿಲ್ಲುವುದಿಲ್ಲ ಎಂದು ತಿಳಿಸಿದೆ. ವಿಧಾನಸಭಾ ಅಧ್ಯಕ್ಷರಾಗಿದ್ದ ಕೆ.ಹೆಚ್.ರಂಗನಾಥ್ ಅವರಿಗೆ ವಿಧಾನಸಭಾ ಸದಸ್ಯತ್ವದ ನನ್ನ ರಾಜೀನಾಮೆಯನ್ನು ಕಳುಹಿಸಿದೆ. ೧೯೮೩ರ ಚುನಾವಣಾ ಸಂದರ್ಭದಲ್ಲಿ ನಾನು ರಾಜ್ಯದಲ್ಲಿ ಇರಲಿಲ್ಲ. ಆಫ್ರಿಕಾದೇಶಗಳತ್ತ ಪ್ರಯಾಣ ಬೆಳೆಸಿದೆ. ಹಾಗಾಗಿ ನನಗೆ ಟಿಕೆಟ್ ಕೊಡುವ ಪ್ರಶ್ನೆ ಎಲ್ಲಿಂದ ಬರುತ್ತದೆ? ರಚನಾತ್ಮಕ ಕೆಲಸ ಕಾರ್ಯಗಳಲ್ಲಿ ನನ್ನನ್ನು ತೊಡಗಿಸಿಕೊಳ್ಳಬೇಕು ಎನ್ನುವುದು ನನ್ನ ಆಕಾಂಕ್ಷೆಯಾಗಿತ್ತು.

***- ೧೯೮೪ರಲ್ಲಿ ತಾವು ಕಾಂಗ್ರೆಸ್‌ಗೆ ಸೇರಿದ ಹಿನ್ನೆಲೆ ಯಾವುದು? ಯುವಪ್ರಧಾನಿ ರಾಜೀವ್‌ಗಾಂಧಿಯವರ ಆದರ್ಶಗಳಿಗೆ ಮನಸೋತು ಕಾಂಗ್ರೆಸ್ ಪಕ್ಷ ಸೇರಿದಿರಾ ಅಥವಾ ಜನತಾ ಪಕ್ಷದ ಕಿರುಕುಳಕ್ಕೆ ಕಾಂಗ್ರೆಸ್ ಪಕ್ಷಕ್ಕೆ ವಾಲಿದಿರಾ? ಸಕ್ರಿಯ ರಾಜಕಾರಣವನ್ನು ತೊರೆದಿದ್ದರೂ ತಾವು ೧೯೮೫ರ ಚುನಾವಣೆಯಲ್ಲಿ ಕನಕಪುರದಿಂದ ಏಕೆ ಸ್ಪರ್ಧಿಸಿದಿರಿ?***

ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರ ಬರ್ಬರ ಹತ್ಯೆ ಆದ ಮೇಲೆ ಹಿರಿಯ ಕಾಂಗ್ರೆಸ್ಸಿಗರೆಲ್ಲಾ ತುಂಬಾ ಪಶ್ಚಾತ್ತಾಪಪಟ್ಟರು. ದೇಶವನ್ನು ಹಿಂಸೆಯಿಂದ ತಪ್ಪಿಸಬೇಕೆಂಬುದು ಅವರ ನೈಜ ಕಳಕಳಿಯಾಗಿತ್ತು. ಈ ಸಂದರ್ಭದಲ್ಲಿ ಯುವ ಪ್ರಧಾನಿ ರಾಜೀವ್‌ಗಾಂಧಿಯವರು, ಎಲ್ಲಾ ಕಾಂಗ್ರೆಸ್ಸಿಗರು ಒಂದುಗೂಡಬೇಕೆಂದು ಮುಂಬೈ ಕಾಂಗ್ರೆಸ್‌ನ ಸಮಾವೇಶದಲ್ಲಿ ಹೇಳಿದರು. ರಾಜೀವ್‌ಗಾಂಧಿಯವರು ಯುವಕರಾದ ಕಾರಣ ರಾಜಕಾರಣದಲ್ಲಿ ಗುಣಾತ್ಮಕ ಬದಲಾವಣೆ ತರಲು ಉತ್ಸುಕರಾಗಿದ್ದರು. ಅವರ ಅನೇಕ ಯೋಜನೆಗಳು, ವಿಶೇಷವಾಗಿ ತಾಂತ್ರಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ಯೋಜನೆಗಳು ಮತ್ತು ಭವ್ಯ ಭಾರತವನ್ನು ಕಟ್ಟಬೇಕೆಂಬ ಅವರ ಕನಸು ನನ್ನ ಮನಸ್ಸಿಗೆ ಹಿಡಿಸಿದ್ದವು. ಆಗ ಕರ್ನಾಟಕ ವಿಧಾನಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದ ವೀರಪ್ಪ ಮೊಯಿಲಿಯವರು ನಮ್ಮ ಮನೆಗೆ, ವೈ.ರಾಮಕೃಷ್ಣರವರ ಜೊತೆಗೆ ಬಂದು, ನಾನು ಕಾಂಗ್ರೆಸ್ ಸೇರುವಂತೆ ಒತ್ತಾಯ ಮಾಡಿದರು. ಹಳೆಯ ಬಾಂಧವ್ಯವಿದ್ದ ಅನೇಕ ಕೇಂದ್ರದ ನಾಯಕರು ದಿನೇಶ್‌ಸಿಂಗ್ ಆದಿಯಾಗಿ ಸಹ ನನ್ನನ್ನು ಕಾಂಗ್ರೆಸ್‌ಗೆ ಬರುವಂತೆ ಒತ್ತಾಯಿಸಿದರು. ಈ ಹಿನ್ನೆಲೆಯಲ್ಲಿ ನಾನು ಕಾಂಗ್ರೆಸ್ ಪಕ್ಷಕ್ಕೆ ಸೇರಿ ಪುನಃ ರಾಜಕಾರಣವನ್ನು ಪ್ರವೇಶಿಸಿದೆ. ಒಮ್ಮೆ ಒಂದು ಪಕ್ಷವನ್ನು ಒಪ್ಪಿಕೊಂಡ ಮೇಲೆ ಅದಕ್ಕೆ ನಿಷ್ಠೆಯಿಂದ ನಡೆದುಕೊಳ್ಳಬೇಕು ಎಂಬುವವನು ನಾನು. ೧೯೮೫ರಲ್ಲಿ ನನಗೆ ಕಾಂಗ್ರೆಸ್ ಪಕ್ಷ ಕನಕಪುರದಿಂದ ಸ್ಪರ್ಧಿಸುವಂತೆ ಸೂಚಿಸಿತು. ಶ್ರದ್ಧೆಯಿಂದ ಅದನ್ನು ಪಾಲಿಸಿದೆ. ಆ ಚುನಾವಣೆಯಿಂದ ಬರುವ ಫಲಿತಾಂಶವನ್ನು ನಾನು ಚಿಂತಿಸಿರಲಿಲ್ಲ. ರಾಜಕೀಯದಿಂದ ನಿವೃತ್ತನಾಗುತ್ತೇನೆ ಎಂದು ಹೇಳಿ ಪುನಃ ಕಾಂಗ್ರೆಸ್ ಪಕ್ಷಕ್ಕೆ ಬಂದ ನನ್ನ ನಿಲುವನ್ನು ನನ್ನ ಕ್ಷೇತ್ರದ ಮತದಾರರಿಗೆ ತಿಳಿಸುವಲ್ಲಿ ವಿಫಲನಾಗಿದ್ದೆ ಎನ್ನುವುದು ಸತ್ಯವಾದ ಮಾತು.

***- ತಾವು ೧೯೮೯ರಲ್ಲಿ ಕಾಂಗ್ರೆ ಪಕ್ಷದ ಉಪಾಧ್ಯಕ್ಷರಾಗಿದ್ದಿರಿ. ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ವೀರೇಂದ್ರ ಪಾಟೀಲರು ತಮಗೆ ಆಪ್ತರಾಗಿದ್ದರು. ಆದರೂ, ರಾಜಾಜಿನಗರದಿಂದ ವಿಧಾನಸಭೆಗೆ ಸ್ಪರ್ಧಿಸಲು ತಮಗೆ ಕೊಟ್ಟಿದ್ದ ಟಿಕೆಟ್ಟನ್ನು ಹಿಂದಕ್ಕೆ ಪಡೆಯಲಾಯಿತು. ಅದಕ್ಕೆ ಕಾರಣವೇನು? ಈ ಬಗ್ಗೆ ತಮ್ಮ ಪ್ರತಿಭಟನೆ ಯಾವ ರೀತಿಯದ್ದು?***

೧೯೮೯ರಲ್ಲಿ ವೀರೇಂದ್ರ ಪಾಟೀಲರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಾಗ ನಾನು ಉಪಾಧ್ಯಕ್ಷನಾಗಿ ಪಕ್ಷದ ಸಂಘಟನೆಗೆ ಶಕ್ತಿ ಮೀರಿ ಪ್ರಯತ್ನ ನಡೆಸಿದ್ದೆ. ಆಗ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಲು ತಕ್ಕ ಅಭ್ಯರ್ಥಿಗಳನ್ನು ಆಯ್ಕೆಮಾಡಲು

ವೀರೇಂದ್ರ ಪಾಟೀಲ್ ಮತ್ತು ರಾಜಶೇಖರಮೂರ್ತಿಯವರು ಪ್ರಮುಖ ಪಾತ್ರ ವಹಿಸಿದ್ದರು. ಅವರುಗಳ ಅಭಿಲಾಷೆಯಂತೆ ರಾಜಾಜಿನಗರದಿಂದ ಸ್ಪರ್ಧಿಸಲು ನಾನು ಮೊದಲು ಒಪ್ಪಿದೆ. ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದ ವೀರೇಂದ್ರ ಪಾಟೀಲರು ಹೈಕಮಾಂಡಿಗೆ 'ಲೋಕಸಭೆಯ ಸ್ಥಾನಗಳಿಗೆ ಚುನಾವಣೆ ನಡೆಯುತ್ತಿರುವ ಕಾರಣ ಲೋಕಸಭೆಗೆ ಸ್ಪರ್ಧಿಸಿದ ಅಭ್ಯರ್ಥಿ ತನ್ನ ವ್ಯಾಪ್ತಿಯಲ್ಲಿ ಬರುವ ಎರಡು ವಿಧಾನಸಭಾ ಸ್ಥಾನಗಳಿಗೆ ತನಗೆ ಬೇಕಾದವರನ್ನು ಆಯ್ಕೆ ಮಾಡಬಹುದು' ಎಂದು ಒಂದು ಮನವಿ ಮಾಡಿಕೊಂಡರು. ಆ ಮನವಿಯನ್ನು ಹೈಕಮಾಂಡ್ ಒಪ್ಪಿತು. ನಾನು ಸ್ಪರ್ಧಿಸಿದ್ದ ಲೋಕಸಭಾ ಕ್ಷೇತ್ರದ ಅಭ್ಯರ್ಥಿ ನನ್ನ ಬದಲಾವಣೆಗೆ ಇಚ್ಛೆಪಟ್ಟರು. ಇದನ್ನು ತಿಳಿದ ನಾನು ತಕ್ಷಣ ರಾಡಿ-ರಂಪ ಮಾಡಲಿಕ್ಕೆ ಹೋಗಲಿಲ್ಲ. ಸ್ವಯಂ ಪ್ರೇರಿತನಾಗಿ ನಾಮಪತ್ರವನ್ನು ವಾಪಸ್ಸು ಪಡೆದೆ. ಇಡೀ ರಾಜ್ಯಾದ್ಯಂತ ಸುತ್ತಿ ಕಾಂಗ್ರೆಸ್ ಪಕ್ಷದ ಪ್ರಚಾರ ಕೈಗೊಂಡೆ. ವೀರೇಂದ್ರ ಪಾಟೀಲರ ನಾಯಕತ್ವದಲ್ಲಿ ಕಾಂಗ್ರೆಸ್ ಪಕ್ಷ ಮೂರನೇ ಎರಡರಷ್ಟು ಬಹುಮತ ಪಡೆಯಲು ಈ ಚುನಾವಣೆ ಕಾರಣವಾಯಿತು. ಪಕ್ಷದ ಶಿಸ್ತಿನ ಸಿಪಾಯಿಯಂತೆ ಸೇವೆ ಸಲ್ಲಿಸಿದ ಆತ್ಮತೃಪ್ತಿ ನನಗಿದೆ.

***– ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾಗಲು ತಾವೂ ಕಾರಣಕರ್ತರು. ಆನಂತರ ಅವರ ಕಾಲದಲ್ಲಾಗಲೀ ಅಥವಾ ಮುಂದಿನ ಮುಖ್ಯಮಂತ್ರಿಗಳ ಕಾಲದಲ್ಲಾಗಲೀ ತಮಗೆ ಯಾವ ಸ್ಥಾನವೂ ದೊರೆಯಲಿಲ್ಲ. ಅದಕ್ಕೆ ಕಾರಣವೇನು?***

೧೯೮೯ರ ಚುನಾವಣೆಯಲ್ಲಿ ಕಾಂಗ್ರೆಸ್‌ಗೆ ಇಂತಹ ಅಭೂತಪೂರ್ವ ಜಯ ದೊರೆಯುತ್ತದೆ ಎಂದು ಯಾರೂ ಭಾವಿಸಿಕೊಂಡಿರಲಿಲ್ಲ. ಸಹಜವಾಗಿ ಕೆ.ಪಿ.ಸಿ.ಸಿ. ಅಧ್ಯಕ್ಷರೇ ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕರಾಗಿ ಮುಖ್ಯಮಂತ್ರಿ ಆಗಬೇಕಾಗಿತ್ತು. ರಾಜ್ಯಪಾಲ ವೆಂಕಟಸುಬ್ಬಯ್ಯನವರು ಪ್ರಮಾಣ ವಚನ ಬೋಧಿಸಲು ಇವರನ್ನು ಕರೆಯಬೇಕಾಗಿತ್ತು. ಕೆಲವು ಕಾಣದ ಕೈಗಳು ವೀರೇಂದ್ರ ಪಾಟೀಲ್ ಶಾಸಕಾಂಗ ಪಕ್ಷದ ನಾಯಕರಾಗಲು ಅಡಚಣೆ ಮಾಡುತ್ತಿದ್ದಾರೆಂದು ಅವರ ಅಭಿಮಾನಿಗಳಿಗೆ ಸಂಶಯ ಬಂತು. ರಾಜ್ಯಪಾಲರ ಜೊತೆ ನನಗೆ ಉತ್ತಮ ಸಂಬಂಧ ಇದ್ದ ಕಾರಣ ರಾಜ್ಯಪಾಲರಿಗೆ ಒಂದು ಮಾತು ಹೇಳಿ ಎಂದರು. ಇಷ್ಟೊತ್ತಿಗೆ ಹೈಕಮಾಂಡ್ ಬಂಗಾರಪ್ಪನವರನ್ನು ಸೇರಿಸಿಕೊಂಡು ಮಂತ್ರಿಮಂಡಲ ರಚಿಸುವಂತೆ ವೀರೇಂದ್ರಪಾಟೀಲರಿಗೆ ಸೂಚನೆ ನೀಡಿತು. ಸ್ವಭಾವತಃ ಹಠವಾದಿಗಳಾದ ವೀರೇಂದ್ರ ಪಾಟೀಲ್ ಯಾವ ಒತ್ತಡಕ್ಕೂ ಮಣಿಯಲಿಲ್ಲ. ಕೇಂದ್ರದ ವೀಕ್ಷಕರಾಗಿ ಆಗಮಿಸಿದ್ದ ಮೊಹಿಸಿನಾ ಕಿದ್ವಾಯಿ ಮತ್ತು ಗುಲಾಂನಬಿ ಆಜಾದ್‌ರವರ ಸಮ್ಮುಖದಲ್ಲಿ ವೀರೇಂದ್ರ ಪಾಟೀಲರನ್ನು ಶಾಸಕಾಂಗ ಪಕ್ಷದ ನಾಯಕನಾಗಿ ಆರಿಸಿತು. ನಾನು ಸಹ ರಾಜ್ಯಪಾಲರನ್ನು ಭೇಟಿ ಮಾಡಿದೆ. ಎಲ್ಲಾ ಸುಗಮವಾಗಿ ಸಾಗಿ ವೀರೇಂದ್ರ ಪಾಟೀಲರು ಮುಖ್ಯಮಂತ್ರಿ ಯಾದರು. ಅವರ ಅಧಿಕಾರದ ಅವಧಿಯಲ್ಲಿ ನನ್ನ ಹೆಸರು ಒಮ್ಮೆ ರಾಜ್ಯಸಭೆಗೆ ಶಿಫಾರಸ್ಸು ಆಗಿತ್ತು. ಕಾರಣಾಂತರದಿಂದ ಅದೇಕೋ ತಪ್ಪಿ ಹೋಯಿತು. ಅನಂತರ ಕಾಂಗ್ರೆಸ್ ಪಕ್ಷದಲ್ಲೇ

ಅನೇಕ ಏರುಪೇರುಗಳಾದವು. ಮೂಲತಃ ನಾನು ಯಾರನ್ನೂ ಸ್ವಾರ್ಥಕ್ಕೆ ಬಳಸಿಕೊಂಡವನಲ್ಲ. ನನಗೆ ಅದು ಬೇಕು, ಇದು ಬೇಕು ಎಂದು ಗೋಗರೆದವನಲ್ಲ. ಹೀಗಾಗಿ ಅನೇಕರು ನನ್ನ ವಿಚಾರದಲ್ಲಿ ಮೈಮರೆತಿರಬಹುದು. ನಮ್ಮ 'ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ'ಯ ಮೂಲಕ ಹಳ್ಳಿಗರ ಸಮಸ್ಯೆ ಕುರಿತು ಅಧ್ಯಯನ ಹಾಗೂ ವಿಚಾರ-ವಿನಿಮಯವನ್ನು ನಡೆಸಿಕೊಳ್ಳುತ್ತಾ ಬಂದಿದ್ದೇನೆ. ಗ್ರಾಮಾಂತರ ಪ್ರದೇಶದ ಬಡಜನರು, ಬಡರೈತರ ಅಭಿವೃದ್ಧಿಗಾಗಿ ನನ್ನನ್ನು ನಾನೇ ತೊಡಗಿಸಿಕೊಂಡಿದ್ದೇನೆ.

***– ೧೯೯೯ರ ಚುನಾವಣೆಯ ಸಂದರ್ಭದಲ್ಲಿ ತಾವು ಲೋಕಸಭೆ ಹಾಗೂ ವಿಧಾನಸಭೆಗೆ ಜನರಿಂದಲೇ ನೇರವಾಗಿ ಆಯ್ಕೆ ಆಗಬಹುದಾಗಿತ್ತು. ಆಗ ತಮಗೆ ರಾಜಕೀಯದಲ್ಲಿ ಮತ್ತಷ್ಟು ಗೌರವ ದೊರಕುತ್ತಿತ್ತು ಅಲ್ಲವೇ?***

೧೯೭೭ರ ವಿಧಾನಸಭಾ ಚುನಾವಣೆ ನಂತರ ನನಗೆ, ಈ ಚುನಾವಣೆಗಳು ತುಂಬಾ ದುಬಾರಿ ಎನಿಸಿದವು. ಈಗಿನ ಎಲ್ಲಾ ಚುನಾವಣೆಗಳು ತತ್ತ್ವ ಸಿದ್ಧಾಂತವನ್ನು ನುಂಗಿಹಾಕಿ ಹಣ ಆಧಾರಿತ ಚುನಾವಣೆಗಳಾಗಿವೆ. ದುಡ್ಡಿಲ್ಲದವನು ಎಷ್ಟೇ ಸತ್ಪುರುಷನಾಗಿದ್ದರೂ ಅವನಿಗೆ ಚುನಾವಣೆ ಎದುರಿಸುವ ಸಾಮರ್ಥ್ಯ ಇರುವುದಿಲ್ಲ. ಯಾವುದೇ ರಾಜಕೀಯ ಪಕ್ಷ ಕೂಡ ಅಂತಹ ಅಭ್ಯರ್ಥಿಯನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಅಂದಮೇಲೆ ನನ್ನಂಥವನು ಚುನಾವಣಾ ಕಣಕ್ಕೆ ಇಳಿಯುವುದಾದರು ಹೇಗೆ?

***– ೨೦೦೦ದಲ್ಲಿ ತಾವು ವಿಧಾನ ಪರಿಷತ್ತಿನ ಸದಸ್ಯರಾಗಲು ಕಾರಣಕರ್ತರಾರು? ಆ ಅವಧಿಯಲ್ಲಿ ತಮ್ಮ ಸಾಧನೆ ಏನು?***

೧೯೮೮ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರಿದ ನಾನು ೧೯೯೯ ರವರೆಗೆ ಪಕ್ಷದ ವಿವಿಧ ಹುದ್ದೆಗಳಲ್ಲಿ ಶ್ರದ್ಧಾಪೂರ್ವಕವಾಗಿ ಸೇವೆ ಸಲ್ಲಿಸಿದೆ. ಈ ಸಂದರ್ಭದಲ್ಲಿ ಹಲವಾರು ದೇಶಗಳಿಗೆ ಭೇಟಿ ಕೊಟ್ಟು ಭಾರತದ ಗ್ರಾಮೀಣ ಅಭಿವೃದ್ಧಿ ಬಗ್ಗೆ ಅಲ್ಲಿನವರಿಗೆ ತಿಳಿಹೇಳಿದೆ. ೧೯೯೯ರಲ್ಲಿ ಕರ್ನಾಟಕದಲ್ಲಿ ಎಸ್.ಎಂ.ಕೃಷ್ಣರವರ ನೇತೃತ್ವದಲ್ಲಿ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ನನಗೆ ಒಂದು ಅವಕಾಶ ಕೊಡಬೇಕು ಎಂದು ಹೈ ಕಮಾಂಡ್ ನಿರ್ಧರಿಸಿತ್ತು. ಇದಕ್ಕೆ ಪೂರಕವಾಗಿ ಸ್ಪಂದಿಸಿದ ಮುಖ್ಯಮಂತ್ರಿಗಳು ಹಾಗೂ ನನ್ನ ಸಹಪಾಠಿಗಳೂ ಆದ ಎಸ್.ಎಂ. ಕೃಷ್ಣರವರು ನಾನು ವಿಧಾನ ಪರಿಷತ್ತಿನ ಸದಸ್ಯನಾಗಲು ಸಹಾಯ ಮಾಡಿದರು. ನಾನು ಒಂದು ವರ್ಷಕ್ಕಿಂತ ಹೆಚ್ಚು ಕಾಲ ವಿಧಾನ ಪರಿಷತ್ತಿನ ಸದಸ್ಯನಾಗಿದ್ದೆ. ವಿಶೇಷವಾಗಿ ಗ್ರಾಮೀಣ ಅಭಿವೃದ್ಧಿ ಬಗ್ಗೆ ನನ್ನ ತುಡಿತವನ್ನು ಅಲ್ಲಿ ದಾಖಲು ಮಾಡಿದ್ದೇನೆ. ಕೇಂದ್ರ ಸರ್ಕಾರದ ವಿವಿಧ ಯೋಜನೆಗಳನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದನ್ನು ನನ್ನ ಅನುಭವದಲ್ಲಿ ತಿಳಿಸಿದ್ದೇನೆ. ಹಕ್ಕುಬಾಧ್ಯತಾ ಸಲಹಾ ಸಮಿತಿಯ ಸದಸ್ಯನಾಗಿ, ಶಾಸಕಾಂಗದ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಸದಸ್ಯನಾಗಿ, ಕಂದಾಯ ಹಾಗೂ ಪರಿಸರದ ಶಾಸಕಾಂಗ ಸಮಿತಿಯ ಅಧ್ಯಕ್ಷನಾಗಿ ದುಡಿದಿದ್ದೇನೆ.

***– ವಿಧಾನ ಪರಿಷತ್ತಿನ ಸಭಾಪತಿಗಳಾಗಿ ಅಥವಾ ಕೃಷಿ ಸಚಿವರಾಗಿ ತಮ್ಮನ್ನು ನೋಡುತ್ತೇವೆ ಎಂದು ನಿಮ್ಮ ಅಭಿಮಾನಿಗಳು ಭಾವಿಸಿದ್ದರು. ಅದು ಸುಳ್ಳಾಗಿದೆ. ಅದಕ್ಕೆ ಕಾರಣಗಳೇನು?***

ಹಿಂದೆ ಹೇಳಿದಂತೆ, ನಾನು ಎಂದೂ ಅಧಿಕಾರಕ್ಕೆ ಹಾತೊರೆದವನಲ್ಲ. ನನ್ನ ಆಸೆ ಆಕಾಂಕ್ಷೆಗಳನ್ನು ಬಡ ಗ್ರಾಮೀಣ ಜನರ ಸೇವಕನಾಗಿ ಅವರ ಸೇವೆ ಮಾಡಲು ಒಂದು ಮಿತಿಯಲ್ಲಿ ಇಟ್ಟುಕೊಂಡವನು. ಇದರಿಂದಾಗಿ ನನಗೆ ಸ್ನೇಹಿತರು, ಅಭಿಮಾನಿಗಳು ದೊರಕಿದ್ದಾರೆ. ನಮ್ಮ ಪಕ್ಷದ ಹೈ ಕಮಾಂಡ್ ನನ್ನನ್ನು ರಾಜ್ಯಸಭೆಗೆ ಬರುವಂತೆ ಆಜ್ಞಾಪಿಸಿತು. ವಿಶೇಷವಾಗಿ ನಮ್ಮ ಪಕ್ಷದ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿಯವರು ನಾನು ದೆಹಲಿಯಲ್ಲಿ ಇರಬೇಕೆಂದು ಸೂಚಿಸಿದ್ದರು. ನಮ್ಮ ಮುಖ್ಯಮಂತ್ರಿಗಳೂ ಕೂಡ ಇದಕ್ಕೆ ಒಪ್ಪಿಗೆ ಕೊಟ್ಟರು. ಅಂದಮೇಲೆ ರಾಜ್ಯಸಭೆಗೆ ಹೋಗಬೇಕಾದುದು ಪಕ್ಷದ ನಿಷ್ಠಾವಂತ ಕಾರ್ಯಕರ್ತನಾದ ನನ್ನ ಜವಾಬ್ದಾರಿ ಆಗಿತ್ತು. ಎರಡು ಮಾತಾಡದೆ ನಾನು ರಾಜ್ಯಸಭೆಗೆ ಹೋದೆ. ರಾಜ್ಯಸಭೆಗೆ ನನ್ನನ್ನು ಕಳುಹಿಸಲು ಯಾವ ತಂತ್ರ-ಕುತಂತ್ರಗಳೂ ನಡೆದಿಲ್ಲ. ನನ್ನ ಸ್ವಇಚ್ಛೆಯಿಂದ ದೆಹಲಿಗೆ ಹೋಗಿದ್ದೇನೆ. ರಾಜ್ಯಸಭಾ ಸದಸ್ಯನಾದ ಮಾತ್ರಕ್ಕೆ ರಾಜ್ಯ ರಾಜಕೀಯದಿಂದ ದೂರ ಇರಬೇಕೆಂಬ ನಿಯಮವಿಲ್ಲ. ರಾಜ್ಯಸಭಾ ಸದಸ್ಯನಾಗಿದ್ದರೂ ಅಭಿವೃದ್ಧಿ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿರುವ ನನಗೆ ಆ ನಿಟ್ಟಿನಲ್ಲಿ ರಾಜ್ಯ ಸರ್ಕಾರಕ್ಕೆ ಸಲಹೆ ಸೂಚನೆಗಳನ್ನು ಕೊಡುವ ಅರ್ಹತೆ ಇದೆ. ರಾಜ್ಯದ ಬಡ ಜನತೆಗೆ, ಗ್ರಾಮಾಂತರ ಪ್ರದೇಶದ ಕೃಷಿಕರಿಗೆ ಹೇಗಾದರೂ ಸಹಾಯ ಮಾಡಬೇಕು ಎಂಬ ಆಶಯ ನನ್ನದು. ರಾಜ್ಯಸಭೆಯಲ್ಲಿ ಕೂಡ ರೈತರ ಪರವಾಗಿ ದನಿ ಎತ್ತಿದ್ದೇನೆ.

***– ತಮ್ಮ ಮುಂದಿನ 'ರಾಜಕೀಯ ಗುರಿ' ಏನು?***

ನಾನು ಯಾವುದೇ ಮಹತ್ವಾಕಾಂಕ್ಷೆ ಇಟ್ಟುಕೊಂಡು ರಾಜಕೀಯ ಕ್ಷೇತ್ರಕ್ಕೆ ಬಂದವನಲ್ಲ. ನನಗೆ ರಾಜಕೀಯಕ್ಕಿಂತ ಅಭಿವೃದ್ಧಿ ತುಂಬಾ ಪ್ರಿಯವಾದುದು. ಗ್ರಾಮೀಣ ಅಭಿವೃದ್ಧಿ, ಕೃಷಿ, ಗುಡಿ ಕೈಗಾರಿಕೆ ಹಾಗೂ ದೀನದಲಿತರ ಉದ್ಧಾರವೇ ನನಗೆ ಮುಖ್ಯ. ಗ್ರಾಮೀಣ ಭಾರತದ ಅಭಿವೃದ್ಧಿಯನ್ನು ಕುರಿತು ನಾನು ಸದಾ ಚಿಂತಿಸುತ್ತೇನೆ. ೨೧ನೇ ಶತಮಾನಕ್ಕೆ ಕಾಲಿಟ್ಟಿರುವ ಸಂದರ್ಭದಲ್ಲಿ ಗ್ರಾಮೀಣ ಭಾರತವನ್ನು ನಮ್ಮ ಜೊತೆ ಕರೆದುಕೊಂಡು ಹೋಗಬೇಕೆಂಬ ಮಹತ್ವಾಕಾಂಕ್ಷೆ ನನ್ನದು. ಗ್ರಾಮೀಣ ಜನತೆಯಲ್ಲಿ ಜಾಗೃತಿ ಮೂಡಿ, ಅವರ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಬದಲಾವಣೆಯಾದರೆ ನಾನು ಅತ್ಯಂತ ಹರ್ಷಿತ ವ್ಯಕ್ತಿ ಆಗುತ್ತೇನೆ. ಅದೇ ನನ್ನ ಕನಸು ಹಾಗೂ ಜೀವನದ ಗುರಿ.

***– ರಾಷ್ಟ್ರದ ಹಿತದೃಷ್ಟಿಯಿಂದ ಕೆಲಸ ಮಾಡಿದ ನಾಯಕರು ಎಂದು ತಾವು ಯಾರನ್ನು ಗುರುತಿಸುತ್ತೀರಿ?***

ಸ್ವಾತಂತ್ರ್ಯ ಪೂರ್ವದಲ್ಲಿ ಕಾಂಗ್ರೆಸ್‌ನ ಮೂಲಕ ರಾಜಕೀಯವನ್ನು ಪ್ರವೇಶಿಸಿದ ಅನೇಕ ನಾಯಕರಲ್ಲಿ ಮಹೋನ್ನತ ಗುಣಗಳಿದ್ದವು. ಅವರೆಲ್ಲಾ ಹೋರಾಟ, ತ್ಯಾಗ ಹಾಗೂ ಸೇವೆಯ ಮೂಲಕ ಸಾರ್ವಜನಿಕ ಜೀವನವನ್ನು ಪ್ರವೇಶಿಸಿದರು. ಮಹಾತ್ಮಗಾಂಧಿ ಅವರಂತಹ ಆದರ್ಶ ವ್ಯಕ್ತಿಗಳು ಅವರ ಕಣ್ಣ ಮುಂದಿದ್ದರು. ಅಂತಹ ನಾಯಕರುಗಳನ್ನು ನೋಡಿದ್ದೇನೆ. ಅವರ ಜೊತೆ ಮಾತನಾಡಿದ್ದೇನೆ. ಅವರುಗಳು ಎಷ್ಟು ದೊಡ್ಡವರೆಂದರೆ, ಈಗ ಒಮ್ಮೆ ಅವರ ಹೆಸರನ್ನು ನೆನೆದರೆ ನಮ್ಮ ಮನಸ್ಸಿಗೆ ಹೇಳಲಾಗದಷ್ಟು ಹರ್ಷವಾಗುತ್ತದೆ. ಡಾ. ರಾಧಾಕೃಷ್ಣನ್, ಡಾ. ರಾಜೇಂದ್ರ ಪ್ರಸಾದ್, ಜಾಕೀರ್‌ಹುಸೇನ್, ಜವಾಹರ್‌ಲಾಲ್ ನೆಹರು, ಲಾಲ್‌ಬಹುದ್ದೂರ್ ಶಾಸ್ತ್ರಿ, ಸರದಾರ ವಲ್ಲಭಬಾಯಿ ಪಟೇಲ್, ಡಾ. ಬಿ.ಆರ್. ಅಂಬೇಡ್ಕರ್, ಮೌಲಾನ ಅಬುಲ್‌ಕಲಂ ಅಜಾದ್, ಇಂದಿರಾಗಾಂಧಿ, ಗುಲ್ಜಾರಿಲಾಲ್ ನಂದಾ, ಜಗಜೀವನ್‌ರಾಂ, ಮೊರಾರ್ಜಿ ದೇಸಾಯಿ, ಡಾ. ಸಿ.ಸುಬ್ರಹ್ಮಣ್ಯಂ, ವೈ.ಬಿ.ಚವ್ಹಾಣ್ ಮೊದಲಾದವರನ್ನು ಹೆಸರಿಸಬಹುದು. ಡಾ. ರಾಮಮನೋಹರ್ ಲೋಹಿಯಾ ಕೂಡ ನಮ್ಮ ಸಮಕಾಲೀನ ರಾಜಕೀಯದಲ್ಲಿ ತುಂಬಾ ಪ್ರಮುಖ ಪಾತ್ರ ವಹಿಸಿದ್ದಾರೆ. ಹೀಗೆ ಹೆಸರಿಸುತ್ತಾ ಹೋದರೆ ನೂರಾರು ನಾಯಕರನ್ನು ಕಾಣಬಹುದು. ಒಬ್ಬೊಬ್ಬರಲ್ಲಿ ಒಂದೊಂದು ಗುಣವನ್ನು ಗ್ರಹಿಸಿ ನಾವು ಅದನ್ನು ನಮ್ಮ ಬದುಕಿನಲ್ಲಿ ಅನುಷ್ಠಾನ ಮಾಡಿಕೊಳ್ಳಬೇಕು. ಉದಾಹರಣೆಗೆ ಹೇಳುವುದಾದರೆ, ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ವಿರೋಧ ಪಕ್ಷದ ನಾಯಕಿ ಸೋನಿಯಾಗಾಂಧಿ ಹಾಗೂ ಡಾ. ಮನಮೋಹನ್‌ಸಿಂಗ್ ಅವರೂ ಸಹ ಅಪಾರವಾದ ಬದ್ಧತೆಯಿಂದ ದುಡಿಯುತ್ತಿದ್ದಾರೆ.

***– ಕರ್ನಾಟಕದ ರಾಜಕೀಯದಲ್ಲಿ ತಾವು ಗುರುತಿಸಲೇಬೇಕಾದ ಮುಖ್ಯಮಂತ್ರಿಗಳಾರು? ಯಾವ ಕಾರಣಕ್ಕಾಗಿ ಅವರು ಮುಖ್ಯರಾಗಿರುತ್ತಾರೆ?***

ಕರ್ನಾಟಕವನ್ನು ಆಳಿದ ಬಹುಮಟ್ಟಿನ ಮುಖ್ಯಮಂತ್ರಿಗಳು ಸುಸಂಸ್ಕೃತರು ಹಾಗೂ ಜನಪರ ಕಾಳಜಿಯುಳ್ಳವರೆಂದರೆ ಅದು ಅತಿಶಯೋಕ್ತಿಯೇನಲ್ಲ. ದಕ್ಷ ಆಡಳಿತಗಾರರಾದ ಕೆಂಗಲ್ ಹನುಮಂತಯ್ಯನವರ ಸಾಂಸ್ಕೃತಿಕ ಪ್ರೇಮವನ್ನು ಯಾರೂ ಮರೆಯುವಂತಿಲ್ಲ. ಏಕೀಕರಣ ಶಿಲ್ಪಿ ನಿಜಲಿಂಗಪ್ಪನವರಿಗೆ ನೀರಾವರಿ, ಗ್ರಾಮೀಣ ಅಭಿವೃದ್ಧಿ ಹಾಗೂ ತಾತ್ವಿಕ ಸಿದ್ಧಾಂತದ ಮೇಲೆ ರೂಪಿತವಾದ ರಾಜಕೀಯ ಜೀವನ ತುಂಬಾ ಪ್ರಿಯವಾದ ವಿಚಾರಗಳು. ವೀರೇಂದ್ರ ಪಾಟೀಲರು ತಮ್ಮ ಆಡಳಿತದಲ್ಲಿ ದಕ್ಷತೆಯನ್ನು ತೋರಿಸಿದ್ದುಂಟು. ಎಲ್ಲಾ ಹಿಂದುಳಿದ ಸಮುದಾಯವನ್ನು ಒಂದುಗೂಡಿಸಿ ಅವರಲ್ಲಿ ಜಾಗೃತಿ ಮೂಡಿಸಿ ರಾಜ್ಯದ ರಾಜಕಾರಣದಲ್ಲಿ ಹೊಸ ಶಕ್ತಿಯನ್ನು ತಂದುಕೊಟ್ಟ ದೇವರಾಜ ಅರಸು ಅವರನ್ನು ಮರೆಯುವಂತಿಲ್ಲ. ಅಧಿಕಾರ ವಿಕೇಂದ್ರೀಕರಣವನ್ನು ಜೀವನದ ಧ್ಯೇಯವನ್ನಾಗಿ ಇಟ್ಟುಕೊಂಡ ರಾಮಕೃಷ್ಣ ಹೆಗಡೆಯವರೂ ಮುಖ್ಯರಾಗುತ್ತಾರೆ. ೧೯೯೯ರ ನಂತರ ಮುಖ್ಯಮಂತ್ರಿಯಾದ ಎಸ್.ಎಂ.ಕೃಷ್ಣ ಅವರು ಸಹ ಉನ್ನತ ಆದರ್ಶಗಳೊಡನೆ ರಾಜ್ಯವನ್ನು ಮುನ್ನಡೆಸುತ್ತಿದ್ದಾರೆ. ಅವರ ನಿರ್ವಿಕಾರ

ಮನಸ್ಸು, ವಿಶಾಲ ದೃಷ್ಟಿಕೋನ, ಅಭಿವೃದ್ಧಿಯ ಬಗ್ಗೆ ಅವರಿಗಿರುವ ಬದ್ಧತೆಯನ್ನು ನಮ್ಮ ಮುಂದಿನ ಜನ ಕೃತಜ್ಞತೆಯಿಂದ ನೆನೆಯುತ್ತಾರೆ ಎಂಬ ವಿಶ್ವಾಸ ನನ್ನಲ್ಲಿದೆ. ಅನೇಕ ಹಿರಿಯರು ನಮ್ಮ ರಾಜ್ಯದ ರಾಜಕಾರಣದಲ್ಲಿದ್ದು ಉತ್ತಮ ಕೆಲಸ ಮಾಡಿದ್ದಾರೆ. ಹೆಚ್.ಸಿ.ದಾಸಪ್ಪ, ಯಶೋಧರಮ್ಮ ದಾಸಪ್ಪ, ಟಿ.ಎ.ಪೈ, ಎಂ.ಎಸ್.ಗುರುಪಾದಸ್ವಾಮಿ, ಆರ್.ಆರ್.ದಿವಾಕರ್, ಸಿ.ಕೆ.ಜಾಫರ್‌ಶರೀಫ್ ಮುಂತಾದವರನ್ನು ಅಗತ್ಯವಾಗಿ ಸ್ಮರಿಸಬೇಕು.

***– ತಾವು ಸುಮಾರು ಐದು ದಶಕಗಳ ಕಾಲ ರಾಜಕಾರಣದಲ್ಲಿದ್ದೀರಿ. ೬೦ರ ದಶಕದ ರಾಜಕಾರಣಕ್ಕೂ ಇಂದಿನ ರಾಜಕಾರಣಕ್ಕೂ ಇರುವ ವ್ಯತ್ಯಾಸವೇನು? ಹಾಗೂ ಅವುಗಳ ಅಂತರವನ್ನು ಹೇಗೆ ಕಡಿಮೆ ಮಾಡಬಹುದು ಎನ್ನುತ್ತೀರಿ?***

ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಯಾವುದೇ ಪ್ರತಿಫಲದ ಅಪೇಕ್ಷೆ ಇಲ್ಲದೆ ದುಡಿದ ರಾಜಕಾರಣಿಗಳು ೬೦ರ ದಶಕದಲ್ಲಿದ್ದರು. ದೇಶಪ್ರೇಮ, ತ್ಯಾಗ, ನಿಷ್ಠೆ, ಪ್ರಾಮಾಣಿಕತೆ ಹಾಗೂ ಜನಸೇವೆ ಅಂದಿನ ರಾಜಕಾರಣಿಗಳಿಗೆ ಪ್ರಿಯವಾಗಿತ್ತು. ಅವರು ಸಾಕಷ್ಟು ಮುಗ್ಧರಾಗಿದ್ದರು. ವೈಯಕ್ತಿಕ ಹಿತಕ್ಕಿಂತ ಸಮೂಹ ಹಿತ ದೊಡ್ಡದು ಎಂದು ಅವರು ಭಾವಿಸಿದ್ದರು. ಇಂದು ತರುಣ ರಾಜಕಾರಣಿಗಳ ಆದ್ಯತಾ ವಿಷಯವೇ ಬೇರೆ. ರಾಜಕೀಯ ಪಕ್ಷವನ್ನು ಪ್ರವೇಶಿಸಿದ ತಕ್ಷಣ ಅಧಿಕಾರ ಮತ್ತು ಆದಾಯ ಮಾಡಿಕೊಳ್ಳಬೇಕೆಂದು ಭಾವಿಸುತ್ತಾರೆ. ಒಂದರ್ಥದಲ್ಲಿ ಅವರುಗಳದೂ ತಪ್ಪಿಲ್ಲ. ನಮ್ಮ ಸಮಾಜದಲ್ಲಿನ ಚಿಂತನಾ ಲಹರಿಯೇ ಬೇರೆಯಾಗಿದೆ. ಅಧಿಕಾರ, ಹಣ ಇಲ್ಲದ ವ್ಯಕ್ತಿ ಎಷ್ಟೇ ಸತ್ಯವಂತನಾಗಿದ್ದರೂ ಅವನಿಗೆ ಮಾನ್ಯತೆ ಸಿಗದಂತಾಗಿದೆ. ತ್ಯಾಗ ಹಾಗೂ ಸೇವೆಗಳಿಂದ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡಿರುವ ರಾಜಕಾರಣಿಗಳು ಅಪರೂಪವಾಗುತ್ತಿದ್ದಾರೆ. ನಮ್ಮ ತರುಣ ಜನಾಂಗಕ್ಕೆ ಮಹಾತ್ಮಗಾಂಧಿ, ಜಯಪ್ರಕಾಶ್ ನಾರಾಯಣ, ನಿಜಲಿಂಗಪ್ಪ, ಹೆಚ್.ಸಿ.ದಾಸಪ್ಪ ಮೊದಲಾದ ವ್ಯಕ್ತಿಗಳ ವ್ಯಕ್ತಿತ್ವದ ಪರಿಚಯದ ಅಗತ್ಯವಿದೆ. ಅವರುಗಳ ಮನಸ್ಸಿಗೆ ಸರಿಯಾದ ಆದರ್ಶ ಕಂಡುಬಂದರೆ ನಿಜಕ್ಕೂ ರಾಜಕಾರಣದಲ್ಲಿ ಅತ್ಯುತ್ತಮ ಬದಲಾವಣೆ ಆಗುತ್ತದೆ ಎಂಬ ವಿಶ್ವಾಸವುಳ್ಳವನು ನಾನು. ರಾಜಕಾರಣದಲ್ಲಿ ಬೇರೆ ವಿಚಾರಗಳು ಎಷ್ಟೇ ಪ್ರಭಾವ ಬೀರಿದರೂ, ಜನಸೇವೆ, ತಾಳ್ಮೆ, ಪ್ರಾಮಾಣಿಕ ದುಡಿಮೆ ಇರುವ ವ್ಯಕ್ತಿಗೆ ಅವಕಾಶ ದೊರಕಿಯೇ ದೊರಕುತ್ತದೆ ಎಂದು ನಮ್ಮ ಯುವ ರಾಜಕಾರಣಿಗಳು ಚೆನ್ನಾಗಿ ತಿಳಿದುಕೊಳ್ಳಬೇಕು.

***– ತಮಗೆ ಪ್ರಿಯವಾದ ಕೃಷಿ ಹಾಗೂ ಕೃಷಿಕರ ಹಿತರಕ್ಷಣೆಗೆ ತಾವು ಕೈಗೊಂಡ ಕ್ರಮಗಳು ಯಾವುವು?***

ಮೂಲತಃ ನಾನೊಬ್ಬ ರೈತನ ಮಗ. ನಮ್ಮ ತಂದೆಯವರ ನಿಧನದ ನಂತರ ನಾನು ವ್ಯವಸಾಯಕ್ಕೆ ನನ್ನೆಲ್ಲಾ ಶ್ರಮವನ್ನು ಮೀಸಲಿಟ್ಟೆ. ಕೃಷಿಯಲ್ಲಿ ಅನೇಕ ರೀತಿಯ ಪ್ರಯೋಗ ಮಾಡಿ ಅವುಗಳನ್ನು ರೈತರಿಗೆ ಮುಟ್ಟಿಸುತ್ತಿದ್ದೇನೆ. ರಾಜ್ಯದ ಕೃಷಿಕ ಸಮಾಜದ ಪ್ರಧಾನ

ಕಾರ್ಯದರ್ಶಿಯಾಗಿದ್ದಾಗ ಬೇರೆ ಬೇರೆ ಸ್ತರದಲ್ಲಿ ರೈತರ ಹಿತಕ್ಕೆ ದುಡಿದಿದ್ದೇನೆ. ಬೆಂಗಳೂರಿನ ಹಡ್ಸನ್ ಸರ್ಕಲ್‌ನಲ್ಲಿರುವ 'ಕೃಷಿಕ ಭವನ' ತಲೆ ಎತ್ತಲು ನನ್ನದೂ ಅಳಿಲು ಸೇವೆ ಇದೆ. ರೈತ ಬೆಳೆದ ಹಣ್ಣುಹಂಪಲುಗಳನ್ನು ಸಂಗ್ರಹಿಸಲು ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ೧೨೦೦ ಟನ್ನಿನ ಶೈತ್ಯಾಗಾರವನ್ನು ಕೃಷಿಕ ಸಮಾಜದ ಆಶ್ರಯದಲ್ಲಿ ಸ್ಥಾಪಿಸಿದೆ. ಕೃಷಿಯ ಜೊತೆಗೆ ನಮ್ಮ ರೈತರು, ಹೈನುಗಾರಿಕೆ, ರೇಷ್ಮೆ, ಪುಷ್ಪೋದ್ಯಮ ಮೊದಲಾದವುಗಳನ್ನು ಕೈಗೊಳ್ಳಬೇಕು ಎನ್ನುವ ಆಶಯ ನನ್ನದು. ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಮೂಲಕ ರೈತರಿಗೆ ಅನುಕೂಲ ಆಗುವಂತೆ ಅನೇಕ ವಿಚಾರ ಸಂಕಿರಣಗಳನ್ನು ಏರ್ಪಡಿಸಿದ್ದೇನೆ. ಲೋಕಸಭಾ ಸದಸ್ಯನಾಗಿದ್ದಾಗ ಮಂಚನಬೆಲೆ ನೀರಾವರಿ ಯೋಜನೆ, ಇಗ್ಗಲೂರು ಏತ ನೀರಾವರಿ ಯೋಜನೆ, ತೊರೆಬೇಕುಪ್ಪೆ ಏತನೀರಾವರಿ ಮುಂತಾದ ಯೋಜನೆಗಳು ಜಾರಿಗೊಳ್ಳಲು ಪ್ರಾಮಾಣಿಕ ಪ್ರಯತ್ನ ಮಾಡಿದ್ದೇನೆ. ಕೃಷಿ ವಿಶ್ವವಿದ್ಯಾನಿಲಯದಲ್ಲಿ ನಡೆದ ಸಂಶೋಧನೆಗಳು ರೈತರ ಹೊಲಗಳಿಗೆ ಬರಬೇಕು ಎಂಬ ಆಶಯದಿಂದ ನಾನು ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದೇನೆ.

***– ಮೂಲತಃ ರೈತ ಸಮಾಜಕ್ಕೆ ದನಿ ಇಲ್ಲ. ಎಲ್ಲಾ ಸಂಘಟನೆಗಳು ಅವರನ್ನು ತಮ್ಮ ರಾಜಕೀಯ ಲಾಭಕ್ಕಾಗಿ ಬಳಸಿಕೊಳ್ಳುತ್ತಿವೆ. ಯಾರೂ ಕೂಡ ಅವರ ಹಿತವನ್ನು ಕಾಯುತ್ತಿಲ್ಲ. ಅವರನ್ನು ಪಕ್ಷಾತೀತವಾಗಿ ಸಂಘಟಿಸುವುದು ಹೇಗೆ?***

ನಿಮ್ಮ ಮಾತು ಅಕ್ಷರಶಃ ಸತ್ಯ. ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮಗಾಂಧಿ, ಸರದಾರ ವಲ್ಲಭಭಾಯಿ ಪಟೇಲ್, ಡಾ. ಬಾಬು ರಾಜೇಂದ್ರ ಪ್ರಸಾದ್‌ರವರೂ ಸಹ ರೈತ ಸಂಘಟನೆಗೆ ಮುಂದಾಗಿದ್ದರು. ಸರ್ಕಾರದ ಶೋಷಣೆ ವಿರುದ್ಧ ಹೋರಾಡುವುದು ರೈತ ನಾಯಕರ ಆಗಿನ ಮುಖ್ಯ ಗುರಿಯಾಗಿತ್ತು. ಇಂದು ರೈತರ ಸಂಘಟನೆಯನ್ನು ರಾಜಕೀಯ ಪಕ್ಷಗಳು ತಮ್ಮ ಮತಗಳಿಕೆಯ ಅಸ್ತ್ರವನ್ನಾಗಿ ಬಳಸಿಕೊಳ್ಳುತ್ತಿವೆ. ರೈತರು ಪಕ್ಷಾತೀತವಾಗಿ ಯೋಚಿಸುವಂತಾಗಬೇಕು. ಉದಾಹರಣೆಗೆ ಕಾವೇರಿ ನೀರಿನ ಸಮಸ್ಯೆಯನ್ನು ತೆಗೆದುಕೊಳ್ಳಿ. ಕರ್ನಾಟಕ ಹಾಗೂ ತಮಿಳುನಾಡಿನ ರೈತರು ಒಂದೆಡೆ ಶಾಂತಚಿತ್ತರಾಗಿ ಕುಳಿತು ಯೋಚಿಸಿದರೆ ಖಂಡಿತವಾಗಿ ಈ ಸಮಸ್ಯೆಗೆ ಪರಿಹಾರ ದೊರೆಯುತ್ತದೆ. ರೈತರ ವಿಚಾರ ಬಂದಾಗ ಎಲ್ಲಾ ರಾಜಕೀಯ ಪಕ್ಷಗಳು ಇದೊಂದು ಸಾಮಾಜಿಕ ಸಮಸ್ಯೆ ಎಂದು ಯೋಚಿಸಬೇಕು. ಅವರಲ್ಲಿ ಆತ್ಮವಿಶ್ವಾಸ ಮೂಡಿಸುವಂತೆ ವರ್ತಿಸಬೇಕು.

***– ಗ್ರಾಮೀಣ ಪ್ರದೇಶದಲ್ಲಿ ಮೂಲತಃ ಜನರಿಗೆ ಉದ್ಯೋಗವಿಲ್ಲ. ಅಂದರೆ, ಅನಿಶ್ಚಿತ ಮಳೆಯಿಂದಾಗಿ ಅವರ ಸ್ಥಿತಿ ಚಿಂತಾಜನಕವಾಗಿದೆ. ಈ ಪರಿಸ್ಥಿತಿಯಿಂದ ಹೊರಬರುವುದು ಹೇಗೆ?***

ಸ್ವಾತಂತ್ರ್ಯಾನಂತರ ಗ್ರಾಮೀಣ ಆರ್ಥಿಕತೆಯನ್ನು ಕುರಿತು ನಾವು ಸಮರ್ಪಕವಾಗಿ

ಯೋಚಿಸಿಲ್ಲ. ಕೇವಲ ಮಳೆಯ ಆಧಾರದ ಮೇಲೆ ನಮ್ಮ ಕೃಷಿ ಚಟುವಟಿಕೆ ನಿಂತಿದೆ. ಅಪಾರವಾದ ಮಾನವ ಸಂಪನ್ಮೂಲ ಮತ್ತು ಅಪಾರ ನೈಸರ್ಗಿಕ ಸಂಪನ್ಮೂಲ ನಮ್ಮ ಗ್ರಾಮೀಣ ಪ್ರದೇಶದಲ್ಲಿದೆ. ಪಾರಂಪರಿಕವಾಗಿ ವೃತ್ತಿ ನಡೆಸಿಕೊಂಡು ಬಂದಿದ್ದ ಕುಶಲಕರ್ಮಿಗಳು ಈ ಭಾಗದಲ್ಲಿದ್ದಾರೆ. ಇವುಗಳನ್ನು ನಾವು ಸರಿಯಾಗಿ ಬಳಸಿಕೊಂಡು ಗ್ರಾಮೀಣ ಪ್ರದೇಶದ ಜನರ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಬೇಕು. ಕೃಷಿಯ ಜೊತೆ ಗುಡಿ ಕೈಗಾರಿಕೆ, ರೇಷ್ಮೆ ಕೃಷಿ, ತೋಟಗಾರಿಕೆ, ಪಶುಪಾಲನೆ, ಆಹಾರ ಧಾನ್ಯ, ತರಕಾರಿ ಹಾಗೂ ಹಣ್ಣುಗಳ ಸಂಸ್ಕರಣ ಘಟಕಗಳು ಪ್ರಾರಂಭವಾಗಬೇಕು. ಮಹಾತ್ಮ ಗಾಂಧಿಯವರು ಹೇಳಿದಂತೆ ಯಂತ್ರಗಳ ಬಳಕೆ ಕಡಿಮೆ ಮಾಡಿ ಯಥೇಚ್ಛವಾಗಿರುವ ಮಾನವ ಸಂಪನ್ಮೂಲಗಳನ್ನು ಬಳಸಿಕೊಳ್ಳಬೇಕು. ನೀರಿನ ಸದ್ಬಳಕೆ ಕೂಡ ಇಂದಿನ ಅಗತ್ಯವಾಗಿದೆ.

***– ರೈತರ ಸಮಸ್ಯೆಗಳನ್ನು ವಿಶ್ಲೇಷಿಸುವಾಗ ನಾವು ಜಮೀನುದಾರರ ಸಮಸ್ಯೆಗೆ ಮಾತ್ರ ಸ್ಪಂದಿಸುತ್ತೇವೆ. ಭೂರಹಿತ ಕಾರ್ಮಿಕರ ಸಮಸ್ಯೆಗಳನ್ನು ಯಾರೂ ಅರ್ಥಮಾಡಿಕೊಳ್ಳುತ್ತಿಲ್ಲ. ಇವುಗಳನ್ನು ಕೃಷಿ ಚಟುವಟಿಕೆಯ ವ್ಯಾಪ್ತಿಗೆ ತರುವುದು ಹೇಗೆ?***

ಗ್ರಾಮಾಂತರ ಪ್ರದೇಶದ ಬಹುಮಟ್ಟಿನ ರೈತರು ಸಣ್ಣ ಹಾಗೂ ಅತಿ ಸಣ್ಣ ರೈತರಾಗಿದ್ದಾರೆ. ಒಂದಿಂಚು ಜಮೀನೂ ಇಲ್ಲದ ಅನೇಕ ಕೃಷಿ ಕಾರ್ಮಿಕರು ನಮ್ಮ ಗ್ರಾಮೀಣ ಪ್ರದೇಶದಲ್ಲಿದ್ದಾರೆ. ಇಂಥವರನ್ನು ದೃಷ್ಟಿಯಲ್ಲಿಟ್ಟುಕೊಂಡು ಡಾ. ಕುರಿಯನ್‌ರವರು ಕ್ಷೀರ ಕ್ರಾಂತಿಯನ್ನು ಮಾಡಿದರು. ಗೃಹ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗಳನ್ನು ಸ್ಥಾಪಿಸುವುದು ಹಾಗೂ ಅವರುಗಳಿಗೆ ಸಕಾಲದಲ್ಲಿ ಸಹಾಯಧನ ಕೊಡುವುದು, ನಿರ್ದಿಷ್ಟ ಕ್ಷೇತ್ರದಲ್ಲಿ ಅವರಿಗೆ ಹೊಸ ತಂತ್ರಜ್ಞಾನದ ತರಬೇತಿ ಕೊಡಿಸಿ ಅವರು ಉತ್ಪಾದನೆ ಮಾಡಿದ ವಸ್ತುಗಳಿಗೆ ಮಾರುಕಟ್ಟೆ ಒದಗಿಸುವುದು ಮೊದಲಾದ ಜವಾಬ್ದಾರಿಯನ್ನು ನಮ್ಮ ಆಡಳಿತ ವ್ಯವಸ್ಥೆ ಹೊರಬೇಕು. ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯತಿಗಳು ವಿಶೇಷವಾಗಿ ಇದರ ಬಗ್ಗೆ ಚಿಂತಿಸಬೇಕು. ಗ್ರಾಮ ಪಂಚಾಯತಿಯು ತನ್ನ ವ್ಯಾಪ್ತಿಗೆ ಬರುವ ಹಳ್ಳಿಗಳಲ್ಲಿ, ಕೃಷಿ ಕಾರ್ಮಿಕರು ಎಷ್ಟು ಜನರಿದ್ದಾರೆ, ಅವರ ಆರ್ಥಿಕ ಸ್ಥಿತಿ ಎಂಥದ್ದು, ಅವರಿಗೆ ಯಾವ ಯಾವ ರೀತಿ ಸಹಾಯ ಒದಗಿಸಬೇಕು ಎನ್ನುವುದರ ಬಗ್ಗೆ ನೀಲಿನಕಾಶೆಯನ್ನು ತಯಾರಿಸಿಕೊಳ್ಳಬೇಕು. ಹಾಗೆಯೇ ತಾಲ್ಲೂಕು ಪಂಚಾಯತಿಯೂ ಕೂಡ ಸರ್ವೆ ಮಾಡಿಸಿ ತನ್ನದೇ ಆದ ಯೋಜನಾ ವರದಿಯನ್ನು ಸಿದ್ಧಪಡಿಸಬೇಕು. ಇವೆರಡರ ಆಧಾರದ ಮೇಲೆ ಜಿಲ್ಲಾ ಪಂಚಾಯತಿ ತನ್ನ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಸೂಕ್ತ ಯೋಜನೆ ಇದ್ದರೆ ಅದರ ಅನುಷ್ಠಾನಕ್ಕೆ ಯಾವುದೇ ತೊಂದರೆ ಆಗುವುದಿಲ್ಲ. ಈಗ ಹೊಸ ಹೊಸ ಯೋಜನೆಗಳ ಅನುಷ್ಠಾನಕ್ಕೆ ಎಲ್ಲಾ ಕಡೆಯಿಂದ ನೆರವು ಬರುತ್ತಿದೆ. ಆದರೆ ಅನುಷ್ಠಾನ ಮಾಡುವವರು ಪ್ರಾಮಾಣಿಕರಾಗಿದ್ದು, ಜನರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು.

***– ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ಗ್ರಾಮೀಣ ಪ್ರದೇಶದ ಗೃಹಕೈಗಾರಿಕೆಗಳು ಅವನತಿಯ ಹಾದಿ ಹಿಡಿದಿದೆ. ಅವುಗಳಿಗೆ ಪುನಶ್ಚೇತನ ಕೊಡಲು ಸಾಧ್ಯವೇ?***

ಸ್ವಾತಂತ್ರ್ಯಾನಂತರ ಕೂಡ ನಾವು ನಮ್ಮ ಆರ್ಥಿಕ ಕ್ಷೇತ್ರವನ್ನು ಸ್ವಾವಲಂಬಿಯನ್ನಾಗಿ ಮಾಡಲು ವಿಫಲರಾಗಿರುವುದೇ ಇಂದಿನ ಎಲ್ಲಾ ಸಮಸ್ಯೆಗಳಿಗೆ ಮೂಲ. ನಮ್ಮ ಆರ್ಥಿಕ ದೃಷ್ಟಿಯ ಚಿಂತನೆ ಕೇವಲ ನಗರಗಳಿಗೆ ಮಾತ್ರ ಸೀಮಿತವಾಗಿದೆ. ನಗರಗಳ ಆಕರ್ಷಣೆಯ ಬದುಕಿನ ಮುಂದೆ ಗ್ರಾಮೀಣ ಬದುಕು ನಿಸ್ಸಾರ ಎನಿಸಿದೆ. ಜಾಗತೀಕರಣದ ಪೂರ್ವದಲ್ಲೇ ರೈತ ಅಸಹಾಯಕನಾಗಿದ್ದ. ಜಾಗತೀಕರಣ ಹೆಚ್ಚಾದಂತೆಲ್ಲಾ ಅವನ ಸ್ಥಿತಿ ಮತ್ತಷ್ಟು ಚಿಂತಾಜನಕವಾಗುತ್ತಿದೆ. ಯಾವುದೇ ಹೊಸ ತಂತ್ರಜ್ಞಾನವನ್ನು ತಡೆಹಿಡಿಯಲು ಸಾಧ್ಯವಿಲ್ಲ. ಅವುಗಳನ್ನು ನಮ್ಮ ಹಿತಕ್ಕೆ ಬಳಸಿಕೊಳ್ಳುವಂತೆ ನಾವು ಯೋಜನೆ ರೂಪಿಸಬೇಕು. ಜಾಗತೀಕರಣದ ಪ್ರಯೋಜನವನ್ನು ರೈತ ಸಮುದಾಯಕ್ಕೆ ಕೊಡಲು ಈಗಲೂ ಸಾಧ್ಯವಿದೆ. ಹೊಸ ತಂತ್ರಜ್ಞಾನವನ್ನು ಬಳಸಿ ಉತ್ಪಾದನೆ, ಆಹಾರ ಸಂಸ್ಕರಣೆ ಹಾಗೂ ಪುಷ್ಪೋದ್ಯಮಗಳನ್ನು ಯಶಸ್ವಿಯಾಗಿ ಜಾರಿಗೆ ತಂದರೆ ಖಂಡಿತ ರೈತ ಹೆಚ್ಚು ಸ್ವಾವಲಂಬಿ ಆಗುತ್ತಾನೆ.

***– ಭಾರತದ ರೈತ ಸಮುದಾಯವು ಅಂತಾರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಉತ್ಪನ್ನವನ್ನು ಹೆಮ್ಮೆಯಿಂದ ಮಾರಾಟ ಮಾಡುವುದು ಯಾವಾಗ? ಇಂತಹ ಸ್ಪರ್ಧೆಗೆ ನಮ್ಮ ರೈತರನ್ನು ಸಜ್ಜುಗೊಳಿಸುವುದು ಹೇಗೆ?***

ನಮ್ಮ ಗ್ರಾಮೀಣ ಭಾಗದಲ್ಲಿರುವ ಜನ ಕೃಷಿಯನ್ನೇ ಹೆಚ್ಚಾಗಿ ಅವಲಂಬಿಸಿರುತ್ತಾರೆ. ಆದರೆ ಅವರಲ್ಲಿ ಆಧುನಿಕ ಜ್ಞಾನದ ಅಭಾವ ಎದ್ದು ಕಾಣುತ್ತಿದೆ. ನಮ್ಮ ಕೃಷಿ ಇಲಾಖೆ ಕೇವಲ ಹೊಸ ತಾಂತ್ರಿಕತೆಯನ್ನು ರೈತರಿಗೆ ಹೇಳಿದರೆ ಸಾಲದು. ಅವರಲ್ಲಿ ಪರಿವರ್ತನಾ ಮನೋಭಾವವನ್ನು ಬೆಳೆಸಬೇಕು. ಹೆಚ್ಚು ಹೆಚ್ಚು ಗುಣಮಟ್ಟದ ಕೃಷಿ ಉತ್ಪಾದನೆ ಮಾಡಲು ರೈತರಿಗೆ ವ್ಯವಸ್ಥಿತವಾದ ಜ್ಞಾನ ತುಂಬಾ ಅಗತ್ಯ. ಭಾರತದ ಕೃಷಿ ವಿಜ್ಞಾನಿಗಳು ತಮ್ಮ ಸಂಶೋಧನೆಯಿಂದ ಅಂತಾರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ. ಡಾ. ಸ್ವಾಮಿನಾಥನ್, ಡಾ. ಪರೋಡ, ಡಾ. ದ್ವಾರಕಾನಾಥ್, ಡಾ. ಲಕ್ಷ್ಮಣಯ್ಯ, ಡಾ. ಜಿ.ಕೆ.ವೀರೇಶ್, ಡಾ. ಎಂ.ಮಹಾದೇವಪ್ಪ, ಡಾ. ಎನ್.ಪಿ.ಪಾಟೀಲ್ ಮೊದಲಾದವರ ಸಂಶೋಧನೆ ನಿಜಕ್ಕೂ ರೈತರಿಗೆ ಉಪಕಾರಿಯಾಗಿದೆ. ಆದರೆ ಅವರ ಸಂಶೋಧನೆಯ ಫಲ ರೈತರ ಹೊಲಗಳಿಗೆ ಅಥವಾ ಗದ್ದೆಗಳಿಗೆ ಸಮರ್ಪಕವಾಗಿ ಹರಿದುಬಂದಿಲ್ಲ. ಕೃಷಿ ವಿಶ್ವವಿದ್ಯಾನಿಲಯ ಮತ್ತು ಕೃಷಿ ಇಲಾಖೆಯಲ್ಲಿ ಅನ್ಯೋನ್ಯ ಸಂಬಂಧ ಇರಬೇಕು. ಆಧುನಿಕ ಮಾರುಕಟ್ಟೆಯ ತಿಳುವಳಿಕೆ ಇರುವ ಜನ ಈ ಎರಡೂ ಸ್ಥಳಗಳಲ್ಲಿರಬೇಕು. ಭಾರತದ ರೈತನ ಬಗ್ಗೆ ಅಮೆರಿಕಾದ ರಾಯಭಾರಿ ಚೆಸ್ಟರ್‌ಬೋಲ್ಸ್ ಹೇಳಿದ ಮಾತು ಜ್ಞಾಪಕಾರ್ಹವಾದುದು: 'ಭಾರತದ ರೈತನಷ್ಟು ಕಷ್ಟ ಸಹಿಷ್ಣುಗಳು ಬೇರಾವ ದೇಶದಲ್ಲೂ ಇಲ್ಲ'. ರೈತನ ಕಷ್ಟ ಸಹಿಷ್ಣುತೆಯನ್ನು ನಮ್ಮ ಕೃಷಿ ವಿಜ್ಞಾನಿಗಳು ಹಾಗೂ ಕೃಷಿ ಇಲಾಖೆಯ ಅಧಿಕಾರಿಗಳು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು.

ಅವನಿಗೆ ಎಲ್ಲಾ ಹಂತದಲ್ಲೂ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡಿ ಆತ ಗುಣಮಟ್ಟದ ವಸ್ತುಗಳನ್ನು ಉತ್ಪಾದನೆ ಮಾಡುವಂತೆ ಮಾಡಬೇಕು. ಆಗ ನಮ್ಮ ರೈತ ಸಮುದಾಯ ಅಂತಾರಾಷ್ಟ್ರೀಯ ಮಟ್ಟದಲ್ಲಿ ತಲೆ ಎತ್ತಿ ನಡೆಯಲು ಸಾಧ್ಯವಾಗುತ್ತದೆ.

***– ತಾವು ೭೦ರ ದಶಕದಲ್ಲಿ "ಸಹಕಾರಿ ಪ್ರಕಾಶನ"ವನ್ನು ಪ್ರಾರಂಭಿಸಿದಿರಿ. ಆದರ ಧ್ಯೇಯೋದ್ದೇಶಗಳೇನು? ಅದು ವಿಫಲವಾಗಲು ಕಾರಣವೇನು?***

ಈ ಯೋಜನೆಯ ಮೂಲ ರೂವಾರಿಗಳು ಅಂದಿನ ಅರ್ಥ ಸಚಿವರಾಗಿದ್ದ ರಾಮಕೃಷ್ಣ ಹೆಗಡೆಯವರು ಹಾಗೂ ಶಿಕ್ಷಣ ಸಚಿವರಾಗಿದ್ದ ಕೆ.ವಿ.ಶಂಕರಗೌಡರವರು. ಸಹಕಾರಿ ಪ್ರಕಾಶನಕ್ಕೆ ವ್ಯಾಪಕವಾದ ಅರ್ಥಕೊಟ್ಟವರು ಅಂದಿನ ಟ್ರಸ್ಟಿಗಳಲ್ಲಿ ಒಬ್ಬರಾಗಿದ್ದ ಡಾ. ದೇ. ಜವರೇಗೌಡರು. ನಾನು ಕೂಡ ಅದಕ್ಕೆ ಒಬ್ಬ ಟ್ರಸ್ಟಿ. ಖ್ಯಾತ ಲೇಖಕ ನಿರಂಜನ, ಪತ್ರಕರ್ತ ಪ.ಸು.ಭಟ್ಟ ಮೊದಲಾದವರು ಆ ಟ್ರಸ್ಟಿನಲ್ಲಿದ್ದರು. ಆ ಸಂಸ್ಥೆಯ ಮೂಲಕವೇ ಮಕ್ಕಳ ವಿಶ್ವಕೋಶ 'ಜ್ಞಾನ ಗಂಗೋತ್ರಿ' ಏಳು ಸಂಪುಟಗಳಲ್ಲಿ ಹೊರಬಂದಿದೆ. ರಾಜ್ಯದ ಎಲ್ಲಾ ಲೇಖಕರಿಗೂ ಸಹಕಾರಿ ಪ್ರಕಾಶನ ಒಂದು ಆಪ್ತ ಸಂಸ್ಥೆ ಆಗಬೇಕು ಎಂಬುದು ಅದರ ಉದ್ದೇಶವಾಗಿತ್ತು. ಜೊತೆಗೆ ಕನ್ನಡದಲ್ಲಿ ಶ್ರೇಷ್ಠ ದಿನಪತ್ರಿಕೆಯೊಂದನ್ನು ಪ್ರಕಟಿಸುವ ಉದ್ದೇಶ ಇತ್ತು. ಇದಕ್ಕೆ ಸಂಬಂಧಪಟ್ಟಂತೆ ಮುದ್ರಣ ಯಂತ್ರಗಳನ್ನೂ ಕೂಡ ನಾವು ಆಮದು ಮಾಡಿಕೊಂಡೆವು. ೧೯೭೨ರ ರಾಜಕೀಯ ಬೆಳವಣಿಗೆಯ ಬದಲಾವಣೆಯಿಂದ ಆ ಸಂಸ್ಥೆ ತನಗೆ ತಾನೇ ತೆರೆಮರೆಗೆ ಸರಿದಿತ್ತು. ಯಾವುದೇ ಸಂಸ್ಥೆಯಾಗಲಿ ಅದನ್ನು ಬೆಳೆಸುವವನಿಗೆ ವಿಶಾಲವಾದ ದೃಷ್ಟಿಕೋನ ಇರಬೇಕು. ಸಹಕಾರಿ ಪ್ರಕಾಶನದಲ್ಲಿ ಹನುಮಂತೇಗೌಡ ಇರುವ ತನಕ ಅದಕ್ಕೆ ಒಂದು ಚೈತನ್ಯ ಇತ್ತು. ಆಮೇಲೆ ಬಂದವರು, ಹಿಂದೆ ಕಂಡಿದ್ದ ಕನಸುಗಳನ್ನು ಸಮರ್ಥವಾಗಿ ಅರ್ಥಮಾಡಿಕೊಳ್ಳಲು ವಿಫಲರಾದರು. ಆ ಕಾರಣದಿಂದಾಗಿ ನಿರೀಕ್ಷೆಯ ಮಟ್ಟದಲ್ಲಿ ಸಹಕಾರಿ ಪ್ರಕಾಶನ ಸಂಸ್ಥೆ ಕೆಲಸಮಾಡಲಿಲ್ಲ.

***– ೧೯೫೬ರಿಂದ ತಾವು ವಿದೇಶಿ ಪ್ರವಾಸ ಮಾಡುತ್ತಿದ್ದೀರಿ. ಭಾರತದ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗೆ ತಮ್ಮ ಅಮೂಲ್ಯವಾದ ಕಾಣಿಕೆ ಯಾವುದು? ಈ ಹಿನ್ನೆಲೆಯಲ್ಲಿ ನೀವು ಮೆಚ್ಚಿಕೊಂಡ ರಾಷ್ಟ್ರಗಳು ಯಾವುವು?***

ಸುಮಾರು ಮೂರು ದಶಕಗಳಿಂದ ನಾನು ೧೦೦ಕ್ಕೂ ಹೆಚ್ಚು ಸಾರಿ ವಿದೇಶಿ ಪ್ರವಾಸವನ್ನು ಕೈಗೊಂಡಿದ್ದೇನೆ. ಎಷ್ಟೋ ದೇಶಗಳಲ್ಲಿ ನಾನು ರಾಜಕಾರಣಿ ಎಂಬುದು ಗೊತ್ತೇ ಇಲ್ಲ. ಭಾರತದಿಂದ ಬಂದ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದ ತಜ್ಞ ಎಂದೇ ಗುರುತಿಸುತ್ತಾರೆ. ನನಗೆ ತುಂಬಾ ಹಿಡಿಸಿದ ದೇಶಗಳೆಂದರೆ, ಜಪಾನ್, ಚೀನಾ, ಅಮೆರಿಕಾ, ಜರ್ಮನಿ, ಹಾಲೆಂಡ್ ಮುಂತಾದವು. ಚೀನಾ ಮತ್ತು ನಮ್ಮ ದೇಶದ ಅನೇಕ ವಿಚಾರಗಳಲ್ಲಿ ಸಾಮ್ಯತೆ ಇದೆ. ಚೀನಾದಲ್ಲಿ ಮೂರು ಬಾರಿ ಪ್ರವಾಸ ಮಾಡಿ ಎರಡು ತಿಂಗಳ ಕಾಲ ಇದ್ದು ಸುಮಾರು ೮೦೦೦ ಕಿಲೋ ಮೀಟರ್ ಪ್ರಯಾಣವನ್ನು ಬೆಳೆಸಿ ಅಲ್ಲಿನ ಕೃಷಿ ಹಾಗೂ ಗುಡಿ ಕೈಗಾರಿಕೆಯನ್ನು

ಅಧ್ಯಯನ ಮಾಡಿದ್ದೇನೆ. ಆಗೆಲ್ಲಾ ನನಗೆ ಚೀನಾ ನಾಯಕರ ದೂರದೃಷ್ಟಿ ಪರಿಚಯವಾಯಿತು. ಚೀನಾದಲ್ಲಿ ವಾಸ್ತವಿಕವಾಗಿ ಅನುಷ್ಠಾನಗೊಳ್ಳದ ಯಾವ ಯೋಜನೆಯನ್ನೂ ರೂಪಿಸುವುದಿಲ್ಲ. ರೈತನಿಗೂ ಹಾಗೂ ಕೃಷಿ ವಿಜ್ಞಾನಿಗೂ ಅನ್ಯೋನ್ಯ ಸಂಬಂಧ ಇದೆ. ಜನಸಮೂಹವನ್ನು ಬಳಸಿಕೊಂಡು ಉತ್ಪಾದನೆ ಮಾಡುವ ವಸ್ತುಗಳಿಗೆ ಚೈನಾ ಸರ್ಕಾರ ಹೆಚ್ಚು ಆದ್ಯತೆ ನೀಡುತ್ತದೆ. 'ಭಾರತದ ಕೃಷಿ ಸಂಶೋಧನಾ ಕ್ಷೇತ್ರವು ಚೈನಾ ದೇಶದ ಕೃಷಿ ಸಂಶೋಧನಾ ಕ್ಷೇತ್ರಕ್ಕಿಂತ ಅರ್ಧ ಶತಮಾನದಷ್ಟು ಮುಂದಿದೆ. ಚೈನಾದ ಕೃಷಿ ಕ್ಷೇತ್ರವು ಭಾರತದ ಕೃಷಿ ಕ್ಷೇತ್ರಕ್ಕಿಂತ ಅರ್ಧ ಶತಮಾನದಷ್ಟು ಮುಂದಿದೆ ಎನ್ನುವ ಮಾತೊಂದಿದೆ. ಅಂದರೆ ಚೀನಾ ರೈತನ ಚಟುವಟಿಕೆಗಳು ಹೆಚ್ಚು ಅರ್ಥಪೂರ್ಣವಾಗಿವೆ. ಆದರೆ ನಮ್ಮ ರೈತನ ಚಟುವಟಿಕೆ ಪಾರಂಪರಿಕವಾದ ನೆಲೆಯಲ್ಲೇ ಅಡಗಿ ಕುಳಿತಿದೆ. ಹೀಗಾಗಿ ನಮ್ಮ ಕೃಷಿ ಕ್ಷೇತ್ರವು ನಿರೀಕ್ಷಿಸಿದಷ್ಟು ಸತ್ಫಲಗಳನ್ನು ಕೊಡಲಾಗುತ್ತಿಲ್ಲ. ಅದೇ ರೀತಿ ಜಪಾನ್‌ನ ಕೃಷಿ ಕ್ಷೇತ್ರ ಕೂಡ ಆಧುನಿಕ ವಿಚಾರಗಳನ್ನು ಅಳವಡಿಸಿಕೊಂಡಿದೆ. ಈ ವಿಚಾರದಲ್ಲಿ ರೈತರನ್ನು ಸಜ್ಜುಗೊಳಿಸುವ ಹೊಣೆಯನ್ನು ಸರ್ಕಾರ ಹೊರಬೇಕು. ಅವನನ್ನು ಹೊಸ ಜ್ಞಾನಕ್ಕೆ ತಕ್ಕಂತೆ ಅಣಿಗೊಳಿಸಬೇಕು. ಅವರು ಬೆಳೆದ ಪದಾರ್ಥಗಳಿಗೆ ಸರಿಯಾದ ಮಾರುಕಟ್ಟೆ ವ್ಯವಸ್ಥೆ ಆಗಬೇಕು.

*– ಶ್ರೀಲಂಕಾ ಸಾಂಸ್ಕೃತಿಕವಾಗಿ ನಮಗೆ ಹತ್ತಿರವಿರುವ ರಾಷ್ಟ್ರ. ನಮ್ಮ ಮೇಲೆ ಆ ನೆಲದ ಯಾವ ಗುಣ ಪ್ರಭಾವ ಬೀರಲು ಸಾಧ್ಯ?*

ಶ್ರೀಲಂಕಾ, ಥೈಲ್ಯಾಂಡ್, ಕಾಂಬೋಡಿಯಾ, ಬರ್ಮಾ, ಇಂಡೋನೇಷ್ಯಾ ಮೊದಲಾದ ರಾಷ್ಟ್ರಗಳಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವ ಅನ್ಯೋನ್ಯವಾಗಿದೆ. ಇಂಡೋನೇಷ್ಯಾದಲ್ಲಂತೂ ಹಿಂದೂ ಸಂಸ್ಕೃತಿಯ ಪ್ರಭಾವವನ್ನು ಹೆಜ್ಜೆ ಹೆಜ್ಜೆಗೂ ಗುರುತಿಸಬಹುದು. ಶ್ರೀಲಂಕಾದಲ್ಲಿ ಸ್ಥಳೀಯ ಜನರು ತುಸು ಸೋಮಾರಿಗಳು. ತಮಿಳುನಾಡಿನಿಂದ ವಲಸೆ ಹೋಗಿರುವ ತಮಿಳು ಜನರು ಶ್ರೀಲಂಕಾದ ಆರ್ಥಿಕ ಕ್ಷೇತ್ರಕ್ಕೆ ಬಲ ತುಂಬಿದ್ದಾರೆ. ಅಲ್ಲಿನ ಪ್ಲಾಂಟೇಷನ್‌ನಲ್ಲಿ ದುಡಿಯುತ್ತಿರುವ ಬಹುಮಟ್ಟಿನ ಕಾರ್ಮಿಕರು ತಮಿಳರೇ. ತಮಿಳರ ನಾಯಕ ತೊಂಡಮಾನ್, ತಮಿಳರಿಗೆ ಸೂಕ್ತ ಸ್ಥಾನಮಾನ ಕೊಡಲು ಹೋರಾಡಿದ. ಅವನ ಮಗ ಈಗ ಶ್ರೀಲಂಕಾದಲ್ಲಿ ಕ್ಯಾಬಿನೆಟ್ ದರ್ಜೆಯ ಸಚಿವರಾಗಿದ್ದಾರೆ. ಶ್ರೀಲಂಕಾದ ಸ್ಥಳೀಯರು ಹಾಗೂ ತಮಿಳರ ಅಂತರ್ಯುದ್ಧದಿಂದಾಗಿ ಶ್ರೀಲಂಕಾ ಅನುಭವಿಸುತ್ತಿರುವ ನಷ್ಟವನ್ನು ನೋಡಿ ನಾವು ಪಾಠ ಕಲಿಯಬೇಕಾಗಿದೆ. ರಾಷ್ಟ್ರದ ಭಾವೈಕ್ಯತೆ ಎಷ್ಟು ಮುಖ್ಯ ಎಂಬುದನ್ನು ನಾವು ಮನವರಿಕೆ ಮಾಡಿಕೊಳ್ಳಬೇಕಾದರೆ ಶ್ರೀಲಂಕಾದ ಪರಿಸ್ಥಿತಿಯನ್ನು ನೋಡಬೇಕು. ಇದರ ಜೊತೆಗೆ ಶ್ರೀಲಂಕಾ ಭಾರತಕ್ಕೆ ತುಂಬಾ ಹತ್ತಿರವಿರುವ ದ್ವೀಪ. ಅಲ್ಲಿ ಬೇರೆ ಪ್ರಬಲ ರಾಷ್ಟ್ರಗಳು ತಮ್ಮ ನೆಲೆಯನ್ನು ಮಾಡಿಕೊಂಡರೆ ಭಾರತ ಎಲ್ಲಿಗೆ ಹೋಗಬೇಕು? ಇದನ್ನು ಯೋಚಿಸಿಯೇ ಪ್ರಧಾನಿ ರಾಜೀವ್‌ಗಾಂಧಿ ಶ್ರೀಲಂಕಾಕ್ಕೆ ಸಹಾಯ ಹಸ್ತ ಚಾಚಿದರು. ಆದರೆ ನಮ್ಮ ಜನ ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಕಾರಣ ಮಾನಸಿಕವಾಗಿ ಅವರಿಗೆ ತುಂಬಾ ಹಿಂಸೆಯಾಯಿತು.

***– ಜಪಾನ್ ದೇಶದ ಕೃಷಿ ಕ್ಷೇತ್ರವನ್ನು ನಾವು ಮಾದರಿಯಾಗಿ ಇಟ್ಟುಕೊಳ್ಳಬಹುದೆ?***

ಖಂಡಿತವಾಗಿ ಜಪಾನ್ ದೇಶದ ಕೃಷಿ ನಮಗೆ ಮಾದರಿ ಆಗಬಲ್ಲದು. ಆ ದೇಶಕ್ಕೆ ನಾನು ಆರೇಳು ಸಲ ಭೇಟಿ ಕೊಟ್ಟಿರಬಹುದು. ಅಲ್ಲಿನ ರೈತರು ಕ್ಯಾಲೆಂಡರ್ ಆಫ್ ಇವೆಂಟ್ಸ್ ಇಟ್ಟುಕೊಂಡು ಕೃಷಿ ಚಟುವಟಿಕೆಯನ್ನು ಮಾಡುತ್ತಾರೆ. ಪ್ರತಿಯೊಬ್ಬ ರೈತನೂ ಕೂಡ ತಾನು ಸಮುದಾಯದ ಭಾಗ ಎಂಬಂತೆ ಯೋಚಿಸುತ್ತಾನೆ. ಹೊಸ ಸಂಶೋಧನೆಗಳು ಪ್ರಕಟವಾದಾಗ ತುಂಬಾ ಆಸಕ್ತಿಯಿಂದ ಅದನ್ನು ಅಳವಡಿಸಿಕೊಂಡು ಅದರ ಪ್ರತಿಫಲವನ್ನು ಎಲ್ಲರಿಗೂ ತಿಳಿ ಹೇಳುತ್ತಾನೆ. ಅನೇಕರು ಹೇಳುವ ಮಾತೊಂದು ಹೀಗಿದೆ: ನಾವು ಬ್ರಹ್ಮಾಂಡ, ಅಂದರೆ ಆಕಾಶ ನೋಡುತ್ತೇವೆ; ಅವರು ಭೂಮಿ ನೋಡುತ್ತಾರೆ. ಅಂದರೆ, ವಾಸ್ತವಿಕ ಪ್ರಜ್ಞೆಯಿಂದ ಅವರು ಕೃಷಿ ಕ್ಷೇತ್ರವನ್ನು ವಿಸ್ತಾರಗೊಳಿಸಿ ಲಾಭದಾಯಕವಾಗಿ ಮಾಡಿಕೊಂಡಿದ್ದಾರೆ. ವಿಶೇಷವಾಗಿ ಮಧ್ಯಮ ವರ್ಗ ಮತ್ತು ಜನಸಾಮಾನ್ಯರಲ್ಲಿ ದೇಶಪ್ರೇಮ ನಮಗಿಂತ ಹೆಚ್ಚೆಂಬಂತೆ ಕಾಣುತ್ತದೆ. ನಾಗರಿಕ ಜೀವನಕ್ಕೆ ಬೇಕಾದ ಶಿಸ್ತು ಅಲ್ಲಿ ಎಲ್ಲರಲ್ಲೂ ಇದೆ. ಸಮುದಾಯದ ಬೆಳವಣಿಗೆಯಲ್ಲಿ ವೈಯಕ್ತಿಕ ಪ್ರತಿಷ್ಠೆ ಬರದಂತೆ ನೋಡಿಕೊಂಡ ಹಿರಿಮೆ ಆ ದೇಶದ್ದು.

***– ಅಮೇರಿಕಾ, ಇಂಗ್ಲೆಂಡ್, ಕೆನಡಾ ರಾಷ್ಟ್ರಗಳಲ್ಲಿ ಕೃಷಿಗೆ ಸಹಾಯಧನ ಕೊಡುವ ಪದ್ಧತಿ ಇದೆಯೇ? ಅಲ್ಲಿನ ರೈತರಿಗೂ, ಇಲ್ಲಿನ ರೈತರಿಗೂ ಆಂತರಿಕವಾಗಿ ವ್ಯತ್ಯಾಸ ಇದೆಯೇ?***

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೃಷಿಗೆ ನಮಗಿಂತ ಹೆಚ್ಚಾಗಿ ಸಹಾಯಧನ ಕೊಡುವ ಪದ್ಧತಿ ಇದೆ. ಅದೇ ರೀತಿ ಸೌಲಭ್ಯವನ್ನು ಕಲ್ಪಿಸಿಕೊಡುವ ದಿಸೆಯಲ್ಲಿ ಈ ರಾಷ್ಟ್ರಗಳು ಹೆಮ್ಮೆ ಎನಿಸುವ ಸಾಧನೆ ಮಾಡಿವೆ. ಅಲ್ಲಿನ ರೈತ ಬೆಳೆಯುವ ಆಹಾರ ಪದಾರ್ಥ ಅಥವಾ ತರಕಾರಿಯನ್ನು ಮಾರುಕಟ್ಟೆಗೆ ಸಾಗಿಸಲು ಶ್ರಮವೇ ಪಡಬೇಕಾಗಿಲ್ಲ. ರೈತನ ಫಾರಂ ಹೌಸ್ ತನಕ ಸುಸಜ್ಜಿತವಾದ ರಸ್ತೆ ಇರುತ್ತದೆ. ಆತ ಟ್ರ್ಯಾಕ್ಟರ್ ಮೊದಲಾದ ಉಪಕರಣಗಳನ್ನು ಕೊಳ್ಳಬೇಕಾದರೆ ಕಛೇರಿಯಿಂದ ಕಛೇರಿಗೆ ಅಲೆಯಬೇಕಾಗಿಲ್ಲ. ಸಾಲ ಪಡೆಯುವುದಕ್ಕಾಗಿ ಸಂಬಂಧಪಟ್ಟವರಿಗೆ ಕಾಣಿಕೆ ಅರ್ಪಿಸಬೇಕಾಗಿಲ್ಲ. ಒಂದು ಅರ್ಜಿಯನ್ನು ಬರೆದು ಹಾಕಿದರೆ, ಸಂಬಂಧಪಟ್ಟ ಕಂಪನಿಗಳೇ ರೈತನ ಮನೆ ಬಾಗಿಲಿಗೆ ಬರುತ್ತವೆ. ೫೦೦೦ ರೂಪಾಯಿ ಸಾಲ ಪಡೆಯಬೇಕಾದರೆ ನಮ್ಮ ರೈತ ಇಲ್ಲಿ ಬಹಳ ಕಷ್ಟಪಡಬೇಕು. ಅವನು ಬೆಳೆದ ಬೆಳೆಯನ್ನು ಬೆಂಗಳೂರಿಗೋ ಅಥವಾ ತಾಲ್ಲೂಕು ಕೇಂದ್ರಕ್ಕೋ ತರಬೇಕಾದರೆ ಆತ ಪಡುವ ಪಾಡೆಷ್ಟು ಎಂಬುದನ್ನು ನೆನೆದಾಗ ನಾವುಗಳು ರೈತನಿಗೆ ಉಪಯೋಗವಾಗುವಂತಹ ಯೋಜನೆಗಳನ್ನು ಅನುಷ್ಠಾನ ಮಾಡಿಲ್ಲ ಎಂದು ವಿಷಾದದಿಂದ ಹೇಳಬೇಕು. ನಮ್ಮ ಅಧಿಕಾರ ವರ್ಗ ಯಾವಾಗಲೂ ನಕಾರಾತ್ಮಕ ಧೋರಣೆಯನ್ನೇ ಪ್ರದರ್ಶಿಸುತ್ತದೆ. ರೈತ, ಮಳೆ ಬಂದ ತಕ್ಷಣ ಸಾಲಕ್ಕೆ ಸಹಕಾರಿ ಬ್ಯಾಂಕುಗಳಿಗೆ ಅರ್ಜಿ ಹಾಕಿದರೆ, ಅವರು ಕಟಾವು ಸಮಯಕ್ಕೆ

ಸಾಲ ಮಂಜೂರು ಮಾಡುತ್ತಾರೆ. ಆಗ ರೈತ ಸಾಲ ಪಡೆದು ತನ್ನ ಇತರ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಾನೆ. ಸಾಲ ಕೊಟ್ಟಿದ್ದು ಮಾತ್ರ ನಮಗೆ ನೆನಪಿರುತ್ತದೆ. ಆದರೆ, ಅದರ ಉಪಯೋಗವಾಗಿಲ್ಲ ಎನ್ನುವ ಅಂಶ ನಮ್ಮ ತಿಳುವಳಿಕೆಗೆ ಬರುವುದಿಲ್ಲ. ಹೊರ ರಾಷ್ಟ್ರಗಳಲ್ಲಿ ಕೆಳಸ್ತರದಲ್ಲಿ ಭ್ರಷ್ಟಾಚಾರ ಅಪರೂಪ. ನಮ್ಮಲ್ಲಿ ಕೆಳಸ್ತರದಲ್ಲೇ ಭ್ರಷ್ಟಾಚಾರವಿರುವ ಕಾರಣ ಜನಸಾಮಾನ್ಯರ ಬದುಕು ತುಂಬಾ ಚಿಂತಾಜನಕ ಸ್ಥಿತಿಯಲ್ಲಿದೆ.

***- ತಮ್ಮ ಯುರೋಪ್ ಪ್ರವಾಸದಲ್ಲಿ ಗುರುತಿಸಬೇಕಾದ ರಾಷ್ಟ್ರಗಳು ಯಾವುವು?***

ನನ್ನ ಮೇಲೆ ವಿಶೇಷವಾಗಿ ಪ್ರಭಾವ ಬೀರಿದ ರಾಷ್ಟ್ರವೆಂದರೆ ನೆದರ್‌ಲ್ಯಾಂಡ್. ಈ ರಾಷ್ಟ್ರದ ಆರ್ಥಿಕ ಸ್ಥಿತಿಯಲ್ಲಿ ಹೈನುಗಾರಿಕೆ ತುಂಬಾ ಮುಖ್ಯ ಪಾತ್ರ ವಹಿಸಿದೆ. ಕೃಷಿಯಿಂದ ಬರುವಷ್ಟು ಆದಾಯ ಹೈನುಗಾರಿಕೆಯಿಂದ ಕೂಡ ಬರುತ್ತದೆ. ಡಾ. ಕುರಿಯನ್‌ರವರ ದುಡಿಮೆಯಿಂದಾಗಿ ಭಾರತದಲ್ಲೂ ಹೈನುಗಾರಿಕೆ ಉತ್ತಮ ಸ್ಥಿತಿಯಲ್ಲಿದೆ. ಅಂತಾರಾಷ್ಟ್ರ ಮಟ್ಟದಲ್ಲಿ ನಾವು ಪ್ರಥಮ ಸ್ಥಾನದಲ್ಲಿದ್ದೇವೆ. ಆದರೂ, ಹೊಸ ಸವಾಲಿಗೆ ಉತ್ತರ ಕೊಡುವಷ್ಟು ನಮ್ಮ ಹೈನುಗಾರಿಕೆ ಬೆಳೆದಿಲ್ಲ. ಇದನ್ನು ಮತ್ತಷ್ಟು ಸಮೃದ್ಧಗೊಳಿಸಲು ಗ್ರಾಮೀಣ ಅಭಿವೃದ್ಧಿಯಲ್ಲಿ ಆಸಕ್ತಿ ಇರುವ ಎಲ್ಲಾ ಚಿಂತಕರು ಒಟ್ಟಿಗೆ ದುಡಿಯುವುದು ಇಂದಿನ ಅಗತ್ಯವಾಗಿದೆ.

***- ಭಾರತದ ಆರ್ಥಿಕತೆ ಸರಿಯಾದ ದಿಕ್ಕಿನಲ್ಲಿ ಸಾಗುತ್ತಿದೆಯೇ? ಗ್ರಾಮೀಣ ಅಭಿವೃದ್ಧಿಯನ್ನು ನಾವು ಅಸಡ್ಡೆ ಮಾಡಿದ್ದೇವೆಯೇ?***

ಸ್ವಾತಂತ್ರ್ಯ ಪೂರ್ವದಿಂದಲೂ ನಾವು ಹಳ್ಳಿಯ ಅಭಿವೃದ್ಧಿಗೆ ಸಾಕಷ್ಟು ಗಮನಕೊಟ್ಟಿಲ್ಲ ಎಂಬುದು ಐತಿಹಾಸಿಕ ಸತ್ಯ. ಹಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು ನಮ್ಮ ಆರ್ಥಿಕ ಕ್ಷೇತ್ರವನ್ನು ಚಿಂತಿಸಬೇಕಾಗಿದೆ. ನೆಹರುರವರು ಸಮಾಜವಾದದ ಪ್ರೇರಣೆಯಿಂದ ಬೃಹತ್ ಕೈಗಾರಿಕೆಗಳತ್ತ ಗಮನಕೊಟ್ಟರು. ಅದರಲ್ಲಿ ತಪ್ಪೇನಿಲ್ಲ. ಅಲ್ಲೂ ಕೂಡ ಸಾಕಷ್ಟು ಉದ್ಯೋಗ ಸೃಷ್ಟಿಯಾಯಿತು. ಆದರೆ ನಾವು ಅದರ ಜೊತೆಗೆ ಹಳ್ಳಿಗಳನ್ನು ಮರೆಯಬಾರದಾಗಿತ್ತು. ನಮ್ಮ ಇಂದಿನ ಎಲ್ಲಾ ಕಾರ್ಯಕ್ರಮಗಳು ನಗರಕೇಂದ್ರಿತವಾಗಿವೆ. ನಗರದ ಜನರ ಮೂಲಭೂತ ಅವಶ್ಯಕತೆಗೆ ನಾವು ಗಮನಕೊಟ್ಟಷ್ಟು ಹಳ್ಳಿಗಳಿಗೆ ಗಮನ ಕೊಡುತ್ತಿಲ್ಲ. ಭಾರತದ ೫ ಲಕ್ಷ ಹಳ್ಳಿಗಳು ಇಂದು ಅನಾಥ ಸ್ಥಿತಿಯಲ್ಲಿವೆ. ಅಲ್ಲಿನ ಜನಕ್ಕೆ ಚೇತೋಹಾರಿಯಾದ ಬದುಕಿಲ್ಲ. ಗ್ರಾಮೀಣ ಭಾರತದ ಆರ್ಥಿಕಸ್ಥಿತಿಯನ್ನು ಸುಧಾರಿಸಲು ದೃಢ ಪ್ರಯತ್ನಗಳನ್ನು ಮಾಡದೇ ಹೋದರೆ ನಗರ ಹಾಗೂ ಹಳ್ಳಿಗಳ ನಡುವಿನ ಕಂದರ ಹೆಚ್ಚಾಗುತ್ತಾ ಹೋಗುತ್ತದೆ. ಇಂತಹ ಕಂದರ ಅನೇಕ ಹೊಸ ಸಮಸ್ಯೆಗಳನ್ನು ಸೃಷ್ಟಿಸಲೂಬಹುದು.

***- ತಮ್ಮ ೭೫ ವರ್ಷಗಳ ಈ ಬದುಕಿನ ಮೇಲೆ ಗಾಢ ಪ್ರಭಾವ ಬೀರಿದ ಚೇತನಗಳಾವುವು?***

ಮನುಷ್ಯ ಸಂಘಜೀವಿ. ಆತನ ಮೇಲೆ ಎಲ್ಲಾ ರೀತಿಯ ಪ್ರಭಾವಗಳು ಬೀಳುತ್ತವೆ. ಅಂತಹ ಪ್ರಭಾವಗಳನ್ನು ಅರಗಿಸಿಕೊಂಡು ಬೆಳೆಯುತ್ತಾ ಹೋದರೆ ಆತ ಪರಿಪಕ್ವತೆಯತ್ತ

ಸಾಗುತ್ತಾನೆ. ನನ್ನ ಮೇಲೆ ಬಾಲ್ಯದಲ್ಲಿ ನಮ್ಮ ತಾತ ಮುದ್ದಮಲ್ಲಶೆಟ್ಟರು ಗಾಢವಾದ ಪ್ರಭಾವ ಬೀರಿದ್ದರು. ಗುರುಹಿರಿಯರಲ್ಲಿ ಭಕ್ತಿ ಮೂಡಲು ನನ್ನ ತಂದೆಯವರು ಕಾರಣಕರ್ತರು ಎಂದು ಹೇಳಬಹುದು. ನಮ್ಮ ತಾಯಿ ಬಸಮ್ಮನವರಂತೂ ನನ್ನಲ್ಲಿ ಮಾನವೀಯ ಗುಣಗಳು ಸ್ಫುರಿಸಲು ಪ್ರೇರಕರಾದರು. ಸೋದರ ಮಾವ ವೀರಭದ್ರಯ್ಯ ಮತ್ತಿತರರು ನನ್ನನ್ನು ಕರುಣೆಯಿಂದ ಬೆಳೆಸಿದ್ದಾರೆ. ದೇಗುಲಮಠದ ಶ್ರೀಗಳು, ಗಾಂಧೀ ವಿಚಾರವಾದಿ ಎಸ್.ಕರಿಯಪ್ಪ, ಕಾಲೇಜಿನಲ್ಲಿ ಪಾಠ ಮಾಡುತ್ತಿದ್ದ ಡಿಸೋಜಾ, ಪ್ರೊ। ಸಿ.ಡಿ.ಎನ್. ಮೊದಲಾದವರನ್ನು ಮರೆಯುವಂತಿಲ್ಲ. ಹೆಚ್.ಸಿ.ದಾಸಪ್ಪ ದಂಪತಿಗಳಂತೂ ನನ್ನನ್ನು ತಮ್ಮ ಮಗ ತುಳಸಿಯಂತೆ ನೋಡಿಕೊಂಡಿದ್ದಾರೆ. ನನಗೆ ಹೆಣ್ಣು ಕೊಟ್ಟ ನಿಜಲಿಂಗಪ್ಪನವರನ್ನಂತೂ ಮರೆಯುವ ಹಾಗಿಲ್ಲ. ಅವರ ವ್ಯಕ್ತಿತ್ವದ ಅನೇಕ ಗುಣಗಳು ನನ್ನನ್ನು ರೂಪಿಸಿವೆ. ವಿಶೇಷವಾಗಿ ನಿಜಲಿಂಗಪ್ಪನವರ ಸರಳತೆ, ಪ್ರಾಮಾಣಿಕತೆ, ತಾತ್ವಿಕ ಸಿದ್ಧಾಂತಕ್ಕಾಗಿ ಅಧಿಕಾರ ತ್ಯಾಗದ ಗುಣ-ಇವು ನನಗೆ ಆದರ್ಶವಾಗಿವೆ. ನನ್ನ ವ್ಯಕ್ತಿತ್ವ ಗಟ್ಟಿಯಾಗಲು ಇವುಗಳು ನನಗೆ ಸಹಾಯಕವಾಗಿವೆ.

ಈ ಸಂದರ್ಭದಲ್ಲಿ ನಾನು ನೆನೆಯಬೇಕಾದ ಮತ್ತೊಂದು ಚೇತನವೆಂದರೆ ಸುತ್ತೂರು ಜಗದ್ಗುರು ಲಿಂಗೈಕ್ಯ ಪೂಜ್ಯ ಡಾ। ಶಿವರಾತ್ರಿ ರಾಜೇಂದ್ರ ಸ್ವಾಮಿಗಳು. ನನ್ನ ತಂದೆಯವರ ಸ್ನೇಹಿತರಾಗಿದ್ದ ತಹಶೀಲ್ದಾರ್ ಮುರಿಗೇಂದ್ರಸ್ವಾಮಿ ಅವರ ಸಲಹೆ ಮೇಲೆ ನಾನು ಕಾಲೇಜು ಶಿಕ್ಷಣಕ್ಕೆ ಮೈಸೂರಿಗೆ ಹೋದಾಗ ಮೊದಲು ಉಳಿದದ್ದು ಆನೇಕಲ್ಲಿನ ಪೋಲಿಸ್ ಪುಟ್ಟಪ್ಪನವರ ಮನೆಯಲ್ಲಿ. ನಂತರ ಪೂಜ್ಯ ಸುತ್ತೂರು ಸ್ವಾಮೀಜಿ ಅವರ ಮಾತೃ ಹೃದಯದ ದಿವ್ಯದರ್ಶನವಾದಂತಾಯಿತು. ಆಗ ಘನ ವಿದ್ವಾಂಸರೂ, ದಾರ್ಶನಿಕರೂ ಆದ ಪೂಜ್ಯ ಗೌರಿಶಂಕರ ಸ್ವಾಮಿಗಳಿದ್ದರು. ಅವರೂ ಅಷ್ಟೆ. ಎಷ್ಟೋ ಸಲ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ತಾವೇ ಊಟಕ್ಕೆ ನೀಡುತ್ತಿದ್ದುದು ನನಗಿನ್ನೂ ನೆನಪಿದೆ. ಸುತ್ತೂರು ಮಠವಂತೂ ನನ್ನಂತಹ ಸಾವಿರಾರು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿರುವ ಮಹಾಸಂಸ್ಥೆ. ನಾನು ಅಲ್ಲಿದ್ದಾಗ ಶ್ರೀ ಮಠದ ಈಗಿನ ಜಗದ್ಗುರುಗಳಾದ ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮೀಜಿ ಅವರ ಪೂರ್ವಾಶ್ರಮದ ತಂದೆ ಶ್ರೀ ಪ್ರಭುಸ್ವಾಮಿಗಳ ಪರಿಚಯವೂ ಆಯಿತು.

*- ತಾವು ವಿವಾಹವಾಗಿ ೫೦ ವರ್ಷಗಳು ಸಮೀಪಿಸುತ್ತಿವೆ. ಇಂತಹ ಸಂದರ್ಭದಲ್ಲಿ ನಿಮ್ಮ ದಾಂಪತ್ಯ ಜೀವನದ ಸವಿನೆನಪು ಹೇಗಿದೆ?*

ಶ್ರೇಷ್ಠ ವ್ಯಕ್ತಿಯ ಹಿಂದೆ ಗೃಹಿಣಿಯೊಬ್ಬಳ ತ್ಯಾಗ ಅಡಗಿದೆ ಎಂಬುದು ಲೋಕೋಕ್ತಿ. ನನ್ನ ತಾಯಿ ಬಸಮ್ಮನವರು ನನ್ನಲ್ಲಿ ಕೆಲವು ಮಾನವೀಯ ಗುಣ ಬೆಳೆಯಲು ಕಾರಣೀಭೂತರಾಗಿದ್ದರು. ನನ್ನ ಮಡದಿ ಗಿರಿಜಾ, ನಾನು ಭ್ರಷ್ಟನಾಗದಂತೆ ಅಥವಾ ಅಪಖ್ಯಾತಿ ಪಡೆಯದಂತೆ ನನ್ನನ್ನು ರಕ್ಷಿಸುತ್ತಿದ್ದಾಳೆ. ಸುಮಾರು ೪೫ ವರ್ಷಗಳ ಸಾಂಸಾರಿಕ ಜೀವನದಲ್ಲಿ ಆಕೆ ಎಂದೂ ನನಗೆ ಅದು ಬೇಕು, ಇದು ಬೇಕು ಎಂದು ಕೇಳಿಲ್ಲ. ತಂದೆ ಮನೆಯಲ್ಲಿ ಕಲಿತ ಸರಳ ಜೀವನದ ಪಾಠವನ್ನು ಇಲ್ಲಿ ಆಕೆ ಅನುಸರಿಸುತ್ತಿದ್ದಾಳೆ. ಎಲ್ಲರೂ ಅನುಕರಣೆ ಮಾಡುವಷ್ಟು

ಗಟ್ಟಿ ವ್ಯಕ್ತಿತ್ವ ಆಕೆಯದು. ಅವಳು ಸಂತೃಪ್ತಿಯನ್ನು ಹೊಂದಿದ್ದ ಕಾರಣದಿಂದಲೇ ನಾನು ಹತ್ತು-ಹಲವು ದೇಶ ಸುತ್ತಲು ಸಾಧ್ಯವಾಯಿತು. ನನ್ನ ಎಲ್ಲಾ ಸಮಯವನ್ನು ಸಾರ್ವಜನಿಕ ಕ್ಷೇತ್ರಕ್ಕೆ ಧಾರೆ ಎರೆಯಲು ಸಾಧ್ಯವಾಯಿತು.

*– ಗಂಡು ಮಕ್ಕಳು, ಹೆಣ್ಣು ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳಿಂದಾಗಿ ತಮ್ಮ ಜೀವನ ಸಂತೃಪ್ತಿಯನ್ನು ಕಂಡಿದೆಯೇ?*

ಖಂಡಿತ. ನನ್ನ ಗಂಡು ಮಕ್ಕಳಾಗಲಿ, ಹೆಣ್ಣು ಮಕ್ಕಳಾಗಲಿ ನನ್ನಿಂದ ಏನನ್ನೂ ಅಪೇಕ್ಷಿಸಿಲ್ಲ. ಈ ಸಂದರ್ಭದಲ್ಲಿ ನನ್ನ ತಮ್ಮ ಕೀರ್ತಿಹಾಸನ್ ಹಾಗೂ ಅವನ ಪತ್ನಿಯನ್ನೂ ನೆನೆಯಬೇಕು. ಎಷ್ಟೋ ಸಂದರ್ಭದಲ್ಲಿ ನನ್ನ ಹೊಣೆಗಾರಿಕೆಯನ್ನು ಆತ ವಹಿಸಿಕೊಂಡು ಅದರಲ್ಲಿ ಯಶಸ್ವಿಯಾಗಿದ್ದಾನೆ. ಅವನ ಮಗ ಜಯಶಂಕರ್ ಕೂಡ ಅಷ್ಟೇ ಬದ್ಧತೆಯಿಂದ ನನ್ನ ಜೊತೆ ದುಡಿಯುತ್ತಿದ್ದಾನೆ. ನಾನು ಹೇಗೆ ನಮ್ಮ ತಂದೆಗೆ ವಿಧೇಯನಾಗಿದ್ದೆನೋ, ಅದೇ ರೀತಿ ನನ್ನ ಮಕ್ಕಳು ಕೂಡ ನನ್ನೊಡನಿದ್ದಾರೆ. ಎಲ್ಲಾ ಸರಿಯಿದ್ದ ವ್ಯಕ್ತಿಗೆ ಯಾವುದಾದರೂ ಒಂದು ಕೊರತೆ ಇರುವಂತೆ, ನನ್ನ ಮೊದಲನೇ ಮಗಳ ಬಾಳು ಸಂಕಷ್ಟದಲ್ಲಿದೆ. ನಮ್ಮ ಕುಟುಂಬದ ಘನತೆಗೆ ಒಂದಿಷ್ಟೂ ಸರಿಹೊಂದದ ಅಳಿಯನಿಂದಾಗಿ ನಾವು ನಿರಂತರವಾಗಿ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದೇವೆ.

*– ದೇವರ ಬಗ್ಗೆ ತಮ್ಮ ನಂಬಿಕೆ ಎಂಥದ್ದು? ತಾವು ಪ್ರತಿನಿತ್ಯ ದೇವರ ಪೂಜೆ ಮಾಡುತ್ತೀರಾ?*

ನಮ್ಮ ತಾತನವರಿಂದಾಗಿ ನನಗೆ ದೈವಶ್ರದ್ಧೆ ಬಾಲ್ಯದಿಂದಲೇ ಬೆಳೆದುಬಂದಿದೆ. ವಿದೇಶಗಳಿಗೆ ಹೋದಾಗಲೂ ಕೂಡ ನಾನು ಒಂದಿಷ್ಟು ಹೊತ್ತು ಧ್ಯಾನ ಮಾಡುತ್ತೇನೆ. ಬೆಳಗ್ಗೆ, ಸಂಜೆ ದೇವರನ್ನು ಪೂಜಿಸುವುದನ್ನು ರೂಢಿ ಮಾಡಿಕೊಂಡಿರುವ ನನಗೆ, ಅದರಿಂದಾಗಿ ಮಾನಸಿಕ ಶಾಂತಿ ದೊರಕಿದೆ. ದೇವರು ಎಂಬುದು ಸಂಕೇತ ಮಾತ್ರ. ನಮ್ಮ ಮನಸ್ಸಿನ ಭಾವನೆಗಳನ್ನು ಅದುಮಿಟ್ಟುಕೊಳ್ಳಲು, ನಮ್ಮಲ್ಲಿ ಸಂಯಮವನ್ನು ರೂಢಿಸಿಕೊಳ್ಳಲು, ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳಲು ದೇವರು ಅಗತ್ಯ ಎಂಬುದು ನನ್ನ ಖಚಿತ ಅಭಿಪ್ರಾಯ.

*– ಯಾರಿಗಾದರೂ ಕೃತಜ್ಞತೆ ಹೇಳುವ ಸಂದರ್ಭ ಒದಗಿದರೆ ತಾವು ಯಾರನ್ನು ನೆನೆಯುತ್ತೀರಿ?*

ಇಡೀ ಕರ್ನಾಟಕದ ಜನ ನನ್ನನ್ನು ಹರಸಿ ಆಶೀರ್ವದಿಸಿದ್ದಾರೆ. ಕನಕಪುರ, ಉತ್ತರಹಳ್ಳಿ ಮತದಾರರು ನನಗೆ ರಾಜಕೀಯ ಶಕ್ತಿಯನ್ನು ಕೊಟ್ಟಿದ್ದಾರೆ. ಇಂದಿರಾಗಾಂಧಿ ಅವರಿಂದ ಹಿಡಿದು ಪ್ರಸ್ತುತ ಕಾಂಗ್ರೆಸ್ ಅಧ್ಯಕ್ಷರಾಗಿರುವ ಸೋನಿಯಾ ಗಾಂಧಿಯವರ ತನಕ ಅನೇಕ ನಾಯಕರು ನನ್ನನ್ನು ಆದರಿಸಿ ಮನ್ನಣೆ ನೀಡಿದ್ದಾರೆ. ಪೂಜ್ಯ ಹೆಚ್.ಸಿ.ದಾಸಪ್ಪ ದಂಪತಿಗಳು, ಎಂ.ವಿ.ಕೃಷ್ಣಪ್ಪ, ಎಂ.ಎಸ್.ಗುರುಪಾದಸ್ವಾಮಿ, ಶ್ರೀಮತಿ ಇಂದಿರಾಗಾಂಧಿ, ಅರ್ಜುನ್ ಸಿಂಗ್, ಎನ್.ಡಿ.ತಿವಾರಿ, ದಿನೇಶ್‌ಸಿಂಗ್, ಎಸ್.ಎಂ.ಕೃಷ್ಣ ಮೊದಲಾದವರು ಕಾಲ

ಕಾಲಕ್ಕೆ ನನಗೆ ಆಪ್ತ ನೆರವು ನೀಡಿದ್ದಾರೆ. ಹೀಗೆ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು. ಆದರೆ ನನ್ನ ಉದ್ದೇಶ ಇಷ್ಟೆ - ನಾನೇನಾದರೂ ಒಳ್ಳೆಯ ಕೆಲಸ ಅಥವಾ ಒಳ್ಳೆಯ ಚಿಂತನೆ ಮಾಡಿದ್ದರೆ, ಅದಕ್ಕೆ ಕಾರಣಕರ್ತರು ಈ ಮಹನೀಯರುಗಳು ಎಂಬುದನ್ನು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

***– ತಮ್ಮ ಸಾತ್ವಿಕ ಬದುಕಿನಲ್ಲಿ ಸದಾ ಸನ್ನಡತೆಯನ್ನೇ ಮೆಚ್ಚಿಕೊಂಡಿರುವಿರಿ. ಜೀವನದಲ್ಲಿ ಮೌಲ್ಯಪಾಲನೆಗೆ ಹಿರಿದಾದ ಅರ್ಥ ಕೊಟ್ಟದ್ದೀರಿ. ತಮ್ಮಂಥ ಹಿರಿಯ ಚೇತನಗಳು ಹೇಳುವ ಮಾತಿಗೆ ತುಂಬಾ ಬೆಲೆ ಇದೆ. ಈ ಕಾರಣಕ್ಕಾಗಿ ತಾವು ಕನ್ನಡನಾಡಿಗೆ ನೀಡುವ ಸಂದೇಶ  ಯಾವುದು?***

ನಾನು ಸಂದೇಶ ಕೊಡುವಷ್ಟು ದೊಡ್ಡ ವ್ಯಕ್ತಿ ಅಲ್ಲ. ನಮ್ಮ ತಂದೆ-ತಾಯಿಗಳ ಹಾಗೂ ಗುರು-ಹಿರಿಯರ ಕೃಪಾಶೀರ್ವಾದದಿಂದ ನನ್ನಲ್ಲಿ ಒಂದಿಷ್ಟು ಸದ್ಗುಣಗಳನ್ನು ತಾವು ಗುರುತಿಸಿರುವಿರಿ. ಆ ಹಿನ್ನೆಲೆಯಲ್ಲಿ ನಾನು ಹೇಳುವುದಾದರೆ, ಕರ್ನಾಟಕದಲ್ಲಿ ದೇವರ ಕೃಪೆಯಿಂದ ಎಲ್ಲಾ ನೈಸರ್ಗಿಕ ಸಂಪನ್ಮೂಲಗಳಿವೆ. ಇವನ್ನು ಸಮರ್ಥವಾಗಿ ಬಳಸಿಕೊಳ್ಳುವ ದೃಢ ಸಂಕಲ್ಪ ನಮಗೆ ಬೇಕಾಗಿದೆ. ಇಲ್ಲಿನ ಜನ ನಿಜಕ್ಕೂ ಉತ್ತಮ ನಾಗರಿಕರು. ಸಾಂಸ್ಕೃತಿಕ ವಿಚಾರಗಳಲ್ಲಿ ಮೇಲ್ಮಟ್ಟದ ಪ್ರಜ್ಞೆಯುಳ್ಳವರು. ಆದರೆ, ರಾಷ್ಟ್ರ ಕಟ್ಟಲು ಬೇಕಾದ ಶಿಸ್ತಿನ ಅಭಾವ ನಮ್ಮಲ್ಲಿ ಎದ್ದು ಕಾಣುತ್ತಿದೆ. ಮಹತ್ವದ ಗುರಿಗೆ ತಮ್ಮನ್ನು ತಾವೇ ಅರ್ಪಿಸಿಕೊಂಡು, ರಾಷ್ಟ್ರಪ್ರೇಮವನ್ನು ಮೈಗೂಡಿಸಿಕೊಂಡು ದುಡಿಯುವವರು ಕಡಿಮೆ ಎನಿಸಿದ್ದಾರೆ. ವೈಯಕ್ತಿಕ ಪ್ರತಿಷ್ಠೆ, ದ್ವೇಷ ಅಥವಾ ಸ್ವಾರ್ಥದಿಂದ ನಾವು ಏನನ್ನೂ ಸಾಧಿಸಲು ಸಾಧ್ಯವಾಗುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಅಭಿಮಾನಶೂನ್ಯರಾಗಿ ಬಾಳುತ್ತಿದ್ದೇವೆ. ವ್ಯಕ್ತಿಗಿಂತ ರಾಷ್ಟ್ರ ದೊಡ್ಡದು. ನಮ್ಮೆಲ್ಲ ಭವ್ಯ ಪರಂಪರೆಗೆ, ಅದರ ಘನತೆಗೆ ತಕ್ಕಂತೆ ಬಾಳುವುದು ನಮ್ಮೆಲ್ಲರ ಕರ್ತವ್ಯ ಎಂಬುದನ್ನು ನಾವು ದೃಢಪಡಿಸಿಕೊಳ್ಳಬೇಕು. ಸಮೂಹ ಹಿತದ ಪ್ರಜ್ಞೆ ಎಲ್ಲಾ ವ್ಯಕ್ತಿಗಳಲ್ಲಿ ಜಾಗೃತವಾಗಬೇಕು ಎಂಬುದು ನನ್ನ ಆಸೆ. ನಮ್ಮೆಲ್ಲರ ಅತ್ಯಂತ ಅಮೂಲ್ಯ ಆಸ್ತಿ ನಮ್ಮ ಯುವಕ ಸಮುದಾಯ. ಅವರಿಗೆ ಪ್ರೋತ್ಸಾಹ ಮತ್ತು ಜವಾಬ್ದಾರಿಗಳನ್ನು ಕೊಟ್ಟು ಮುಂದಿನ ದಶಕಗಳಲ್ಲಿ ಈ ಮಹಾನ್ ರಾಷ್ಟ್ರದ ಸರ್ವೋನ್ಮುಖ ಅಭಿವೃದ್ಧಿಗೆ ಅವರ ಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗಿದೆ.

❊ ❊ ❊

ರಾಜಶೇಖರನ್‌ರವರ ಜೊತೆ ಮಾತನಾಡುತ್ತಾ ಕುಳಿತರೆ ಸಮಯ ಹೋಗುವುದೇ ಗೊತ್ತಾಗುವುದಿಲ್ಲ. ರಾಜಕಾರಣದಲ್ಲಿದ್ದರೂ ವಿಶ್ವವಿದ್ಯಾನಿಲಯದ ಶ್ರೇಷ್ಠ ಪ್ರಾಧ್ಯಾಪಕರಂತೆ ಅಧ್ಯಯನ, ಬರಹ ಹಾಗೂ ವಿಶ್ಲೇಷಣೆ ಮಾಡುವ ರಾಜಶೇಖರನ್ ನಮ್ಮ ಸಾರ್ವಜನಿಕ ಜೀವನದಲ್ಲಿ ಅಪರೂಪದ ವ್ಯಕ್ತಿಗಳಾಗಿದ್ದಾರೆ. ಸ್ನೇಹಶೀಲತೆಗೆ, ಸಜ್ಜನಿಕೆಗೆ ಹಾಗೂ ಕ್ರಿಯಾಶೀಲತೆಗೆ ಹೆಸರಾದ ರಾಜಶೇಖರನ್ ನೂರು ವರ್ಷಗಳ ಕಾಲ ನಮ್ಮೊಂದಿಗೆ ಬಾಳಿ ನಮ್ಮ ಜನಮನದಲ್ಲಿ ಶಾಶ್ವತವಾಗಿ ನೆಲೆಸಲಿ ಎಂದು ಹಾರೈಸುತ್ತೇವೆ.

❊❊❊

# ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ

ಬಿ.ಎನ್. ಸತ್ಯನಾರಾಯಣ

ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಜನಕರಾದ ಶ್ರೀ ಎಂ.ವಿ.ರಾಜಶೇಖರನ್ ಅವರಿಗೆ ಎಪ್ಪತ್ತೈದನೇ ಹುಟ್ಟುಹಬ್ಬ ಸಮಾರಂಭ ನಡೆಯುತ್ತಿದೆ. ಅಂತಹ ಶುಭ ಸಂದರ್ಭದಲ್ಲಿ ಅದನ್ನು ಕಟ್ಟಿ ಬೆಳೆಸಲು ಅವರು ಪಟ್ಟ ಶ್ರಮವನ್ನು ನೆನಪಿಸಿಕೊಳ್ಳಬೇಕಾದುದು ನಮ್ಮೆಲ್ಲರ ಕರ್ತವ್ಯ. ಇದನ್ನು ಸ್ಥಾಪಿಸುವುದಕ್ಕೆ ಮುಂಚೆಯೂ ಅವರಿಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ತೀವ್ರವಾದ ಆಸಕ್ತಿಯಿದ್ದು ಅದಕ್ಕಾಗಿ ಹಗಲಿರುಳೂ ದುಡಿಯುತ್ತಿದ್ದರು. ಅನೇಕ ಸ್ನೇಹಿತರು ಈ ಹಿಂದೆ ಹೇಳಿರುವಂತೆ ಶ್ರೀ ರಾಜಶೇಖರನ್‌ರವರು ತಮ್ಮ ಕಾನೂನು ವಿದ್ಯಾಭ್ಯಾಸ ಕುಂಠಿತಗೊಂಡ ಮೇಲೆ ತಮ್ಮ ಹುಟ್ಟೂರಿಗೆ ಮರಳಿ ಕೃಷಿ ವೃತ್ತಿಯಲ್ಲಿ ತೊಡಗಿದರು. ಹಾಗೆಯೇ ಜನರ ಸಂಪರ್ಕ ಬೆಳೆಸಿಕೊಂಡು ಗ್ರಾಮೀಣ ಅಭಿವೃದ್ಧಿ ಬಗ್ಗೆ ಕೆಲಸ ಮಾಡುವುದಕ್ಕೆ ಅನೇಕ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮ್ಮೇಳನಗಳು, ವಿಚಾರಗೋಷ್ಠಿಗಳು, ದುಂಡು ಮೇಜು ಪರಿಷತ್ತುಗಳು ಮತ್ತು ತರಬೇತಿ ಕಾರ್ಯಕ್ರಮಗಳಲ್ಲಿ ಭಾರತವನ್ನು ಪ್ರತಿನಿಧಿಸಿದರು. ಇವುಗಳನ್ನು ವಿಶ್ವ ಆಹಾರ ಮತ್ತು ಕೃಷಿ ಸಂಸ್ಥೆ, ಕೃಷಿ ಉತ್ಪನ್ನಗಳ ಅಂತರರಾಷ್ಟ್ರೀಯ ಫೆಡರೇಷನ್ ಮುಂತಾದ ಸಂಸ್ಥೆಗಳು ವ್ಯವಸ್ಥೆಗೊಳಿಸುತ್ತಿದ್ದವು. ಇವು ವಿಶ್ವದ ಅನೇಕ ದೇಶಗಳಲ್ಲಿ ನಡೆಯುತ್ತಿದ್ದುದರಿಂದ ಇವರು ಆ ದೇಶಗಳಿಗೆ ಭೇಟಿ ಕೊಡುವ ಅವಕಾಶ ದೊರೆಯಿತು. ಅವರು ಈ ಭೇಟಿಗಳಿಂದ ಕೈಗೊಂಡ ತೀರ್ಮಾನವೆಂದರೆ ಭಾರತದಲ್ಲಿ ಮಾತ್ರವಲ್ಲದೆ ಏಷ್ಯಾದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಸಂಶೋಧನೆ, ತರಬೇತಿ, ಕ್ರಿಯಾತ್ಮಕ ಗುರಿಯಿರುವ ಯೋಜನೆಗಳ ಬಗ್ಗೆ ಒಂದು ಪ್ರಾದೇಶಿಕ ಸಂಸ್ಥೆಯನ್ನು ಸ್ಥಾಪಿಸುವ ಅಗತ್ಯವನ್ನು ಕಂಡುಕೊಂಡರು. ಈ ಯೋಜನೆಯನ್ನು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಣ್ಯವ್ಯಕ್ತಿಗಳ ಜೊತೆ ಹಂಚಿಕೊಂಡರು. ಈ ಯೋಜನೆಗೆ ಇಂಗ್ಲೆಂಡ್, ನೆದರ್‌ಲ್ಯಾಂಡ್ಸ್, ಫಿಲಿಪೈನ್ಸ್, ಕೆನಡಾ, ಚೀನಾ, ಪಶ್ಚಿಮ ಜರ್ಮನಿ, ಅಮೆರಿಕಾ ಮುಂತಾದ ಅನೇಕ ದೇಶಗಳಿಂದ ಪ್ರೋತ್ಸಾಹಕರವಾದ ಪತ್ರಗಳು ಬಂದವು. ಹಾಗಾಗಿ ಏಷ್ಯಾದ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯನ್ನು ಐಆರ್‌ಟಿ ೧೯೭೭ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. ಅದರ ಸ್ಥಾಪಕ ಟ್ರಸ್ಟಿಗಳು ಯಾರೆಂದರೆ :

೧) ಡಾ। ಎ.ಟಿ.ಅರಿಯಾರತ್ನೆ, ಅಧ್ಯಕ್ಷ, ಸರ್ವೋದಯ ಶ್ರಮದಾನ ಸಂಗಮ್ಮ, ಇವರು ಎಐಆರ್‌ಡಿಯ ಮೊದಲ ಚೇರ್ಮನ್ ೨) ದಿವಂಗತ ಡಾ। ಕೆ.ಸಿ.ನಾಯಕ್, ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯದ ಮುಂಚಿನ ಉಪಕುಲಪತಿ ೩) ದಿವಗಂತ ಶ್ರೀ ಎಂ.ಎಸ್.ರಾಮಯ್ಯ, ಶಿಕ್ಷಣ ತಜ್ಞ ಮತ್ತು ಲೋಕೋಪಕಾರಿ, ಬೆಂಗಳೂರು. ೪) ಶ್ರೀ ಎಂ.ವಿ.ರಾಜಶೇಖರನ್, ಎ.ಐ.ಆರ್.ಡಿ.ಯ ಮೊದಲ ಕಾರ್ಯನಿರ್ವಾಹಕ ಟ್ರಸ್ಟಿ ಮತ್ತು ಸಮನ್ವಯಕಾರ. ಇದು ಸರಕಾರೇತರ, ಸ್ವಾಯತ್ತ, ರಾಜಕೀಯೇತರ, ಮತಭೇದವಿಲ್ಲದ, ವಾಣಿಜ್ಯೇತರ ಸಂಸ್ಥೆ. ಇದು ಸಂಪೂರ್ಣವಾಗಿ ಜಾತ್ಯತೀತ ಮತ್ತು ಸೇವಾ ಗುರಿಯುಳ್ಳ ಸಂಸ್ಥೆ. ಈಗ ಇದರಲ್ಲಿ ಬಾಂಗ್ಲಾದೇಶ, ಭಾರತ, ನೇಪಾಳ, ಫಿಲಿಪ್ಪೈನ್ಸ್, ಶ್ರೀಲಂಕಾ ಮತ್ತು ಕೆನಡಾದ ಪ್ರತಿನಿಧಿಗಳನ್ನೊಳಗೊಂಡ ಟ್ರಸ್ಟಿಗಳ ಮಂಡಳಿಯಿದೆ.

## ಎಐಆರ್‌ಡಿಯ ಉದ್ದೇಶಗಳು ಮತ್ತು ಗುರಿಗಳು

೧. ಆ ಪ್ರದೇಶದ ಇತರ ಸರಕಾರೇತರ ಸಂಸ್ಥೆಗಳ ಸಮನ್ವಯದಿಂದ ಸರಕಾರೇತರ ಕ್ರಮದ ಮೂಲಕ ಅಭಿವೃದ್ಧಿ ಶೀಲ ದೇಶಗಳ ನಡುವೆ ತಾಂತ್ರಿಕ ಮತ್ತು ಆರ್ಥಿಕ ಸಹಕಾರಕ್ಕೆ ಚಟುವಟಿಕೆಗಳನ್ನು ಬಲಗೊಳಿಸುವುದು.

೨. ಸೂಕ್ತವಾದ ಅಭಿವೃದ್ಧಿ ಕೌಶಲ್ಯಗಳನ್ನು ರೂಪಿಸುವುದಕ್ಕೆ ಗ್ರಾಮೀಣ ಅಭಿವೃದ್ಧಿಯ ಸಾಮಾಜಿಕ-ಆರ್ಥಿಕ ಅಂಶಗಳಿಗೆ ಗಮನ ನೀಡುವುದು.

೩. ಸಮಗ್ರ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಸಮಸ್ಯೆಯ ಗುರಿಯಿರುವ ವೈಜ್ಞಾನಿಕ ಸಂಶೋಧನೆಯನ್ನು ಕೈಗೊಳ್ಳುವುದು ಮತ್ತು ಫಲಿತಾಂಶದ ಗುರಿಯಿಟ್ಟುಕೊಂಡ ಕಾರ್ಯ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.

೪. ಗ್ರಾಮೀಣ ಪ್ರದೇಶದಲ್ಲಿ ಸರಳವಾದ ಮತ್ತು ಸೂಕ್ತವಾದ ತಂತ್ರಜ್ಞಾನವನ್ನು ರೈತರಿಗೆ ಮತ್ತು ಕುಶಲ ಕರ್ಮಿಗಳಿಗೆ ತಿಳಿಸುವುದು.

೫. ಕೆಳಮಟ್ಟದಲ್ಲಿರುವ ಸಂಸ್ಥೆಗಳ ಅಭಿವೃದ್ಧಿಯನ್ನು ಉತ್ತೇಜಿಸುವುದು.

೬. ವಿಶೇಷವಾಗಿ ಏಷ್ಯಾ ಮತ್ತು ಆಫ್ರಿಕಾದಂತಹ ಅಭಿವೃದ್ಧಿಶೀಲ ದೇಶಗಳ ನಡುವೆ ಸರಕಾರೇತರ ಸಂಸ್ಥೆಗಳ ಸಹಾಯ ಮತ್ತು ಸಹಕಾರದಿಂದ ಕೆಲಸ ಮಾಡುವಂತೆ ಮಾಡುವುದು.

೭. ಪಂಚಾಯಿತಿ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಅಧಿಕಾರ ನೀಡುವುದರ ಮೂಲಕ ಮಹಿಳಾ ಅಭಿವೃದ್ಧಿಗೆ ಪ್ರೋತ್ಸಾಹ ನೀಡುವುದು.

೮. ಉದ್ಯಮ ಅಭಿವೃದ್ಧಿ ಕಾರ್ಯಕ್ರಮ, ಸ್ವ-ಉದ್ಯೋಗ ತರಬೇತಿ ಕಾರ್ಯಕ್ರಮದ ಮೂಲಕ ಮಹಿಳೆಯರು, ನಿರುದ್ಯೋಗಿ ಯುವಕರು, ಸಂಭವನೀಯ ಉದ್ಯಮಿಗಳ ಉದ್ಯಮಶೀಲತ್ವವನ್ನು ಪ್ರೋತ್ಸಾಹಿಸುವುದು.

## ಎ.ಪಿ.ಆರ್.ಡಿ.ಯ ದೂರದೃಷ್ಟಿ

೧. ಪರಿಣಾಮಕಾರಿ ಸ್ವ ಆಡಳಿತಕ್ಕೆ ಸ್ಥಳೀಯ ಮಟ್ಟದಲ್ಲಿ ಸ್ಥಳೀಯ ಮುಂದಾಳತ್ವವನ್ನು

ಪ್ರೋತ್ಸಾಹಿಸುವುದರ ಮೂಲಕ ಮಾನವ ಸಂಪನ್ಮೂಲ ಅಭಿವೃದ್ಧಿಯನ್ನು ಪೋಷಿಸುವುದು.

೨. ಎಲ್ಲಾ ಜೀವನಾಧಾರ ಚಟುವಟಿಕೆಗಳಲ್ಲಿ ಮಹಿಳೆಯರ ಭಾಗಿತ್ವವನ್ನು ಪ್ರೋತ್ಸಾಹಿಸುವುದು ಹಾಗೂ ಹೊಸ ಶೋಧ ಮತ್ತು ಭಾಗಿತ್ವದ ಕೌಶಲ್ಯಗಳ ಮೂಲಕ ಆಳ್ವಿಕೆಯ ಅರಿವು ಮೂಡಿಸುವುದು.

೩. ಅಭಿವೃದ್ಧಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಅನೇಕ ರಾಷ್ಟ್ರೀಯ, ಪ್ರಾದೇಶಿಕ ಮತ್ತು ಅಂತರರಾಷ್ಟ್ರೀಯ ಸಹಯೋಗಗಳಿಂದ ತಜ್ಞರ ಒಂದು ಜಾಲವನ್ನು ರಚಿಸುವುದು ಮತ್ತು ಸಂಬಂಧಪಟ್ಟವರಲ್ಲಿ ಕೆಲಸದ ಸಂಸ್ಕೃತಿಯನ್ನು ಮನನ ಮಾಡಿಸುವುದು.

೪. ಗ್ರಾಮೀಣ ಸಮುದಾಯದ ಉತ್ತಮತೆಗೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು, ಸಂಸ್ಥೆಗಳು ಮತ್ತು ಏಜೆನ್ಸಿಗಳಲ್ಲಿ ಗಮನಾರ್ಹವಾದ ಪ್ರವೃತ್ತಿಯಲ್ಲಿ ಬದಲಾವಣೆಗಳನ್ನುಂಟುಮಾಡುವುದು.

೫. ಅನೇಕ ಭೂ ಆಧಾರಿತ ಮತ್ತು ಭೂ ಆಧಾರಿತೇತರ ಚಟುವಟಿಕೆಗಳ ಮೂಲಕ ಉದ್ಯೋಗವನ್ನು ಸೃಷ್ಟಿಸುವ ಕೌಶಲ್ಯಗಳನ್ನು ಉತ್ತೇಜಿಸುವುದು ಮತ್ತು ಜನರ ಜೀವನಾಧಾರಕ್ಕೆ ವರಮಾನವು ಬರುವಂತೆ ಮಾಡುವುದು.

೬. ವಿವಿಧ ಮಟ್ಟಗಳಲ್ಲಿ ವೈಯಕ್ತಿಕ ಮತ್ತು ಸಾಂಸ್ಥಿಕ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ದಕ್ಷ, ಜವಾಬ್ದಾರಿಯುತವಾದ ಮತ್ತು ಸೂಕ್ತ ಆಡಳಿತವನ್ನು ಪ್ರೋತ್ಸಾಹಿಸುವುದು.

೭. ಗ್ರಾಮೀಣ ಸಮುದಾಯದಲ್ಲಿ ಬಡತನ, ಹಸಿವು ಮತ್ತು ನಿರುದ್ಯೋಗದ ಸಮಸ್ಯೆಗಳನ್ನು ಪರಿಹರಿಸಲು ಖಾಸಗಿ ಮತ್ತು ಸರಕಾರದ ಏಜೆನ್ಸಿಗಳ ನಡುವೆ ಸಹಭಾಗಿತ್ವವನ್ನು ಪ್ರಚೋದಿಸುವುದು.

೮. ಕಾಲದಿಂದ ಕಾಲಕ್ಕೆ ನೀತಿ ಬದಲಾವಣೆಗಳಿಗೆ ಅವಕಾಶ ನೀಡುವ ಜಾಗೃತಿಯನ್ನುಂಟುಮಾಡುವುದು ಮತ್ತು ಸಮುದಾಯದ ವಿವಿಧ ಭಾಗಗಳ ಜೊತೆಯಲ್ಲಿ ಸಮಾನತೆ ಮತ್ತು ನ್ಯಾಯವನ್ನು ಪ್ರೋತ್ಸಾಹಿಸುವುದು.

೯. ಮಹಿಳೆಯರು, ಯುವಕರು ಮತ್ತು ಶಾಲಾ ಮಕ್ಕಳನ್ನೊಳಗೊಂಡ ಹೊಸ ಸಂಶೋಧನಾ ಕಾರ್ಯಕ್ರಮಗಳ ಮೂಲಕ ಗ್ರಾಮ ಸಮುದಾಯದ ಜೀವನಾಧಾರದ ಮೇಲೆ ಪರಿಣಾಮ ಬೀರುವ ಪರಿಸರದ ರಕ್ಷಣೆಗೆ ಪ್ರಾಮುಖ್ಯತೆ ಕೊಡುವುದು.

೧೦. ದೇಶದೊಳಗೆ ಹಾಗೂ ಪ್ರದೇಶದೊಳಗೆ ಶಾಂತಿಯನ್ನು ಸ್ಥಾಪಿಸಲು ಮತ್ತು ವಿವಿಧ ಮತಗಳ ಮತ್ತು ಜನಾಂಗ ಗುಂಪುಗಳ ಸಾಮರಸ್ಯವನ್ನು ಅರ್ಥ ಮಾಡಿಕೊಳ್ಳಲು ಅಭಿವೃದ್ಧಿ ನಾಯಕರ ವಿನಿಮಯವನ್ನು ಪ್ರೋತ್ಸಾಹಿಸುವುದು.

## ಎಐಆರ್‌ಡಿಯ ಪ್ರಮುಖ ಹಿತಾಸಕ್ತಿ ಗುಂಪುಗಳು

೧. ಮಹಿಳೆಯರು, ಯುವಕರು, ಶಾಲಾ ಮಕ್ಕಳು ಮತ್ತು ರೈತ ಗುಂಪುಗಳು ಮತ್ತು ನೀತಿ ರೂಪಕರು (ಪಾರ್ಲಿಮೆಂಟ್ ಸದಸ್ಯರು, ರಾಜ್ಯ ಶಾಸಕರು, ಆಡಳಿತಗಾರರು ಮತ್ತು ಅಭಿವೃದ್ಧಿ ನಾಯಕರು)

೨. ಸಹಕಾರ ಸಂಘಗಳು, ರೈತ ಸಂಸ್ಥೆಗಳು ಗ್ರಾಮೀಣ ಯುವ ಗುಂಪು ಸದಸ್ಯರು ಮತ್ತು ಪಂಚಾಯಿತಿಗಳನ್ನು ಒಳಗೊಂಡಿರುವ ನಾಯಕರುಗಳು.

೩. ಸ್ವಯಂಸೇವಾ ಸಂಸ್ಥೆಗಳ, ಸಾರ್ವಜನಿಕ ಸಮಾಜ ಗುಂಪುಗಳಂತಹ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳ ವಿವಿಧ ಗುಂಪುಗಳ ನಡುವೆ ಜಾಲ ಮತ್ತು ಭಾಗಿತ್ವವನ್ನು ಪ್ರೇರೇಪಿಸುವುದು.

೪. ಅನುದಾನಗಳು ಮತ್ತು ಸಾಲಗಳ ಮೂಲಕ ಹಣಕಾಸು ಬೆಂಬಲವನ್ನು ಒದಗಿಸುವ ಹಣಕಾಸು ಸಂಸ್ಥೆಗಳು ಸಮುದಾಯ ಮಟ್ಟದಲ್ಲಿ ಜೀವನಾಧಾರ ಚಟುವಟಿಕೆಗಳನ್ನು ಬೆಂಬಲಿಸುವುದು.

೫. ವಿಶ್ವವಿದ್ಯಾನಿಲಯಗಳು ಮತ್ತು ನಿರ್ವಹಣಾ ಸಂಸ್ಥೆಗಳಂತಹ ಸಂಶೋಧನಾ ಸಂಸ್ಥೆಗಳು.

೬. ರಾಜಕೀಯ ನಾಯಕರು, ಆಡಳಿತಗಾರರು ಮತ್ತು ನಿರ್ವಹಣಾ ತಜ್ಞರೂ ಸೇರಿದಂತೆ ನೀತಿ ರೂಪಿಸುವ ಮಟ್ಟದಲ್ಲಿರುವವರು.

### ಆಂತರಿಕ ಬಲ

ಅನೇಕ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಮತ್ತು ಕೃಷಿ ವಿಶ್ವವಿದ್ಯಾನಿಲಯ ಮತ್ತು ನಿರ್ವಹಣಾ ಸಂಸ್ಥೆಗಳು ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಗ್ರಾಮೀಣ ಅಭಿವೃದ್ಧಿ ಕ್ಷೇತ್ರಕ್ಕೆ ಸಂಬಂಧಿಸಿರುವ ಇಲಾಖೆಗಳ ಜೊತೆಯಲ್ಲಿ ಸಂಪರ್ಕ ಹೊಂದಿದೆ.

ಪಾರ್ಲಿಮೆಂಟು ಸದಸ್ಯರು, ರಾಜ್ಯ ಶಾಸಕರು ಮತ್ತು ಆಡಳಿತಗಾರರಂತಹ ನೀತಿರೂಪಕರ ಜೊತೆಯಲ್ಲಿ ಸಂಪರ್ಕ.

### ದುರ್ಬಲತೆಗಳು

ಜೀವನಾಧಾರ ಆಧಾರದಲ್ಲಿ ಅವಶ್ಯ ಸಿಬ್ಬಂದಿಯನ್ನು ಕಾಪಾಡಿಕೊಳ್ಳಲು ಸಾಕಷ್ಟು ಸಂಪನ್ಮೂಲಗಳನ್ನು ಕಂಡುಹಿಡಿಯುವುದು ಮತ್ತು ಗ್ರಾಮೀಣ ಸಮುದಾಯದ ಜೊತೆಯಲ್ಲಿ ಕೆಲಸ ಮಾಡುವುದಕ್ಕೆ ನೇಮಿಸಿದ ಮತ್ತು ತರಬೇತಿಗೊಳಿಸಿದ ಸಿಬ್ಬಂದಿಗಳನ್ನು ಉಳಿಸಿಕೊಳ್ಳುವುದು.

### ಬದ್ಧತೆಯುಳ್ಳ ಜನರನ್ನು ತಡೆಯುವ ಕಷ್ಟ

ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ರೇಷ್ಮೆ ಕೈಗಾರಿಕೆ ಉಜ್ವಲ ಭವಿಷ್ಯವನ್ನು ಅರಿತು

ಅದಕ್ಕೆ ಎಲ್ಲ ರೀತಿಯ ಸಹಕಾರ, ತರಬೇತಿ ಮುಂತಾದ ಕಾರ್ಯಗಳನ್ನು ಕೈಗೊಂಡಿದೆ. ಕಾಲಾನಂತರ ಈ ಕ್ಷೇತ್ರದಲ್ಲಿ ಸಂಸ್ಥೆಯು ತಜ್ಞತೆಯನ್ನು ಬೆಳೆಸಿಕೊಂಡು ಅದರ ಪ್ರಯೋಜನವನ್ನು ರೇಷ್ಮೆ ಕೈಗಾರಿಕೆಯವರಿಗೆ ನೀಡುತ್ತಿದೆ. ಈ ತಂತ್ರಜ್ಞಾನವನ್ನು ಭಾರತದಲ್ಲಿ ಮಾತ್ರವಲ್ಲದೆ ಏಷ್ಯಾ ಮತ್ತು ಆಫ್ರಿಕಾ ದೇಶಗಳಿಗೂ ಹರಡಿದೆ.

## ತರಬೇತಿ ಕಾರ್ಯಕ್ರಮಗಳು

ಎಐಆರ್‌ಡಿಯು ಅನೇಕ ರೀತಿಯ ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಇದು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯೆ ಮಟ್ಟಗಳಲ್ಲಿ ರೇಷ್ಮೆ ಕೈಗಾರಿಕೆ, ಭೂ ಸುಧಾರಣೆ ಮತ್ತು ಗ್ರಾಮೀಣ ಅಭಿವೃದ್ಧಿ, ಮಾನವನ ಸಂಪನ್ಮೂಲ ಅಭಿವೃದ್ಧಿ ಮತ್ತು ಅನೇಕ ಕುಶಲ ಕೆಲಸಗಳಲ್ಲಿ ತರಬೇತಿ - ಹೀಗೆ ವೈವಿಧ್ಯಮಯವಾದ ತರಬೇತಿ ಕಾರ್ಯಕ್ರಮಗಳನ್ನು ಕೈಗೊಂಡಿದೆ.

ಇವುಗಳಲ್ಲದೆ ಇನ್ನೂ ಇತರ ಸಾಮಾನ್ಯ ಕಾರ್ಯಕ್ರಮಗಳನ್ನು ಎಐಆರ್‌ಡಿ ನಡೆಸುತ್ತಿದೆ.

೧. ಸ್ವಸಹಾಯ ಗ್ರಾಮೀಣ ಸಮಗ್ರ ಅಭಿವೃದ್ಧಿ ಕಾರ್ಯಕ್ರಮಗಳು.

೨. ಮಹಿಳೆಯರ ಹೊಡಬಾಳು ಮತ್ತು ಬೇಸರ ತರುವ ಕೆಲಸವನ್ನು ಕಡಿಮೆ ಮಾಡುವುದು.

೩. ಕುರಿ ಸಾಕಣೆ ಮತ್ತು ಹೈನು ಅಭಿವೃದ್ಧಿ ಕಾರ್ಯಕ್ರಮ.

೪. ಉದ್ಯಮಿಗಳಿಗೆ ತರಬೇತಿ ಕಾರ್ಯಕ್ರಮ.

೫. ಸರಕಾರೇತರ ಸಂಸ್ಥೆಗಳ ನಿರ್ವಹಣಾ ತರಬೇತಿ.

೬. ಗ್ರಾಮ ಪಂಚಾಯಿತಿಗಳಿಗೆ ಚುನಾಯಿತರಾದ ಮಹಿಳಾ ಪಂಚಾಯಿತಿ ಸದಸ್ಯರಿಗೆ ಅಧಿಕಾರ ನೀಡುವ ಕಾರ್ಯಕ್ರಮ.

೭. ನಗರ ಮಕ್ಕಳಿಗೆ ಮೌಲ್ಯಾಧಾರಿತ ಬೇಸಿಗೆ ಶಿಬಿರ.

ಏಷ್ಯಾ ಪ್ರದೇಶದಲ್ಲಿ ಅಭಿವೃದ್ಧಿ ನಾಯಕರ ವಿನಿಮಯ ಕಾರ್ಯಕ್ರಮವನ್ನು ಪ್ರಚೋದಿಸುತ್ತದೆ.

ಇಂತಹ ಇನ್ನೂ ಅನೇಕ ಕಾರ್ಯಕ್ರಮಗಳನ್ನು ಎಐಆರ್‌ಡಿ ಕೈಗೊಂಡಿದ್ದು ಅದೆಲ್ಲಾ ಶ್ರೀ ರಾಜಶೇಖರನ್‌ರವರ ಭಾರತದ ವಿವಿಧ ಸ್ಥಳ ಮತ್ತು ಹೊರದೇಶಗಳಿಗೆ ಭೇಟಿ ನೀಡಿದುವರ ಪ್ರತಿಫಲವಾಗಿದೆ. ಇವೆಲ್ಲದರಿಂದಾಗಿ ಎಐಆರ್‌ಡಿಯು ಉನ್ನತ ಮಟ್ಟಕ್ಕೇರಿದೆ.

ಈಗ ೭೫ ವರ್ಷ ತುಂಬಿದ ರಾಜಶೇಖರನ್‌ರವರು ಎಐಆರ್‌ಡಿಗೆ ಇನ್ನೂ ಹೆಚ್ಚು ಸೇವೆ ಸಲ್ಲಿಸುವಂತಾಗಲಿ, ಅವರಿಗೆ ಮತ್ತು ಅವರ ಕುಟುಂಬದವರಿಗೆ ಸಕಲ ಸನ್ಮಂಗಳಗಳನ್ನುಂಟು ಮಾಡಲಿ ಎಂದು ಹಾರೈಸುತ್ತೇನೆ.

***




# ALL INDIA CONGRESS COMMITTEE (I)

24, Akbar Road, New Delhi - 110011

10th October, 1986

Dear Shri Rajasekharan,

I thank you for your letter of September 11, 1986.

I am sorry we could not speak over the phone and subsequently you had to go abroad to fulfil your commitments.

The Congress needs men of your stature and calibre to establish its roots and as the General Secretary of the Karnataka PCC (I). I have every faith and hope that your sincere efforts will strengthen our ideologies and bring an awareness amongst the masses in Karnataka that the Congress as the only national organisation will be responsive to serve the country's larger interests and progress in all spheres.

With all good wishes,

**(Arjun Singh)**




**Prime Minister's House**
New Delhi

4th August, 1967

Dear Shri Rajasekharan,

I have your letter of the 19th July, 1967, in which you and your colleagues from Mysore have protested against the Andhra Government's proposal to install crest gates on the Nagarjunasagar Dam. This proposal is still being examined by the Central Water and Power Commission.

I can understand your concern. I propose to discuss the matter shortly with the Chief Ministers of Andhra Pradesh, Maharashtra and Mysore so that we can try and hammer out satisfactory solutions, on an agreed basis as far as possible. I need hardly say that the point of view of every State will be fully and carefully considered.

**(Indira Gandhi)**

ನಿಜಬಿಂಬ

**S. NIJALINGAPPA**
Chief Minister




Bangalore - 1

16th June, 1967

My Dear Shri Rajasekharan,

I have received your letter of June 11. You have done very well in seeing the Prime Minister on June 7 and discussing with her the necessity of giving financial assistance to Mysore State to take up some minor and medium size irrigation projects. Let me congratulate you and the Members of Parliament from Mysore. I thank them for this.

I am sending you a detailed note regarding Mysore and its irrigation potential and requirements from centre.

I am reaching Delhi on the 21st afternoon. Very likely Shri K.R. Karanth who represents the people of Kasargod before the Mahajan Commission, will come with me. You may please fix up sometime for him to meet the Prime Minister and the Home Minister as also Shri Asoka Mehta, on the 22nd or 23rd. Shri Karanth may stay in the Mysore House or elsewhere according to his convenience.

(S. Nijalingappa)

ನಿಜಬಿಂಬ

**S. NIJALINGAPPA**
Chief Minister




Vidhana Southa
Bangalore - 1

22nd November, 1967

My Dear Shri Rajasekharan,

You know that after the publication of the Mahajan Commission's Report hectic propaganda is being carried on in Maharashtra to prejudice the public mind against the recommendations of the Commission. The matter will ultimately come before the Parliament and Maharashtra is planning to put up a strong fight there, and for that purpose they are canvassing Members of Parliament from other States as well. I had a preliminary talk with quite a number of you in Mysore House on 17th morning on this subject.

2. I need not emphasise that a heavy responsibility rests on Members of Parliament from Mysore not only to answer every point raised by Maharashtra and but also to convince their other colleagues of the reasonableness of the Commission's recommendations as well as of the Mysore's stand. It is therefore desirable that the Members of Parliament from Mysore come together in a meeting for exchanging thoughts and views on the Mahajan Commission's Report and for studying its implications.

3. I have requested Shri S.S. Malimath, ex-High Court Judge and Chairman, Boundary Consultative Committee, who is coming to Delhi in some other connection, to meet the Members of Parliament from Mysore, at a meeting to be convened at Mysore Guest House on the 26th instant. The exact time of the meeting will be communicated from Mysore House in due course.

4. I request you kindly to make it convenient to attend the meeting and to participate in the discussions that day. I also hope that you will all take up the work in right earnest by forming a small Committee which will organise further activities from time to time.

**(S. Nijalingappa)**

JAGJIVAN RAM

6, Krishna Menon Marg,
New Delhi - 110011

11th April, 1986

My dear Rajasekharan,

Thanks for your letter dated March 16, 1986 praying for my good health and long life. I am much better now.

Nijalingappa ji is an old friend and it is but natural for him to remember me. I hope, he is alright. Kindly see me when you come to Delhi next.

With good wishes,

(Jagjivan Ram)

**JAGJIVAN RAM**

**6, Krishna Menon Marg,**
New Delhi - 110011

February, 1980

Dear Shri Rajasekharan,

It has become necessary to consider the political situation in the country in the light of the recent Lok Sabha Election. The result itself is adequate for such a consideration. Besides, quite a number of Janata Party candidates have complained that the expectations of help from R.S.S. workers in the election has been belied. Not only that they did not work for the Janata Party, on the contrary, they worked for the Congress (I) and voters under their influence voted in favour of congress (I) candidates. Even traditional Jan Sangh voters who have been supporting Jan Sangh in all elections voted for Congress (I) in this election.

All those developments require a thorough consideration of the political situation in the country with a view to determine our future course of action.

I have therefore, invited some of my friends and co-workers to reach Delhi on 23rd February, 1980 in order to have consultation with them. I also request you to come to Delhi on the 23rd February, 1980. The consultation will be held at 3.00 p.m. that day. Please treat this as urgent and important.

In the service of the nation.

Jagjivan Ram

**(Jagjivan Ram)**

**JANATA PARTY**
Sardar patel Bhawan
7, Jantar Mantar Road, P.B. No.709
New Delhi - 110001



Gram : JANTAPARTY
Phone : 383981

25th March, 1982

Dear Shri Rajasekharan,

I have your letter of the 20th instant. I am sorry to know that you are thinking of resigning the membership of the Assembly and also from all political activities. I know your passion for the constructive work you have been engaged in for the last many years connected with the youth. You have been one of our most loyal and able colleagues in the party and the party can ill afford to lose you particularly at the present juncture. I wish you could find a way to carry on with your youth work without breaking your connection with the party. Please reconsider.

With all best wishes,

CShekhar

(Chandra Shekhar)

ನಿಜಬಿಂಬ




Vidhana Southa
Bangalore

**VEERENDRA PATIL,** B.A., LL.B.
MINISTER FOR PUBLIC WORKS

31st July, 1967

Dear Shri Rajasekharan,

I write to acknowledge with thanks your letter of 28th July, 1967. I do hope that our MPs will do their best to impress on the Centre in the matter of Krishna-Godavari waters as well as other projects pending with the Government of India.

With kind regards,

Veerendra Patil

(Veerendra Patil)




Minister of Communications
Government of India
New Delhi - 110011

Arjun Singh

12th February, 1987

Dear Shri Rajasekharan,

I have your letter dated 7.2.1987, regarding appointment to meet me in Delhi between 25th and 28th February, 1987. It will be a pleasure for me if I can have your company at lunch on 25th February at 1.30 p.m. at my residence, No.5, Tughlak Road, New Dlehi.

With regards,

**(Arjun Singh)**

**Dinesh Singh**

1, Thyagarja Marg
New Delhi - 110011

26th November, 1984

Dear Shri Rajasekharan,

Thank you very much for your letter. It is indeed a tragedy for us all that Mrs. Gandhi has passed away at this crucial juncture in our history. We wanted her more than ever before to hold the country together.

You know how wrong people attached this to power. Let us hope Shri Rajiv Gandhi will be able to discriminate between good friends and the indifferent ones and build up a good team to lead the nation. Otherwise, there will be much instability.

We shall all be running around till the end of December and I hope we shall see you early in the New Year.

Best wishes,

**Sd/-**




1, Thyagarja Marg
New Delhi - 110011

28th April, 1991

Dear Shri Rajasekharan,

Many thanks for your good wishes for the success in my election.

There was some difficulty in the selection of candidates for Karnataka and I tried my best to see that no injustice was done to persons connected with Shri Virendra Patil. I hope he will find the list not too unsatisfactory. For the last three/ four days we were involved in the distribution of the tickets for almost 24 hours that is why you could not get me on the phone. Hope you are all well.

With Best Wishes,

Dinesh Singh

(Dinesh Singh)



**INDIAN YOUTH CONGRESS**

7, Jantar Mantar Road, New
Delhi - 110011

**Narayan Datt Tiwari**
Convener

**Smt. Indira Gandhi**
Chairman
Central Youth Advisory Committee

11th December, 1969

Dear Shri Rajasekharan,

This is to inform you that as per the decision of the National Council authorising the Convener of the Indian Youth Congress to take appropriate steps to re-organise the Youth Congress as a homogenous and cohesive body, it has been found necessary to reconstitute certain State Ad-hoc Committees of the Youth Congress.

As such, the State Youth Congress Ad-hoc Committee of Mysore has been dissolved and Shri Gundu Rao, President, Municipal Committee, Kushal Nagar, Dist. Coorg, has been appointed as the new Convener in your place. You are, therefore, requested to hand over the charge to the new convener at your earliest convenience.

While appreciating your help and co-operation which you have always given in the past, I must take this occasion to thank your comradeship which we have always valued. But compulsion of realities has forced us to take different lines. However, we will continue to look to you as our valued friend and we hope that wherever you are, you would always extend your comradeship and co-operation for any worthy cause.

With Best Wishes and Cordial Greetings,

Braj Kishore

**(Braj Kishore)**
SECRETARY




सिंचाई तथा विद्युत मन्त्री
भारत
MINISTER FOR IRRIGATION & POWER
INDIA

11th April, 1969

My dear Shri Rajasekharan,

Kindly refer to your letter of the 30th March 1969 regarding the sanction to the Manchanabele Project.

I am glad to inform you that the Planning Commission have issued yesterday the orders sanctioning the Project. A copy of the same is attached.

With kind regards,

K L Rao
**(K.L. Rao)**

ನಿಜಬಿಂಬ

**G.V.K. RAO,**
*Development Commissioner,*
*Commissioner for Agricultural Production*
*and Special Secretary to Government,*
*Agricultural Production and Secretary*
*to Government, Planning and Social*
*Welfare Departments*




MYSORE GOVERNMENT
SECRETARIAT,
(P.B. No.387)
VIDHANA SOUDHA, BANGALORE

22nd November, 1969

My Dear Shri Rajasekharan,

Thank you for your letter dated 14th October 1969.

I was glad to know that the foundation stone of Manchanabale Project, is being laid on the 25th October, 1969. This will fulfil the ambitions of the people of that area and I am sure, will result in considerable satisfaction. I do hope that the Project will be completed quickly and yield lasting benefits.

With best wishes,

(G.V.K. Rao)

**B. SUBBA RAO,** I.A.S. Ramanagaram,

19th March, 1959

My Dear Shri Rajasekharan,

I am extremely happy to receive the invitation for your wedding and reception at Maralavadi today.

He who marries, said Francis Bacon, has given hostage to good fortune. I need hardly add that with your brilliant and intellectual honesty and your enthusiasm for work and social uplift you will soon rise in your status and wisdom and, of course, fame. As for Mrs. Rajasekharan, having been the daughter of a famous statesman she will have a little difficulty in managing a budding statesman!

I heartily wish you both the very best in life. May God grant you dozens of children.

B.Subbarao

(B. Subbarao)

**S.R. BOMMAI,** M.L.A.
PRESIDENT
KARNATAKA PRADESH JANATA
PARTY

2nd April, 1982

My Dear Rajasekharan,

I am in receipt of your letter dated 20th March, 1982.

Earlier when you discussed with me regarding the present day Political situation and functioning of the Political Parties and the Leaders, you were kind enough to frankly tell me the grave situation the Nation is facing for want of right type of Leadership. You also expressed how the Institutions like Legislature, Executive and the Judiciary and the Press and the Political Parties have become irrelevant. Further you expressed your desire to retire from active politics.

Though I agree with you regarding your political analysis, I made it very clear that there is no escape from the critical situation we are facing at the moment and we have to accept the challenge and do our best individually and collectively with the fond hope that a time will come when the right type of people will assume the leadership of the country. You are a very dedicated, sincere and dynamic Leader having rendered Yeoman Service for the last three decades. Your services both in the Legislature and outside for our Party are

absolutely necessary at the present juncture and the party is facing critical moments.

I therefore earnestly request you to desist from taking any hasty decision and continue to extend your full co-opeation to me and to the party. Our president, Sri Chandrasekhar as already written to you in this regard on 25th March, 82 requesting you to continue with the party.

I hope and trust you will continue to guide me and the party without sacrificing your service to the constructive work you have undertaken.

With all best wishes,

**(S.R. Bommai)**

